ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೩೬

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಭವಿಷ್ಯಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## ಭಾಗ—೧೧

## ಉತ್ತರಪರ್ವ—ದ್ವಿತೀಯ ಸಂಪುಟ

೫೧ ರಿಂದ ೧೦೦ ಅಧ್ಯಾಯ



ಅನುವಾದಕ :

ಪಂಡಿತ ಬಿ. ಚನ್ನಕೇಶವಯ್ಯ,

ಆಸ್ಥಾನ ವಿದ್ವಾನ್.

ಮೈಸೂರು

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್,

೧೯೫೦

ಶ್ರೀ

ಗಣೇಶ ಶಾರದಾಗುರುಭ್ಯೋ ನಮಃ

# ಮುನ್ನುಡಿ

ಪ್ರಪಂಚದಲ್ಲಿ ಜನ್ಮವೆತ್ತಿದ ಸಕಲಪ್ರಾಣಿಗಳಿಗೂ ಐಹಿಕ (ಇಹಲೋಕ ಸುಖ) ಆಮುಷ್ಮಿಕ (ಪರಲೋಕದ ಸುಖ) ಎಂದು ಸುಖವು ಎರಡು ರೀತಿಯಾಗಿ ನಿರೂಪಿಸಲ್ಪಟ್ಟಿದೆ. ಭೂಲೋಕದ ಸೌಖ್ಯವು ನಮ್ಮ ಪ್ರಾರಬ್ಧ ಕರ್ಮಾನುಗುಣವಾಗಿ ನಮಗೆ ಲಭಿಸುವುದೆಂದೂ, ಈ ಜನ್ಮದ ಕರ್ಮಕ್ಕೆ ಅನುಗುಣವಾಗಿ ಪರಲೋಕದ ಸುಖವು ಲಭಿಸುವುದೆಂದೂ ಶಾಸ್ತ್ರಜ್ಞರು ತೀರ್ಮಾನಿಸಿದ್ದಾರೆ. ಪ್ರಾಣಿಸಾಮಾನ್ಯವು ತಾನು ಪಡೆದ ಜನ್ಮದಲ್ಲಿ ಐಹಿಕ ಸುಖವನ್ನು ಹುಡುಕುವುದೇ ಹೊರತು ಆಮುಷ್ಮಿಕ ಸುಖಕ್ಕೆ ಅಷ್ಟಾಗಿ ದೃಷ್ಟಿಯಿಡುವುದಿಲ್ಲ. ಹಿಂದಿನ ಚಾರ್ವಾಕರೂ ಇಂದಿನ ಹಲವರು ವಿಜ್ಞಾನಿಗಳೂ ಪ್ರಾಣಿಗಳಿಗೆ ಜನ್ಮಾಂತರವೇ ಇಲ್ಲವೆಂದು ಹೇಳುತ್ತಿರುವುದನ್ನು ಕಂಡು, ನಿಜವಾಗಿ ಜನ್ಮಾಂತರವಿದೆಯೇ ಎಂಬ ಸಂದೇಹವು ಈಗಲೂ ಹಲವರಲ್ಲಿ ತೋರುತ್ತಿದೆ. ಈ ವಿಧವಾದ ಸಂದೇಹಕ್ಕೆ ಮೂಲವೇ ಇಲ್ಲ. ಅನುಸ್ಯೂತವಾಗಿ ನಡೆದಿರುವ ಸಂಸ್ಕಾರಬಲದಿಂದ ಪ್ರಾಣಿಗಳ ಜೀವನಕ್ರಮದಲ್ಲಿ ನ್ಯೂನಾತಿರೇಕಗಳು ಕಂಡುಬರುವುದೂ, ಒಂದೇ ವಿಧದ ಸನ್ನಿವೇಶಾದಿ ಕಾರಣಗಳಿದ್ದರೂ ಮಾನವರು ಭಿನ್ನ ಭಿನ್ನ ಪ್ರವೃತ್ತಿಯುಳ್ಳವರಾಗಿ ಜೀವಿಸುತ್ತಿರುವುದೂ, ಇವೇ ಮುಂತಾದ ಆಧಾರಗಳಿಂದ ಹಿಂದೆ ಎಷ್ಟೋ ಜನ್ಮಗಳಿದ್ದುವು. ಮುಂದೆ ಎಷ್ಟೋ ಜನ್ಮಗಳು ಬರುವುವು ಎಂಬುವನ್ನು ನಮ್ಮ ಪೂರ್ವಿಕರು ಸಿದ್ಧಾಂತಮಾಡಿರುವರು. ಗೀತೆಯಲ್ಲಿ "ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ। ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥" ಎಂಬ ಕೃಷ್ಣಪರಮಾತ್ಮನ ವಾಕ್ಯವೂ ಇದನ್ನೇ ಸಾರುತ್ತಿದೆ. ಶಾಸ್ತ್ರಕಾರರ ನಿರ್ಣಯದಂತೆ ಪಾರಲೌಕಿಕವಾದ ಪರಮಸುಖವನ್ನು ಪಡೆಯಲು

ಪ್ರತಿಯೊಬ್ಬ ಮಾನವನೂ ಕರ್ಮಮಾರ್ಗವನ್ನಾಗಲಿ, ಜ್ಞಾನಮಾರ್ಗವನ್ನಾಗಲಿ ಅವಲಂಬಿಸಬೇಕು. ಆದರೆ ಆ ಮಾರ್ಗಗಳೆರಡೂ ಬಹಳ ಗಹನವಾದುವು. ಕರ್ಮಮಾರ್ಗವು ವಿಶೇಷವಾದ ವಿಧಿನಿಯಮಗಳಿಂದ ಕೂಡಿ, ಆಚರಿಸಲು ದುಸ್ಸಾಧ್ಯವಾಗಿದೆ. ಜ್ಞಾನಮಾರ್ಗಕ್ಕಾದರೋ ಶಾಸ್ತ್ರಪಾಂಡಿತ್ಯ, ಸದ್ಗುರೂಪದೇಶ ಇವು ಬೇಕು. ಒಟ್ಟಿನಲ್ಲಿ ಈ ಎರಡು ಮಾರ್ಗವೂ ಸಾಮಾನ್ಯರಿಗೆ ಸುಲಭ ಸಾಧ್ಯವಲ್ಲವೆಂದು ನಿಶ್ಚಯಿಸಿ ಮುಕ್ತಿಸಾಧನವಾದ ಭಕ್ತಿಮಾರ್ಗವೊಂದನ್ನು ಪುರಾಣಾದಿ ಗ್ರಂಥಗಳಲ್ಲಿ ಪ್ರತ್ಯೇಕವಾಗಿ ಪ್ರತಿಪಾದಿಸಿರುವರು.

ಭಕ್ತಿಮಾರ್ಗವು ನಾನಾರೀತಿ ಪ್ರದರ್ಶಿತವಾಗಿದ್ದರೂ ವ್ರತಾದಿಗಳ ಆಚರಣೆಯು ಈಗ ಸಾಮಾನ್ಯವಾಗಿ ರೂಢಿಯಲ್ಲಿರುವ ಕ್ರಮವೆನ್ನಬಹುದು. ವ್ರತಗಳು ಮತಧರ್ಮವನ್ನನುಸರಿಸಿ ಶೈವ, ಶಾಕ್ತ, ವೈಷ್ಣವ, ಸೌರ ಎಂಬ ನಾನಾ ಪ್ರಭೇದಗಳಾಗಿರುವುವು. ಪರಮಾತ್ಮನೊಬ್ಬನೇ ನಾನಾ ರೂಪದಿಂದ ಬೇರೆಬೇರೆ ಹೆಸರುಗಳನ್ನು ಪಡೆದು ಪ್ರಪಂಚದ ಸೃಷ್ಟಿಸ್ಥಿತಿಲಯಗಳನ್ನು ನಡೆಯಿಸುತ್ತಿರುವನೆಂಬ ತತ್ತ್ವವನ್ನು ಅನುಸರಿಸಿರುವವರಿಗೆ, ಎಲ್ಲ ಮತಗಳೂ, ಎಲ್ಲ ವ್ರತಗಳು ಸಮಾನವಾಗಿಯೇ ಕಾಣುವುವು. ಯಾವ ವ್ರತದಲ್ಲಿಯೂ ಯಾರೂ ನ್ಯೂನಾತಿರೇಕಭಾವವನ್ನು ಕಲ್ಪಿಸಬೇಕಾಗಿಲ್ಲ. ಭವಿಷ್ಯಮಹಾಪುರಾಣ ಉತ್ತರಪರ್ವದ ಈ ದ್ವಿತೀಯ ಸಂಪುಟದಲ್ಲಿಯೂ ನಾವು ನಾನಾರೀತಿಯ ವ್ರತವಿಧಾನಗಳನ್ನೂ ಅವುಗಳಿಂದ ದೊರೆಯುವ ಫಲವನ್ನೂ, ಅವುಗಳನ್ನು ಆಚರಿಸಿ ಮುಕ್ತರಾದವರ ಇತಿಹಾಸಾದಿಗಳನ್ನೂ ಕಾಣಬಹುದು. ಸೌರಮಾನದಿಂದಾಗಲಿ ಚಾಂದ್ರಮಾನದಿಂದಾಗಲಿ ಕಂಡುಬರುವ ಒಂದು ವರ್ಷದಲ್ಲಿ ಪ್ರತಿದಿನವೂ ಆಚರಿಸತಕ್ಕ ಒಂದೊಂದು ವ್ರತವಿದ್ದೇ ಇರುವುದು. ಕೆಲವು ವ್ರತಗಳು ಪ್ರಾಂತಭೇದದಿಂದ ಕೆಲವುಕಡೆ ಆಚರಣೆಯಲ್ಲಿರಬಹುದು. ಕೆಲವುಕಡೆ ಇಲ್ಲದಿರಬಹುದು. ಕಾಲಸ್ಥಿತಿಯ ದೆಸೆಯಿಂದ ಕೆಲವು ಈಗ ಕಾಣದಿರಬಹುದು. ಆದರೂ ಒಂದೊಂದು ವ್ರತವೂ ಬೇರೆಬೇರೆ ಹೆಸರಿನ ದೇವರ ಅರ್ಚನಾರೂಪದಲ್ಲಿಯೇ ತೋರುವುದು. ನಾಮಾಂತರಗಳಿಂದ ವ್ಯವಹೃತನಾದರೂ, ಅದ್ವಿತೀಯನಾದ ಪರಮಾತ್ಮನನ್ನು ಜನರು ಪ್ರತಿದಿನವೂ ಆರಾಧಿಸಿ ಇಹದಲ್ಲಿ ಸನ್ಮಾರ್ಗಾವಲಂಬಿಗಳೂ, ಪರದಲ್ಲಿ ಪರಮಾತ್ಮ ಸಾರೂಪ್ಯವನ್ನು ಪಡೆಯುವವರೂ ಆಗಲಿ ಎಂಬುದೇ ಈ ವ್ರತವನ್ನು

ಕಲ್ಪಿಸಿದವರ ಉದ್ದೇಶ. ನಾನಾ ರೀತಿಯಲ್ಲಿರುವ ಅನೇಕ ವ್ರತಗಳ ಸ್ವರೂಪವನ್ನರಿಯಲು ಈ ಭವಿಷ್ಯಪುರಾಣಕ್ಕಿಂತ ವಿಸ್ತಾರವಾಗಿ ವ್ರತವಿಧಾನಗಳನ್ನು ನಿರೂಪಿಸುವ ಬೇರೊಂದು ಗ್ರಂಥವು ಪ್ರಾಯಶಃ ಇರಲಾರದು ಎಂದು ತೋರುವುದು.

"ನಾವಿಷ್ಣುಃ ಪೃಥಿವೀಪತಿಃ" ಎಂಬ ಪ್ರಾಚೀನರ ಸಿದ್ಧಾಂತದಂತೆ ವಿಷ್ಣ್ವಂಶಸಂಭೂತರಾಗಿ ಕರ್ಣಾಟಕ ಸಿಂಹಾಸನಾಧೀಶ್ವರರೆನಿಸಿ ಶೋಭಿಸುತ್ತಿರುವ ನಮ್ಮನ್ನಾಳುವ ಶ್ರೀಮನ್ಮಹಾರಾಜರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.** ಮಹಾಪ್ರಭುಗಳವರು ಇಂತಹ ಪ್ರಾಚೀನ ಗ್ರಂಥರತ್ನಗಳ ಪ್ರಕಾಶಕ್ಕೆ ಸರ್ವತೋಮುಖವಾಗಿ ಪ್ರೋತ್ಸಾಹವಿತ್ತಿರುವರು. ಇಂತಹ ಆದರ್ಶ ರಾಜರ್ಷಿಗಳಿಗೂ ಅವರ ಕುಟುಂಬ ವರ್ಗಕ್ಕೂ ಸರ್ವಲೋಕ ಜನನಿಯಾದ ಚಾಮುಂಡಾಂಬಿಕೆಯು ಸಕಲ ಸನ್ಮಂಗಳಗಳನ್ನಿತ್ತು ಸರ್ವದಾ ಸಲಹುತ್ತಿರಲೆಂದು ಅನನ್ಯಭಕ್ತಿಯಿಂದ ಪ್ರಾರ್ಥಿಸುವೆನು.

ವಿರೋಧಿ ಸಂವತ್ಸರದ
ಪುಷ್ಯ ಕೃಷ್ಣ ತೃತೀಯಾ ಸ್ಥಿರವಾರ,
ತಾ|| ೭-೧-೧೯೫೦.

ಸಜ್ಜನ ವಿಧೇಯ,
**ಬಿ. ಚನ್ನಕೇಶವಯ್ಯ,**
ಪಂಡಿತ, ಆಸ್ಥಾನ ವಿದ್ವಾನ್



# ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವ ದ್ವಿತೀಯ ಸಂಪುಟದ ೫೧ ರಿಂದ ೧೦೦ ಅಧ್ಯಾಯಗಳ

# ವಿ ಷ ಯಾ ನು ಕ್ರ ಮ ಣಿ ಕೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ



**ಉತ್ತರಪರ್ವದ ದ್ವಿತೀಯ ಸಂಪುಟ ಸಮಾಪ್ತಿ.**



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಏಕಪಂಚಾಶತ್ತಮೋಽಧ್ಯಾಯಃ

|| ಶ್ರೀ ಕೃಷ್ಣ ಉವಾಚ ||

ಅನ್ಯಾಮಪಿ ಪ್ರವಕ್ಷ್ಯಾಮಿ ಶೋಭನಾಂ ಶುಭಸಪ್ತಮೀಂ ।
ಯಾಮುಪೋಷ್ಯ ನರೋ ರೋಗಾಚ್ಛೋಕದುಃಖಾತ್ಪ್ರಮುಚ್ಯತೇ ||೧||

ಪುಣ್ಯ ಆಶ್ವಯುಜೇ ಮಾಸಿ ಕೃತಸ್ನಾನಃ ಪಯಃ ಶುಚಿಃ ।
ವಾಚಯೇತ ತತೋ ವಿಪ್ರಾನಾರಭೇಚ್ಛುಭಸಪ್ತಮೀಂ || ೨ ||

ಕಪಿಲಾಂ ಪೂಜಯೇದ್ಭಕ್ತ್ಯಾ ಗಂಧಮಾಲ್ಯಾನುಲೇಪನೈಃ ।
ನಮಾಮಿ ಸೂರ್ಯಸಂಭೂತಾಮಶೇಷಭುವನಾಲಯಾಂ || ೩ ||

---

### ಐವತ್ತೊಂದನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ ! ಮಂಗಳಕರವಾದ ಇನ್ನೊಂದು ಶುಭಸಪ್ತಮೀ ವ್ರತವನ್ನು ಹೇಳುತ್ತೇನೆ ಕೇಳು. ಆ ಶುಭಸಪ್ತಮೀ ತಿಥಿಯಲ್ಲಿ ಉಪವಾಸವನ್ನಾಚರಿಸಿದ ಪುರುಷನು ರೋಗ, ಶೋಕ, ದುಃಖಾದಿಗಳಿಂದ ರಹಿತನಾಗುತ್ತಾನೆ.

೨. ಪುಣ್ಯಕರವಾದ ಆಶ್ವಯುಜ ಶುದ್ಧ ಸಪ್ತಮಿಯದಿನ ಸ್ನಾನಮಾಡಿ ಹಾಲಿನ ಪ್ರೋಕ್ಷಣೆಯಿಂದ ಶುಚಿಯಾಗಿ ಅನಂತರ ಬ್ರಾಹ್ಮಣರ ಮುಖದಿಂದ ಈ ವ್ರತವಾಚನ ಮಾಡಿಸಿ ಈ ಶುಭಸಪ್ತಮೀ ವ್ರತವನ್ನು ಪ್ರಾರಂಭಿಸಬೇಕು.

೩-೪. ಕಪಿಲವರ್ಣದ ಗೋವನ್ನು ತಂದು ಭಕ್ತಿಪೂರ್ವಕವಾಗಿ ಗಂಧ, ಮಾಲ್ಯಾನುಲೇಪನಗಳಿಂದ ಪೂಜಿಸಬೇಕು. ಆ ಪೂಜಾ ಕಾಲದಲ್ಲಿ,

ತ್ವಾಮಹಂ ಶುಭಕಲ್ಯಾಣಶರೀರಾಂ ಸರ್ವಸಿದ್ಧಯೇ ।
ಅಥಾಹೃತ್ಯ ತಿಲಪ್ರಸ್ಥಂ ತಾಮ್ರಪಾತ್ರೇಣ ಸಂಯುತಂ ॥ ೪ ॥

ಕಾಂಚನಂ ವೃಷಭಂ ತದ್ವದ್ವಸ್ತ್ರಮಾಲ್ಯಗುಡಾನ್ವಿತಂ ।
ದದ್ಯಾದ್ವಿಕಾಲವೇಲಾಯಾಮರ್ಯಮಾ ಪ್ರೀಯತಾಮಿತಿ ॥ ೫ ॥

ಪಂಚಗವ್ಯಂ ಚ ಸಂಪ್ರಾಶ್ಯ ಸ್ವಪ್ಯಾದ್ಭೂಮೌ ವಿಮತ್ಸರಃ ।
ತತಃ ಪ್ರಭಾತೇ ಸಂಜಾತೇ ಭಕ್ತ್ಯಾ ಸಂತರ್ಪಯೇದ್ದ್ವಿಜಾನ್ ॥ ೬ ॥

ಅನೇನ ವಿಧಿನಾ ದದ್ಯಾನ್ಮಾಸಿಮಾಸಿ ಸದಾ ನರಃ ।
ವಾಸಸೀ ವೃಷಭಂ ಹೈಮಂ ತದ್ವದ್ಧೇನೋಽಸ್ತು ಪೂಜನಂ ॥ ೭ ॥

---

ನಮಾಮಿ ಸೂರ್ಯಸಂಭೂತಾಮಶೇಷ ಭುವನಾಲಯಾಂ ।
ತ್ವಾಮಹಂ ಶುಭಕಲ್ಯಾಣ ಶರೀರಾಂ ಸರ್ವಸಿದ್ಧಯೇ ॥

ಎಂಬ ಮಂತ್ರವನ್ನು ಹೇಳಬೇಕು.

(ಎಲೌ ಕಪಿಲೆಯೇ ! ನೀನು ಸೂರ್ಯದೇವನಿಂದ ಜನಿಸಿದವಳೂ ಅಶೇಷ ಭವನಕ್ಕೆ ಮನೆಯಂತಿರುವವಳೂ, ಶುಭ ಕಲ್ಯಾಣಮೂರ್ತಿಯೂ ಆಗಿರುವೆ. ಅಂತಹ ನಿನಗೆ ನಾನು ಸರ್ವಾಭಿಲಾಷಿತಫಲಸಿದ್ಧ್ಯರ್ಥವಾಗಿ ವಂದಿಸುವೆನು. ಎಂಬುದು ಇದರ ಅರ್ಥ.)

೫. ಅನಂತರ ಒಂದುಸೇರು ಎಳ್ಳನ್ನು ತಾಮ್ರದ ಪಾತ್ರೆಯಲ್ಲಿಟ್ಟು ಆ ಪಾತ್ರೆಯಲ್ಲಿ ಒಂದು ಭಂಗಾರದ ವೃಷಭ ಮತ್ತು ವಸ್ತ್ರ, ಹೂ, ಬೆಲ್ಲ ಇವೆಲ್ಲವನ್ನೂ ಇಟ್ಟು, ಹಗಲೂ ರಾತ್ರಿಯೂ ಸೇರುವ ಸಾಯಂಸಂಧ್ಯಾಕಾಲದಲ್ಲಿ "ಅರ್ಯಮಾ ಪ್ರೀಯತಾಂ" (ಸೂರ್ಯನು ಪ್ರೀತನಾಗಲಿ) ಎಂದು ಹೇಳಿ ದಾನಮಾಡಬೇಕು.

೬. ಆ ದಿನ ರಾತ್ರಿ ಪಂಚಗವ್ಯಪ್ರಾಶನಮಾಡಿ ಮಾತ್ಸರ್ಯಾದಿ ದೋಷ ರಹಿತನಾಗಿ ಭೂಶಯನ ಮಾಡಬೇಕು. ಅನಂತರ ಮರುದಿನ ಪ್ರಾತಃಕಾಲ ಸ್ನಾನಾಹ್ನಿಕ ಪೂಜಾದಿಗಳಾದ ಮೇಲೆ ಭಕ್ತಿಪೂರ್ವಕವಾಗಿ ಬ್ರಾಹ್ಮಣ ಸಂತರ್ಪಣೆಯನ್ನು ಮಾಡಿಸಬೇಕು.

೭. ಈ ಕ್ರಮದಿಂದಲೇ ಪುರುಷನು ಪ್ರತಿ ತಿಂಗಳಲ್ಲೂ ವಸ್ತ್ರಯುಗ್ಮ ಸುವರ್ಣವೃಷಭ ಇವುಗಳನ್ನು ದಾನಮಾಡಿ ಕಪಿಲ ಗೋಪೂಪೂಜಾಸಕ್ತನಾಗಿ ಇರಬೇಕು.

**ಸಂವತ್ಸರಾಂತೇ ಶಯನಮಿಕ್ಷುದಂಡಗುಡಾನ್ವಿತಂ ।**
**ಸೋಪಧಾನಕವಿಶ್ರಾಮಂ ಭಾಜನಾಸನಸಂಯುತಂ ॥ ೮ ॥**

**ತಾಮ್ರಪಾತ್ರಂ ತಿಲಪ್ರಸ್ಥಂ ಸೌವರ್ಣವೃಷಸಂಯುತಂ ।**
**ದದ್ಯಾದ್ವೇದವಿದೇ ಸರ್ವಂ ವಿಶ್ವಾತ್ಮಾ ಪ್ರೀಯತಾಮಿತಿ ॥ ೯ ॥**

**ಅನೇನ ವಿಧಿನಾ ರಾಜನ್ಕುರ್ಯಾದ್ಯಃ ಶುಭಸಪ್ತಮೀಂ ।**
**ತಸ್ಯ ಶ್ರೀರ್ವಿಮಲಾ ಕೀರ್ತಿರ್ಭವೇಜ್ಜನ್ಮನಿಜನ್ಮನಿ ॥ ೧೦ ॥**

**ಅಪ್ಸರೋಗಣಗಂಧರ್ವೈಃ ಪೂಜ್ಯಮಾನಃ ಸುರಾಲಯೇ ।**
**ವಸೇದ್ಗಣಾಧಿಪೋ ಭೂತ್ವಾ ಯಾವದಾಭೂತಸಂಪ್ಲವಂ ॥ ೧೧ ॥**

**ಸ ಕಲ್ಪಾದವತೀರ್ಣಸ್ತು ಸಪ್ತದ್ವೀಪಾಧಿಪೋ ಭವೇತ್ ।**
**ಬ್ರಹ್ಮಹತ್ಯಾಸಹಸ್ರಸ್ಯ ಭ್ರೂಣಹತ್ಯಾಶತಸ್ಯ ಚ ॥ ೧೨ ॥**

---

೮–೯. ಸಂವತ್ಸರದ ಕೊನೆಯಲ್ಲಿ ದಿಂಬು ಸಹಿತವಾದ ಹಾಸಿಗೆ, ಮಂಚ, ಕಬ್ಬಿನ ಕೋಲು, ಬೆಲ್ಲ, ಪಾನಪಾತ್ರೆ, ಪೀಠ ಇವುಗಳ ಜೊತೆಯಲ್ಲಿ ಒಂದು ಸೇರು ಎಳ್ಳು ತುಂಬಿದ ತಾಮ್ರಪಾತ್ರೆ, ಭಂಗಾರದಿಂದ ಮಾಡಿದ ವೃಷಭ, ಇವೆಲ್ಲವನ್ನೂ ವೇದಜ್ಞನಾದ ಬ್ರಾಹ್ಮಣನಿಗೆ "ವಿಶ್ವಾತ್ಮಾ ಪ್ರೀಯತಾಂ'' (ಪ್ರಪಂಚ ಸ್ವರೂಪಿಯಾದ ಸೂರ್ಯನು ಸುಪ್ರೀತನಾಗಲಿ) ಎಂದು ಹೇಳಿ ದಾನ ಮಾಡಬೇಕು.

೧೦. ಅಯ್ಯಾ ರಾಜನೇ ! ಈ ಕ್ರಮದಿಂದ ಯಾವ ಪುರುಷನು ಈ ಶುಭ ಸಪ್ತಮೀ ವ್ರತವನ್ನಾಚರಿಸುತ್ತಾನೋ ಅಂಥವನಿಗೆ ಪ್ರತಿ ಜನ್ಮದಲ್ಲೂ ಸಂಪತ್ತು ಮತ್ತು ಸತ್ಕೀರ್ತಿ ಇವುಗಳ ಲಾಭವಾಗುವುದು.

೧೧. ಮತ್ತು ಸ್ವರ್ಗದಲ್ಲಿ ಅಪ್ಸರಸರು, ಗಂಧರ್ವರು ಇವರುಗಳ ಸಮೂಹದಿಂದ ಪೂಜಿತನಾಗಿ ಒಂದು ಕಲ್ಪಕಾಲದವರೆಗೆ ಅಲ್ಲಿ ದೇವಗಣಕ್ಕೆ ಅಧಿಪತಿಯಾಗಿ ವಾಸಿಸುತ್ತಾನೆ.

೧೨–೧೩. ಅಲ್ಲಿ ಹಾಗೆ ಒಂದುಕಲ್ಪ ಕಳೆದ ಮೇಲೆ ಈ ಭೂಲೋಕದಲ್ಲಿ ಜನಿಸಿ ಸಪ್ತದ್ವೀಪ ಸಮೇತವಾದ ಭೂಮಂಡಲಕ್ಕೆ ಚಕ್ರಾಧಿಪತಿಯಾಗುವನು. ಪುಣ್ಯದಾಯಕವಾದ ಈ ಶುಭಸಪ್ತಮೀ ವ್ರತವು, ಅನುಷ್ಠಾತೃವಿಗೆ ಸಹಸ್ರಬ್ರಹ್ಮ

ನಾಶಂ ಕರೋತಿ ಪುಣ್ಯೇಯಂ ಕೃತಾ ವೈ ಶುಭಸಪ್ತಮೀ ॥ ೧೩ ॥

ಇಮಾಂ ಪಠೇದ್ಯಃ ಶೃಣುಯಾನ್ಮುಹೂರ್ತಂ ।
ವೀಕ್ಷೇತ ಸಂಗಾದಪಿ ದೀಯಮಾನಂ ॥
ಸೋಽಪ್ಯತ್ರ ಸಂಬಾಧ್ಯ ವಿಮುಕ್ತದೇಹಃ ।
ಪ್ರಾಪ್ನೋತಿ ವಿದ್ಯಾಧರನಾಯಕತ್ವಂ ॥ ೧೪ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಶುಭಸಪ್ತಮೀ ವ್ರತನಿರೂಪಣಂ ನಾಮೈಕಪಂಚಾಶತ್ತಮೋಽಧ್ಯಾಯಃ.



---

ಹತ್ಯಾ ಮಹಾಪಾತಕಗಳು ಒದಗಿದರೂ ನೂರು ಭ್ರೂಣಹತ್ಯಾ ಪಾಪಗಳು ಒದಗಿದರೂ ಅವೆಲ್ಲವನ್ನೂ ನಾಶಮಾಡುತ್ತದೆ.

೧೪. ಈ ಶುಭಸಪ್ತಮೀ ವ್ರತಪ್ರತಿಪಾದಕ ಗ್ರಂಥವನ್ನು ಯಾವನು ಪಠಿಸುವನೋ, ಯಾವಾತನು ಇತರರು ಪಠಣಮಾಡುವುದನ್ನು ಒಂದು ಮುಹೂರ್ತಕಾಲ ಏಕಾಗ್ರಚಿತ್ತತೆಯಿಂದ ಶ್ರವಣಮಾಡುವನೋ, ಅಥವಾ ಯಾವ ಪುರುಷನು ಈ ವ್ರತಾಂಗವಾಗಿ ಕೊಡುವ ದಾನಾದಿಗಳನ್ನು ಅನ್ಯಾಸಕ್ತ ಚಿತ್ತನಾಗದೆ ನೋಡುವನೋ, ಅಂತಹವರು ಈ ಲೋಕದಲ್ಲೇ ಸಕಲ ಪಾಪಗಳನ್ನೂ ಹೋಗಲಾಡಿಸಿಕೊಂಡು ದೇಹಪರಿತ್ಯಾಗನಂತರ ಪರಲೋಕದಲ್ಲಿ ವಿದ್ಯಾಧರ ಲೋಕಾಧಿಪತ್ಯವನ್ನು ಪಡೆಯುವರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶುಭ ಸಪ್ತಮೀ ವ್ರತ ನಿರೂಪಣವೆಂಬ ಐವತ್ತೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ದ್ವಿಪಂಚಾಶತ್ತಮೋಽಧ್ಯಾಯಃ

|| ಯುಧಿಷ್ಠಿರ ಉವಾಚ ||

ಕಿಮುದ್ವೇಗಾದ್ಭವೇತ್ಕೃತ್ಯಮಲಕ್ಷ್ಮೀಃ ಕೇನ ಹನ್ಯತೇ ।
ಮೃತವತ್ಸಾದಿಕಾರ್ಯೇಷು ದುಃಸ್ವಪ್ನೇ ಚ ಕಿಮಿಷ್ಯತೇ || ೧ ||

|| ಶ್ರೀ ಕೃಷ್ಣ ಉವಾಚ ||

ಪುರಾ ಕೃತಾನಿ ಪಾಪಾನಿ ಫಲಂತ್ಯತ್ರ ಯುಧಿಷ್ಠಿರ ।
ರೋಗದೌರ್ಗತ್ಯರೂಪೇಣ ತಥೈವೇಷ್ಟವಿಘಾತನೈಃ || ೨ ||

---

## ಐವತ್ತೆರಡನೆಯ ಅಧ್ಯಾಯ

೧. ಯುಧಿಷ್ಠಿರನು ಕೇಳುತ್ತಾನೆ—ಅಯ್ಯಾ ಕೃಷ್ಣ ಪರಮಾತ್ಮನೇ! ಉದ್ವೇಗದಿಂದ ಏನು ಸಂಭವಿಸುವುದು ? ದಾರಿದ್ರ್ಯವು ಯಾವುದರಿಂದ ನಾಶವಾಗುತ್ತದೆ. ಪುತ್ರ ಮರಣಾದಿಗಳು ಸಂಭವವಾದಲ್ಲಿ ತನ್ನಿವೃತ್ತ್ಯರ್ಥವಾಗಿ ಏನು ಮಾಡಬೇಕು? ದುಃಸ್ವಪ್ನ ದರ್ಶನವಾದಾಗ ಅಶುಭ ಫಲ ನಿವೃತ್ತ್ಯರ್ಥವಾಗಿ ಯಾವ ಕರ್ಮವನ್ನಾಚರಿಸಬೇಕು ? ಹೇಳು ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ ಭೂಪತಿಯೇ ! ಪೂರ್ವಜನ್ಮ ಕೃತವಾದ ಪಾಪಗಳು ಈ ಜನ್ಮದಲ್ಲಿ ಮನುಷ್ಯನಿಗೆ ರೋಗ ಮತ್ತು ದಾರಿದ್ರ್ಯ ಈ ರೂಪದಿಂದಲೂ ಮತ್ತು ಇಷ್ಟಾರ್ಥವಿಘಾತರೂಪವಾಗಿಯೂ ಫಲಿಸುತ್ತವೆ.

ಪಡ್ವಿಘಾತಾಯ ವಕ್ಷ್ಯಾಮಿ ಸದಾ ಕಲ್ಯಾಣಸಪ್ತಮೀಂ ।
ಸಪ್ತಮೀಸ್ನಪನಂ ನಾಮ ವ್ಯಾಧಿಪೀಡಾವಿನಾಶನಂ ॥ ೩ ॥

ಬಾಲಾನಾಂ ಮರಣಂ ಯತ್ರ ಕ್ಷೀರಪಾನಂ ಪ್ರಶಸ್ಯತೇ ।
ತದ್ವದ್ವೃದ್ಧಾತುರಾಣಾಂ ಚ ಯೌವನೇ ವಾಪಿ ವರ್ತತಾಂ ॥ ೪ ॥

ಶಾನ್ತಯೇ ತಸ್ಯ ವಕ್ಷ್ಯಾಮಿ ಮೃತವತ್ಸಾದಿಕೇ ಚ ಯತ್ ।
ಏತದೇವಾದ್ಭುತೋದ್ವೇಗ ಚಿಂತಾವಿಭ್ರಮಮಾನಸಂ ॥ ೫ ॥

ವರಾಹಕಲ್ಪೇ ಸಂಪ್ರಾಪ್ತೇ ಮನೋರ್ವೈವಸ್ವತೇಽಂತರೇ ।
ಕೃತೇ ಯುಗೇ ಮಹಾರಾಜ ಹೈಹಯೋ ರೂಪವರ್ಧನಃ ॥ ೬ ॥

ಆಸೀನ್ನೃಪೋತ್ತಮಃ ಪೂರ್ವಂ ಕೃತವೀರ್ಯಃ ಪ್ರತಾಪವಾನ್ ।
ಸ ಸಪ್ತದ್ವೀಪಮಖಿಲಂ ಪಾಲಯಾಮಾಸ ಭೂತಲಂ ॥ ೭ ॥

---

೩. ಆ ಪಾಪಪರಿಹಾರಾರ್ಥವಾಗಿ ಸಪ್ತಮೀ ತಿಥಿಯಲ್ಲಾಚರಿಸಬೇಕಾದ ಸ್ನಪನ ಸಪ್ತಮೀ ವ್ರತವೆಂಬ ವ್ರತನಿಯಮವನ್ನು ಹೇಳುತ್ತೇನೆ ಕೇಳು. ಅದು ಯಾವಾಗಲೂ ಮಂಗಲಪ್ರದವೆನಿಸಿದುದೂ ವ್ಯಾಧಿಜನಿತ ಪೀಡಾನಿವಾರಕವೂ ಆಗಿವೆ.

೪. ಯಾರಿಗೆ ಶಿಶುಮರಣವಾಗುವುದೋ ಅವರಿಗೆ ಅದರ ನಿವೃತ್ತ್ಯರ್ಥವಾಗಿ ಕ್ಷೀರಪಾನವು ಅತಿ ಪ್ರಶಸ್ತವು.

" ಕ್ಷೀರೇಣಾಯುಃ ಪ್ರವರ್ಧತೇಃ " ಎಂಬ ಸ್ಮೃತಿ ವಚನವು ಕ್ಷೀರಪಾನವು ಆಯುರ್ವೃದ್ಧಿ ಹೇತುವೆಂದು ಹೇಳುವುದು ವೃದ್ಧರಿಗೂ ಮತ್ತು ರೋಗಿಗಳಿಗೂ ಕ್ಷೀರಪಾನವು ಪ್ರಶಸ್ತ, ಯುವಕರಿಗೂ ಕ್ಷೀರಪಾನವು ಉತ್ತಮವು.

೫. ದುಃಸ್ವಪ್ನದರ್ಶನದಿಂದ ಸೂಚಿತವಾದ ಅಶುಭಶಾಂತಿಗೂ, ಮೃತಪುತ್ರಾದಿ ದೋಷಶಾಂತಿಗೂ ಯಾವ ಕರ್ಮವು ಉಕ್ತವಾಗಿದೆಯೋ ಅದನ್ನು ಹೇಳುವೆನು. ಇದರ ಶಾಂತ್ಯರ್ಥವಾದ ಕರ್ಮವೇ ಧೂಮಕೇತು ಮುಂತಾದ ಅದ್ಭುತದರ್ಶನದಿಂದಾದ ಉದ್ವೇಗ, ಚಿಂತೆ, ಮನೋಭ್ರಮಣ ಇವುಗಳಿಗೂ ನಿವಾರಕವಾಗುವುದು.

೬–೭. ಎಲೈ ಮಹಾರಾಜನೇ! ವರಾಹಕಲ್ಪವು ಪ್ರಾಪ್ತವಾದಾಗ ವೈವಸ್ವತಮನ್ವಂತರದ ಕೃತಯುಗದಲ್ಲಿ ಅತಿಸುಂದರನಾಗಿಯೂ ಪ್ರತಾಪಶಾಲಿಯಾಗಿ

**ಯಾವದ್ವರ್ಷಸಹಸ್ರಾಣಿ ಸಪ್ತಸಪ್ತಾನಿ ಭಾರತ ।**
**ಜಾತಮಾತ್ರಂ ಚ ತಸ್ಯಾಥ ಶುಭಂ ಪುತ್ರಶತಂ ಕಿಲ ॥ ೮ ॥**

**ಯವನಸ್ಯ ತು ಶಾಪೇನ ವಿನಾಶಮುಗಮತ್ಪುರಾ ।**
**ಕೃತವೀರ್ಯಃ ಸಮಾರಾಧ್ಯ ಸಹಸ್ರಾಂಶುಂ ದಿವಾಕರಂ ॥ ೯ ॥**

**ಉಪವಾಸವ್ರತೈರ್ದಿವ್ಯೈರ್ವೇದಸೂಕ್ತೈಶ್ಚ ಭಾರತ ।**
**ದರ್ಶಯಾಮಾಸ ಚಾತ್ಮಾನಂ ಕೃತವೀರ್ಯಸ್ಯ ಭಾನುಮಾನ್ ॥ ೧೦ ॥**

**ಕೃತವೀರ್ಯೇಣ ವೈ ಪೃಷ್ಟಃ ಪ್ರೋವಾಚೇದಂ ಬೃಹಸ್ಪತಿಃ ।**
**ಅತಿಕ್ಲೇಶೇನ ಮಹತಾ ಪುತ್ರಸ್ತವ ನರಾಧಿಪ ॥ ೧೧ ॥**

**ಭವಿಷ್ಯತಿ ಚಿರಂಜೀವೀ ಕಿಂ ತು ಕಲ್ಮಷನಾಶನಂ ।**
**ಸಪ್ತಮೀಸ್ನಪನಂ ವಾಪ್ಯಾಂ ಕುರು ಪಾಪವಿನಷ್ಟಯೇ ॥ ೧೨ ॥**

---

ಯೂ, ಹೈಹಯನೆಂಬ ನಾಮಾಂತರವುಳ್ಳವನಾಗಿಯೂ, ಇರುವ ಕೃತವೀರ್ಯ ನೆಂಬ ನೃಪೋತ್ತಮನಿದ್ದನು. ಅವನು ಸಪ್ತದ್ವೀಪ ಸಮೇತವಾದ ನಿಖಿಲ ಭೂಮಂಡಲವನ್ನೂ ಪರಿಪಾಲಿಸುತ್ತಿದ್ದನು.

೮-೧೦. ಅಯ್ಯಾ ಭರತವಂಶಜನೇ! ಆ ಕೃತವೀರ್ಯನು ಎಪ್ಪತ್ತೇಳು ಸಹಸ್ರ ಸಂವತ್ಸರಗಳು ರಾಜ್ಯವಾಳುತ್ತಿದ್ದನು. ನೂರು ಶುಭ ಪುತ್ರರು ಜನಿಸಿ, ಆ ಪುತ್ರರು ಹುಟ್ಟಿದಕೂಡಲೆ ನಾಶವಾದರು. ಎಲೈ ಭಾರತನೇ! ಅನಂತರ ಕೃತವೀರ್ಯನು ಉಪವಾಸ ವ್ರತಗಳಿಂದಲೂ, ದಿವ್ಯವೇದಸೂಕ್ತಗಳಿಂದಲೂ ಸಹಸ್ರ ರಶ್ಮಿಗಳುಳ್ಳ ಸೂರ್ಯನನ್ನು ಆರಾಧಿಸಿದನು. ಆ ಆರಾಧನೆಯಿಂದ ಸುಪ್ರೀತನಾಗಿ ಭಗವಾನ್ ಸೂರ್ಯನು ಕೃತವೀರ್ಯನಿಗೆ ಪ್ರತ್ಯಕ್ಷನಾದನು.

೧೧-೧೨. ಆಗ ಆ ಕೃತವೀರ್ಯನು ಪ್ರಶ್ನೆಮಾಡಲಾಗಿ ಜ್ಞಾನಿಯಾದ ಸೂರ್ಯನು "ಎಲೈ ರಾಜನೇ! ನಿನಗೆ ಮಹತ್ತಾದ ಕ್ಲೇಶದಿಂದ ಚಿರಂಜೀವಿಯಾದ ಪುತ್ರನು ಜನಿಸುವನು. ನೀನು ಸರ್ವಪಾಪನಿವೃತ್ತಿಗಾಗಿ ಸಕಲ ಕಲ್ಮಷನಾಶಕ ವಾದ ಸಪ್ತಮೀ ಸ್ನಾನವನ್ನು ವಾಪಿ (ಸ್ನಾನಮಾಡುವ ಭಾವಿ) ಯಲ್ಲಿ ಇಳಿದು ಮಾಡಬೇಕು.

ಜಾತಸ್ಯ ಮೃತವತ್ಸಾಯಾಃ ಸಪ್ತಮೇ ಮಾಸಿ ಭೂಪತೇ ।
ಗ್ರಹತಾರಾಬಲಂ ಲಬ್ಧ್ವಾ ಕೃತ್ವಾ ಬ್ರಾಹ್ಮಣವಾಚನಂ ॥ ೧೩ ॥

ಬಾಲಸ್ಯ ಜನ್ಮನಕ್ಷತ್ರಂ ವರ್ಜಯೇತ್ತಾಂ ತಿಥಿಂ ಬುಧಃ ।
ಸದ್ವೃದ್ಧಾತುರಗಾಣಾಂ ತು ಕೃತಂ ಸ್ಯಾದಿತಿ ತೇಷು ಚ ॥ ೧೪ ॥

ಗೋಮಯೇನೋಪಲಿಪ್ತಾಯಾಂ ಭೂಮಾವೇಕಾಗ್ರಚಿತ್ತವಾನ್ ।
ತಂಡುಲೈ ರಕ್ತಶಾಲೇಯೈರ್ವರುಣಾಕ್ಷೀರಸಂಯುತಂ ॥ ೧೫ ॥

ನಿರ್ವಪೇತ್ಸೂರ್ಯಮುದ್ಗಾಭ್ಯಾಂ ಮಾತೃಭ್ಯೋಽಪಿ ವಿಧಾನತಃ ।
ಕೀರ್ತಯೇತ್ಸೂರ್ಯದೈವತ್ಯಂ ಸಪ್ತಾರ್ಚಿಷಿ ಘೃತಾಹುತೀಃ ॥ ೧೬ ॥

---

೧೩. ಎಲೈ ಭೂಪತಿಯೇ ! ಈಗ ಮೃತಪುತ್ರಳಾಗಿರುವ ನಿನ್ನ ಪತ್ನಿಯು ಮುಂದೆ ಗರ್ಭಿಣಿಯಾದಾಗ ಏಳನೆಯ ತಿಂಗಳಿನಲ್ಲಿ ಆಕೆಯ ಗ್ರಹಬಲ ಮತ್ತು ತಾರಾಬಲಗಳನ್ನು ನೋಡಿ ಆ ಎರಡು ಬಲಗಳೂ ಸೇರಿ ಇದ್ದ ದಿನದಲ್ಲಿ ಬ್ರಾಹ್ಮಣರಿಂದ ಮಂತ್ರಪಠಣ ಮಾಡಿಸಬೇಕು.

೧೪. ತಿಳಿದವನು ಈ ಕರ್ಮಕ್ಕೆ ಶಿಶುವಿನ ಜನ್ಮನಕ್ಷತ್ರವನ್ನು ಹೇಳತಕ್ಕದಲ್ಲ. ವೃದ್ಧರು ಮತ್ತು ರೋಗಿಗಳು ಇವರಿಗಾದರೆ ಅವರ ಜನ್ಮನಕ್ಷತ್ರವನ್ನನುಸರಿ ಈ ಕರ್ಮವನ್ನು ಮಾಡಬೇಕು.

೧೫-೧೬. ಆ ದಿನ ಏಕಾಗ್ರಚಿತ್ತತೆಯುಳ್ಳವನಾಗಿ ಗೋಮಯದಿಂದ ಸಾರಿಸಿ ಶುದ್ಧವಾದ ಭೂಮಿಯಲ್ಲಿ ಕೆಂಪು ಭತ್ತದ ಅಕ್ಕಿಯ ಕಾಳುಗಳಿಗೆ ಕಪಿಲ ಗೋಕ್ಷೀರವನ್ನು ಮಿಶ್ರಣಮಾಡಿ, ಮತ್ತು ಸೂರ್ಯದೇವತಾ ಪ್ರೀತಿಕರವಾದ ಗೋಧಿ, ಹೆಸರು ಇವುಗಳ ಸಹಿತವಾಗಿ ಶಾಸ್ತ್ರಪ್ರಕಾರವಾಗಿ ಸಪ್ತಮಾತೃಗಣಗಳಿಗೆ ನಿರ್ವಾಪ (ಬಲಿ) ವನ್ನಿಡಬೇಕು. ಮತ್ತು ಅಗ್ನಿಯನ್ನು ಪ್ರತಿಷ್ಠಿಸಿ ಸೂರ್ಯದೇವತಾಂಗವಾದ ಮಂತ್ರಗಳಿಂದ ಘೃತಾಹುತಿಗಳನ್ನು ಕೊಡಬೇಕು.

**ಜುಹುಯಾದ್ರುದ್ರಸೂಕ್ತೇನ ತದ್ವದ್ರುದ್ರಾಯ ಭಾರತ ।**
**ಹೋತವ್ಯಾಃ ಸಮಿಧಶ್ಚಾತ್ರ ತತ್ರ ವಾರ್ಕಪಲಾಶಜಾಃ ॥ ೧೭ ॥**

**ಯವಕೃಷ್ಣತಿಲೈರ್ಹೋಮಃ ಕರ್ತವ್ಯೋಷ್ಟಶತಂ ಪುನಃ ।**
**ಹುತ್ವಾ ಸ್ನಾನಂ ಚ ಕರ್ತವ್ಯಂ ಮಧ್ಯೇ ಗಾಂಗೇನ ಧೀಮತಾ ॥ ೧೮ ॥**

**ವಿಪ್ರೇಣ ವೇದವಿದುಷಾ ವಿಧಿವದ್ದರ್ಭಪಾಣಿನಾ ।**
**ಸ್ಥಾಪಯಿತ್ವಾ ಚತುಷ್ಕೋಣೇ ಚತುಷ್ಕುಂಭಾನ್ಸುಶೋಭನಾನ್ ॥೧೯॥**

**ಪಂಚಮಂ ಚ ಪುನರ್ಮಧ್ಯೇ ಚಾಕ್ಷತೇನ ವಿಭೂಷಿತಂ ।**
**ಸ್ಥಾಪಯೇದ್ದರ್ಪಣಾಕ್ರಾಂತಂ ಸಪ್ತರ್ಷಿಗಣಾಭಿಮಂತ್ರಿತಂ ॥ ೨೦ ॥**

---

೧೭. ಅಯ್ಯಾ ಭರತವಂಶಜನೇ! ಅದರಂತೆಯೇ ರುದ್ರಸೂಕ್ತವನ್ನು ಹೇಳಿ ರುದ್ರನ ಪ್ರೀತ್ಯರ್ಥವಾಗಿ ಸಮಿತ್ತುಗಳಿಂದಲೂ ಹೋಮ ಮಾಡಬೇಕು. ಸೂರ್ಯಪ್ರೀತ್ಯರ್ಥವಾದ ಈ ಹೋಮದಲ್ಲಿ ಎಕ್ಕ ಅಥವಾ ಮುತ್ತುಗದ ಸಮಿತ್ತುಗಳನ್ನು ಉಪಯೋಗಿಸಬಹುದು.

೧೮. ಪುನಃ ಯವ, ಕರೀಎಳ್ಳು ಇವುಗಳಿಂದ ನೂರೆಂಟು ಆಹುತಿಗಳನ್ನು ಹೋಮ ಮಾಡಬೇಕು. ಹೋಮಾನಂತರ ಗಂಗಾಜಲದಿಂದ ಸ್ನಾನ ಮಾಡಬೇಕು.

೧೯. ವೇದಗಳನ್ನು ಅಧ್ಯಯನ ಮಾಡಿದವನಾಗಿಯೂ, ದರ್ಭಪಾಣಿಯಾಗಿಯೂ ಇರುವ ಬ್ರಾಹ್ಮಣನಿಂದ ಶಾಸ್ತ್ರಪ್ರಕಾರವಾಗಿ ನಾಲ್ಕು ಕೋಣಗಳಲ್ಲಿಯೂ ನಾಲ್ಕು ಶುಭ ಕಲಶಗಳನ್ನು ಸ್ಥಾಪನ ಮಾಡಿಸಬೇಕು.

೨೦. ಈ ನಾಲ್ಕು ಕಲಶಗಳ ನಡುವೆ ಅಕ್ಷತೆಗಳಿಂದಲಂಕೃತವೂ ಕನ್ನಡಿ ಸಮೇತವೂ ಆದ ಐದನೆಯ ಕಲಶವನ್ನು ಸ್ಥಾಪಿಸಿ ಅದರಲ್ಲಿ ಸಪ್ತರ್ಷಿಗಳನ್ನು ಆವಾಹನೆ ಮಾಡಬೇಕು.

ಸೌರೇಣ ತೀರ್ಥತೋಯೇನ ಪೂರ್ಣಚಂದ್ರಮುಲಾನ್ವಿತಂ ।
ಸರ್ವಾನ್ಸರ್ವೌಷಧಿಯುತಾನ್ಪಂಚ ಭಂಗಜಲಾನ್ವಿತಾನ್ ॥ ೨೦ ॥

ಪಂಚರತ್ನಫಲೈರ್ಯುಕ್ತಾನ್ಶಾಖಾಭಿರಪಿ ವೇಷ್ಟಿತಾನ್ ।
ಗಜಾಶ್ವರಥ್ಯಾರಾಜದ್ವಾರ್ವಲ್ಮೀಕಾದ್ಧೃತ ಗೋಕುಲಾತ್ ॥ ೨೨ ॥

ಸುಶುದ್ಧಾಂ ಮೃದಮಾನೀಯ ಸರ್ವೇಷ್ವೇವ ವಿನಿಕ್ಷಿಪೇತ್ ।
ಚತುರ್ಷ್ವಪಿ ಚ ಕುಂಭೇಷು ರತ್ನಗರ್ಭೇಷು ಮಧ್ಯಮಂ ॥ ೨೩ ॥

ಗೃಹೀತ್ವಾ ಬ್ರಾಹ್ಮಣಂ ಚಾತ್ರ ಸೌರಾನ್ಮಂತ್ರಾನುದೀರಯೇತ್ ।
ನಾರೀಭಿಃ ಸಪ್ತಸಂಖ್ಯಾಭೀ ರಥಾಂಗಾಂಗಾಭಿರತ್ರ ಚ ॥ ೨೪ ॥

---

೨೧. ಮತ್ತು ಸೌರಸೂಕ್ತ ಮಂತ್ರಪೂರ್ವಕವಾಗಿ ತೀರ್ಥ ಜಲವನ್ನು ತುಂಬಿ ಅದರಲ್ಲಿ ಗೋರೋಚನ, ಕೇಸರಿ, ಕರ್ಪೂರಾದ ಚೂರ್ಣಗಳನ್ನು ಹಾಕಬೇಕು. ಎಲ್ಲಾ ಕಲಶಗಳಲ್ಲೂ ಸರ್ವೌಷಧಿ, ಪಂಚಪಲ್ಲವ, ಜಲ ಇವುಗಳನ್ನು ಪ್ರಕ್ಷೇಪ ಮಾಡಬೇಕು.

೨೨. ಮತ್ತು ಎಲ್ಲಾ ಕಲಶಗಳಿಗೂ ಪಂಚರತ್ನಗಳನ್ನೂ ಫಲಗಳನ್ನೂ ಹಾಕಿ; ರಸಾಲ, ಅಶ್ವತ್ಥಾದಿ ಶಾಖೆಗಳಿಂದ ಮುಚ್ಚಬೇಕು. ಅಲ್ಲದೆ ಗಜಾಲಯ, ಅಶ್ವಾಲಯ, ಚತುಷ್ಪಥ, ಹುತ್ತ, ರಾಜದ್ವಾರ, ಹೊಳೆಯಮಡು, ಗೋಶಾಲೆ ಈ ಸ್ಥಳಗಳಿಂದ,

೨೩. ಶುದ್ಧವಾದ ಮೃತ್ತಿಕೆಯನ್ನು ತಂದು, ಐದು ಕಲಶಗಳಿಗೂ ಹಾಕಬೇಕು. ರತ್ನಗರ್ಭಗಳಾದ ಆ ಐದು ಕಲಶಗಳಲ್ಲಿ, ಮಧ್ಯೆ ಸ್ಥಾಪನೆಮಾಡಿದ ಕಲಶವನ್ನು ಹಿಡಿದುಕೊಂಡು ಬ್ರಾಹ್ಮಣರು ಸೌರಮಂತ್ರಗಳನ್ನು ಜಪಿಸಬೇಕು.

೨೪. ಅನಂತರ ಬಳೆ ಮೊದಲಾದ ಅಲಂಕಾರಗಳಿಂದ ಅಲಂಕೃತೆಯರಾದ ಏಳು ಜನ ಸುಮಂಗಲಿಯರಿಗೆ ಭೋಜನ ಮಾಡಿಸಬೇಕು.

**ಭೋಜಿತಾಭಿರ್ಯಥಾಶಕ್ತಿಮಾಲ್ಯವಸ್ತ್ರ ವಿಭೂಷಣೈಃ ।**
**ಸವಿಪ್ರಾಭಿಶ್ಚ ಕರ್ತವ್ಯಂ ಮೃತವತ್ಸಾಭಿಷೇಚನಂ ॥ ೨೫ ॥**

**ದೀರ್ಘಾಯುರಸ್ತು ಬಾಲೋಽಯಂ ಜೀವಪುತ್ರಾ ಚ ಭಾವಿನೀ ।**
**ಆದಿತ್ಯಚಂದ್ರಮಾ ಸಾರ್ಧಂ ಗ್ರಹನಕ್ಷತ್ರಮಂಡಲಂ ॥ ೨೬ ॥**

**ಶಕ್ರಃ ಸಲೋಕಪಾಲೋ ವೈ ಬ್ರಹ್ಮಾ ವಿಷ್ಣುರ್ಮಹೇಶ್ವರಃ ।**
**ಏತೇ ಚಾನ್ಯೇ ಚ ವೈ ದೇವಾಃ ಸದಾ ಪಾಂತು ಕುಮಾರಕಂ ॥ ೨೭ ॥**

---

೨೫. ಮತ್ತು ಆ ಏಳು ಜನ ಸುವಾಸಿನಿಯರಿಂದಲೂ ಯಥಾಶಕ್ತಿ ವಸ್ತ್ರ, ಮಾಲ್ಯ, ಭೂಷಣಾದಿಗಳನ್ನು ಕೊಟ್ಟು ಸತ್ಕರಿಸಿ ಏಳು ಜನ ಬ್ರಾಹ್ಮಣರಿಂದಲೂ ಮೃತಶಿಶುಕಳಾದ ಸುವಾಸಿನಿಗೂ ತನ್ಮೂಲಕ ಗರ್ಭಸ್ಥವಾದ ಏಳು ತಿಂಗಳಿನ ಶಿಶುವಿಗೂ ಆ ಕಲಶ ಜಲಾಭಿಷೇಕವನ್ನು ಮಾಡಿಸಬೇಕು.

೨೬. ಅಭಿಷೇಕದ ಕಾಲದಲ್ಲಿ

ದೀರ್ಘಾಯುರಸ್ತು ಬಾಲೋಽಯಂ ಜೀವಪುತ್ರಾ ಚ ಭಾಮಿನೀ ।
ಆದಿತ್ಯಚಂದ್ರಮಾಸಾರ್ಧಂ ಗ್ರಹ ನಕ್ಷತ್ರಮಂಡಲಂ ॥

ಎಂಬ ಈ ಮಂತ್ರವನ್ನು ಹೇಳಬೇಕು.

(ಈ ಹುಡುಗನು ದೀರ್ಘಾಯುಷ್ಮಂತನಾಗಲಿ, ಈ ಹೆಂಗಸು ಜೀವತ್ಪುತ್ರಳಾಗಲಿ, ನವಗ್ರಹಗಳೂ ನಕ್ಷತ್ರಮಂಡಲಗಳೂ ಈ ಕುಮಾರನನ್ನು ಕಾಪಾಡಲಿ ಎಂಬುದೇ ಇದರ ಅರ್ಥ).

೨೭-೨೮. ಶಕ್ರಃ ಸಲೋಕ ಪಾಲೋವೈ ಬ್ರಹ್ಮಾ ವಿಷ್ಣುರ್ಮಹೇಶ್ವರಃ ।
ಏತೇಚಾನ್ಯೇ ಚ ವೈದೇವಾಃ ಸದಾಪಾಂತು ಕುಮಾರಕಂ ॥
ಮಾಶನಿರ್ಮಾ ಚ ಹುತಭುಕ್ ಮಾಚ ಬಾಲಗ್ರಹಾಃ ಕ್ವಚಿತ್ ।
ಪೀಡಾಂ ಕುರ್ವಂತು ಬಾಲಸ್ಯ ಮಾ ಮಾತೃ ಜನಕಸ್ಯ ವೈ ॥

ಎಂಬ ಈ ಮಂತ್ರಗಳಿಂದಲೂ ಅಭಿಷೇಕ ಮಾಡಬೇಕು.

(ಮತ್ತು ಈ ಕುಮಾರನನ್ನು ಬ್ರಹ್ಮ ವಿಷ್ಣು ಮಹೇಶ್ವರರೂ ಪಕ್ಷಾಭಿಮಾನಿ ದೇವತೆಯೂ ಇಂದ್ರಾದಿ ಲೋಕಪಾಲಕ ದೇವತೆಗಳೂ ಮತ್ತು ಇತರ ದೇವತೆ

ಮಾಶನಿರ್ಮಾ ಸ ಹುತಭುಜ್ಞಾ ಚ ಬಾಲಗ್ರಹಾ ಕ್ವಚಿತ್ ।
ಪೀಡಾಂ ಕುರ್ವಂತು ಬಾಲಸ್ಯ ಮಾ ಮಾತೃಜನಕಸ್ಯ ವೈ ॥ ೨೮ ॥

ತತಃ ಶುಕ್ಲಾಂಬರಧರಾಂ ಕುಮಾರಂ ಪತಿಸಂಯುತಾಂ ।
ಸಪ್ತಕಂ ಪೂಜಯೇದ್ಭಕ್ತ್ಯಾ ಪುಷ್ಪೈರ್ಗಂಧೈಃ ಫಲೈಃ ಶುಭೈಃ ॥ ೨೯ ॥

ಕಾಂಚನೀಂ ಚ ತತಃ ಕೃತ್ವಾ ತಿಲಪಾತ್ರೋಪರಿ ಸ್ಥಿತಾಂ ।
ಪ್ರತಿಮಾಂ ಧರ್ಮರಾಜಸ್ಯ ಗುರವೇ ವಿನಿವೇದಯೇತ್ ॥ ೩೦ ॥

ವಸ್ತ್ರಕಾಂಚನರತ್ನೌಘೈರ್ಭಕ್ಷ್ಯೈಃ ಸಘೃತಪಾಯಸೈಃ ।
ಪೂಜಯೇದ್ಬ್ರಾಹ್ಮಣಾಂಸ್ತದ್ವದ್ವಿತ್ತಶಾಠ್ಯಂ ವಿವರ್ಜಯೇತ್ ।
ಭುಕ್ತ್ವಾ ಚ ಗುರುಣಾ ಚೇಯಮುಚ್ಚಾರ್ಯಾ ಮಂತ್ರಸಂತತಿಃ ॥ ೩೧ ॥

---

ಗಳೂ ಸಹ ರಕ್ಷಿಸಲಿ. ಮತ್ತು ಈ ಶಿಶುವಿಗೂ ಇದರ ತಾಯಿ ತಂದೆ ಇಬ್ಬರಿಗೂ ಸಿಡಿಲು, ಬೆಂಕಿ, ಬಾಲಗ್ರಹ ಇವುಗಳೂ ಯಾವ ದೇಶ ಕಾಲಗಳಲ್ಲೂ ಪೀಡೆಯನ್ನು ಮಾಡದಿರಲಿ ಎಂದು ಮಂತ್ರಾರ್ಥ).

೨೯. ಅನಂತರ ಬಿಳಿಯ ಬಟ್ಟೆಗಳನ್ನುಟ್ಟವರೂ ಪತಿಪುತ್ರರನ್ನುಳ್ಳವರೂ ಆದ ಏಳು ಜನ ಸುವಾಸಿನಿಯರನ್ನು ಭಕ್ತಿಪೂರ್ವಕವಾಗಿ ಶುಭ ಪುಷ್ಪ ಗಂಧ ಫಲಾದಿಗಳಿಂದ ಪೂಜಿಸಬೇಕು.

೩೦. ಅನಂತರ ಎಳ್ಳು ತುಂಬಿದ ಪಾತ್ರೆಯ ಮೇಲೆ ಭಂಗಾರದ ಸೂರ್ಯ ಪ್ರತಿಮೆಯನ್ನಿಟ್ಟು ಯಮನ ತಂದೆಯಾದ ಸೂರ್ಯನ ಪ್ರೀತ್ಯರ್ಥವಾಗಿ ದಾನ ಮಾಡಬೇಕು.

೩೧. ಹಾಗೆಯೇ ವಸ್ತ್ರ, ಹಿರಣ್ಯ, ರತ್ನ ಈ ಪದಾರ್ಥಗಳನ್ನು ಧಾರಾಳವಾಗಿ ಕೊಟ್ಟು ಭಕ್ಷ್ಯ. ಘೃತ, ಪಾಯಸ ಇವುಗಳಿಂದ ಭೋಜನಮಾಡಿಸಿ ಬ್ರಾಹ್ಮಣರನ್ನು ಸತ್ಕರಿಸಬೇಕು. ಈ ಸಮಯದಲ್ಲಿ ಧನಲೋಭವನ್ನು ಮಾಡಬಾರದು. ಈ ವ್ರತಾನುಷ್ಠಾತೃವಿನ ಆಚಾರ್ಯನು ಭೋಜನವಾದ ಮೇಲೆ ಮುಂದೆ ಹೇಳುವ ಮಂತ್ರ ಸಮುದಾಯವನ್ನು ಹೇಳಬೇಕು.

**ದೀರ್ಘಾಯುರಸ್ತು ಬಾಲೋಽಯಂ ಯಾವದ್ವರ್ಷಶತಂ ಸುಖೀ ।**
**ಯತ್ಕಿಂಚಿದಸ್ಯ ದುರಿತಂ ತತ್ಕ್ಷಿಪ್ತಂ ಬಡಬಾಮುಖೇ ॥ ೩೨ ॥**

**ಬ್ರಹ್ಮಾ ರುದ್ರೋ ವಿಷ್ಣುಃ ಸ್ಕಂದೋ ವಾಯುಃ ಶಕ್ರೋ ಹುತಾಶನಃ ।**
**ರಕ್ಷಂತು ಸರ್ವೇ ದುಷ್ಟೇಭ್ಯೋ ವರದಾ ಯಾಂತು ಸರ್ವದಾ ॥ ೩೩ ॥**

**ಏವಮಾದೀನಿ ಚಾನ್ಯಾನಿ ವದತಃ ಪೂಜಯೇದ್ಗುರೂನ್ ।**
**ಶಕ್ತಿತಃ ಕಪಿಲಾಂ ದತ್ವಾ ಪ್ರಣಿಪತ್ಯ ವಿಸರ್ಜಯೇತ್ ॥ ೩೪ ॥**

**ಚರುಂ ಚ ಪುತ್ರಸಹಿತಾ ಪ್ರಣಮ್ಯ ರವಿಶಂಕರೌ ।**
**ಹುತಶೇಷಂ ತದಾಶ್ನೀಯಾದಾದಿತ್ಯಾಯ ನಮೋಽಸ್ತು ತೇ ॥ ೩೫ ॥**

---

೩೨-೩೩. ದೀರ್ಘಾಯುರಸ್ತು ಬಾಲೋಽಯಂ ಯಾವದ್ವರ್ಷ ಶತಂ ಸುಖಂ।
ಯತ್ಕಿಂಚಿದಸ್ಯದುರಿತಂ ತತ್ಕ್ಷಿಪ್ತಂ ವಡವಾ ಮುಖೇ ।
ಬ್ರಹ್ಮಾ ರುದ್ರೋ ವಿಷ್ಣು ಸ್ಕಂದೋ ವಾಯುಃ ಶಕ್ರೋಽಹುತಾಶನಃ ।
ರಕ್ಷಂತು ಸರ್ವೇ ದುಷ್ಟೇಭ್ಯೋ ವರದಾಯಾಂತು ಸರ್ವದಾ ॥

(ಈ ಬಾಲಕನು ನೂರುವರ್ಷ ದೀರ್ಘಾಯುಷ್ಮಂತನಾಗಿ ಸುಖವಾಗಿ ಬಾಳಲಿ. ಈ ಬಾಲಕನಿಗೆ ಏನಾದರೂ ದುರಿತವಿದ್ದರೆ ಅದು ಬಡಬಾಗ್ನಿಯ ಮುಖದಲ್ಲಿ ದಗ್ಧವಾಗಿ ಹೋಗಲಿ. ಬ್ರಹ್ಮ, ರುದ್ರ, ವಿಷ್ಣು, ಕುಮಾರಸ್ವಾಮಿ, ವಾಯು, ಇಂದ್ರ, ಅಗ್ನಿ ಈ ಎಲ್ಲ ದೇವತೆಗಳೂ ಈ ಬಾಲಕನನ್ನು ದುಷ್ಟಪ್ರಾಣಿ ಮೊದಲಾದುವುಗಳ ಬಾಧೆಯಿಂದ ರಕ್ಷಿಸಿ ಇವನಿಗೆ ವರಪ್ರದರಾಗಲಿ ಎಂದು ಈ ಮಂತ್ರದ ಅರ್ಥ).

೩೪. ಈ ಮಂತ್ರಗಳನ್ನೂ ಇತರ ಮಂತ್ರಗಳನ್ನೂ ಹೇಳಿ ಆಚಾರ್ಯನು ಆಶೀರ್ವಾದಮಾಡಿದ ಮೇಲೆ ಆಚಾರ್ಯನನ್ನು ಪೂಜೆಮಾಡಿ ಸ್ವಶಕ್ತ್ಯನುಸಾರವಾಗಿ ಕಪಿಲಗೋದಾನವನ್ನು ಮಾಡಿ ನಮಸ್ಕರಿಸಿ ಅವನನ್ನು ಕಳುಹಿಸಬೇಕು.

೩೫. ಅನಂತರ ಆ ಶಿಶುವಿನ ತಾಯಿಯು ಸೂರ್ಯ ಮತ್ತು ಶಂಕರನಿಗೆ ವಂದಿಸಿ ಹುತಶೇಷವಾದ ಚರುವನ್ನು ಗರ್ಭಸ್ಥ ಮಗುವಿನ ಪ್ರಾಶನೆಗಾಗಿ ತಾನು ತಿನ್ನಬೇಕು. ಕೊನೆಗೆ "ಆದಿತ್ಯಾಯ ನಮೋಸ್ತುತೇ" (ಸೂರ್ಯನೇ ನಿನಗೆ ನಮಸ್ಕಾರ) ಎಂದು ಹೇಳಬೇಕು.

ಅಯಮೇವಾದ್ಭುತಂ ಯೋಗೋ ಹ್ಯದ್ಭುತೇಷು ಚ ಶಸ್ಯತೇ ।
ಕರ್ತುರ್ಜನ್ಮನಿ ವೃಕ್ಷಾಣಾಂ ದೇವಾನ್ಸಂಪೂಜಯೇತ್ತದಾ ।
ಶಾಂತ್ಯರ್ಥಂ ಶುಕ್ಲಸಪ್ತಮ್ಯಾಮೇತತ್ಕುರ್ವನ್ನ ಸೀದತಿ ॥ ೩೬ ॥

ಪುಣ್ಯಂ ಪವಿತ್ರಮಾಯುಷ್ಯಂ ಸಪ್ತಮೀಸ್ನಪನಂ ರವಿಃ ।
ಕಥಯಿತ್ವಾ ನರಶ್ರೇಷ್ಠ ತತ್ರೈವಾಂತರಧೀಯತ ॥ ೩೭ ॥

ಸ ಚಾನೇನ ವಿಧಾನೇನ ಕಾರ್ತವೀರ್ಯೋऽರ್ಜುನೋ ನೃಪಃ ।
ಸಂವತ್ಸರಾಣಾಮಯುತಂ ಶಶಾಸ ಪೃಥಿವೀಮಿಮಾಂ ॥ ೩೮ ॥

ಆರೋಗ್ಯಂ ಭಾಸ್ಕರಾದಿಚ್ಛೇದ್ಧನಮಿಚ್ಛೇದ್ಧುತಾಶನಾತ್ ।
ಶಂಕರಾಜ್ಞಾನಮಿಚ್ಛೇತ್ತು ಗತಿಮಿಚ್ಛೇಜ್ಜನಾರ್ದನಾತ್ ॥ ೩೯ ॥

---

೩೬. ಅದ್ಭುತ ಧೂಮಕೇತ್ವಾದ್ಯನಿಷ್ಟ ದರ್ಶನಸೂಚಿತ ದೋಷಪರಿಹಾರಾರ್ಥವಾಗಿಯೂ ಈ ಕರ್ಮವನ್ನೇ ಆಚರಿಸುವುದು ಪ್ರಶಸ್ತವು. ಆಗ ಈ ಕರ್ಮವನ್ನು ಮಾಡುವವನ ಜನ್ಮನಕ್ಷತ್ರದ ದಿನ ಅಶ್ವತ್ಥಾದಿ ವೃಕ್ಷಗಳಲ್ಲಿ ತದಧಿಷ್ಠಾನ ದೇವತೆಗಳನ್ನು ಅರ್ಚಿಸಬೇಕು. ಅನಿಷ್ಟ ಶಾಂತ್ಯರ್ಥವಾಗಿ ಶುಕ್ಲ ಪಕ್ಷದ ಸಪ್ತಮೀ ತಿಥಿಯಲ್ಲಿ ಈ ವ್ರತವನ್ನಾಚರಿಸುವವನು ಮುಂದೆ ಎಂದೂ ದುಃಖಭಾಗಿಯಾಗುವುದಿಲ್ಲ.

೩೭. ಅಯ್ಯಾ ರಾಜನೇ ! ಪುಣ್ಯಪ್ರದವಾಗಿಯೂ, ಪಾಪನಾಶಮಾಡಿ ಪವಿತ್ರತೆಯನ್ನು ಕೊಡುವುದಾಗಿಯೂ ಇರುವ ಈ ಸ್ನಪನ ಸಪ್ತಮೀ ವ್ರತವನ್ನು ಸೂರ್ಯನು ಕೃತವೀರ್ಯನಿಗೆ ಉಪದೇಶಮಾಡಿ ಅಲ್ಲೇ ಅಂತರ್ಹಿತನಾದನು.

೩೮. ಸೂರ್ಯನು ಉಪದೇಶಿಸಿದ ಕ್ರಮವನ್ನನುಸರಿಸಿ ಆ ಕೃತವೀರ್ಯನು ಈ ವ್ರತವನ್ನಾಚರಿಸಿದ ಕಾರಣ ಅವನ ಪುತ್ರನಾದ ಶ್ರೀ ಕಾರ್ತವೀರ್ಯಾರ್ಜುನನೆಂಬ ವಿಖ್ಯಾತನಾದ ಅರಸನು ಹತ್ತುವರ್ಷಗಳಕಾಲ ನಿಷ್ಕಂಟಕವಾಗಿ ಈ ಭೂಮಂಡಲವನ್ನು ಆಳಿದನು.

೩೯. ಸೂರ್ಯಾರಾಧನೆಮಾಡಿ ಆರೋಗ್ಯಲಾಭವನ್ನು ಹೊಂದಬೇಕೆಂದಿಚ್ಛಿಸಬೇಕು. ಅಗ್ನಿ ಪರಿಚರ್ಯಾಮೂಲಕವಾಗಿ ಧನಪ್ರಾಪ್ತ್ಯಾಭಿಲಾಷೆಯನ್ನು ಮಾಡಬೇಕು. ಈಶ್ವರಾರಾಧನೆಯಿಂದ ಮೋಕ್ಷಹೇತುವಾದ ಉತ್ತಮ ಜ್ಞಾನಲಾಭಕ್ಕಾಶೆ

ಏತನ್ಮಹಾಪಾತಕನಾಶನಂ ಸ್ಯಾ ।
ದಪ್ಯಕ್ಷಯಂ ವೇದವಿದಃ ಪಠಂತಿ ।
ಶೃಣೋತಿ ಯಶ್ಚೈನಮನನ್ಯಚೇತಾ ।
ಸ್ತಸ್ಯಾಪಿ ಸಿದ್ಧಿಂ ಮುನಯೋ ವದಂತಿ ॥ ೪೦ ॥

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಸ್ನಪನಸಪ್ತಮೀ ವ್ರತವರ್ಣನಂ ನಾಮ ದ್ವಿಪಂಚಾಶತ್ತಮೋಧ್ಯಾಯಃ.**



---

ಮಾಡಬೇಕು. ಮತ್ತು ಶ್ರೀ ವಿಷ್ಣುವಿನ ಸೇವೆಯಿಂದ ಸದ್ಗತಿಯು ಲಾಭವಾಗಲೆಂದು ಅವನನ್ನು ಪ್ರಾರ್ಥಿಸಬೇಕು. ಅಂದರೆ ಸೂರ್ಯನು ಆರೋಗ್ಯಕಾರಕನು, ಅಗ್ನಿಯಾದರೋ ಸಂಪತ್‌ಕಾರಕನು, ಮತ್ತು ಈಶ್ವರನು ವಿದ್ಯಾಲಾಭದಾಯಕನು, ಮತ್ತು ಕೊನೆಯದಾಗಿ ಶ್ರೀ ವಿಷ್ಣುವಾದರೋ ವೈಕುಂಠಾದಿ ಲೋಕಪ್ರಾಪಕನು ಎಂದು ಭಾವವು.

೪೦. ಯಾರು ಈ ಸದ್ಗ್ರಂಥವನ್ನು ಪಠಣಮಾಡುವರೋ ಮತ್ತು ಯಾರು ಇದನ್ನು ಶ್ರವಣಮಾಡುವರೋ ಅಂತಹವರಿಗೆ ಇದು ಮಹಾಪಾತಕಗಳನ್ನು ನಾಶಮಾಡಿ ಅಕ್ಷಯ ಪುಣ್ಯಫಲವನ್ನು ಕೊಡುವುದು ಎಂದು ವೇದಜ್ಞರೂ, ವಿದ್ವಾಂಸರೂ ಆದ ಪ್ರಾಜ್ಞರು ಹೇಳುವರು. ಯಾವನು ಈ ವ್ರತವನ್ನು ಶ್ರವಣಮಾಡುತ್ತಾನೋ ಅಥವಾ ಯಾವಾತನು ಈ ವ್ರತಾಚರಣೆಯನ್ನು ಭಕ್ತಿಯಿಂದ ಅವಲೋಕಿಸುತ್ತಾನೋ ಅವನಿಗೂ ಇದೇ ಫಲ ಸಿದ್ಧಿಯಾಗುವುದೆಂದು ಮುನಿಗಳೂ ಸಹ ಹೇಳುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಸ್ನಪನ ಸಪ್ತಮೀ ವ್ರತವರ್ಣನೆಯೆಂಬ ಐವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

# ತ್ರಿಪಂಚಾಶತ್ತಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಅಧ್ರುವೇಣ ಶರೀರೇಣ ಸುಪಕ್ವೇನಾಪಿ ಕಿಂ ಫಲಂ ।
ಮಾಘಸ್ನಾನವಿಹೀನೇನ ಯತ್ತ್ಯಕ್ತಂ ಯದುನಂದನ ॥ ೧ ॥

ಪ್ರಾತಃಸ್ನಾನಾಸಮರ್ಥಾನಾಂ ಶರೀರಂ ಪಶ್ಯ ದೇಹಿನಾಂ ।
ಕಿಂ ತೇನ ವದ ಕರ್ತವ್ಯಂ ಮಾಘೇ ಸಂಸಾರಭೀರುಣಾ ॥ ೨ ॥

---

## ಐವತ್ತಮೂರನೆಯ ಅಧ್ಯಾಯ

೧. ಯುಧಿಷ್ಠಿರನು ಕೇಳುತ್ತಾನೆ—ಎಲೈ ಯದುಶ್ರೇಷ್ಠನೇ ! ಅಶಾಶ್ವತವಾದ ಈ ಶರೀರವನ್ನು ಪುಷ್ಟವಾಗಿಯೂ ಸುಂದರವಾಗಿಯೂ ಬೆಳೆಸಿಕೊಂಡರೆ ಸಾಕೆ ! ಮಾಘಮಾಸದ ಪ್ರಾತಃಸ್ನಾನವನ್ನು ಮಾಡದೆ ಇದ್ದ ಮೇಲೆ ಏನು ಫಲ ?

೨. ಮಾಘಮಾಸದಲ್ಲಿ ಪ್ರಾತಃಸ್ನಾನ ಮಾಡುವುದಕ್ಕೆ ಅಸಮರ್ಥರಾಗಿ ಅದನ್ನು ಪರಿತ್ಯಾಗಮಾಡಿರುವ ಆ ಸಂಸಾರಿಯ ಶರೀರವನ್ನು ನೋಡು, ಸಂಸಾರಭೀತಿಯಿಂದ ಕೂಡಿದ ಗೃಹಸ್ಥನು ಮಾಘಮಾಸದಲ್ಲಿ ಯಾವ ಕರ್ಮವನ್ನು ಮಾಡಬೇಕು ಹೇಳು ?

ಕಾಯಕ್ಲೇಶಸಹಾ ನಾರ್ಯೋ ನ ಭವಂತಿ ಯದೂತ್ತಮ ।
ಸೌಕುಮಾರ್ಯಂ ಶರೀರಸ್ಯ ಅಚಲತ್ವಾತ್ತಥೈವ ಚ ॥ ೩ ॥

ಕಥಂ ಚ ತಾಃ ಸುರೂಪಾಃ ಸ್ಯುಃ ಸುಭಗಾಃ ಸುಪ್ರಜಾಸ್ತಥಾ ।
ಸುಕೃತಸ್ಯೇಹ ಪುಣ್ಯಸ್ಯ ಸರ್ವಮೇತತ್ಫಲಂ ಯತಃ ॥ ೪ ॥

ಅಲ್ಪಾಯಾಸೇನ ಸುಮಹಚ್ಛ್ರೇನ ಪುಣ್ಯಮವಾಪ್ಯತೆ ।
ಸ್ತ್ರೀಭಿರ್ಮಾಘೇ ಮಮ ಬ್ರೂಹಿ ಸ್ನಾನಂ ತತ್ತ್ವಂ ರಮಾಧವ ॥ ೫ ॥

॥ ಶ್ರೀ ಕೃಷ್ಣ ಉವಾಚ ॥
ಶ್ರೂಯತಾಂ ಪಾಂಡವಶ್ರೇಷ್ಠ ರಹಸ್ಯಮೃಷಿಭಾಷಿತಂ ।
ಯನ್ಮಯಾ ಕಸ್ಯಚಿನ್ನೋಕ್ತಮಚಲಾಸಪ್ತಮೀವ್ರತಂ ॥ ೬ ॥

---

೩. ಎಲೈ ಯಾದವಶ್ರೇಷ್ಠನೇ! ಸ್ತ್ರೀಯರು ಕಾಯಕಷ್ಟದ ಸಹನ ಶಕ್ತಿಯುಳ್ಳವರಲ್ಲ. ಏತಕ್ಕೆಂದರೆ ಅವರ ಶರೀರವು ಸುಕುಮಾರವಾಗಿಯೂ ಕೋಮಲವಾಗಿಯೂ ಇರುವುದು. ಸೌಕುಮಾರ್ಯದಿಂದ ಕೂಡಿದ ಈ ಶರೀರವನ್ನು ಕರ್ಮಗಳ ಆಚರಣೆಗಾಗಿ ಕ್ಲೇಶಪಡಿಸುವುದು ಅವರಿಗೆ ಅಸಾಧ್ಯವಾಗಿ ಪರಿಣಮಿಸುವುದು.

೪. ಆದುದರಿಂದ ಈ ಸುಕುಮಾರ ಶರೀರವುಳ್ಳ ಸ್ತ್ರೀಯರು, ಸುಂದರಿಯರೂ, ಸತ್ಸಂತಾನವುಳ್ಳವರೂ, ಸೌಭಾಗ್ಯವತಿಯರೂ ಆಗುವುದು ಹೇಗೆ? ಏತಕ್ಕೆಂದರೆ ಈ ಸೌಂದರ್ಯಾದಿ ಎಲ್ಲ ಫಲಗಳೂ ಈ ಲೋಕದಲ್ಲಿ ಸಂಪಾದಿಸಿದ ಪುಣ್ಯದಿಂದ ಲಭಿಸಬೇಕಾಗಿರುತ್ತವೆ.

೫. ಎಲೈ ಲಕ್ಷ್ಮೀಕಾಂತನೇ! ಸ್ತ್ರೀಯರು ಮಾಘಮಾಸದಲ್ಲಿ ಅಲ್ಪಾಯಾಸ ಮಾತ್ರದಿಂದ ಯಾವುದನ್ನು ಮಾಡಿದರೆ ಮಹಾಪುಣ್ಯವು ಪ್ರಾಪ್ತವಾಗುವುದು? ಅಥವಾ ಮತ್ತೆ ಯಾವ ಸಾಧನದಿಂದ ಈ ಸುಖಗಳು ಲಭಿಸುವುವು? ಎಂಬುದನ್ನು ನೀನು ನನಗೆ ಹೇಳು ಎಂದನು.

೬. ಶ್ರೀ ಕೃಷ್ಣನು ಹೇಳುತ್ತಾನೆ— ಅಯ್ಯಾ ಪಾಂಡವೋತ್ತಮನೇ! ಹಿಂದೆ ಋಷಿಗಳಿಂದ ಉಕ್ತವಾದ ಒಂದು ರಹಸ್ಯ ವಿಷಯವನ್ನು ಹೇಳುತ್ತೇನೆ. ಶ್ರವಣಮಾಡು, ಈಗ ನಾನು ಹೇಳುವ ಅಚಲಾ ಸಪ್ತಮೀ ವ್ರತವನ್ನು ಹಿಂದೆ ಯಾರಿಗೂ ಹೇಳಿದುದಿಲ್ಲ.

ವೇಶ್ಯಾ ಚೇಂದುಮತೀ ನಾಮ ರೂಪೌದಾರ್ಯಗುಣಾನ್ವಿತಾ ।
ಆಸೀತ್ಕುರುಕುಲಶ್ರೇಷ್ಠ ಮಗಧಸ್ಯ ವಿಲಾಸಿನೀ ॥ ೭ ॥

ತನುಮಧ್ಯಾ ಸುಜಘನಾ ಪೀನೋನ್ನತಪಯೋಧರಾ ।
ಸಮ್ಯಗ್ವಿಭಕ್ತಾವಯವಾ ಪೂರ್ಣಚಂದ್ರನಿಭಾನನಾ ॥ ೮ ॥

ಸೌಂದರ್ಯಂ ಸೌಕುಮಾರ್ಯಂ ಚ ತಸ್ಯಾಃ ಕಾಮೇನ ಗೀಯತೇ ।
ಯಸ್ಯಾಃ ಸಂದರ್ಶನಾದೇವ ಕಾಮಃ ಕಾಮಾತುರೋ ಭವೇತ್ ॥ ೯ ॥

ಮೂರ್ತಿಃ ಶಶಧರಸ್ಯೇವ ನಯನಾನಂದಕಾರಿಣೀ ।
ವಶೀಕರಣವಿದ್ಯೇವ ಸರ್ವಲೋಕಮನೋಹರಾ ॥ ೧೦ ॥

---

೭. ಅಯ್ಯಾ ಕುರುಕುಲೋತ್ತಮನೇ ! ಪೂರ್ವದಲ್ಲಿ ರೂಪ ಔದಾರ್ಯಾದಿ ಗುಣಗಳಿಂದ ಕೂಡಿದ ಇಂದುಮತಿ ಎಂಬ ವೇಶ್ಯೆಯು ಮಗಧರಾಜನಿಗೆ ವಿಲಾಸ ವತಿಯಾಗಿದ್ದಳು.

೮. ಆ ಇಂದುಮತಿಯು ಕೃಶೋದರಿ. ಸುಂದರವಾದ ಜಘನವುಳ್ಳ ವಳು. ದಪ್ಪವೂ ಉನ್ನತವೂ ಆದ ಸ್ತನಗಳುಳ್ಳವಳು. ಸ್ಪಷ್ಟವಾಗಿ ಬೇರೆಬೇರೆ ಯಾಗಿ ಕಾಣಿಸುವ ಅವಯವಗಳನ್ನುಳ್ಳವಳು. ಷೋಡಶಕಲಾಪೂರ್ಣವಾದ ಚಂದ್ರನಿಗೆ ಸಮಾನವಾದ ಮುಖವುಳ್ಳವಳು ಆಗಿದ್ದಳು.

೯. ಮತ್ತು ಅವಳ ಸೌಂದರ್ಯ, ಮಾರ್ದವ ಇವುಗಳನ್ನು ಮನ್ಮಥನೂ ಸ್ತುತಿಸುವಂತಿತ್ತು. ಅವಳ ಸಂದರ್ಶನ ಮಾತ್ರದಿಂದ ಮನ್ಮಥನೂ ಕಾಮಾತುರ ನಾಗುವಂತಿತ್ತು.

೧೦. ಅವಳ ಶರೀರವು ಚಂದ್ರಬಿಂಬದಂತೆ ನೋಡುವವರ ಕಣ್ಮನಗಳಿಗೆ ಆನಂದದಾಯಕವಾಗಿತ್ತು. ಮತ್ತು ಅವಳು ಇತರರನ್ನು ವಶಮಾಡಿಕೊಳ್ಳು ವುದಕ್ಕೆ ಉಪಯೋಗಿಸುವ ವಿದ್ಯೆಯೋ ಎಂಬಂತೆ ಸರ್ವಜನರ ಚಿತ್ತಾಕರ್ಷಣೆ ಮಾಡಿ ಬೆರಗುವಾಡುತ್ತಿದ್ದಳು.

**ಏಕಸ್ಮಿನ್ದಿವಸೇ ಪ್ರಾತಃ ಸುಮುಖಸ್ಥಿತಯಾ ತಯಾ ।**
**ಚಿಂತಿತಾ ಹೃದಯೇ ರಾಜನ್ಸಂಸಾರಸ್ಯಾನವಸ್ಥಿತಿಃ** ॥ ೧೧ ॥

**ಸನ್ನಿಮಜ್ಯ ಜಗದಿದಂ ವಿಷಮೇ ಕಾಯಸಾಗರೇ ।**
**ಜನ್ಮಮೃತ್ಯುಜರಾಗ್ರಾಹಂ ನ ಕಶ್ಚಿದವಬುಧ್ಯತೆ** ॥ ೧೨ ॥

**ಅಪಾಕೋಽಭೂತಭಾಂಡಾನಾಂ ಧಾತೃಶಿಲ್ಪಿವಿನಿರ್ಮಿತಂ ।**
**ಸ್ವಕರ್ಮೇಂಧನಸಂವೀತಂ ಪಚ್ಯತೆ ಬಲವಹ್ನಿನಾ** ॥ ೧೩ ॥

**ಯೇ ಯಾಂತಿ ದಿವಸಾಃ ಪುಂಸಾಂ ಧರ್ಮಕಾಮಾರ್ಥವರ್ಜಿತಾಃ ।**
**ನ ತೇ ಪುನರಿಹಾಯಾಂತಿ ಹರಭಕ್ತಾ ನರಾ ಯಥಾ** ॥ ೧೪ ॥

---

೧೧. ಎಲೈ ರಾಜನೇ ! ಒಂದುದಿನ ಪ್ರಾತಃಕಾಲದಲ್ಲಿ ಆ ಇಂದುಮತಿ ವೇಶ್ಯೆಯು ಸುಮುಖಿಯಾಗಿ ಕುಳಿತಿರುವಾಗ ತನ್ನ ಮನಸ್ಸಿನಲ್ಲಿ ಈ ಸಂಸಾರವು ಅಸ್ಥಿರವೆಂದು ಯೋಚಿಸುತ್ತಿದ್ದಳು.

೧೨. ಮತ್ತು ಪ್ರತಿಯೊಂದು ಪ್ರಾಣಿಯೂ ಶರೀರವೆಂಬ ವಿಷಮಸಾಗರದಲ್ಲಿ ಮುಳುಗಿ ಶರೀರವೇ ತಾನು ಎಂದು ಭಾವಿಸಿ ಜನ್ಮ, ಜರಾ, ಮರಣ ಎಂಬ ಮೊಸಳೆಗಳ ಅಪಾಯವನ್ನು ಸ್ವಲ್ಪವೂ ಯೋಚಿಸುವುದಿಲ್ಲ.

೧೩. ಬ್ರಹ್ಮನೆಂಬ ಶಿಲ್ಪಿಯು ಪಂಚಭೂತಗಳೆಂಬ ಮಣ್ಣಿನಿಂದ ಶರೀರವೆಂಬ ಅಪಕ್ವವಾದ ಭಾಂಡವನ್ನು ನಿರ್ಮಿಸಿದ್ದಾನೆ. ಆ ಶರೀರರೂಪೀ ಅಪಕ್ವ ಭಾಂಡವು ಸ್ವಯಂಕೃತವಾದ ಪುಣ್ಯ ಪಾಪಗಳೆಂಬ ಸೌದೆಗಳಿಂದ ಕೂಡಿ ಸಂತತಿಯೆಂಬ ಅಗ್ನಿಯಿಂದ ಪಕ್ವಮಾಡಲ್ಪಡುತ್ತದೆ.

೧೪. ಪುರುಷರಿಗೆ ಧರ್ಮಕಾಮಾರ್ಥಗಳೆಂಬ ತ್ರಿವರ್ಗರಹಿತವಾಗಿ ವೃಥಾ ಕಳೆದು ಹೋಗುವ ದಿವಸಗಳು ಪುನಃ ಶಿವಭಕ್ತರು ಈ ಲೋಕಕ್ಕೆ ಬಾರದಿರುವಂತೆಯೇ ಪುನಃ ಬರಲಾರವು. ಅಂದರೆ ಯಾವ ಪುರುಷಾರ್ಥವನ್ನು ಸಾಧಿಸದೆ ಕಳೆದುಹೋದ ದಿವಸಗಳು ವ್ಯರ್ಥ. ಪುರುಷನ ಆಯುಸ್ಸು ಅಲ್ಪವಾದುದರಿಂದ ಆ ದಿವಸಗಳನ್ನು ದುರುಪಯೋಗಪಡಿಸದೆ ಪುರುಷಾರ್ಥಗಳನ್ನು ಸಾಧಿಸುವುದಕ್ಕೆ ಉಪಯೋಗಿಸಿಕೊಳ್ಳಬೇಕು.

ಸ್ನಾನಂ ದಾನಂ ತಪೋ ಹೋಮಃ ಸ್ವಾಧ್ಯಾಯಃ ಪಿತೃತರ್ಪಣಂ ।
ಯಸ್ಮಿನ್ದಿನೇ ನ ಕ್ರಿಯತೇ ವೃಥಾ ಸ ದಿವಸೋ ನೃಣಾಂ ॥ ೧೫ ॥

ಪುತ್ರಾಣಾಂ ದಾರಗೃಹಕಸಮಾಸಕ್ತಂ ಹಿ ಮಾನಸಂ ।
ವೃಕೀವೋರಣಮಾಸಾದ್ಯ ಮೃತ್ಯುದ್ವಾರಾಯ ಗಚ್ಛತಿ ॥ ೧೬ ॥

ಇತ್ಯೇವಂ ಚಿಂತಯಿತ್ವಾ ತು ವೇಶ್ಯಾ ಚೇಂದುಮತೀ ತತಃ ।
ವಸಿಷ್ಠಸ್ಯಾಶ್ರಮಂ ಪುಣ್ಯಂ ಜಗಾಮ ಗಜಗಾಮಿನೀ ॥ ೧೭ ॥

ವಸಿಷ್ಠಮೃಷಿಮಾಸೀನಂ ಪ್ರಣಮ್ಯ ವಿನಯಾತ್ತತಃ ।
ಕೃತಾಂಜಲಿಪುಟಾ ಭೂತ್ವಾ ಇದಂ ವಚನಮಬ್ರವೀತ್ ॥ ೧೮ ॥

॥ ಇಂದುಮತ್ಯುವಾಚ ॥

ದಶಸೂನಾಸಮಶ್ಚಕ್ರೀ ದಶಚಕ್ರಿಸಮೋಧ್ವಜಃ ।
ದಶಧ್ವಜಸಮಾ ವೇಶ್ಯಾ ದಶವೇಶ್ಯಾಸಮೋ ನೃಪಃ ॥ ೧೯ ॥

---

೧೫. ಪುರುಷರು ಯಾವ ದಿನದಲ್ಲಿ ಸ್ನಾನ, ದಾನ, ತಪಸ್ಸು, ಹೋಮ, ವೇದಾಧ್ಯಯನ, ಪಿತೃತರ್ಪಣ ಇವುಗಳನ್ನು ಆಚರಿಸುವುದಿಲ್ಲವೋ ಆ ದಿವಸವು ಅವರಿಗೆ ನಿಷ್ಫಲವು.

೧೬. ಹೆಣ್ಣು ತೋಳವು ದೊಡ್ಡ ಟಗರನ್ನು ಆಕ್ರಮಿಸಹೋಗಿ ಮೃತ್ಯು ವಶವಾದಂತೆ ಮಕ್ಕಳು, ಹೆಂಡತಿ, ಮನೆ ಇವುಗಳಲ್ಲೇ ಆಸಕ್ತವಾದ ಮನಸ್ಸು, ಪುರುಷಾರ್ಥ ವಿಹೀನವಾಗಿ ಅನರ್ಥವನ್ನು ಹೊಂದುವುದು.

೧೭. ಗಜದ ಹಾಗೆ ಮಂದಗಮನೆಯಾದ ಆ ಇಂದುಮತಿಯು ಈ ರೀತಿಯಾಗಿ ತನ್ನ ಮನಸ್ಸಿನಲ್ಲಿ ಸಂಸಾರದ ಅಸಾರವನ್ನು ಆಲೋಚಿಸಿ ಅನಂತರ ಪುಣ್ಯಕರವಾದ ವಸಿಷ್ಠಮಹರ್ಷಿಯ ಆಶ್ರಮಕ್ಕೆ ಹೋದಳು.

೧೮. ಆಶ್ರಮದಲ್ಲಿ ಕೂತಿರುವ ವಸಿಷ್ಠಮಹರ್ಷಿಗೆ ನಮಸ್ಕಾರಮಾಡಿ ವಿನಯದಿಂದ ಕೈಜೋಡಿಸಿ ಈರೀತಿ ಹೇಳಿದಳು.

೧೯. ಇಂದುಮತಿಯು ಹೇಳುತ್ತಾಳೆ—ಸ್ವಾಮೀ ಮಹರ್ಷಿವರ್ಯರೇ ! ಹತ್ತು ಮಹಾಪಾಪಸಮಾನವು ಒಂದು ಸರ್ಪವು. ಹತ್ತು ಸರ್ಪಸಮಾನವು ಪುರುಷನ ಪ್ರಜನನೇಂದ್ರಿಯವು. ಹತ್ತು ಪುರುಷಪ್ರಜನನೇಂದ್ರಿಯ ಸದೃಶಳು

**ಮಯಾ ನ ದತ್ತಂ ನ ಹುತಂ ನೋಪವಾಸೋ ವ್ರತಂ ಕೃತಂ ।**
**ಭಕ್ತ್ಯಾ ನ ಪೂಜಿತಃ ಶಂಭುಃ ಸ್ರಿತೋ ನೈಕೋ ಧನೀ ನರಃ ॥ ೨೦ ॥**

**ಸಾಂಪ್ರತಂ ವರ್ತಮಾನಾಯಾ ವ್ರತಂ ಕಿಂಚಿದ್ವದಸ್ವ ಮೇ ।**
**ಯೇನ ದುಃಖಾಂಬುಪಾಪೌಘಾದುತ್ತರಾಮಿ ಭವಾರ್ಣವಾತ್ ॥ ೨೧ ॥**

**ಏತದಸ್ಯಾಃ ಸುಬಹುಶಃ ಶ್ರುತ್ವಾ ಧರ್ಮ್ಯಂ ಪರಂತಪಃ ।**
**ವಸಿಷ್ಠಃ ಕಥಯಾಮಾಸ ಮಹಾಕಾರುಣಿಕೋ ಮುನಿಃ ॥ ೨೨ ॥**

**॥ ವಸಿಷ್ಠ ಉವಾಚ ॥**

**ಮಾಘಸ್ಯ ಸಿತಸಪ್ತಮ್ಯಾಂ ಸರ್ವಕಾಮಫಲಪ್ರದಂ ।**
**ತಪಃ ಸೌಭಾಗ್ಯಜನನಂ ಸ್ನಾನಂ ತವ ವರಾನನೇ ॥ ೨೩ ॥**

---

ಒಬ್ಬ ವೇಶ್ಯೆಯು, ಹತ್ತು ವೇಶ್ಯಾಸಮಾನನು ಒಬ್ಬ ರಾಜನು. ಈರೀತಿ ಪೂರ್ವ ಪೂರ್ವ ಪದಾರ್ಥಗಳಿಗಿಂತ ಉತ್ತರೋತ್ತರ ವಸ್ತುಗಳು ಪುಷ್ಟಗಳು.

೨೦. ನಾನು ದಾನವನ್ನು ಮಾಡಿದವಳಲ್ಲ. ಮತ್ತು ಹೋಮ ಉಪವಾಸ ವ್ರತ ಇವುಗಳೊಂದನ್ನೂ ಮಾಡಿದವಳಲ್ಲ. ಭಕ್ತಿಪೂರ್ವಕವಾಗಿ ಶಿವಪೂಜೆಯನ್ನೂ ಮಾಡಲಿಲ್ಲ. ಧನಿಕನಾದ ಒಬ್ಬ ಪುರುಷನನ್ನೂ ಸೇವಿಸಲಿಲ್ಲ.

೨೧. ಈ ಪ್ರಕಾರಳಾದ ನನ್ನ ಉದ್ಧಾರಕ್ಕಾಗಿ ತಾವು ದಯೆಯಿಟ್ಟು ಒಂದು ವ್ರತವನ್ನು ಉಪದೇಶಮಾಡಬೇಕು. ನೀವು ಉಪದೇಶಿಸಿದ ವ್ರತವನ್ನಾಚರಿಸಿ, ನಾನು ದುಃಖವೆಂಬ ನೀರಿನಿಂದಲೂ, ಪಾಪವೆಂಬ ಜಲಪ್ರವಾಹದಿಂದಲೂ ಕೂಡಿರುವ ಈ ಸಂಸಾರಸಾಗರವನ್ನು ದಾಟಿಹೋಗುತ್ತೇನೆ ಎಂದಳು.

೨೨. ಈ ಇಂದುಮತಿವೇಶ್ಯೆ ಆಡಿದ ಅನೇಕ ಧರ್ಮಪರವಾದ ಈ ವಚನಗಳನ್ನು ಕೇಳಿ, ಪರಮತಪಸ್ವಿಯಾದ ಆ ವಸಿಷ್ಠಮಹರ್ಷಿಯು ಕರುಣೆಯಿಂದ ಕೂಡಿ ಮಾತನಾಡಲು ಉಪಕ್ರಮಿಸಿದನು.

೨೩. ಎಲೌ ಸುಂದರಮುಖಿಯೇ! ಮಾಘಮಾಸದ ಶುಕ್ಲಪಕ್ಷದ ಸಪ್ತಮಿಯಲ್ಲಿ ಸರ್ವಾಭಿಲಷಿತ ಫಲದಾಯಕವೂ, ತಪಸ್ಸಿದ್ಧಿ ಮತ್ತು ಸೌಭಾಗ್ಯಪ್ರಾಪ್ತಿಗೆ ಕಾರಣವೂ ಆಗಿರುವ ಸ್ನಾನಕರ್ಮವನ್ನು ನೀನು ಅವಶ್ಯವಾಗಿ ಆಚರಿಸು.

ಕೃತ್ವಾ ಷಷ್ಠ್ಯಾಮೇಕಭಕ್ತಂ ಸಪ್ತಮ್ಯಾಂ ನಿಶ್ಚಲಂ ಜಲಂ ।
ರಾತ್ರ್ಯಂತೇ ಚಾಲಯೇಥಾಸ್ತ್ವಂ ದತ್ವಾ ಶಿರಸಿ ದೀಪಕಂ ॥ ೨೪ ॥

ಮಾಘಸ್ಯ ಸಿತಸಪ್ತಮ್ಯಾಮಚಲಂ ಚಾಲಿತಂ ಮಯಾ ।
ಜಲಾಮಲಾನಾಂ ಸರ್ವೇಷಾಂ ಕೃತಂ ನ ಚಲನಂ ತದಾ ॥ ೨೫ ॥

ವಸಿಷ್ಠವಚನಂ ಶ್ರುತ್ವಾ ತಸ್ಮಿನ್ನಹನಿ ಭೂಪತೇ ।
ಸರ್ವಂ ಚಕಾರೇಂದುಮತೀ ಸ್ನಾನಂ ದಾನಂ ಯಥಾವಿಧಿ ॥ ೨೬ ॥

ಅಹೋ ಸ್ನಾನಪ್ರಭಾವೇಣ ಭುಕ್ತ್ವಾ ಭೋಗಾನ್ಯಥೇಪ್ಸಿತಾನ್ ।
ಇಂದ್ರಲೋಕೇಪ್ಸರಃಸಂಘೇ ನಾಯಿಕಾತ್ವಮವಾಪ ಸಾ ॥ ೨೭ ॥

---

೨೪. ಆ ಮಾಘಮಾಸದ ಶುಕ್ಲಪಕ್ಷದ ಷಷ್ಠೀ ತಿಥಿಯಲ್ಲಿ ಏಕಭೋಜನವನ್ನು ಮಾಡಿ, ಆದಿನದ ರಾತ್ರಿಯ ಕೊನೆಯಲ್ಲಿ ಬೆಳಗಾಗುವುದಕ್ಕೆ ಮೊದಲೇ ಅಂದರೆ ಸಪ್ತಮಿಯದಿನ ಉಷಃಕಾಲದಲ್ಲಿ ನಿಶ್ಚಲವಾದ ತಟಾಕದ ಜಲದಲ್ಲಿ ದೀಪವನ್ನಿಟ್ಟು ಅನಂತರ ನೀನು ಜಲವನ್ನು ಅಲುಗಾಡಿಸಬೇಕು.

೨೫. ಆಗ "ಮಾಘಮಾಸದ ಶುಕ್ಲಪಕ್ಷದ ಸಪ್ತಮಿಯಲ್ಲಿ ಯಥೋಕ್ತವಾಗಿ ಅಚಲವಾದ ಜಲವನ್ನು ಚಾಲನಮಾಡಿರುವೆನು. ನಾನು ಆ ಜಲವನ್ನು ಅಲುಗಾಡಿಸುವುದಕ್ಕೆ ಮುಂಚೆ ಜಲಚಾಲಕಗಳಾದ ಮತ್ಸ್ಯ ಮಕರ ಪಕ್ಷ್ಯಾದಿ ಯಾವ ಪ್ರಾಣಿಗಳೂ ಅದನ್ನು ಅಲುಗಾಡಿಸಿರಲಿಲ್ಲ. ಅವುಗಳು ಎದ್ದು ಜಲ ಚಾಲನೆ ಮಾಡುವುದಕ್ಕೆ ಮೊದಲೇ ಉಷಃಕಾಲದಲ್ಲೇ ಈ ಕರ್ಮವನ್ನು ನಾನು ಆಚರಿಸಿರುತ್ತೇನೆ ಎನ್ನಬೇಕು" ಎಂದನು.

೨೬. ಎಲೈ ಭೂಪತಿಯೇ! ಆ ವಸಿಷ್ಠಮುನಿಯ ಮಾತನ್ನು ಕೇಳಿ ಇಂದುಮತಿಯು ಮಾಘ ಶುದ್ಧ ಸಪ್ತಮಿಾದಿನ ಉಷಃಕಾಲದಲ್ಲಿದ್ದು ಶಾಸ್ತ್ರ ಪ್ರಕಾರವಾಗಿ ಸ್ನಾನ ದಾನಾದಿಗಳನ್ನೆಲ್ಲವನ್ನೂ ಮಾಡಿದಳು.

೨೭. ಅಯ್ಯಾ ಯುಧಿಷ್ಠಿರನೇ! ಏನಾಶ್ಚರ್ಯ! ಆ ಸ್ನಾನ ಪ್ರಭಾವದಿಂದ ಇಂದುಮತಿಯು ಇಹಲೋಕದಲ್ಲಿ ದುರ್ಲಭವಾದ ಭೋಗಗಳನ್ನು ಯಥೇಷ್ಟವಾಗಿ ಅನುಭವಿಸಿ ಬಳಿಕ ಇಂದ್ರಲೋಕದಲ್ಲಿ ಅಪ್ಸರ ಸ್ತ್ರೀ ಸಂಘಕ್ಕೆ ನಾಯಿಕೆಯಾದಳು.

**ಅಚಲಾಸಪ್ತಮೀಸ್ನಾನಂ ಕಥಿತಂ ಚ ವಿಶಾಂಪತೇ ।**
**ಸರ್ವಪಾಪಪ್ರಶಮನಂ ಸುಖಸೌಭಾಗ್ಯವರ್ಧನಂ ॥ ೨೮ ॥**

**॥ ಯುಧಿಷ್ಠಿರ ಉವಾಚ ॥**
**ಸಪ್ತಮೀಸ್ನಾನಮಾಹಾತ್ಮ್ಯಂ ಶ್ರುತಂ ನ ಚ ವಿಶೇಷತಃ ।**
**ಸಾಂಪ್ರತಂ ಶ್ರೋತುಮಿಚ್ಛಾಮಿ ವಿಧಿಮಂತ್ರಸಮನ್ವಿತಂ ॥ ೨೯ ॥**

**॥ ಶ್ರೀ ಕೃಷ್ಣ ಉವಾಚ ॥**
**ಏಕಭಕ್ತೇನ ಸಂತಿಷ್ಠೇತ್ ಷಷ್ಠ್ಯಾಂ ಸಂಪೂಜ್ಯ ಭಾಸ್ಕರಂ ।**
**ಸಪ್ತಮ್ಯಾಂ ತು ವ್ರಜೇತ್ಪ್ರಾತಃ ಸುಗಂಭೀರಂ ಜಲಾಶಯಂ ॥ ೩೦ ॥**

**ಸರಿತ್ಸಂಗಂ ತಟಾಗಂ ಚ ದೇವಖಾತಮಥಾಪಿ ವಾ ।**
**ಸುಖಾವಗಾಹಸಲಿಲಂ ದುಷ್ಟಸತ್ತ್ವೈರದೂಷಿತಂ ॥ ೩೧ ॥**

---

೨೮. ಅಯ್ಯಾ ಪ್ರಜಾಧಿಪತಿಯೇ ! ಸರ್ವಪಾಪನಾಶಕವಾಗಿಯೂ, ಸುಖಸೌಭಾಗ್ಯವರ್ಧಕವಾಗಿಯೂ ಇರುವ ಅಚಲಾಸಪ್ತಮೀ ವ್ರತದ ಸ್ನಾನ ಫಲವನ್ನು ನಿನಗೆ ಉಪದೇಶಮಾಡಿದ್ದೇನೆ ಎಂದನು.

೨೯. ಧರ್ಮರಾಜನು ಹೇಳುತ್ತಾನೆ—ಅಯ್ಯಾ ಕೃಷ್ಣನೇ! ಮಾಘ ಸಪ್ತಮೀ ಸ್ನಾನ ಮಹಾತ್ಮೆಯನ್ನು ಸಾರಾಂಶವಾಗಿ ಶ್ರವಣಮಾಡಿದೆನು ವಿಸ್ತಾರವಾಗಿ ಶ್ರವಣಮಾಡಲಿಲ್ಲ. ಆದುದರಿಂದ ಅದರ ಅನುಷ್ಠಾನಕ್ರಮವನ್ನು ಮಂತ್ರಸಹಿತವಾಗಿ ಶ್ರವಣಮಾಡುವ ಅಭಿಲಾಷೆಯಾಗಿದೆ ಎಂದನು.

೩೦- ಶ್ರೀ ಕೃಷ್ಣನು ಹೇಳುತ್ತಾನೆ—ಮಾಘ ಶುದ್ಧ ಷಷ್ಠೀ ದಿನದಲ್ಲಿ ಸೂರ್ಯಾರ್ಚನೆಯನ್ನು ಮಾಡಿ, ಏಕಭುಕ್ತದಿಂದಲೇ ಇರಬೇಕು. ಮರುದಿನ ಸಪ್ತಮಿಯ ಪ್ರಾತಃಕಾಲದಲ್ಲಿ ಗಂಭೀರವಾದ ಜಲಾಶಯಕ್ಕೆ ಹೋಗಬೇಕು.

೩೧. ಆ ಜಲಾಶಯವು ಸುಖವಾಗಿ ಇಳಿದು ಸ್ನಾನಮಾಡುವುದಕ್ಕೆ ಯೋಗ್ಯವೂ, ಮೊಸಳೆ ಮೊದಲಾದ ಹಿಂಸ್ರ (ದುಷ್ಟ) ಪ್ರಾಣಿರಹಿತವೂ ಆಗಿರಬೇಕು. ಇಂತಹ ನದೀಸಂಗಮಸ್ಥಳ, ಕೊಳ, ಅಥವಾ ದೇವತೆಗಳಿಂದಲೇ ತೋಡಲ್ಪಟ್ಟು ನಿರ್ಮಿತವಾದ ಪುರಾತನವಾದ ಪುಷ್ಕರ, ಇವುಗಳಲ್ಲಿ ಯಾವುದಾದರೂ ಆಗಿರಬಹುದು.

ಪಶುಭಿಃ ಪಕ್ಷಿಭಿಶ್ಚೈವ ಜಲಜೈರ್ಮತ್ಸ್ಯಕಚ್ಛಪೈಃ ।
ನ ಜಲಂ ಚಾಲ್ಯತೇ ಯಾವತ್ತಾವತ್ಸ್ನಾನಂ ಸಮಾಚರೇತ್ ॥ ೩೨ ॥

ನಮಸ್ತೇ ರುದ್ರರೂಪಾಯ ರಸಾನಾಂ ಪತಯೇ ನಮಃ ।
ವರುಣಾಯ ನಮಸ್ತೇಽಸ್ತು ಹರಿವಾಸ ನಮೋಽಸ್ತು ತೇ ॥ ೩೩ ॥

ಯಾವಜ್ಜನ್ಮಕೃತಂ ಪಾಪಂ ಮಯಾ ಜನ್ಮಸು ಸಪ್ತಸು ।
ತನ್ಮೇ ರೋಗಂ ಚ ಶೋಕಂ ಚ ಮಾಕರೀ ಹಂತು ಸಪ್ತಮೀ ॥ ೩೪ ॥

---

೩೨. ಅಂತಹ ಜಲಾಶಯದಲ್ಲಿ ಪಶು, ಪಕ್ಷಿ, ಜಲಪ್ರಾಣಿಗಳಾದ ಮೀನು ಆಮೆ ಇತ್ಯಾದಿಗಳಿಂದ ನೀರು ಅಲ್ಲಾಡುವುದಕ್ಕೆ ಮೊದಲೇ, ಬಹಳ ಮುಂಜಾನೆಯಲ್ಲಿಯೇ ಸಂಕಲ್ಪಪೂರ್ವಕ ಸ್ನಾನ ಮಾಡಬೇಕು.

೩೩. ಸ್ನಾನ ಕಾಲದಲ್ಲಿ,

ನಮಸ್ತೇ ರುದ್ರರೂಪಾಯ ರಸಾನಾಂ ಪತಯೇ ನಮಃ ।
ವರುಣಾಯ ನಮಸ್ತೇಸ್ತು ಹರಿವಾಸ ನಮೋಸ್ತುತೇ ॥
ಯಾವಜ್ಜನ್ಮ ಕೃತಂ ಪಾಪಂ ಮಯಾಜನ್ಮ ಸು ಸಪ್ತಸು ।
ತನ್ಮೇ ರೋಗಂಚ ಶೋಕಂಚ ಮಾಕರೀ ಹಂತು ಸಪ್ತಮಿ ॥
ಜನನೀ ಸರ್ವ ಭೂತಾನಾಂ ಸಪ್ತಮಿ ಸಪ್ತ ಸಪ್ತಿಕೇ ।
ಸರ್ವವ್ಯಾಧಿಹರೇ ದೇವೀ ನಮಸ್ತೇ ರವಿಮಂಡಲೇ ॥

ಈ ಮಂತ್ರವನ್ನು ಹೇಳಿ ಪ್ರಾರ್ಥಿಸಬೇಕು.

(ಶ್ರೀ ಮಹಾವಿಷ್ಣುವಿಗೆ ವಾಸಸ್ಥಾನವಾಗಿರುವ ಎಲೌ ಜಲಶ್ರೇಷ್ಠವೇ! ನಿನಗೆ ನಮಸ್ಕಾರ. ಮತ್ತು ರುದ್ರಸ್ವರೂಪಿಯಾದ ನಿನಗೆ ವಂದನೆಗಳು. ಹಾಗೇ ಸರ್ವರಸಾಧಿಪತಿಯೂ, ವರುಣಾದಿ ದೇವತಾಸ್ವರೂಪಿಯೂ ಅಗಿರುವ ನಿನಗೆ ನಮಸ್ಕಾರ ಎಂದು ಇದರ ಅರ್ಥ).

೩೪. ಏಳು ಜನ್ಮಗಳಲ್ಲಿ ಜನ್ಮ ಪ್ರಭೃತಿ ಮರಣಾಂತವಾಗಿ ನಾನು ಎಷ್ಟು ಪಾಪಗಳನ್ನು ಗಳಿಸಿರುವೆನೋ ಆ ಪಾಪಗಳನ್ನೂ ತನ್ನಿಮಿತ್ತಕವಾದ ರೋಗ ಮತ್ತು ಶೋಕವನ್ನೂ ಈ ಮಕರಮಾಸ ಸಪ್ತಮಿಯು ನಾಶಮಾಡಲಿ.

**ಜನನೀ ಸರ್ವಭೂತಾನಾಂ ಸಪ್ತಮೀ ಸಪ್ತಸಪ್ತಿಕೆ ।**
**ಸರ್ವವ್ಯಾಧಿಹರೇ ದೇವೀ ನಮಸ್ತೇ ರವಿಮಂಡಲೇ  ॥ ೩೫ ॥**

**ಜಲೋಪರಿತರಂ ದೀಪಂ ಸ್ನಾತ್ವಾ ಸಂತರ್ಪ್ಯ ದೇವತಾಃ ।**
**ಚಂದನೇನ ಲಿಖೇತ್ಪದ್ಮಮಷ್ಟಪತ್ರಂ ಸಕರ್ಣಿಕಂ  ॥ ೩೬ ॥**

**ಮಧ್ಯೇ ಶರ್ವಂ ಸಪತ್ನೀಕಂ ಪ್ರಣವೇನ ತು ಪೂಜಯೇತ್ ।**
**ಭಾನುಂ ಶಕ್ರೇ ದಲೇ ಪೂಜ್ಯ ರವಿಂ ವೈಶ್ವಾನರೇ ದಲೇ  ॥ ೩೭ ॥**

**ಯಾಮ್ಯೇ ವಿವಸ್ವಾನ್ನೈರ್ಋತ್ಯೇ ಭಾಸ್ಕರಸ್ಯೇತಿ ಪೂಜಯೇತ್ ।**
**ಪಶ್ಚಿಮೇ ಸವಿತಾ ಪೂಜ್ಯಃ ಪೂಜ್ಯೋಽರ್ಕೋ ವಾಯುನಾ ದಲೇ ॥೩೮॥**

---

೩೫. ಸರ್ವಪ್ರಾಣಿಗಳಿಗೂ ಮಾತೃಸ್ವರೂಪಿಣಿಯೂ, ಏಳು ಕುದುರೆಗಳನ್ನು ವಾಹನವನ್ನಾಗಿ ಉಳ್ಳವಳೂ, ಈ ಸಪ್ತಮೀ ತಿಥಿಗೆ ಅಧಿದೇವತಾ ಸ್ವರೂಪಳೂ, ಸರ್ವವಿಧವಾದ ವ್ಯಾಧಿನಾಶಕಳೂ, ಸೂರ್ಯಮಂಡಲದಲ್ಲಿ ವಿಶೇಷತಃ ಪ್ರತಿಫಲಿತಳೂ ಆಗಿರುವ ಎಲೌ ಅಬ್ದೇವೀ! ನಿನಗೆ ನಮಸ್ಕಾರ ಎಂಬುದು ಈ ಮಂತ್ರದ ಅರ್ಥ.

೩೬. ಈ ಮಂತ್ರಗಳನ್ನು ಹೇಳಿ ಪ್ರಾರ್ಥಿಸಿದನಂತರ ನೀರಿನ ಮೇಲೆ ದೀಪವನ್ನಿಟ್ಟು ಸ್ನಾನಮಾಡಿ, ದೇವತೆಗಳನ್ನು ಪೂಜಾದಿಗಳಿಂದ ತೃಪ್ತಿಪಡಿಸಿ, ಚಂದನದಿಂದ ಕರ್ಣಿಕಾ ಸಮೇತವಾದ ಅಷ್ಟದಳ ಪದ್ಮವನ್ನು ರಚಿಸಬೇಕು.

೩೭. ಆ ಕಮಲದ ಮಧ್ಯಪ್ರದೇಶದಲ್ಲಿ ಪತ್ನೀ ಸಹಿತವಾದ ಶ್ರೀ ಪರಮೇಶ್ವರನಿದ್ದಾನೆಂದು ಭಾವಿಸಿ ಓಂಕಾರೋಚ್ಚಾರಣಾಪೂರ್ವಕವಾಗಿ ಶ್ರೀ ಉಮಾ ಸಹಿತ ಪರಮೇಶ್ವರನನ್ನು ಅಲ್ಲಿ ಪೂಜಿಸಬೇಕು. ಮತ್ತು ಆ ಕಮಲದ ಪೂರ್ವ ದಳದಲ್ಲಿ ಭಾನು, ಆಗ್ನೇಯದಳದಲ್ಲಿ ರವಿ.

೩೮. ಹಾಗೆಯೇ ದಕ್ಷಿಣದಳದಲ್ಲಿ ವಿವಸ್ವಂತ, ನೈರುತ್ಯದಳದಲ್ಲಿ ಭಾಸ್ಕರ, ಪಶ್ಚಿಮದಳದಲ್ಲಿ ಸವಿತೃ, ವಾಯುವ್ಯದಳದಲ್ಲಿ ಅರ್ಕ.

ಸೌಮ್ಯೇ ಸಹಸ್ರಕಿರಣಃ ಶೇಷೇ ಸರ್ವಾತ್ಮನೇತಿ ಚ ।
ಪೂಜ್ಯಾಃ ಪ್ರಣವಪೂರ್ವಾಸ್ತು ನಮಸ್ಕಾರಾಂತಯೋಜಿತಾಃ ॥ ೩೯ ॥

ಪುಷ್ಪೈಃ ಸುಗಂಧಧೂಪೈಶ್ಚ ವಸ್ತ್ರೇಣಾಚ್ಛಾದ್ಯ ಭಾಸ್ಕರಂ ।
ನಿಸರ್ಜಯೇತ್ತತಃ ಪಶ್ಚಾತ್ಸ್ವಸ್ಥಾನಂ ಗಮ್ಯತಾಮಿತಿ ॥ ೪೦ ॥

ತಾಮ್ರಪಾತ್ರೇ ಸುವಿಸ್ತೀರ್ಣೇ ಮೃನ್ಮಯೇ ವಾ ಯುಧಿಷ್ಠಿರ ।
ಸ್ಥಾಪಯೇತ್ತಿಲಚೂರ್ಣಂ ಚ ಸಘೃತಂ ಸಗುಡಂ ತಥಾ ॥ ೪೧ ॥

ಕಾಂಚನಂ ತಾಲಕಂ ಕೃತ್ವಾ ಹ್ಯಸಿಕ್ತಸ್ತಿಲಚೂರ್ಣಕಂ ।
ಸಂಸ್ಥಾಪ್ಯ ರಕ್ತವಸ್ತ್ರೈಸ್ತು ಪುಷ್ಪೈರ್ಧೂಪೈಸ್ತಥಾರ್ಚಯೇತ್ ॥ ೪೨ ॥

---

೩೯. ಉತ್ತರವಳದಲ್ಲಿ ಸಹಸ್ರಕಿರಣ, ಈಶಾನ್ಯದಳದಲ್ಲಿ ಸರ್ವಾತ್ಮಾ ಎಂಬ ನಾಮಗಳನ್ನು ಹೇಳಿ ಅರ್ಚಿಸಬೇಕು. ಮತ್ತು ಪೂರ್ವಾದಿ ದಳಗಳಲ್ಲಿ ಅರ್ಚಿಸುವಾಗ ಹೇಳಬೇಕಾದ ಭಾನು ಮೊದಲಾದ ಎಂಟು ಶಬ್ಧಗಳ ಆದಿಯಲ್ಲಿ ಓಂಕಾರವನ್ನೂ, ಅಂತ್ಯದಲ್ಲಿ ನಮಃ ಶಬ್ದವನ್ನೂ ಸೇರಿಸಿ, ಉಚ್ಚಾರಮಾಡಿ ಅರ್ಚನೆಮಾಡಬೇಕು. ಅಂದರೆ ಪೂರ್ವದಿಕ್ಕಿನದಳದಲ್ಲಿ ಓಂ ಭಾನವೇ ನಮಃ ಎಂದು ಅರ್ಚಿಸಬೇಕು. ಈ ಕ್ರಮದಲ್ಲಿಯೇ ಇತರ ಏಳುದಳಗಳಲ್ಲಿಯೂ ಪೂಜೆಮಾಡಬೇಕು.

೪೦. ಮತ್ತು ಆವಾಹಿತನಾದ ಶ್ರೀ ಭಗವಾನ್ ಸೂರ್ಯನಿಗೆ ವಸ್ತ್ರವನ್ನು ಸಮರ್ಪಿಸಿ, ಪುಷ್ಪ, ಸುಗಂಧ, ಧೂಪ, ದೀಪ ಇತ್ಯಾದಿಗಳಿಂದ ಪೂಜೆಮಾಡಿ ಅನಂತರ " ಸ್ವಸ್ಥಾನಂ ಗಮ್ಯತಾಂ " ಎಂದು ಹೇಳಿ ವಿಸರ್ಜನೆ ಮಾಡಬೇಕು.

೪೧. ಎಲೈ ಯುಧಿಷ್ಠಿರನೇ! ವಿಸ್ತಾರವಾದ ತಾಮ್ರದ, ಪಾತ್ರೆ ಅಥವಾ ಮಣ್ಣಿನಪಾತ್ರೆ ಇವುಗಳಲ್ಲಿ ಎಳ್ಳುಪುಡಿಯನ್ನು ತುಂಬಿಸಿ, ಅದಕ್ಕೆ ತುಪ್ಪವನ್ನೂ ಬೆಲ್ಲವನ್ನೂ ಮಿಶ್ರಮಾಡಬೇಕು. ಭಂಗಾರದ ತಾಳವನ್ನು ಮಾಡಿಸಿ.

೪೨. ಅದನ್ನು ಅವೇ ತಾಮ್ರಪಾತ್ರೆಯಲ್ಲಿ ಘೃತಮಿಶ್ರಿತವಾದ ತಿಲ ಚೂರ್ಣಕ್ಕೆ ತಗಲದಂತೆ (ಅದರಿಂದ ವದ್ದೆಯಾಗದಂತೆ) ಇಟ್ಟು ಅದನ್ನು ರಕ್ತವಸ್ತ್ರ, ಪುಷ್ಪ, ಧೂಪಾದಿಗಳಿಂದ ಭಕ್ತಿಪೂರ್ವಕವಾಗಿ ಅರ್ಚಿಸಬೇಕು.

**ತತಸ್ತಂ ಬ್ರಾಹ್ಮಣೇ ದದ್ಯಾದ್ದತ್ವಾ ಮಂತ್ರೇಣ ತಾಲಕಂ ।**
**ಆದಿತ್ಯಸ್ಯ ಪ್ರಸಾದೇನ ಪ್ರಾತಃಸ್ನಾನಫಲಂ ಭಜೇತ್ ॥ ೪೩ ।**

**ದುಷ್ಟದೌರ್ಭಾಗ್ಯದುಃಖೇಭ್ಯೋ ಮಯಾ ದತ್ತಂ ತು ತಾಲಕಂ ।**
**ತತಸ್ತತ್ತಾಲಕಂ ಕೃತ್ವಾ ಬ್ರಾಹ್ಮಣಾಯೋಪಪಾದಯೇತ್ ॥ ೪೪ ॥**

**ಸಪುತ್ರಪಶುಭೃತ್ಯಾಯ ಮೇಽರ್ಕೋಽಯಂ ಪ್ರೀಯತಾಮಿತಿ ।**
**ತತೋ ವ್ರತೋಪದೇಷ್ಟಾರಂ ಪೂಜಯೇದ್ವಸ್ತ್ರಗೋತಿಲೈಃ ॥ ೪೫ ॥**

**ವಿಪ್ರಾನನ್ಯಾನ್ಯಥಾಶಕ್ತ್ಯಾ ಪೂಜಯಿತ್ವಾ ಗೃಹಂ ವ್ರಜೇತ್ ।**
**ಏತತ್ತೇ ಕಥಿತಂ ಕಾರ್ಯಂ ರೂಪಸೌಭಾಗ್ಯಕಾರಕಂ ॥ ೪೬ ॥**

---

೪೩- ಅನಂತರ ಈ ಮುಂದೆ ಹೇಳುವ ಮಂತ್ರಪೂರ್ವಕವಾಗಿ ಆ ತಾಳವನ್ನು ಹಾಕುತ್ತಾ ಅವನ್ನು ಈ ಮಂತ್ರದಿಂದಲೇ ಬ್ರಾಹ್ಮಣನಿಗೆ ದಾನಮಾಡಬೇಕು.

೪೪. ಆದಿತ್ಯಸ್ಯ ಪ್ರಸಾದೇನ ಪ್ರಾತಃಸ್ನಾನ ಫಲಂ ಭವೇತ್ ।
ದುಷ್ಟ ದೌರ್ಭಾಗ್ಯ ದುಃಖೇಭ್ಯೋ ಮಯಾದತ್ತಂ ತು ತಾಲಕಂ ॥

(ನಾನು ದಾನಮಾಡಿದ ಈ ತಾಳವು ಆದಿತ್ಯನ ಪ್ರಸಾದ ಪ್ರಾಪ್ತವಾಗುವ ಹಾಗೆ ಮಾಡಿ, ಆ ಪ್ರಸಾದದಿಂದಲೂ ಮತ್ತು ಮಾಘ ಶುದ್ಧ ಸಪ್ತಮೀ ಸ್ನಾನದಿಂದಲೂ ಫಲಪ್ರದವಾಗಿ ನನ್ನ ದೌರ್ಭಾಗ್ಯವನ್ನೂ ತನ್ನಿಮಿತ್ತಕವಾದ ದುಃಖವನ್ನೂ ನಾಶಮಾಡಲಿ ಎಂದು ಅದರ ಅರ್ಥ).

೪೫. ಎಂದು ಹೇಳಿ ಆ ತಾಳವನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು. ಅನಂತರ ಈ ವ್ರತೋಪದೇಷ್ಟೃವಾದ ಆಚಾರ್ಯನಿಗೂ ಪೂಜೆಮಾಡಿ ವಸ್ತ್ರ, ಗೋವು, ತಿಲ, ಇವುಗಳನ್ನು ದಾನ ಮಾಡಬೇಕು.

೪೬. ಮತ್ತು ಇತರ ಬ್ರಾಹ್ಮಣರಿಗೂ ಯಥಾಶಕ್ತಿ ಪೂಜೆಮಾಡಿ ಸ್ವಗೃಹಕ್ಕೆ ಹೋಗಬೇಕು. ಅಯ್ಯಾ ಯುಧಿಷ್ಠಿರನೇ ! ಸೌಂದರ್ಯ ಸೌಭಾಗ್ಯಗಳಿಗೆ ಕಾರಣವೂ,

ಅಚಲಾಸಪ್ತಮೀಸ್ನಾನಂ ಸರ್ವಕಾಮಫಲಪ್ರದಂ ॥ ೪೭ ॥

ಇತಿ ಪಠತಿ ಯ ಇತ್ಥಂ ಯಃ ಶೃಣೋತಿ ಪ್ರಸಂಗಾ ।
ತ್ಕಲಿಕಲುಷಹರಂ ವೈ ಸಪ್ತಮೀಸ್ನಾನಮೇತತ್ ।
ಮತಿಮಪಿ ನಯನಾನಾಂ ಯೋ ದದಾತಿ ಪ್ರಸಂಗಾ ।
ತ್ಸುರಭವನಗತೋಽಸೌ ಪೂಜ್ಯತೇ ದೇವಸಂಘೈಃ ॥ ೪೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಅಚಲಾಸಪ್ತಮೀ ವ್ರತವರ್ಣನಂ
ನಾಮ ತ್ರಿಪಂಚಾಶತ್ತಮೋಽಧ್ಯಾಯಃ.



---

೪೭. ಸರ್ವಾಭಿವಾಂಛಿತ ಫಲಗಳನ್ನು ಕೊಡತಕ್ಕುದೂ ಆಗಿರುವ ಈ ಅಚಲಾ ಸಪ್ತಮೀ ಸ್ನಾನ ವಿಧಾನವನ್ನು ನಿನಗೆ ನಾನು ಹೇಳಿರುತ್ತೇನೆ.

೪೮. ಕಲಿಕಾಲದ ಪಾಪಗಳನ್ನು ನಾಶಮಾಡುವ ಈ ಅಚಲಾ ಸಪ್ತಮೀ ಸ್ನಾನ ವಿಧಾನವನ್ನು ತಿಳಿಸುವ ಗ್ರಂಥವನ್ನು ಯಾವನು ಪಠನಮಾಡುವನೋ, ಯಾವಾತನು ಇದನ್ನು ಶ್ರವಣಮಾಡುವನೋ, ಅಥವಾ ಯಾವ ಪುರುಷನು ಇತರರಿಗೆ ಇದರ ತಿಳಿವಳಿಕೆಯನ್ನು ಕೊಡುವನೋ, ಅಥವಾ ಯಾವನು ಇದನ್ನು ಆಚರಿಸುವುದನ್ನು ಪ್ರಸಂಗಾತ್ ಕಣ್ಣಾರ ದರ್ಶನಮಾಡುವನೋ ಅವನು ದೇವ ಲೋಕಕ್ಕೆ ಹೋಗಿ ದೇವಸಮುದಾಯಗಳಿಂದ ಪೂಜಿತನಾಗಿರುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಅಚಲಾ
ಸಪ್ತಮೀ ವ್ರತವರ್ಣನೆಯೆಂಬ ಐವತ್ತಮೂರನೆಯ
ಅಧ್ಯಾಯವು ಮುಗಿದುದು.

ಸಪ್ತಮೀಕಲ್ಪ ಸಮಾಪ್ತವಾದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಚತುಷ್ಪಂಚಾಶತ್ತಮೋಽಧ್ಯಾಯಃ

|| ಶ್ರೀ ಕೃಷ್ಣ ಉವಾಚ ||

ಬುಧಾಷ್ಟಮೀವ್ರತಂ ಭೂಯೋ ಬ್ರವೀಮಿ ಶೃಣು ಪಾಂಡವ |
ಯೇನ ಚೀರ್ಣೇನ ನರಕಂ ನರಃ ಪಶ್ಯತಿ ನ ಕ್ವಚಿತ್ || ೧ ||

ಪುರಾ ಕೃತಯುಗಸ್ಯಾದೌ ಇಲೋ ರಾಜಾ ಬಭೂವ ಹ |
ಬಹುಭೃತ್ಯಸುಹೃನ್ಮಿತ್ರಮಂತ್ರಿಭಿಃ ಪರಿವಾರಿತಃ || ೨ ||

ಜಗಾಮ ಹಿಮವತ್ಪಾರ್ಶ್ವೇ ಮಹಾದೇವೇನ ವಾರಿತಃ |
ಯೋಽನ್ಯಃ ಪ್ರವಿಶತೇ ಭೂಮೌ ಸಾ ಸ್ತ್ರೀ ಭವತಿ ನಿಶ್ಚಿತಂ || ೩ ||

---

### ಐವತ್ತನಾಲ್ಕನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ಧರ್ಮಜನೇ ! ಇನ್ನು ಮುಂದೆ ಬುಧಾಷ್ಟಮಿ ವ್ರತವನ್ನು ಹೇಳುತ್ತೇನೆ ಶ್ರವಣಮಾಡು. ಈ ಬುಧಾಷ್ಟಮಿ ವ್ರತವನ್ನಾಚರಿಸಿದ ಪುರುಷನಿಗೆ ನರಕ ದರ್ಶನವಾಗುವುದಿಲ್ಲ.

೨. ಪೂರ್ವದಲ್ಲಿ ಕೃತಯುಗದ ಆದಿಯಲ್ಲಿ ಇಲನೆಂಬ ರಾಜನು ರಾಜ್ಯ ಭಾರ ಮಾಡುತ್ತ ಅನೇಕ ಭೃತ್ಯ, ಸುಹೃತ್ತು, ಮಿತ್ರ, ಮಂತ್ರಿ ಮೊದಲಾದ ಪರಿವಾರ ಸಮೇತವಾಗಿದ್ದನು.

೩. ಈ ರಾಜನು ಎಂದೋ ಒಂದುಸಾರಿ ಹಿಮವತ್ ಪರ್ವತದ ಸಮೀಪಕ್ಕೆ ಹೋದನು. ಆ ಪರ್ವತ ಪಾರ್ಶ್ವದಲ್ಲಿ ಶ್ರೀ ಶಂಕರನು "ಇಲ್ಲಿ ಅನ್ಯ ಪುರುಷನು ಯಾವನಾದರೂ ಪ್ರವೇಶಿಸಿದರೆ ಆವನು ತತ್ ಕ್ಷಣ ಸ್ತ್ರೀರೂಪಿಯಾಗಲಿ'' ಎಂದು ಪುರುಷ ಪ್ರವೇಶವನ್ನು ನಿಷೇಧಿಸಿರುವ ಒಂದು ಪ್ರದೇಶವಿತ್ತು.

ಸ ರಾಜಾ ಮೃಗಸಂಗೇನ ಪ್ರಾವಿಶತ್ತ್ರದುಮಾವನೇ |
ಏಕಾಕೀ ತುರಗೋಪೇತಃ ಕ್ಷಣಾತ್ ಸ್ತ್ರೀತ್ವಂ ಜಗಾಮ ಹ || ೪ ||

ಸಾ ಬಭ್ರಾಮ ವನೇ ಶೂನ್ಯೇ ಪೀನೋನ್ನತಪಯೋಧರಾ |
ಕುತೋಽಹಮಾಗತೇತ್ಯೇವಂ ನ ತ್ವಬುಧ್ಯತ ಕಿಂಚನ || ೫ ||

ತಾಂ ದದರ್ಶ ಬುಧಃ ಸೌಮ್ಯಾಂ ರೂಪೌದಾರ್ಯಗುಣಾನ್ವಿತಾಂ |
ಅಷ್ಟಮ್ಯಾಂ ಬುಧವಾರೇಣ ತಸ್ಯಾಸ್ತುಷ್ಟೋ ಬುಧೋ ಗ್ರಹಃ || ೬ ||

ದಧೌ ಗರ್ಭಂ ತದುದರೇ ಇಲಾಯಾ ರೂಪತೋಷಿತಃ |
ಪುತ್ರಮುತ್ಪಾದಯಾಮಾಸ ಯೋಽಸೌ ಖ್ಯಾತಃ ಪುರೂರವಾಃ || ೭ ||

---

೪. ಆ ಇಲರಾಜನು ಮೃಗಯಾ ಪ್ರಸಂಗದಲ್ಲಿ ಅಶ್ವಾರೂಢನಾಗಿ ಒಂದು ಮೃಗವನ್ನು ಬೆನ್ನಟ್ಟಿಹೋಗುತ್ತಾ ಶಂಕರನಿಂದ ಪುರುಷ ಪ್ರವೇಶ ನಿಷೇಧ ವಿಹಿತವಾದ ಉಮಾವನ ಎಂಬ ಆ ಪ್ರದೇಶಕ್ಕೆ ಏಕಾಕಿಯಾಗಿ ಪ್ರವೇಶಿಸಿದನು. ಅದರಿಂದ ಈಶ್ವರೇಚ್ಛಾನುಸಾರವಾಗಿ ಅವನು ಕ್ಷಣಮಾತ್ರದಲ್ಲೇ ಸ್ತ್ರೀರೂಪಿ ಯಾದನು.

೫. ಅನಂತರ ಆ ಸ್ತ್ರೀಯು ದಪ್ಪವಾಗಿಯೂ ಉನ್ನತವಾಗಿಯೂ ಇರುವ ಸ್ತನಗಳುಳ್ಳವಳೂ, ಏಕಾಕಿಯೂ ಆಗಿ ಜನಶೂನ್ಯವಾದ ಆ ಕಾಡಿನಲ್ಲಿ ಸುತ್ತುತ್ತಿದ್ದಳು. ನಾನು ಎಲ್ಲಿಂದ ಬಂದೆನು, ಇತ್ಯಾದಿ ಯಾವುದೊಂದು ವಿಷಯದಲ್ಲೂ ಅವಳಿಗೆ ಅರಿವೇ ಇರಲಿಲ್ಲ.

೬. ಅನಂತರ ಬುಧವಾರದಿಂದ ಕೂಡಿದ ಅಷ್ಟಮೀ ತಿಥಿಯಲ್ಲಿ ಗ್ರಹಗಣ ಗಳಲ್ಲಿ ಸೇರಿದ ಬುಧನು ಸೌಮ್ಯವಾದ ಆಕೃತಿಯುಳ್ಳವಳಾಗಿಯೂ ಸೌಂದರ್ಯ ಔದಾರ್ಯಾದಿ ಗುಣಭರಿತಳಾಗಿಯೂ ಇರುವ ಆ ಸ್ತ್ರೀಯನ್ನು ನೋಡಿ ಪರಮ ಹರ್ಷಿತನಾದನು.

೭. ಅನಂತರ ಆ ಬುಧನು ಆ ಇಲೆ ಎಂಬ ಸ್ತ್ರೀಯ ಸೌಂದರ್ಯಕ್ಕೆ ಮೆಚ್ಚಿ ಅವಳಲ್ಲಿ ಗರ್ಭಾಧಾನಮಾಡಿ ಪುರೂರವನೆಂದು ವಿಖ್ಯಾತನಾದ ಪುತ್ರನನ್ನು ಪಡೆದನು.

**ಚಂದ್ರವಂಶಕರೋ ರಾಜಾ ಆದ್ಯಃ ಸರ್ವಮಹೀಕ್ಷಿತಾಂ ।**
**ತತಃ ಪ್ರಭೃತಿ ಪೂಜ್ಯೇಯಮಷ್ಟಮೀ ಬುಧಸಂಯುತಾ ॥ ೮ ॥**

**ಸರ್ವಪಾಪಪ್ರಶಮನೀ ಸರ್ವೋಪದ್ರವನಾಶಿನೀ ।**
**ಅಥಾನ್ಯದಪಿ ತೇ ವಚ್ಮಿ ಧರ್ಮರಾಜ ಕಥಾನಕಂ ॥ ೯ ॥**

**ಆಸೀದ್ರಾಜಾ ವಿದೇಹಾನಾಂ ಮಿಥಿಲಾಯಾಂ ಸ ವೈರಿಭಿಃ ।**
**ಸಂಗ್ರಾಮೇ ನಿಹತೋ ವೀರಸ್ತಸ್ಯ ಭಾರ್ಯಾ ದರಿದ್ರಿಣೀ ॥ ೧೦ ॥**

**ಊರ್ಮಿಲಾ ನಾಮ ಬಭ್ರಾಮ ಮಹೀಂ ಬಾಲಕಸಂಯುತಾ ।**
**ಅವಂತೀವಿಷಯಂ ಪ್ರಾಪ್ತಾ ಬ್ರಾಹ್ಮಣಸ್ಯ ನಿವೇಶನೇ ॥ ೧೧ ॥**

---

೮. ಈ ಪುರೂರವನೇ ಚಂದ್ರವಂಶಕ್ಕೆ ಮೂಲಪುರುಷನು. ಸರ್ವರಾಜರಿಗೂ ಮೊದಲನೆಯ ರಾಜನು, ಬುಧನು ಇಳೆಯನ್ನು ನೋಡಿ ಸಂತೋಷ ಹೊಂದಿದಾರಭ್ಯ ಈ ಬುಧವಾರಯುತವಾದ ಅಷ್ಟಮಿಯು ಪೂಜ್ಯವಾಗಿದೆ.

೯. ಈ ಬುಧಾಷ್ಟಮಿಯು ಸರ್ವಪಾಪನಾಶಕವೂ, ಸರ್ವೋಪದ್ರವಶಾಮಕವೂ, ಶ್ರೇಷ್ಠವೂ ಎನಿಸಿಕೊಂಡಿದೆ. ಎಲೈ ಧರ್ಮರಾಜನೇ ! ನಿನಗೆ ಇನ್ನೂ ಒಂದು ಕಥೆಯನ್ನು ಹೇಳುತ್ತೇನೆ ಕೇಳು.

೧೦. ಪೂರ್ವದಲ್ಲಿ ಮಿಥಿಲಾನಗರಿಯಲ್ಲಿ ವಿದೇಹರಾಜರ ವಂಶದಲ್ಲಿ ಮಿಥಿ ಎಂಬ ಒಬ್ಬ ಅರಸನು ಇದ್ದನು. ಆ ವೀರನು ಯುದ್ಧದಲ್ಲಿ ವೈರಿಗಳಿಂದ ಕೊಲ್ಲಲ್ಪಟ್ಟನು.

೧೧. ಅನಂತರ ಆ ಮಿಥಿರಾಜನ ಭಾರ್ಯೆಯಾದ ಊರ್ಮಿಳೆ ಎಂಬುವಳು ದರಿದ್ರಳಾಗಿ ತನ್ನ ಎರಡು ಮಕ್ಕಳೊಂದಿಗೆ ಊರೂರುಗಳನ್ನು ಸುತ್ತುತ್ತಿದ್ದಳು. ಹಾಗೆ ಸುತ್ತುತ್ತಾ ಅವಳು ಅವಂತೀ ದೇಶಕ್ಕೆ ಬಂದು ಅಲ್ಲಿ ಒಬ್ಬ ಬ್ರಾಹ್ಮಣನ ಮನೆಯನ್ನು ಸೇರಿದಳು.

ಚಕಾರೋದರಪೂರ್ತ್ಯರ್ಥಂ ನಿತ್ಯಂ ಕಂಡನಪೇಷಣೇ ।
ಕೃತ್ವಾ ಸಾ ಸ್ತೋಕಗೋಧೂಮಾನ್ದದೌ ಬಾಲಕಯೋಸ್ತದಾ ॥ ೧೨ ॥

ಕಾರುಣ್ಯಾನ್ಮಾತೃವಾತ್ಸಲ್ಯಾತ್ಕ್ಷುಧಾ ಸಂಪೀಡ್ಯಮಾನಯೋಃ ।
ಕಾಲೇನ ಬಹುನಾ ಸಾಧ್ವೀ ಪಂಚತ್ವಮಗಮಚ್ಛುಭಾ ॥ ೧೩ ॥

ಪುತ್ರಸ್ತಸ್ಯಾ ವಿದೇಹಾಯಾಂ ಗತ್ವಾ ಸ್ವಪಿತುರಾಸನೇ ।
ಉಪವಿಷ್ಟಃ ಸತ್ವಯೋಗಾದ್ಬುಭುಜೇ ಗಾಮನಾಕುಲಃ ॥ ೧೪ ॥

ಅನ್ವಿಷ್ಯ ಧರ್ಮರಾಜಾಯ ವೈ ಸಾ ಕನ್ಯಾ ಮಿಥಿವಂಶಜಾ ।
ವಿವಾಹಿತಾ ಹಿತಾ ಭರ್ತುಃ ಸಾ ಮಹಾನಾಯಿಕಾಽಭವತ್ ॥ ೧೫ ॥

---

೧೨. ಆ ವಿಪ್ರಗೃಹದಲ್ಲಿ ಅವಳು ತನ್ನ ಉದರಪೂರ್ತಿಗಾಗಿ ಪ್ರತಿನಿತ್ಯವೂ ತರಕಾರಿಯನ್ನು ಹೆಚ್ಚುವುದು, ಅರೆಯುವುದು. ಈ ಸುತ್ತುಕೆಲಸಗಳನ್ನು ಮಾಡಿಕೊಟ್ಟು ಪ್ರತಿ ದಿನವೂ ತನ್ನ ಮನೆಗೆ ಹಿಂದಿರುಗಿ ಹೋಗುವಾಗ ತಾಯಿಯರಿಗೆ ಮಕ್ಕಳಮೇಲಿರುವ ವಾತ್ಸಲ್ಯಕ್ಕೆ ಒಳಗಾಗಿ ಆ ಬ್ರಾಹ್ಮಣನ ಮನೆಯಿಂದ ಸ್ವಲ್ಪ ಗೋಧಿಯ ಕಾಳುಗಳನ್ನು ಕದ್ದು ತಂದು ಹಸಿವಿನಿಂದ ಬಾಧಿತರಾದ ತನ್ನ ಮಕ್ಕಳಿಗೆ ಆಹಾರಾರ್ಥವಾಗಿ ಕೊಡುತ್ತಿದ್ದಳು.

೧೩. ಪತಿವ್ರತೆಯೂ ಮಂಗಳಕರಳೂ ಆಗಿದ್ದ ಆ ಊರ್ಮಿಲೆಯು ಆರೀತಿ ಬಹುಕಾಲ ಕಳೆದ ಮೇಲೆ ಮೃತಿಹೊಂದಿದಳು.

೧೪. ಅನಂತರ ಆ ಊರ್ಮಿಲೆಯ ಮಗನು ವಿದೇಹನಗರಿಗೆ ಹೋಗಿ ಸ್ವಶಕ್ತಿಬಲದಿಂದಲೇ ಶತ್ರುಗಳನ್ನು ಓಡಿಸಿ ತನ್ನ ತಂದೆಯ ಸಿಂಹಾಸನದಲ್ಲಿ ಕುಳಿತು ನಿಷ್ಕಂಟಕವಾಗಿ ರಾಜ್ಯರಕ್ಷಣೆಯನ್ನು ಮಾಡುತ್ತಾ ಸುಖಿಯಾದನು.

೧೫. ಆ ಊರ್ಮಿಲೆಯ ಮಗನು ತನ್ನ ಸಹೋದರಿಗೆ ವಿವಾಹ ಮಾಡಬೇಕೆಂದು ದೇಶ ದೇಶಗಳಲ್ಲಿ ವರಾನ್ವೇಷಣಮಾಡಿ ಕೊನೆಗೆ ಮಿಥಿ ವಂಶದಲ್ಲಿ ಹುಟ್ಟಿದ ತನ್ನ ಸಹೋದರಿಯನ್ನು ಧರ್ಮರಾಜ (ಯಮ) ನಿಗೆ ವಿವಾಹ ಮಾಡಿಕೊಟ್ಟನು. ಅವಳೂ ಸಹ ಗಂಡನಾದ ಯಮಧರ್ಮರಾಜನ ಪ್ರೀತಿಗೆ ಪಾತ್ರಳಾದಳು. ಮತ್ತು ಮಹಾನಾಯಿಕೆಯೆನ್ನಿಸಿಕೊಂಡಳು.

**ಶ್ಯಾಮಲಾ ನಾಮ ಚಾರ್ವಂಗೀ ಪ್ರಸಿದ್ಧಾ ಶ್ರೂಯತೇ ಶ್ರುತೌ ।**
**ತಾಮುವಾಚ ವರಾರೋಹಾಂ ಧರ್ಮರಾಜಃ ಸ್ವಯಂ ಪ್ರಿಯಾಂ ॥೧೬॥**

**ವಹಸ್ವ ಸರ್ವವ್ಯಾಪಾರಂ ಶ್ಯಾಮಲೇ ತ್ವಂ ಗೃಹೇ ಮಮ ।**
**ಕುರು ಸ್ವಜನಭೃತ್ಯಾನಾಂ ದಾನಕ್ಷೇಪಂ ಯಥೇಪ್ಸಿತಂ ॥ ೧೭ ॥**

**ಕಿಂ ತ್ವೇತೇ ಪಂಜರಾಃ ಸಪ್ತ ಕೀಲಕೈರತಿಯಂತ್ರಿತಾಃ ।**
**ಕದಾಚಿದಪಿ ನೋದ್ಘಾಟ್ಯಾಸ್ತ್ವಯಾ ವೈದೇಹನಂದಿನಿ ॥ ೧೮ ॥**

**ಏವಮಸ್ತ್ವಿತಿ ಸಾಪ್ಯುಕ್ತ್ವಾ ನಿಜಂ ಕರ್ಮ ಚಕಾರ ಹ ।**
**ಕದಾಚಿದ್ವ್ಯಾಕುಲೀಭೂತೇ ಧರ್ಮರಾಜೇ ವಿದೇಹಜಾ ।**
**ಉದ್ಘಾಟಯಿತ್ವಾ ಪ್ರಥಮಂ ದದರ್ಶ ಜನನೀಂ ಸ್ವಕಾಂ ॥ ೧೯ ॥**

---

೧೬. ಆ ಧರ್ಮರಾಜನನ್ನು ವಿವಾಹವಾದ ಸುಂದರಾಂಗಿಗೆ ಶ್ಯಾಮಲೆ ಯೆಂದು ಹೆಸರು. ಈ ಶ್ಯಾಮಲೆಯು ವೇದದಲ್ಲೂ ಸ್ತುತ್ಯಳಾಗಿದ್ದಾಳೆ. ಯಮ ಧರ್ಮರಾಜನು ಉತ್ತಮ ಸ್ತ್ರೀರತ್ನವೂ ಪ್ರೇಮಪಾತ್ರಳೂ ಆಗಿರುವ ತನ್ನ ಹೆಂಡತಿ ಯನ್ನು ಕರೆದು,

೧೭. " ಎಲೌ ಶ್ಯಾಮಲೇ ! ನೀನು ನನ್ನ ಮನೆಯಲ್ಲಿ ಸರ್ವಕಾರ್ಯನಿರ್ವ ಹಣಾಧಿಕಾರವನ್ನು ಹೊಂದಿ, ಸ್ವಜನ ಭೃತ್ಯವರ್ಗ ಇತ್ಯಾದಿಗಳಿಗೆ ನಿನ್ನ ಇಷ್ಟ ಬಂದಂತೆ ಯಥೇಷ್ಟವಾಗಿ ದಾನಮಾಡು.

೧೮. ಎಲೌ ವಿದೇಹರಾಜಪುತ್ರಿಯೇ ! ಆದರೆ ಕೀಲುಮೊಳೆಗಳನ್ನು ನಾಟಿ ಅತಿದೃಢವಾಗಿ ಮುಚ್ಚಿರುವ ಈ ಏಳು ಪಂಜರಗಳ ಬಾಗಿಲನ್ನು ಮಾತ್ರ ಯಾವ ಕಾಲದಲ್ಲೂ ತೆಗೆಯಬಾರದು " ಎಂದು ಹೇಳಿದನು.

೧೯. ಆ ಶ್ಯಾಮಲೆಯು ಗಂಡನ ಮಾತಿನಂತೆ ಆಗಲೆಂದು ಹೇಳಿ ತನ್ನ ಕಾರ್ಯವನ್ನು ಸುಸೂತ್ರವಾಗಿ ನಡೆಯಿಸುತ್ತಿದ್ದಳು. ಒಂದಾನೊಂದು ಕಾಲದಲ್ಲಿ ಆ ಧರ್ಮರಾಜನು ಯಾವುದೋ ಒಂದು ವಿಷಯದಲ್ಲಿ ವ್ಯಾಕುಲಚಿತ್ತನಾಗಿರು ವಾಗ ಆ ಶ್ಯಾಮಲೆಯು ಒಂದನೆಯ ಪಂಜರದ ಬಾಗಿಲನ್ನು ತೆಗೆದು ಅದರಲ್ಲಿದ್ದ ತನ್ನ ತಾಯಿಯನ್ನು ಕಂಡಳು.

ಸಾ ಪಚ್ಯಮಾನಾ ಕ್ರಂದಂತೀ ಭೀಷಣೈರ್ಯಮಕಿಂಕರೈಃ ।
ಹೇಲಯಾ ಕ್ಷಿಪ್ಯತೇ ಬದ್ಧ್ವಾ ತಪ್ತತೈಲೇ ಪುನಃಪುನಃ ॥ ೨೦ ॥

ತಥೈವ ತಾಲಕಂ ದತ್ವಾ ವ್ರೀಡಿತಾ ಸಾ ಮನಸ್ವಿನೀ ।
ದ್ವಿತೀಯೇ ಪಂಜರೇ ತದ್ವತ್ತಾ ತಾಮೇವಂ ದದರ್ಶ ಹ ॥ ೨೧ ॥

ಸುಧಾವಲ್ಲಿಪ್ಯಮಾನಾಂ ತಾಂ ಶಿಲಾಕಲ್ಪೇಷ್ಟಕೇನ ತು ।
ತೃತೀಯಪಂಜರೇ ತದ್ವತ್ತಾಂ ದದರ್ಶ ಸ್ವಮಾತರಂ ।
ಕ್ರಕಚೈಃ ಪಾಟ್ಯತೇ ಮೂರ್ಧ್ನಿ ಘಂಟಾಯುಕ್ತೈಃ ಕರೋಲ್ಬಣೈಃ॥೨೨॥

ಚತುರ್ಥೇ ಪಂಜರೇ ಸ್ಥಾನೇ ಭೀಷಣೈರ್ದಾರುಣಾನನೈಃ ।
ಭಕ್ಷ್ಯಮಾಣಾಂ ಶ್ವಾಪದೈಶ್ಚ ಕ್ರಂದಂತೀಂ ತಾಂ ಪುನಃಪುನಃ ॥ ೨೩ ॥

---

೨೦. ಆ ಪಂಜರದಲ್ಲಿ ತನ್ನ ತಾಯಿಯನ್ನು ಯಮಭಟರು ರಜ್ಜುಗಳಿಂದ ಕಟ್ಟಿ ಉದ್ದೇಶಪೂರ್ವಕವಾಗಿ ಕಾಯಿಸಿದ ಎಣ್ಣೆಯಲ್ಲಿ ಪುನಃ ಪುನಃ ಎಸೆಯುತ್ತಿದ್ದರು. ಆ ತಪ್ತತೈಲದಲ್ಲಿ ಪಾಕಮಾಡಲ್ಪಡುವ ಅವಳು ಗೋಳಾಡುತ್ತಿದ್ದುದನ್ನು ಶ್ಯಾಮಲೆಯು ಕಂಡಳು.

೨೧. ಅನಂತರ ಆ ಬಗೆಯ ಭಯಂಕರ ದೃಶ್ಯವನ್ನು ನೋಡಿ ನಾಚಿಕೆಗೊಂಡು ಮಾನವತಿಯಾದ ಆ ಶ್ಯಾಮಲೆಯು ಆ ಪಂಜರದ ಬಾಗಿಲನ್ನು ಮೊದಲಿನಂತೆಯೇ ಮುಚ್ಚಿ ಕೀಲನ್ನು ಹಾಕಿ, ಎರಡನೇ ಪಂಜರದ ಬಾಗಿಲನ್ನು ತೆಗೆದಳು. ಅದರಲ್ಲೂ ಅವಳು ಶಿಲೆಗೆ ಸದೃಶವಾದ ಇಟ್ಟಿಗೆ ಪುಡಿಗಳನ್ನು ಗಾರೆ ಅರೆಯುವಂತೆ ಯಮಕಿಂಕರರು ಮೊದಲಿನಂತೆಯೇ ತನ್ನ ತಾಯಿಯನ್ನು ಘರ್ಷಣೆ ಮಾಡುತ್ತಿರುವುದನ್ನು ಕಂಡು ಎದೆಗುಂದಿದವಳಾದಳು.

೨೨. ಅನಂತರ ಮೂರನೆಯ ಪಂಜರವನ್ನು ತೆರೆದಾಗ ಅದರಲ್ಲಿ ತನ್ನ ತಾಯಿಯ ತಲೆಯ ಮೇಲೆ ಯಮಕಿಂಕರರು ಗಂಟೆಕಟ್ಟಿದ ಗರಗಸವನ್ನಿಟ್ಟು ಕಠಿಣವಾದ ಕೈಗಳಿಂದ ಹಿಡಿದು ಶೀಳುತ್ತಿರುವುದನ್ನು ಕಂಡಳು.

೨೩. ನಾಲ್ಕನೆಯ ಪಂಜರದಲ್ಲಿ ಭಯಂಕರವಾಗಿಯೂ, ಕಠಿಣವಾದ ಮುಖವುಳ್ಳವುಗಳಾಗಿಯೂ ಇರುವ ಬೇಟೆಯ ನಾಯಿಗಳು ತನ್ನ ತಾಯಿಯನ್ನು ಕಚ್ಚಿ ಭಕ್ಷಿಸುತ್ತಿರಲು ಆಕೆ ಘೋರವಾಗಿ ಅಳುತ್ತಿರುವುದನ್ನು ನೋಡಿದಳು.

**ಪಂಚಮೇ ನಿಹಿತಾ ಭೂಮೌ ಕಂಠೇ ಪಾದೇನ ಪೀಡಿತಾ ।**
**ಸಂದಂಶೈರ್ವನಘಾತೈಶ್ಚ ವಿದೀರ್ಣಾ ಕ್ರಿಯತೇ ರುಷಾ ॥ ೨೪ ॥**

**ಷಷ್ಠೇ ಚೇಕ್ಷುಯಂತ್ರಗತಾಂ ಮಸ್ತಕೇ ಮುದ್ಗರಾಹತಾಂ ।**
**ಸಂಪೀಡ್ಯಮಾನಾಮನಿಶಂ ಸುದೃಢಾಮಿಕ್ಷುಖಂಡವತ್ ॥ ೨೫ ॥**

**ಸಪ್ತಮೇ ಪಂಜರೇ ಚೀರ್ಣಾಸ್ಥಿನಾಂ ಪೂತಿಕಗಂಧಿನೀಂ ।**
**ದೃಷ್ಟ್ವಾ ತಥಾ ಗತಾಂ ತಾಂ ತು ಮಾತರಂ ದುಃಖಕರ್ಷಿತಾ ।**
**ಶ್ಯಾಮಲಾ ಮ್ಲಾನವದನಾ ಕಿಂಚಿನ್ನೋವಾಚ ಭಾಮಿನೀ ॥ ೨೬ ॥**

**ಅಥಾಗತಂ ಯಮಂ ಪ್ರಾಹ ಸರೋಷಾ ಶ್ಯಾಮಲಾ ಪತಿಂ ।**
**ಕಿಂ ತವಾಪಕೃತಂ ರಾಜನ್ಮಮ ಮಾತ್ರಾ ಸುದಾರುಣಂ ।**
**ಯೇನೇಯಂ ವಿವಿಧೈರ್ಘಾತೈರ್ಬಾಧ್ಯತೇ ಬಹುಧಾ ತ್ವಯಾ ॥ ೨೭ ॥**

---

೨೪. ಐದನೆಯ ಪಂಜರದಲ್ಲಿ ಯಮಭಟರು ಕೋಪದಿಂದ ತನ್ನ ತಾಯಿಯನ್ನು ಭೂಮಿಯಲ್ಲಿ ಕೆಡವಿ ಕಾಲಿನಲ್ಲಿ ಕತ್ತನ್ನು ಅಮುಕಿ ತುಳಿದು, ಕೋರೆ ಹಲ್ಲುಳ್ಳ ವನಚರಗಳಾದ ಹಿಂಸ್ರಪ್ರಾಣಿಗಳಿಂದ ಶೀಳಲ್ಪಡುವಂತೆಯೂ ಕಂಡಳು.

೨೫. ಆರನೆಯ ಪಂಜರದಲ್ಲಿ ತನ್ನ ತಾಯಿಯನ್ನು ಕಬ್ಬಿನಗಾಣದಲ್ಲಿ ಕಬ್ಬನ್ನು ಹಾಕಿ ಹಿಂಡುವಂತೆ ಪೀಡಿಸುತ್ತಿರುವದನ್ನೂ, ಮತ್ತು ತಲೆಯ ಮೇಲೆ ಲೋಹಸ್ತಂಭದಿಂದ ಯಾವಾಗಲೂ ಹೊಡೆಯುತ್ತಾ ದೃಢವಾಗಿ ಪೀಡಿಸುತ್ತಿರುವುದನನ್ನೆ ನೋಡಿದಳು.

೨೬. ಏಳನೆಯ ಪಂಜರದಲ್ಲಿ ದುರ್ಗಂಧವಸ್ತು ಮಧ್ಯದಲ್ಲಿ ಸಿಕ್ಕಿ ಆಕೆಯು ತಾನೂ ದುರ್ಗಂಧಿನಿಯಾಗಿ ಕೂಗಿಕೊಳ್ಳುತ್ತಿರುವುದನ್ನು ಕಂಡಳು. ಈರೀತಿ ಏಳು ಪಂಜರಗಳಲ್ಲಿಯೂ ತನ್ನ ತಾಯಿಯು ಆ ಅವಸ್ಥೆಯಲ್ಲಿರುವುದನ್ನು ಕಂಡು ಶ್ಯಾಮಲೆಯು ದುಃಖದಿಂದ ಪೀಡಿತೆಯೂ, ಬಾಡಿದ ಮುಖವುಳ್ಳವಳೂ, ಮನಸ್ಸಿನಲ್ಲಿ ರೋಷಾನ್ವಿತೆಯೂ ಆಗಿ, ಏನನ್ನೂ ಮಾತನಾಡದೆ ಸುಮ್ಮನಿದ್ದಳು.

೨೭. ಅನಂತರ ಪತಿಯಾದ ಯಮನು ಮನೆಗೆ ಬಂದೊಡನೆಯೇ ಶ್ಯಾಮಲೆಯು ಕೋಪಯುತಳಾಗಿ " ಎಲೈ ಧರ್ಮರಾಜನೇ! ನನ್ನ ತಾಯಿಯು ನಿನ್ನ ಯಾವ ಪದಾರ್ಥವನ್ನಪಹರಿಸಿ ದ್ರೋಹವನ್ನು ಬಗೆದಿದ್ದಾಳೆ. ಮತ್ತು ಏತಕ್ಕೆ ನೀನು ನನ್ನ ಮಾತೆಯನ್ನು ಅಂಥ ಕಠಿಣವಾಗಿ ಶಿಕ್ಷೆ ಕೊಟ್ಟು ಬಂಧನವಲ್ಲಿರಿಸಿರುವೆ " ಎಂದು ನುಡಿದಳು.

ಯಮಃ ಪ್ರಾಹ ಪ್ರಿಯಾಂ ದೃಷ್ಟ್ವಾ ಭದ್ರೇ ಹ್ಯುದ್ಘಾಟಿತಾಸ್ತ್ವಯಾ ।
ಏತೇ ಪಂಜರಕಾಃ ಸಪ್ತ ನಿಷಿದ್ಧಾ ತ್ವಂ ಮಯಾ ಪುರಾ ॥ ೨೮ ॥

ತವ ಮಾತ್ರಾ ಸುತಸ್ನೇಹಾದ್ಗೋಧೂಮಾ ಯೇ ಹೃತಾಃ ಕಿಲ ।
ಕಿಂ ನ ಜಾನಾಸಿ ತದ್ಭದ್ರೇ ಯೇನ ರುಷ್ಟಾ ಮಮೋಪರಿ ॥ ೨೯ ॥

ಬ್ರಹ್ಮಸ್ವಂ ಪ್ರಣಯಾದ್ಭುಕ್ತಂ ದಹತ್ಯಾಸಪ್ತಮಂ ಕುಲಂ ।
ತದೇವ ಚೌರ್ಯರೂಪೇಣ ದಹತ್ಯಾಚಂದ್ರತಾರಕಂ ॥ ೩೦ ॥

ಗೋಧೂಮಾಸ್ತ್ವಿಮೇ ಭೂತಾಃ ಕೃಮಿರೂಪಾಃ ಸುದಾರುಣಾಃ ।
ಯೇ ಪುರಾ ಬ್ರಾಹ್ಮಣಗೃಹೇ ಹೃತಾಸ್ತವ ಕೃತೇಽನಯಾ ॥ ೩೧ ॥

---

೨೮. ಆಗ ಯಮನು ತನ್ನ ಪ್ರಿಯಳನ್ನು ನೋಡಿ "ಎಲೌ ಸೌಭಾಗ್ಯವತಿಯೇ! ನಾನು ಮೊದಲು ಈ ಏಳು ಪಂಜರಗಳ ಬಾಗಿಲನ್ನು ತೆರೆಯಕೂಡದೆಂದು ನಿನಗೆ ನಿಷೇಧಿಸಿದ್ದರೂ ನೀನು ಅವುಗಳ ಬಾಗಿಲನ್ನು ತೆರೆದಿರುತ್ತೀಯೆ. ಇದು ನಿನ್ನ ತಪ್ಪು.

೨೯. ನಿನ್ನ ತಾಯಿಯು ಮಕ್ಕಳ ಮೇಲಿನ ಸ್ನೇಹದಿಂದ ಗೋಧಿಯನ್ನು ಅಪಹರಿಸುತ್ತಿದ್ದಳು. ಎಲೌ ಸುಮಂಗಲೀ! ಈ ನಿನ್ನ ತಾಯಿಯು ಗೋಧಿಯನ್ನು ಅಪಹರಿಸುತ್ತಿದ್ದುದು ನಿನಗೆ ತಿಳಿದಿಲ್ಲವೇ! ಹೀಗಿರುವಾಗ ನನ್ನ ಮೇಲೆ ಏತಕ್ಕೆ ಕುಪಿತಳಾಗುತ್ತೀ ?

೩೦. ಬ್ರಾಹ್ಮಣರ ಸ್ವತ್ತನ್ನು ಆಶಿಸಿ ಉಪಭೋಗಿಸಿದ ಮಾತ್ರಕ್ಕೆ ಏಳು ತಲೆಯವರೆಗೆ ವಂಶವೇ ಸುಡಲ್ಪಡುವುದು. ಹೀಗಿರುವಲ್ಲಿ ಅದೇ ಬ್ರಹ್ಮಸ್ವತ್ತನ್ನು ಕಳ್ಳತನದಿಂದ ಉಪಭೋಗಿಸಿದರೆ ಚಂದ್ರತಾರಕೆಗಳಿರುವವರೆಗೂ ವಂಶವು ತಲೆಯೆತ್ತೀತೆ !

೩೧. ಪೂರ್ವದಲ್ಲಿ ಈ ನಿನ್ನ ತಾಯಿಯು ಬ್ರಾಹ್ಮಣನ ಮನೆಯಲ್ಲಿ ನಿನಗಾಗಿ ಯಾವ ಗೋಧಿಯನ್ನು ಅಪಹರಿಸಿದಳೋ ಅದೇ ಗೋಧಿಯ ಕಾಳುಗಳು ಘೋರ ಕ್ರಿಮಿರೂಪವನ್ನು ತಾಳಿ ಅವಳನ್ನು ಪೀಡಿಸುತ್ತಿವೆ" ಎಂದನು.

॥ ಶ್ಯಾಮಲೋವಾಚ ॥
ಜಾನಾಮಿ ತದಹಂ ಸರ್ವಂ ಯನ್ಮೇ ಮಾತ್ರಾ ಕೃತಂ ಪುರಾ ।
ತಥಾಪಿ ತ್ವಾಂ ಸಮಾಸಾದ್ಯ ಸಾ ಚ ಜಾಮಾತರಂ ಶುಭಂ ।
ಮುಚ್ಯತೇ ಕೃಮಿರಾಶಿತ್ವಾದ್ಯಥಾ ತದಧುನಾ ಕುರು ॥ ೩೨ ॥

ತಚ್ಛ್ರುತ್ವಾ ಚಿಂತಯಾವಿಷ್ಟಶ್ಚಿರಂ ಸ್ಥಿತ್ವಾ ಜಗಾದ ತಾಂ ।
ಧರ್ಮರಾಜಃ ಸಹಾಸೀನಾಂ ಪ್ರಿಯಾಂ ಪ್ರಾಣಧನೇಶ್ವರೀಂ ॥ ೩೩ ॥

ಇತಶ್ಚ ಸಪ್ತಮೇಽತೀತೇ ಜನ್ಮನಿ ಬ್ರಾಹ್ಮಣೀ ಶುಭಾ ।
ಆಸೀಸ್ತಸ್ಮಿಂಸ್ತ್ವಯಾ ಸಂಗಾತ್ಸಖೀನಾಂ ಪರ್ಯುಪಾಸಿತಾ ।
ಬುಧಾಷ್ಟಮೀ ಸುಸಂಪೂರ್ಣಾ ಯಥೋಕ್ತಫಲದಾಯಿನೀ ॥ ೩೪ ॥

ತತ್ಫಲಂ ಯಚ್ಛದಾಸ್ಯಸ್ಯೈ ಸತ್ಯಂ ಕೃತ್ವಾ ಮಮಾಗ್ರತಃ ।
ತೇನ ಮುಚ್ಯೇತ ತೇ ಮಾತಾ ನರಕಾತ್ಪಾಪಸಂಕಟಾತ್ ॥ ೩೫ ॥

---

೩೨. ಶ್ಯಾಮಲೆಯು ಹೇಳುತ್ತಾಳೆ–ಎಲೈ ಪತಿದೇವನೇ ! ನನ್ನ ಮಾತೆಯು ಪೂರ್ವದಲ್ಲಿ ಏನು ಮಾಡಿದ್ದಾಳೆ ಎಂಬುದೆಲ್ಲವನ್ನೂ ನಾನು ಅರಿತಿರುತ್ತೇನೆ. ಹಾಗಿದ್ದರೂ ಅವಳು ಮಂಗಳಕರನಾದ ನಿನ್ನನ್ನು ಅಳಿಯನನ್ನಾಗಿ ಪಡೆದಿರುವುದರಿಂದ ಈ ಕ್ರಿಮಿರಾಶಿಯಿಂದ ವಿಮುಕ್ತಳಾಗುವಂತೆ ಮಾಡು ” ಎಂದಳು.

೩೩. ಶ್ಯಾಮಲೆಯ ಆ ಮಾತನ್ನು ಕೇಳಿ ಯಮಧರ್ಮರಾಜನು ಆಲೋಚನಾಕ್ರಾಂತನಾಗಿ ಬಹುಕಾಲ ಕುಳಿತಿದ್ದು ಅನಂತರ ತನ್ನ ಪ್ರಾಣ ಮತ್ತು ಧನಗಳಿಗೆ ಸ್ವಾಮಿನಿಯಾಗಿ ಸಮೀಪದಲ್ಲಿ ಕುಳಿತುಕೊಂಡಿರುವ ಆ ಸಹಧರ್ಮಿಣಿಯನ್ನು ಕುರಿತು ಹೀಗೆಂದು ನುಡಿದನು.

೩೪. “ ಎಲೌ ಶ್ಯಾಮಲೇ ! ಇಲ್ಲಿಂದ ಹಿಂದೆ ಕಳೆದುಹೋದ ಏಳನೆಯ ಜನ್ಮದಲ್ಲಿ ನೀನು ಸುಮಂಗಲಿಯಾದ ಬ್ರಾಹ್ಮಣ ಸ್ತ್ರೀಯಾಗಿದ್ದೆ. ಆ ಜನ್ಮದಲ್ಲಿ ನೀನು ನಿನ್ನ ಸಖೀ ಸಹವಾಸ ಮೂಲಕವಾಗಿ ವಿಧ್ಯುಕ್ತ ಫಲಪ್ರದವಾದ ಬುಧಾಷ್ಟಮೀ ವ್ರತವನ್ನು ಸಂಪೂರ್ಣವಾಗಿ ಆಚರಿಸಿರುತ್ತೀಯೆ.

೩೫. ನಿನ್ನಿಂದ ಆಚರಿತವಾದ ಬುಧಾಷ್ಟಮೀ ವ್ರತದ ಫಲವನ್ನು ನನ್ನೆದುರಿಗೆ ಸತ್ಯತಃ ಶಪಥಪೂರ್ವಕವಾಗಿ ನಿನ್ನ ತಾಯಿಗೆ ಧಾರೆ ಎರೆದುಕೊಡುವುದಾದರೆ ಪಾಪವಶದಿಂದ ಸಂಕಟಪಡುವ ನಿನ್ನ ತಾಯಿಗೆ ಆ ಪುಣ್ಯವಶದಿಂದ ನರಕ ನಿವಾರಣೆಯಾಗುವುದು ” ಎಂದನು.

ತಚ್ಛ್ರುತ್ವಾ ತ್ವರಿತಂ ಸ್ನಾತ್ವಾ ದದೌ ಪುಣ್ಯಂ ಸ್ವಕಂ ಕೃತಂ ।
ಸ್ವಮಾತುಃ ಶ್ಯಾಮಲಾ ತುಷ್ಟಾ ತೇನ ಮೋಕ್ಷಂ ಜಗಾಮ ಸಾ ॥ ೩೬ ॥

ಊರ್ಮಿಲಾ ರೂಪಸಂಪನ್ನಾ ದಿವ್ಯದೇಹಧರಾ ಶುಭಾ ।
ವಿಮಾನವರಮಾರೂಢಾ ದಿವ್ಯಮಾಲ್ಯಾಂಬರಾವೃತಾ ॥ ೩೭ ॥

ಭರ್ತುಃ ಸಮೀಪೇ ಸ್ವರ್ಗಸ್ಥಾ ದೃಶ್ಯತೇಽದ್ಯಾಪಿ ಸಾ ಜನೈಃ ।
ಬುಧಸ್ಯ ಪಾರ್ಶ್ವೇ ನಭಸಿ ಮಿಥಿರಾಜಸಮೀಪತಃ ।
ವಿಸ್ಫುರಂತೀ ಮಹಾರಾಜ ಬುಧಾಷ್ಟಮ್ಯಾಃ ಪ್ರಭಾವತಃ ॥ ೩೮ ॥

॥ ಯುಧಿಷ್ಠಿರ ಉವಾಚ ॥

ಯದ್ಯೇವಂ ಪ್ರವರಾ ಕೃಷ್ಣ ಸಾ ತಿಥಿರ್ವೈ ಬುಧಾಷ್ಟಮೀ ।
ತಸ್ಯಾ ಏವ ವಿಧಿಂ ಬ್ರೂಹಿ ಯದಿ ತುಷ್ಟೋಽಸಿ ಮೇ ಪ್ರಭೋ ॥ ೩೯ ॥

---

೩೬. ಯಮನ ಈ ಮಾತನ್ನು ಕೇಳಿ ಶ್ಯಾಮಲೆಯು ಹರ್ಷೋತ್ಫುಲ್ಲ ಮುಖಿಯಾಗಿ, ಶೀಘ್ರವಾಗಿ ಹೋಗಿ ಸ್ನಾನಮಾಡಿ, ತಾನು ಆರ್ಜಿಸಿ, ಪುಣ್ಯವನ್ನು ಸಂತೋಷದಿಂದ ತನ್ನ ತಾಯಿಗೆ ಧಾರೆ ಎರೆದಳು. ಆ ಪುಣ್ಯಬಲದಿಂದ ಅವಳ ತಾಯಿಗೆ ನರಕದಿಂದ ವಿಮೋಚನೆಯಾಯಿತು.

೩೭-೩೮. "ಎಲೈ ಮಹಾರಾಜನೇ! ಆ ಶ್ಯಾಮಲೆಯು ತಾಯಿಯಾದ ಊರ್ಮಿಳೆಯು ಬಳಿಕ ಸುಂದರಿಯೂ, ದಿವ್ಯಶರೀರ ಧಾರಿಣಿಯೂ, ಉತ್ತಮ ವಿಮಾನಾರೂಢಳೂ, ದಿವ್ಯಮಾಲ್ಯ ವಸ್ತ್ರಾದಿಗಳನ್ನು ಧರಿಸಿದವಳೂ, ಆಗಿ ಗಂಡನಾದ ಮಿಥಿಯ ಸಮೀಪದಲ್ಲಿ ಸ್ವರ್ಗದಲ್ಲಿದ್ದು ಈಗಲೂ ಸ್ವರ್ಗಕ್ಕೆ ಹೋದ ಜನರಿಗೆ ಗೋಚರಳಾಗುತ್ತಾಳೆ. ಈ ಬುಧಾಷ್ಟಮೀ ವ್ರತ ಪ್ರಭಾವದಿಂದ ಊರ್ಮಿಲೆಯು ಆಕಾಶದಲ್ಲಿ ಬುಧಗ್ರಹ ಮತ್ತು ಮಿಥಿರಾಜ ಇವರ ಪಾರ್ಶ್ವದಲ್ಲಿ ಪ್ರಕಾಶಮಾನಳಾಗಿದ್ದಾಳೆ" ಎಂದನು.

೩೯. ಯುಧಿಷ್ಠಿರನು ಹೇಳುತ್ತಾನೆ—"ಎಲೈ ಕೃಷ್ಣಪರಮಾತ್ಮನೇ! ಆ ಬುಧಾಷ್ಟಮೀ ತಿಥಿಯು ಈರೀತಿ ಸರ್ವೋತ್ಕೃಷ್ಟವಾದುದೇ? ಎಲೈ ಪ್ರಭುವೇ! ನನ್ನಲ್ಲಿ ಪ್ರಸನ್ನನಾಗಿರುವ ಪಕ್ಷದಲ್ಲಿ ಈ ಬುಧಾಷ್ಟಮೀ ವ್ರತವನ್ನು ಹೇಳು" ಎಂದನು.

॥ ಶ್ರೀ ಕೃಷ್ಣ ಉವಾಚ ॥

**ಶೃಣು ಪಾಂಡವ ಯತ್ನೇನ ಬುಧಾಷ್ಟಮ್ಯಾ ವಿಧಿಂ ಶುಭಂ ।**
**ಯದಾಯದಾ ಸಿತಾಷ್ಟಮ್ಯಾಂ ಬುಧವಾರೋ ಭವೇದ್ಯದಿ ।**
**ತದಾತದಾ ಚ ಸಾ ಗ್ರಾಹ್ಯಾ ಏಕಭಕ್ತಾಶನೈರ್ನೃಭಿಃ ॥ ೩೯ ॥**

**ಸ್ನಾತ್ವಾ ನದ್ಯಾಂ ತು ಪೂರ್ವಾಹ್ಣೇ ಗೃಹೀತ್ವಾ ಕಲಶಂ ನವಂ ।**
**ಜಲಪೂರ್ಣಂ ತು ಸದ್ರವ್ಯಂ ಪೂರ್ಣಪಾತ್ರಸಮನ್ವಿತಂ ॥ ೪೦ ॥**

**ಅಷ್ಟವಾರಾನ್ಪ್ರಕರ್ತವ್ಯಾ ವಿಧಾನೈಸ್ತು ಪೃಥಕ್ಪೃಥಕ್ ।**
**ಪ್ರಥಮಾ ಮೋದಕೈಃ ಕಾರ್ಯಾ ದ್ವಿತೀಯಾ ಫೇಣಕೈಸ್ತಥಾ ॥ ೪೧ ॥**

**ತೃತೀಯಾ ಘೃತಪೂಪೈಶ್ಚ ಚತುರ್ಥೀ ವಟಕೈರ್ನೃಪ ।**
**ಪಂಚಮೀ ಶುಭ್ರಕಾರೈಶ್ಚ ಷಷ್ಠೀ ಸೋಹಾಲಕೈಸ್ತಥಾ ॥ ೪೨ ॥**

---

೩೯. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ಧರ್ಮರಾಜನೇ! ಶ್ರೀ ಶುಭಕರವಾದ ಬುಧಾಷ್ಟಮೀ ವ್ರತವನ್ನು (ಅದರ ವಿಧಾನ) ಹೇಳುತ್ತೇನೆ, ಏಕಾಗ್ರತೆಯಿಂದ ಶ್ರವಣಮಾಡು. ಯಾವಯಾವಾಗ ಶುಕ್ಲಪಕ್ಷದ ಅಷ್ಟಮಿಯಲ್ಲಿ ಬುಧವಾರ ಸೇರಿ ಬರುವುದೋ ಆಗಾಗ ಪುರುಷರು ಏಕಭುಕ್ತದಿಂದ ಈ ಬುಧಾಷ್ಟಮೀ ವ್ರತವನ್ನಾಚರಿಸಬೇಕು.

೪೦. ಆದಿನ ಪೂರ್ವಾಹ್ಣದಲ್ಲಿ ನದೀಸ್ನಾನವನ್ನಾಚರಿಸಿ ಹೊಸ ಕಲಶವನ್ನು ಹಿಡಿದುಕೊಂಡು ಅದರಲ್ಲಿ ನೀರನ್ನು ತುಂಬಿ ಯಥೋಕ್ತ ದ್ರವ್ಯವನ್ನು ಹಾಕಿ ಪೂರ್ಣಪಾತ್ರಸಮನ್ವಿತವಾಗಿಟ್ಟು ಈ ವ್ರತವನ್ನಾಚರಿಸಬೇಕು.

೪೧. ಈ ವ್ರತವನ್ನು ಎಂಟುಸಲ ಬೇರೆ ಬೇರೆ ರೀತಿಯಿಂದ ಮಾಡಬೇಕು. ಮೊದಲನೆಯಸಾರಿ ಮೋದಕಗಳ ಸಮರ್ಪಣೆಯಿಂದ ಮಾಡಬೇಕು. ಹಾಗೆಯೇ ಎರಡನೆಯ ಆವೃತ್ತಿಯಲ್ಲಿ ಫೇಣಿ ಸಮರ್ಪಣೆಯಿಂದ ಮಾಡಬೇಕು.

೪೨. ಎಲೈ ರಾಜನೇ! ಮೂರನೆಯಾವೃತ್ತಿ ಈ ವ್ರತವನ್ನು ತುಪ್ಪದ ದೋಸೆಯ ಸಮರ್ಪಣದಿಂದಾಚರಿಸಬೇಕು. ನಾಲ್ಕನೆಯಸಲ ವಡೆಗಳನ್ನು ಸಮರ್ಪಿಸಿ ಇದನ್ನು ಮಾಡಬೇಕು. ಐದನೆಯಸಾರಿ ಈ ವ್ರತವನ್ನು ಬಿಳಿಯ ಭಕ್ಷ್ಯಗಳಿಂದಲೂ, ಆರನೆಯಸಲ ಸೋಹಾಲಕವೆಂಬ ಭಕ್ಷ್ಯ ವಿಶೇಷವನ್ನು ಮಾಡಿಯೂ ಈ ವ್ರತವನ್ನು ಪೂರೈಸಬೇಕು.

ಅಶೋಕವರ್ತಿಭಿಶ್ಯುಭ್ರೈಃ ಸಪ್ತಮೀ ಖಂಡಸಂಯುತೈಃ ।
ಅಷ್ಟಮೀ ಫಲಪುಷ್ಪೈಶ್ಚ ಕೇವಲಾಖಣ್ಡಫೇಣಿಕೈಃ ।
ಏವಂ ಕ್ರಮೇಣ ಕರ್ತವ್ಯಾ ಸುಹೃತ್ಸ್ವಜನಬಾಂಧವೈಃ ॥ ೪೩ ॥

ಸಯಕೃತ್ವಾ ಸ್ಥಿತೈರ್ಭೋಜ್ಯಂ ಭೋಕ್ತವ್ಯಂ ಸ್ವಸ್ಥಮಾನಸೈಃ ।
ಉಪೋಷ್ಯಾಣಾಮಿದಂ ಶ್ರೇಷ್ಠಂ ಕಥಯದ್ಭಿಃ ಶನೈಃಶನೈಃ ॥ ೪೪ ॥

ಶ್ರುತ್ವಾಷ್ಟಮೀಬುಧಸ್ಯಾಪಿ ಮಾಹಾತ್ಮ್ಯಂ ಭೋಜನಂ ತ್ಯಜೇತ್ ।
ತಾವದೇವ ನ ಭೋಕ್ತವ್ಯಂ ಕಥಾ ಯಾವತ್ಸಮಾಪ್ಯತೇ ॥ ೪೫ ॥

ತಥಾ ಭುಕ್ತ್ವಾ ಬುಧಸ್ಯಾಗ್ರೇ ಆಚಮ್ಯ ಚ ಪುನಃಪುನಃ ।
ವಿಪ್ರಾಯ ವೇದವಿದುಷೇ ತಂ ಬ್ರುವನ್ಪ್ರತಿಪಾದಯೇತ್ ॥ ೪೬ ॥

---

೪೩. ಏಳನೆಯ ಅವೃತ್ತಿ ಬಿಳಿಯ ಶರ್ಕರಾಖಂಡಸಹಿತವಾಗಿ ಕಟುಕ ರೋಹಿಣಿಯಿಂದ ಮಾಡಿದ ಭಕ್ಷ್ಯವಿಶೇಷದಿಂದ ಇದನ್ನು ಆಚರಿಸಬೇಕು. ಎಂಟನೆಯಸಾರಿ ಫಲಪುಷ್ಪಗಳಿಂದಲೂ ಅಖಂಡವಾದ ಫೇಣಿ ಎಂಬ ಭಕ್ಷ್ಯಗಳಿಂದಲೂ ಈ ವ್ರತವನ್ನು ಆಚರಿಸಬೇಕು. ಈ ಕ್ರಮದಲ್ಲಿ ಮಿತ್ರ, ಸ್ವಜನ, ಬಂಧು ಇವರುಗಳಿಂದೊಡಗೂಡಿ ಈ ಬುಧಾಷ್ಟಮೀ ವ್ರತವನ್ನು ಮಾಡಬೇಕು.

೪೪. ಸ್ವಸ್ಥಮನಸ್ಕರಾದ ಮಿತ್ರರು ಬಂಧುಗಳು ಇವರುಗಳನ್ನು ಆಹ್ವಾನಿಸಿ ಈ ಪ್ರತವನ್ನಾಚರಿಸಿ ಅವರ ಜೊತೆ ಕುಳಿತು ಭೋಜ್ಯಪದಾರ್ಥಗಳನ್ನು ಭುಂಜಿಸಬೇಕು. ಭೋಜನಕಾಲದಲ್ಲಿ ತನ್ನ ಸಮೀಪದಲ್ಲಿ ಕುಳಿತಿರುವ ಸುಹೃದಾದಿಗಳೊಡನೆ ಸಾವಕಾಶವಾಗಿ ಈ ವ್ರತವು ಶ್ರೇಷ್ಠವೆಂದು ಹೊಗಳಿ ಉಪದೇಶಿಸಬೇಕು.

೪೫. ಈ ಬುಧಾಷ್ಟಮೀ ವ್ರತ ಮಹಾತ್ಮ್ಯಪ್ರತಿಪಾದಕವಾದ ಕಥಾಶ್ರವಣ ಮಾಡುವುದಕ್ಕೆ ಮುನ್ನ ಭೋಜನ ಮಾಡಬಾರದು. ಕಥಾಶ್ರವಣ ಮಾಡಿಯೇ ಭೋಜನ ಮಾಡಬೇಕು.

೪೬. ಕಥಾಶ್ರವಣಮಾಡಿ ಭೋಜನವಾದ ಮೇಲೆ ಪೂಜಿಸಲ್ಪಟ್ಟ ಆ ಬುಧಗ್ರಹ ದೇವತೆಯ ಇದಿರಾಗಿ ಕುಳಿತು ಶುದ್ಧಾಚಮನವನ್ನು ಮಾಡಿ ಅನಂತರ ಆ ಬುಧಪ್ರತಿಮೆಯನ್ನು ವೇದಜ್ಞನಾದ ಬ್ರಾಹ್ಮಣನಿಗೆ ದಾನಮಾಡಬೇಕು.

ಸಾಕ್ಷತಂ ಸಹಿರಣ್ಯಂ ಚ ಜಾತರೂಪಮಯಂ ಶುಭಂ ।
ಅರ್ಚಿತಂ ವಿವಿಧೈಃ ಪುಷ್ಪೈರ್ಧೂಪದೀಪೈಃ ಸುಗಂಧಿಭಿಃ ॥ ೪೭ ॥

ಪೀತವಸ್ತ್ರೈಃ ಸಮಾಚ್ಛನ್ನಂ ಬುಧಂ ಸೋಮಾತ್ಮಜಾಕೃತಿಂ ।
ಮಾಷಕೇನ ಸುವರ್ಣೇನ ತದರ್ಧಾರ್ಧೇನ ವಾ ಪುನಃ ॥ ೪೮ ॥

ಓಂ ಬುಧಾಯನಮಃ । ಓಂ ಸೋಮಾತ್ಮಜಾಯನಮಃ ।
ಓಂ ದುರ್ಬುದ್ಧಿನಾಶನಾಯನಮಃ । ಓಂ ಸುಬುದ್ಧಿಪ್ರದಾಯ ನಮಃ ।
ಓಂ ತಾರಾಜಾತಾಯನಮಃ । ಓಂ ಸೌಮ್ಯಗ್ರಹಾಯನಮಃ ।
ಓಂ ಸರ್ವಸೌಖ್ಯಪ್ರದಾಯನಮಃ ।

ಏತೇ ಪೂಜಾಮಂತ್ರಾಃ

ಅಷ್ಟಮೀ ತು ಯದಾ ಪೂರ್ಣಾ ತದಾ ರಾಜರ್ಷಿಸತ್ತಮ ।
ಬ್ರಾಹ್ಮಣಾನ್ಭೋಜಯೇದಷ್ಟೌ ಗಾಂ ದದ್ಯಾಚ್ಚ ಸವತ್ಸಿಕಾಂ ॥ ೪೯ ॥

---

೪೭. ಭಂಗಾರದಿಂದ ಬುಧಪ್ರತಿಮೆಯನ್ನು ಮಾಡಿಸಿ ಆ ಅಕ್ಷತೆ ಹಿರಣ್ಯ ಸುಗಂಧವುಳ್ಳ ವಿವಿಧ ಪುಷ್ಪ, ಧೂಪ, ದೀಪ ಇತ್ಯಾದಿಗಳಿಂದ ಅರ್ಚನೆಮಾಡಿ ಪೀತವಸ್ತ್ರಗಳನ್ನು ಹೊದ್ದಿಸಬೇಕು.

೪೮. ಚಂದ್ರನ ಮಗನಾದ ಆ ಬುಧನ ಆಕಾರದ ಸುವರ್ಣ ಪ್ರತಿಮೆಯನ್ನು ಮಾಷತೂಕದ ಭಂಗಾರದಿಂದಲೋ ಅಥವಾ ಅದರಲ್ಲಿ ಅರ್ಧ, ಅಷ್ಟೂ ಇಲ್ಲವಾದರೆ ಅದರಲ್ಲಿ ಅರ್ಧ ತೂಕವುಳ್ಳ ಭಂಗಾರದಿಂದ ತಯಾರಿಸಬೇಕು.

ಓಂ ಬುಧಾಯ ನಮಃ, ಓಂ ಸೋಮಾತ್ಮಜಾಯ ನಮಃ. ಓಂ ದುರ್ಬುದ್ಧಿ ನಾಶನಾಯ ನಮಃ, ಓಂ ಸುಬುದ್ಧಿಪ್ರದಾಯ ನಮಃ, ಓಂ ತಾರಾಜಾತಾಯ ಓಂ ಸೌಮ್ಯಗ್ರಹಾಯ ನಮಃ, ಓಂ ಸರ್ವಸೌಖ್ಯ ಪ್ರದಾಯ ನಮಃ, ಇವು ಬುಧ ಪೂಜೆಗೆ ಉಕ್ತವಾದ ನಾಮಗಳು.

೪೯. ಎಲೈ ರಾಜರ್ಷಿಶ್ರೇಷ್ಠನೇ! ಎಂಟನೆಯ ಆವೃತ್ತಿಯ ವ್ರತಾಚರಣವು ಸಂಪೂರ್ಣವಾಗುತ್ತಲೆ ಎಂಟು ಜನ ಬ್ರಾಹ್ಮಣರಿಗೆ ಭೋಜನಮಾಡಿಸಿ ಕರುಸಮೇತವಾದ ಹಸುವನ್ನು ದಾನ ಮಾಡಬೇಕು.

ವಸ್ತ್ರಾಲಂಕರಣೈಃ ಸರ್ವೈರ್ಭೂಷಣೈರ್ವಿವಿಧೈರಪಿ ।
ಸಪತ್ನೀಕಂ ಸಮಭ್ಯರ್ಚ್ಯ ಕರ್ಣಮಾತ್ರಾಂಗುಲೀಯಕೈಃ ।
ಮಂತ್ರೇಣಾನೇನ ಕೌಂತೇಯ ದದ್ಯಾದೇವಂ ಸಮಾಚರನ್ ॥ ೫೦ ॥

॥ ದಾನ ಮಂತ್ರಃ ॥

ಬುಧೋಽಯಂ ಪ್ರತಿಗೃಹ್ಣಾತು ದ್ರವ್ಯಸ್ಥೋಽಯಂ ಬುಧಃ ಸ್ವಯಂ ।
ದೀಯತೇ ಬುಧರಾಜಾಯ ತುಷ್ಯತಾಂ ಚ ಬುಧೋ ಮಮ ॥ ೫೧ ॥

॥ ಪ್ರತಿಗ್ರಹಣ ಮಂತ್ರಃ ॥

ಬುಧಃ ಸೌಮ್ಯಸ್ತಾರಕೇಯೋ ರಾಜಪುತ್ರ ಇಲಾಪತಿಃ ।
ಕುಮಾರೋ ದ್ವಿಜರಾಜಸ್ಯ ಯಃ ಪುರೂರವಸಃ ಪಿತಾ ॥ ೫೨ ॥

---

೫೦. ಎಲೈ ಕುಂತೀಪುತ್ರನೇ! ಮತ್ತು ಸಪತ್ನೀಕನಾದ ಬ್ರಾಹ್ಮಣನಿಗೆ ವಸ್ತ್ರಾಲಂಕಾರಗಳು. ಅನೇಕ ವಿಧವಾದ ಭೂಷಣಗಳು. ಇವೆಲ್ಲವನ್ನೂ ಕೊಟ್ಟು ಪೂಜೆಮಾಡಿ ತನ್ನ ಬೆರಳುಗಳಿಂದ ತನ್ನ ಕಿವಿಯನ್ನು ಮುಟ್ಟಿ ಆ ಬ್ರಾಹ್ಮಣನಿಗೆ ಅಭಿವಾದನೆಮಾಡಿ ಈ ಮುಂದೆ ಹೇಳುವ ಮಂತ್ರವನ್ನು ಪಠಿಸುತ್ತಾ ಪೂಜಿಸಲ್ಪಟ್ಟ ಆ ಬುಧಗ್ರಹ ದೇವತಾ ಪ್ರತಿಮೆಯನ್ನು ದಾನಮಾಡಬೇಕು.

೫೧. ಬುಧೋಽಯಂ ಪ್ರತಿಗೃಹ್ಣಾತು ದ್ರವ್ಯಸ್ಥೋಽಯಂ ಬುಧಃಸ್ವಯಂ।
ದೀಯತೇ ಬುಧರಾಜಾಯ ತುಷ್ಯತಾಂ ಚ ಬುಧೋಮಮ ॥

ಇದು ದಾನಮಂತ್ರ.

(ಈ ದಾನವನ್ನು ಬುಧನೇ ಪ್ರತಿಗ್ರಹಿಸಲಿ. ಈ ದಾನ ದ್ರವ್ಯವಾದ ಸುವರ್ಣ ಪ್ರತಿಮೆಯಲ್ಲಿ ಬುಧನು ಸ್ವಯಂ ಅಧಿಷ್ಠಿತನಾಗಿರುವನು. ಈ ದಾನವನ್ನು ಬುಧರಾಜ (ಉತ್ತಮನಾದ ವಿದ್ವಾಂಸ) ನಿಗೆ ದಾನ ಮಾಡುತ್ತೇನೆ. ಆದರಿಂದ ಬುಧದೇವನು ನನ್ನ ವಿಷಯದಲ್ಲಿ ಸುಪ್ರೀತನಾಗಲಿ ಇದು ಈ ಮಂತ್ರಾರ್ಥ).

೫೨. ದಾನ ತೆಗೆದುಕೊಳ್ಳತಕ್ಕವನೂ ಸಹ,

ಬುಧಃ ಸೌಮ್ಯಸ್ತಾರಕೇಯೋ ರಾಜಪುತ್ರಃ ಇಲಾಪತಿಃ ।
ಕುಮಾರೋ ದ್ವಿಜರಾಜಸ್ಯ ಯಃ ಪುರೂರವಸಃ ಪಿತಾ ॥

ಈ ಪ್ರತಿಗ್ರಹಣ ಮಂತ್ರವನ್ನು ಹೇಳಬೇಕು.

ದುರ್ಬುದ್ಧಿಬಾಧಜನಿತಂ ನಾಶಯಿತ್ವಾ ಚ ಮೇ ಬುಧಃ ।
ಸೌಖ್ಯಂ ಚ ಸೌಮನಸ್ಯಂ ಚ ಕರೋತು ಶಶಿನಂದನಃ ॥ ೫೩ ॥

॥ ಇತಿ ಪ್ರತಿಗ್ರಹಣ ಮಂತ್ರಃ ॥

ಇತ್ಯುಚ್ಚಾರ್ಯ ಗೃಹೀತ್ವಾ ತು ದದ್ಯಾನ್ಮಂತ್ರಪುರಸ್ಸರಂ ।
ಸಪ್ತಜನ್ಮನಿ ರಾಜೇಂದ್ರ ಜಾತೋ ಜಾತಿಸ್ಮರೋ ಭವೇತ್ ॥ ೫೪ ॥

ಧನಧಾನ್ಯಸಮಾಯುಕ್ತಃ ಪುತ್ರಪೌತ್ರಪ್ರವರ್ಧನಃ ।
ದೀರ್ಘಾಯುರ್ವಿಪುಲಾನ್ಭೋಗಾನ್ಭುಕ್ತ್ವಾ ಚೈವ ಮಹೀತಲೇ ॥೫೫॥

---

(ಬೃಹಸ್ಪತಿಯ ಪತ್ನಿಯಾದ ತಾರೆಯಲ್ಲಿ ಜನಿಸಿದವನೂ, ಚಂದ್ರನ ಸುಪುತ್ರನೂ, ಇಲೆಯೆಂಬುವಳ ಪತಿಯೂ, ಮತ್ತು ಚಂದ್ರಕುಲೋತ್ಪನ್ನನೂ, ಪುರೂರವಸ್ಸೆಂಬ ಚಂದ್ರವಂಶದ ರಾಜನ ತಂದೆಯೂ ಆದ ಈ ಬುಧನು ಸುಪ್ರೀತನಾಗಲಿ, ಇದು ಈ ಮಂತ್ರಾರ್ಥ).

೫೩. ಎಲೈ ರಾಜೇಂದ್ರನೇ! ಮಂತ್ರಪೂರ್ವಕವಾಗಿ ಕೊಟ್ಟ ಬುಧಗ್ರಹ ಪ್ರತಿಮಾದಾನವನ್ನು, ಪ್ರತಿಗೃಹೀತ್ಯ ಬ್ರಾಹ್ಮಣನು ಪ್ರತಿಗ್ರಹಮಂತ್ರವನ್ನು ಹೇಳಿ ಪ್ರತಿಗ್ರಹಿಸಿದನಂತರ ದಾನಕೊಟ್ಟ ಈ ವ್ರತಾನುಷ್ಠಾತೃವು

ದುರ್ಬುದ್ಧಿ ಬಂಧ ಜನಿತಂ ನಾಶಯಿತ್ವಾಚ ಮೇ ಬುಧಃ ।
ಸೌಖ್ಯಂ ಚ ಸೌಮನಸ್ಯಂ ಚ ಕರೋತು ಶಶಿನಂದನಃ ॥

ಎಂಬದಾಗಿ ಪ್ರಾರ್ಥನೆ ಮಾಡಬೇಕು. (ದುಷ್ಟಬುದ್ಧಿಯ ಪರಿಣಾಮವಾಗಿ ನನಗಾಗಬೇಕಾದ ಕೆಡುಕನ್ನು ಈ ಬುಧನು ನಿವಾರಣೆಮಾಡಿ ಸೌಖ್ಯ, ಸುಬುದ್ಧಿ, ಸೌಮನಸ್ಯ ಇವುಗಳನ್ನು ದಯಪಾಲಿಸಲಿ ಇದು ಈ ಮಂತ್ರಾರ್ಥ).

೫೪. ಈರೀತಿ ಮಂತ್ರ ಪೂರ್ವಕವಾಗಿ ಕೊಟ್ಟ ದಾನವನ್ನು ಸತ್ಪಾತ್ರನಾದ ಬ್ರಾಹ್ಮಣನು ಮಂತ್ರಪೂರ್ವಕವಾಗಿ ಪ್ರತಿಗ್ರಹಿಸುವಂತೆ ಮಾಡಿ ಈ ವ್ರತವನ್ನು ಪೂರ್ತಿಮಾಡಿದರೆ ಮುಂದಿನ ಏಳು ಜನ್ಮಗಳಲ್ಲಿ ಜನಿಸಿದಾಗ ಪೂರ್ವಜನ್ಮಗಳ ವೃತ್ತಾಂತ ಸ್ಮರಣೆಯುಳ್ಳವನು (ಜಾತಿಸ್ಮರ) ಆಗುವನು.

೫೫. ಮತ್ತು ಈ ವ್ರತವನ್ನಾಚರಿಸಿದವರು ಈ ಭೂಲೋಕದಲ್ಲಿ ಧನಧಾನ್ಯ ಸಮೃದ್ಧಿಯುಳ್ಳವನೂ, ದೀರ್ಘಾಯುಷ್ಮಂತನೂ ಆಗಿ ಇದ್ದು ಅನೇಕ ಭೋಗಗಳನ್ನು ಅನುಭವಿಸುತ್ತಾನೆ.

ತತಃ ಸುತೀರ್ಥೇ ಮರಣಂ ಧ್ಯಾತ್ವಾ ನಾರಾಯಣಂ ವಿಭುಂ ।
ಮೃತೋऽಸೌ ಸ್ವರ್ಗಮಾಪ್ನೋತಿ ಪುರಂದರಸಮೋ ನರಃ ॥ ೫೬ ॥

ವಸತೇ ಯಾವದಾಸೃಷ್ಟೇಃ ಪುನರಾಭೂತಸಂಪ್ಲವಂ ।
ಏವಮೇತನ್ಮಯಾ ಖ್ಯಾತಂ ವ್ರತಾನಾಮುತ್ತಮಂ ವ್ರತಂ ॥ ೫೭ ॥

ಏಷೈವಂ ಚ ಮಯಾऽಖ್ಯಾತಾ ಗುಹ್ಯಾ ಪಾರ್ಥ ಬುಧಾಷ್ಟಮೀ ।
ಯಾಂ ಕೃತ್ವಾ ಬ್ರಹ್ಮಹಾ ಗೋಘ್ನಃ ಸರ್ವಪಾಪೈಃ ಪ್ರಮುಚ್ಯತೇ ॥೫೮॥

ಯಶ್ಚಾಷ್ಟಮೀಂ ಬುಧಯುತಾಂ ಸಮವಾಪ್ಯ ಭಕ್ತ್ಯಾ ।
ಸಂಪೂಜಯೇದ್ವಿಧುಸುತಂ ಕನಕೃಷ್ಣಸಂಸ್ಥಂ ।

---

೫೬. ಅನಂತರ ಕೊನೆಗಾಲದಲ್ಲಿ ಸರ್ವವ್ಯಾಪಿಯಾದ ಶ್ರೀ ನಾರಾಯಣನನ್ನು ಧ್ಯಾನಿಸುತ್ತಾ ಪುಣ್ಯಕ್ಷೇತ್ರದಲ್ಲಿ ಮರಣ ಹೊಂದಿ ಸ್ವರ್ಗಲೋಕವನ್ನು ಪಡೆದು ಅಲ್ಲಿ ಇಂದ್ರ ಸಮಾನನಾಗಿರುವನು.

೫೭. ಹಾಗೆ ಆ ಸ್ವರ್ಗಲೋಕದಲ್ಲಿ ಒಂದು ಕಲ್ಪಕಾಲ ವಾಸಿಸುವನು. ಈ ರೀತಿಯಾಗಿ ಎಲ್ಲಾ ವ್ರತಗಳಿಗಿಂತ ಉತ್ತಮವಾದ ಈ ವ್ರತವನ್ನು ನಿನಗೆ ನಾನು ಹೇಳಿದುದಾಯಿತು.

೫೮. ಎಲೈ ಕುಂತೀಪುತ್ರನೇ ! ನಾನು ನಿನಗೆ ಈಗ ಹೇಳಿದ ಬುಧಾಷ್ಟಮೀ ವ್ರತವು ಅತಿಗೋಪ್ಯವಾಗಿರುವುದು. ಈ ಬುಧಾಷ್ಟಮೀ ತಿಥಿಯಲ್ಲಾಚರಿಸಬೇಕಾದ ವ್ರತದ ಮಹಾತ್ಮೆಯನ್ನು ಶ್ರವಣಮಾಡಿದರೆ ಬ್ರಹ್ಮಹತ್ಯೆ, ಗೋಹತ್ಯೆ, ಮುಂತಾದ ಮಹಾಪಾಪಗಳನ್ನು ಮಾಡಿದ್ದರೂ ಎಲ್ಲಾ ಪಾಪಗಳಿಂದಲೂ ಮುಕ್ತನಾಗುವನು.

೫೯. ಬುಧವಾರದಲ್ಲಿ ಅಷ್ಟಮೀ ತಿಥಿಯು ಕೂಡಿಬಂದಾಗ ಭಕ್ತಿಯಿಂದ ಚಂದ್ರಪುತ್ರನಾದ ಬುಧ ಪ್ರತಿಮೆಯನ್ನು ಭಂಗಾರದಲ್ಲಿ ಮಾಡಿಸಿ ಅದರಲ್ಲಿ ಆ ದೇವತೆಯನ್ನು ಆವಾಹನೆಮಾಡಿ ಪಾತ್ರಸ್ಥವಾದ ಪಕ್ವಾನ್ನ ಸಮರ್ಪಣಾ

ಪಕ್ವಾನ್ನಪಾತ್ರಸಹಿತೈಃ ಸಹಿರಣ್ಯವಸ್ತ್ರೈಃ ।
ಪಶ್ಯೇದಸೌ ಯಮಪುರಂ ನ ಕದಾಚಿದೇವ　　　　॥ ೫೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಬುಧಾಷ್ಟಮೀ ವ್ರತವರ್ಣನಂ ನಾಮ ಚತುಷ್ಪಂಚಾಶತ್ತಮೋಽಧ್ಯಾಯಃ.



---

ಪೂರ್ವಕವಾಗಿ ಹಿರಣ್ಯವಸ್ತ್ರಾದಿಗಳಿಂದ ಪೂಜಿಸುವನೋ ಅಂಥವನು ಯಾವಾಗಲೂ ಯಮಪುರಿಯನ್ನು ಸಂದರ್ಶನ ಮಾಡುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಬುಧಾಷ್ಟಮಿ ವ್ರತವರ್ಣನವೆಂಬ ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಪಂಚಪಂಚಾಶತ್ತಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಜನ್ಮಾಷ್ಟಮೀವ್ರತಂ ಬ್ರೂಹಿ ವಿಸ್ತರೇಣ ಮಮಾಚ್ಯುತ ।
ಕಸ್ಮಿನ್ಕಾಲೇ ಸಮುತ್ಪನ್ನಂ ಕಿಂ ಪುಣ್ಯಂ ಕೋ ವಿಧಿಃ ಸ್ಮೃತಃ ॥ ೧ ॥

॥ ಶ್ರೀ ಕೃಷ್ಣ ಉವಾಚ ॥

ಹತೇ ಕಂಸಾಸುರೇ ದುಷ್ಟೇ ಮಥುರಾಯಾಂ ಯುಧಿಷ್ಠಿರ ।
ದೇವಕೀ ಮಾಂ ಪರಿಷ್ವಜ್ಯ ಕೃತ್ವೋತ್ಸಂಗೇ ರುರೋದ ಹ ॥ ೨ ॥

ತತ್ರೈವ ರಂಗವಾಟೇನ ಮಂಚಾರೂಢಜನೋತ್ಸವೇ ।
ಮಲ್ಲಯುದ್ಧೇ ಪುರಾವೃತ್ತೇ ಸಮೇತೇ ಕುಕುರಾಽನ್ಧಕೇ ॥ ೩ ॥

---

### ಐವತ್ತೈದನೆಯ ಅಧ್ಯಾಯ

೧. ಯುಧಿಷ್ಠಿರನು ಕೇಳುತ್ತಾನೆ—ಎಲೈ ಅಚ್ಯುತನೇ ! ಜನ್ಮಾಷ್ಟಮೀ ವ್ರತವನ್ನು ನನಗೆ ಸವಿಸ್ತಾರವಾಗಿ ಹೇಳು. ಆ ವ್ರತವು ಯಾವ ಕಾಲದಲ್ಲಿ ಹುಟ್ಟಿತು ? ಅದರ ಆಚರಣೆಯಿಂದ ಬರುವ ಪುಣ್ಯವೇನು ? ಮತ್ತು ಅದರ ಅನುಷ್ಠಾನ ಕ್ರಮವು ಹೇಗೆ ಉಕ್ತವಾಗಿದೆ ! ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ! ದುಷ್ಟನಾದ ಕಂಸನೆಂಬ ಅಸುರನು ಮರಣಹೊಂದಿದ ಮೇಲೆ ಮಧುರಾನಗರಿಯಲ್ಲಿ ದೇವಕಿಯು ನನ್ನನ್ನು ತೊಡೆಯಮೇಲೆ ಕೂರಿಸಿ ಆಲಿಂಗಿಸಿಕೊಂಡು ಅತ್ತಳು.

೩-೪. ಮತ್ತು ಪೂರ್ವದಲ್ಲಿ ಅದೇ ಮಧುರೆಯಲ್ಲಿ ಕುಕ್ಕುರ, ಅಂಧಕರೆಂಬುವರ ಜತೆಯಲ್ಲಿ ನಾನೂ ಮತ್ತು ಬಲರಾಮನೂ ಮಲ್ಲಯುದ್ಧ ಮಾಡಿದ

ಸ್ವಜನೈರ್ಬಂಧುಭಿಃ ಸ್ನಿಗ್ಧೈಃ ಸಮಂ ಸ್ತ್ರೀಭಿಃ ಸಮಾವೃತೇ ।
ವಸುದೇವೋಽಪಿ ತತ್ರೈವ ವಾತ್ಸಲ್ಯಾತ್ಪ್ರರುರೋದ ಹ ॥ ೪ ॥

ಸಮಾಕೃಷ್ಯ ಪರಿಷ್ವಜ್ಯ ಪುತ್ರಪುತ್ರೇತ್ಯುವಾಚ ಹ ।
ಸಗದ್ಗದಸ್ವರೋ ದೀನೋ ಬಾಷ್ಪಪರ್ಯಾಕುಲೇಕ್ಷಣಃ ॥ ೫ ॥

ಬಲಭದ್ರಂ ಚ ಮಾಂ ಚೈವ ಪರಿಷ್ವಜ್ಯ ಮುದಾ ಪುನಃ ।
ಅದ್ಯ ಮೇ ಸಫಲಂ ಜನ್ಮ ಜೀವಿತಂ ಯತ್ಸುಜೀವಿತಂ ॥ ೬ ॥

ಯದುಭಾಭ್ಯಾಂ ಸುಪುತ್ರಾಭ್ಯಾಂ ಸಮುದ್ಭೂತಃ ಸಮಾಗಮಃ ।
ಏವಂ ಹರ್ಷೇಣ ದಾಂಪತ್ಯೇ ಹೃಷ್ಟಂ ಪುಷ್ಟಂ ತದಾ ಹ್ಯಭೂತ್ ॥ ೭ ॥

---

ಮೇಲೆ ಉತ್ಸವದರ್ಶನಕ್ಕಾಗಿ ನೆರೆದಂತೆ ಜನರು ಸೇರಿದುದೂ, ಆ ರಂಗಸ್ಥಳದಲ್ಲಿ ಮಂಚಾರೂಢನಾಗಿ ಕಂಸನು ಕುಳಿತ್ತಿದ್ದುದೂ ಸ್ವಜನರು, ಬಂಧುಗಳು, ಮಿತ್ರರು, ಸ್ತ್ರೀಯರು ಇವರುಗಳಿಂದ ಕಿಕ್ಕಿರಿದಿರುವುದೂ ಆದ ಆ ರಂಗಸ್ಥಳದಲ್ಲಿ ವಸುದೇವನು ಪುತ್ರವಾತ್ಸಲ್ಯದಿಂದ ಬಹಳವಾಗಿ ಅತ್ತನು.

೫. ವಸುದೇವನು ಆಗ ನನ್ನನ್ನು ತನ್ನ ಬಳಿಗೆ ಸೆಳೆದು ಅಪ್ಪಿಕೊಂಡು, ಕಣ್ಣೀರಿನಿಂದ ತುಂಬಿದ ನಯನಗಳುಳ್ಳವನಾಗಿ ದೈನ್ಯ ತೋರಿಸುತ್ತಾ ಗದ್ಗದ ಸ್ವರದಿಂದ ಮಗೂ ! ಮಗೂ ! ಎಂದೂ ಕೂಗಿದನು.

೬. ಮತ್ತು ಬಲರಾಮನನ್ನೂ ನನ್ನನ್ನೂ ಪುನಃ ಸಂತೋಷದಿಂದ ಆಲಿಂಗಿಸಿದ ವಸುದೇವನು " ಈದಿನ ನನ್ನ ಜನ್ಮವು ಸಫಲವಾಯಿತು. ಇಂದಿನ ನನ್ನ ಬಾಳು ಸವಿಯೆನಿಸಿತು. ಏತಕ್ಕೆಂದರೆ ನನಗೆ ಸುಪುತ್ರರಾದ ನಿಮ್ಮೀರ್ವರ ಸಮಾಗಮವಾಯಿತು " ಎಂದನು.

೭. ಈರೀತಿ ಹೇಳಿಕೊಂಡು ಅವನು ಸಂತೋಷಪಟ್ಟನು. ಈ ಪ್ರಕಾರ ಆ ವಸುದೇವ ದೇವಕಿಯರು ಸಂತೋಷ ಹೊಂದಿದ್ದರಿಂದ ಆ/ಕಾಲದಲ್ಲಿ ಜಗತ್ತೇ ಹರ್ಷಯುಕ್ತವೂ ಬಲಯುಕ್ತವೂ ಆಯಿತು.

ಪ್ರಣಿಪತ್ಯ ಜನಾಃ ಸರ್ವೇ ಬಭೂವುಸ್ತೇ ಪ್ರಹರ್ಷಿತಾಃ ।
ಏವಂ ಮಹೋತ್ಸವಂ ದೃಷ್ಟ್ವಾ ಮಾಮೂಹ ಸಕಲೋ ಜನಃ ॥ ೮ ॥

ಪ್ರಸಾದಃ ಕ್ರಿಯತಾಂ ನಾಥ ಲೋಕಸ್ಯಾಸ್ಯ ಪ್ರಸಾದತಃ ।
ಯಸ್ಮಿನ್ದಿನೇ ಜಗನ್ನಾಥ ದೇವಕೀ ತ್ವಾಮಜೀಜನತ್ ॥ ೯ ॥

ತದ್ದಿನೇ ದೇಹಿ ವೈಕುಂಠಂ ಕುರ್ಮಸ್ತೇತ್ರ ನಮೋನಮಃ ।
ಸಮ್ಯಗ್ಭಕ್ತಿಪ್ರಪನ್ನಾನಾಂ ಪ್ರಸಾದಂ ಕುರು ಕೇಶವ ॥ ೧೦ ॥

ಏವಮುಕ್ತೇ ಜನೌಘೇನ ವಸುದೇವೋಽತಿವಿಸ್ಮಿತಃ ।
ವಿಲೋಕ್ಯ ಬಲಭದ್ರಂ ಚ ಮಾಂ ಚ ದೃಷ್ಟ್ವಾ ರುರೋದ ಹ ।
ಏವಮಸ್ತ್ವಿತಿ ಲೋಕಾನಾಂ ಕಥಯಸ್ವ ಯಥಾ ತಥಾ ॥ ೧೧ ॥

---

೮. ಆಗ ಅಲ್ಲಿ ನೆರೆದ ಎಲ್ಲಾ ಜನರೂ ನನಗೆ ನಮಸ್ಕಾರಮಾಡಿ ಬಹಳ ಹರ್ಷವನ್ನು ಹೊಂದಿದರು. ಈರೀತಿ ಆದ ಮಹೋತ್ಸವವನ್ನು ಕಂಡು, ಆ ಎಲ್ಲಾ ಜನರೂ ನನ್ನಲ್ಲಿ ಈ ಮುಂದೆ ಹೇಳುವಂತೆ ವಿಜ್ಞಾಪನೆ ಮಾಡಿಕೊಂಡರು.

೯. ಎಲೈ ನಾಥನೇ ! ಈ ಲೋಕನಿವಾಸಿಗಳಾದ ನಮ್ಮ ವಿಷಯದಲ್ಲಿ ಪ್ರಸನ್ನನಾಗು. ಎಲೈ ವೈಕುಂಠವಾಸಿಯಾದ ಜಗತ್ಪತಿಯೇ ! ಯಾವ ದಿನದಲ್ಲಿ ದೇವಕಿಯು ನಿನ್ನನ್ನು ಪ್ರಸವಿಸಿದಳೋ ಆ ದಿನದಲ್ಲಿ ನಿನ್ನನ್ನು ಅರ್ಚಿಸುವ ಹಾಗೆ ಅನುಗ್ರಹಿಸು.

೧೦. ಆ ದಿನವು ನಿನ್ನ ಸಂಬಂಧವಾದ ಮಹೋತ್ಸವಾಚರಣೆಗೆ ಯೋಗ್ಯವಾಗಲೆಂದು ಅಪ್ಪಣೆ ಮಾಡು. ಈ ಅನುಗ್ರಹವನ್ನು ನೀಡಿದ್ದಕ್ಕಾಗಿ ನಿನಗೆ ಅನೇಕ ವಂದನೆಗಳನ್ನು ಅರ್ಪಿಸುವೆವು. ಎಲೈ ಕೇಶವನೇ ! ದೃಢಭಕ್ತಿಯಿಂದ ಆಶ್ರಯಿಸಿದ ನಮಗೆ ಅನುಗ್ರಹಮಾಡು.

೧೧. ಭಕ್ತಜನ ಸಮುದಾಯವು ಈರೀತಿ ಅರಿಕೆಮಾಡಿಕೊಂಡ ಮೇಲೆ ವಸುದೇವನು ಅದರಿಂದ ಅತಿವಿಸ್ಮಿತನಾಗಿ ಬಲರಾಮನನ್ನೂ ಮತ್ತು ನನ್ನನ್ನೂ ನೋಡಿ "ಜನರು ಹೇಗೆ ಅಪೇಕ್ಷಿಸುವರೋ ಹಾಗೆಯೇ ಆಗಲೆಂದು ಅಂಗೀಕರಿಸು" ಎಂದು ದುಃಖಿಸುತ್ತಾ ಹೇಳಿದನು.

ತತಶ್ಚ ಪಿತುರಾದೇಶಾತ್ತಥಾ ಜನ್ಮಾಷ್ಟಮೀವ್ರತಂ ।
ಮಥುರಾಯಾಂ ಜನೌಘಾಗ್ರೇ ಪಾರ್ಥ ಸಮ್ಯಕ್ಪ್ರಕಾಶಿತಂ ॥ ೧೨ ॥

ಪೌರಜನಾ ಜನ್ಮದಿನಂ ವರ್ಷೇವರ್ಷೇ ಮಮೋದಿತಂ ।
ಪುನರ್ಜನ್ಮಾಷ್ಟಮೀಂ ಲೋಕೇ ಕುರ್ವಂತು ಬ್ರಾಹ್ಮಣಾದಯಃ ।
ಕ್ಷತ್ರಿಯಾ ವೈಶ್ಯಜಾತೀಯಾಃ ಶೂದ್ರಾ ಯೇನ್ಯೇಽಪಿ ಧಾರ್ಮಿಕಾಃ ॥೧೩॥

ಸಿಂಹರಾಶಿಗತೇ ಸೂರ್ಯೇ ಗಗನೇ ಜಲದಾಕುಲೇ ।
ಮಾಸಿ ಭಾದ್ರಪದೇಽಷ್ಟಮ್ಯಾಂ ಕೃಷ್ಣಪಕ್ಷೇಽರ್ಧರಾತ್ರಕೇ ।
ವೃಷರಾಶಿಸ್ಥಿತೇ ಚಂದ್ರೇ ನಕ್ಷತ್ರೇ ರೋಹಿಣೀಯುತೇ ॥ ೧೪ ॥

ವಸುದೇವೇನ ದೇವಕ್ಯಾಮಹಂ ಜಾತೋ ಜನಾಃ ಸ್ವಯಂ ।
ಏವಮೇತತ್ಸಮಾಖ್ಯಾತಂ ಲೋಕೇ ಜನ್ಮಾಷ್ಟಮೀವ್ರತಂ ॥ ೧೫ ॥

---

೧೨. ಎಲೈ ಧರ್ಮರಾಜನೇ! ಅನಂತರ ನಾನು ತಂದೆಯಾದ ವಸುದೇವನ ಅನುಜ್ಞೆಯಂತೆ ಆಗ ಮಥುರಾನಗರಿಯ ಜನಸಮುದಾಯದ ಮುಂದೆ ಈ ಜನ್ಮಾಷ್ಟಮೀ ವ್ರತವನ್ನು ಚೆನ್ನಾಗಿ ವಿವರಿಸಿ ವ್ಯಕ್ತಪಡಿಸಿದೆನು.

೧೩. ಹೇ ಪುರನಿವಾಸಿಗಳೇ! ಪ್ರತಿವರ್ಷದಲ್ಲೂ ನನ್ನ ಜನ್ಮದಿನವಲ್ಲಿ ನಾನು ಹೇಳುವ ಈ ಜನ್ಮಾಷ್ಟಮೀ ವ್ರತವನ್ನು ಲೋಕದಲ್ಲಿ ಬ್ರಾಹ್ಮಣಾದಿಗಳೂ, ಕ್ಷತ್ರಿಯರೂ, ವೈಶ್ಯಜಾತಿಯವರೂ, ಶೂದ್ರರೂ, ಧಾರ್ಮಿಕರೂ ಎಲ್ಲರೂ ಆಚರಿಸಲಿ.

೧೪-೧೫. ಎಲೈ ಪ್ರಜೆಗಳೇ! ಸೂರ್ಯನು ಸಿಂಹರಾಶಿಯನ್ನು ಪ್ರವೇಶಿಸಿ ಅಂತರಿಕ್ಷವು ಮೋಡಗಳಿಂದಾವೃತವಾಗಿರುವ ಸಮಯದಲ್ಲಿ (ಭಾದ್ರಪದ) ಶ್ರಾವಣಮಾಸದ ಕೃಷ್ಣಪಕ್ಷದ ಅಷ್ಟಮಿಯದಿನ ಚಂದ್ರನು ವೃಷಭರಾಶಿ ಪ್ರವೇಶಿಸಿ ರೋಹಿಣೀ ನಕ್ಷತ್ರಕ್ಕೆ ಬಂದಾಗ ಅರ್ಧರಾತ್ರಿಯ ಹೊತ್ತಿನಲ್ಲಿ ವಸುದೇವನ ಪತ್ನಿ ದೇವಕಿಯ ಗರ್ಭದಲ್ಲಿ ಸ್ವಯಂ ನಾನು ಜನಿಸಿದೆನು.'' ಈರೀತಿ ಲೋಕದಲ್ಲಿ ಜನ್ಮಾಷ್ಟಮೀ ವ್ರತವನ್ನು ಶ್ರೀ ಕೃಷ್ಣನು ವ್ಯಕ್ತಪಡಿಸಿದನು.

ಭಗವತ್ಪಾರ್ಶ್ವತೋ ರಾಜನ್ಬಹುರೂಪಂ ಮಹೋತ್ಸವಂ ।
ಮಥುರಾಯಾಸ್ತತಃ ಪಶ್ಚಾಲ್ಲೋಕೇ ಖ್ಯಾತಿಂ ಗಮಿಷ್ಯತಿ ।
ಶಾಂತಿರಸ್ತು ಸುಖಂ ಚಾಸ್ತು ಲೋಕಾಃ ಸಂತು ನಿರಾಮಯಾಃ ॥ ೧೬ ॥

॥ ಯುಧಿಷ್ಠಿರ ಉವಾಚ ॥

ತತ್ಕೀದೃಶಂ ವ್ರತಂ ದೇವ ಲೋಕೈಃ ಸರ್ವೈರನುಷ್ಠಿತಂ ।
ಜನ್ಮಾಷ್ಟಮೀವ್ರತಂ ನಾಮ ಪವಿತ್ರಂ ಪುರುಷೋತ್ತಮ ॥ ೧೭ ॥

ಯೇನ ತ್ವಂ ತುಷ್ಟಿಮಾಯಾಸಿ ಲೋಕಾನಾಂ ಪ್ರಭುರವ್ಯಯಃ ।
ಏತನ್ಮೇ ಭಗವನ್ಬ್ರೂಹಿ ಪ್ರಸಾದಾನ್ಮಧುಸೂದನ ॥ ೧೮ ॥

॥ ಶ್ರೀ ಕೃಷ್ಣ ಉವಾಚ ॥

ಪಾರ್ಥ ತದ್ದಿವಸೇ ಪ್ರಾಪ್ತೇ ದಂತಧಾವನಪೂರ್ವಕಂ ।
ಉಪವಾಸಸ್ಯ ನಿಯಮಂ ಗೃಹ್ಣೀಯಾದ್ಭಕ್ತಿಭಾವಿತಃ ॥ ೧೯ ॥

---

೧೬. ಎಲೈ ರಾಜನೇ ! ಅನಂತರ ಮಧುರಾ ಪಟ್ಟಣದಲ್ಲಿ ಶ್ರೀ ಭಗವಂತನ ಸನ್ನಿಧಿಯಲ್ಲೇ ಈ ವ್ರತಮಹೋತ್ಸವವನ್ನು ಬಹು ವಿಧವಾಗಿ ಆಚರಿಸಿ ಪ್ರಸಿದ್ಧಿಗೆ ತಂದರು. ಆಮೇಲೆ ಭೂಮಂಡಲದಲ್ಲಿ ಎಲ್ಲಾ ದೇಶಗಳಲ್ಲೂ ಈ ಜನ್ಮಾಷ್ಟಮೀ ವ್ರತವು ಪ್ರಸಿದ್ಧಿ ಹೊಂದುವುದು. ಇದರಿಂದ ಲೋಕಕ್ಕೆ ಶಾಂತಿಯೂ ಸುಖವೂ ರೋಗ ನಿವಾರಣೆಯೂ ಆಗಲಿ ಎಂದನು.

೧೭. ಯುಧಿಷ್ಠಿರನು ಹೇಳುತ್ತಾನೆ—ಅಯ್ಯಾ ಪುರುಷೋತ್ತಮನೇ ! ಪರಮಪಾವನವಾದ ಜನ್ಮಾಷ್ಟಮೀ ಎಂಬ ನಾಮಧೇಯವುಳ್ಳ ಈ ವ್ರತವು ಎಂತಹುದು. ಎಲ್ಲಾ ಜನರೂ ಆಚರಿಸಬಹುದಾದ ಕ್ರಮಯಾವುದು ?

೧೮. ಎಲೈ ಮಧುಸೂಧನನೇ ! ಲೋಕೇಶ್ವರನೂ ನಿರ್ವಿಕಾರನೂ ಆದ ನೀನು ಯಾವ ಜನ್ಮಾಷ್ಟಮೀ ವ್ರತಾಚರಣೆಯಿಂದ ಸಂತುಷ್ಟನಾಗುವೆಯೋ ಅಂತಹ ಈ ವ್ರತವನ್ನು ನನ್ನಲ್ಲಿ ಅನುಗ್ರಹಿಸಿ ದಯೆಯಿಟ್ಟು ಹೇಳು ಎಂದನು.

೧೯. ಶ್ರೀ ಕೃಷ್ಣಪರಮಾತ್ಮನು ಹೇಳುತ್ತಾನೆ—ಎಲೈ ಧರ್ಮರಾಜನೇ ! ಆ ಕೃಷ್ಣ ಜನ್ಮಾಷ್ಟಮಿ ಪ್ರಾಪ್ತವಾದಾಗ ಬೆಳಿಗ್ಗೆ ದಂತಧಾವನವನ್ನು ಮಾಡಿ ಭಕ್ತಿ ಪೂರ್ವಕವಾಗಿ ಉಪವಾಸ ನಿಯಮವನ್ನು ಸ್ವೀಕರಿಸಬೇಕು.

**ಏಕೇನೈವೋಪವಾಸೇನ ಕೃತೇನ ಕುರುನಂದನ ।**
**ಸರ್ವಜನ್ಮಕೃತೈಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ　॥ ೨೦ ॥**

**ಉಪಾವೃತ್ತಸ್ಯ ಪಾಪೇಭ್ಯೋ ಯಸ್ತು ವಾಸೋ ಗುಣೈಸ್ಸಹ ।**
**ಉಪವಾಸಃ ಸ ವಿಜ್ಞೇಯಃ ಸರ್ವಭೋಗವಿವರ್ಜಿತಃ　॥ ೨೧ ॥**

**ತತಃ ಸ್ನಾತ್ವಾ ಚ ಮಧ್ಯಾಹ್ನೇ ನದ್ಯಾದೌ ವಿಮಲೇ ಜಲೇ ।**
**ದೇವ್ಯಾಃ ಸುಶೋಭನಂ ಕುರ್ಯಾದ್ದೇವಕ್ಯಾಃ ಸೂತಿಕಾಗೃಹಂ　॥ ೨೨ ॥**

**ಪದ್ಮರಾಗೈಃ ಪತ್ರನೇತ್ರೈರ್ಮಂಡಿತಂ ಚರ್ಚಿತಂ ಶುಭೈಃ ।**
**ರಮ್ಯಂ ತು ವನಮಾಲಾಭೀ ರಕ್ಷಾಮಣಿವಿಭೂಷಿತಂ　॥ ೨೩ ॥**

---

೨೦. ಎಲೈ ಕುರುವಂಶಜನೇ! ಆ ಕೃಷ್ಣನ ಜನ್ಮದಿನದಲ್ಲಿ ಆಚರಿಸಿದ ಒಂದು ಉಪವಾಸದಿಂದಲೇ ಪುರುಷನು ಸರ್ವಜನ್ಮಗಳಲ್ಲೂ ಮಾಡಿದ ಪಾಪ ದೋಷಾದಿಗಳಿಂದ ನಿಜವಾಗಿಯೂ ಮುಕ್ತನಾಗುತ್ತಾನೆ.

೨೧. ಉಪ, ವಾಸ ಎಂಬ ಈ ಎರಡು ಪದಗಳು ಸೇರಿ ಆಗಿರುವ ಉಪವಾಸ ಶಬ್ದಕ್ಕೆ ಉಪ ಎಂದರೆ ಪಾಪಗಳಿಂದ ಹಿಂದಿರುಗಿ (ಉಪಾವೃತ್ತನಾಗಿ) ವಾಸ ಎಂಪರೆ ಗುಣಸಹಿತವಾಗಿರೋಣವು ಎಂದು ಅವಯವಾರ್ಥ ಆಗುವುದರಿಂದ ಉಪವಾಸ ಶಬ್ದಕ್ಕೆ ಪಾಪನಿವೃತ್ತಿಪೂರ್ವಕ ಗುಣಸಹವಾಸವೆಂದರ್ಥ. ಆ ಪಾಪನಿವೃತ್ತಿಯು ಸರ್ವಭೋಗ್ಯ ವಸ್ತುಪರಿತ್ಯಾಗದಿಂದ ಸಂಭವಿಸುವ ಕಾರಣ, ಉಪವಾಸೀ ಪುರುಷನು ಸರ್ವಭೋಗ ಪರಿತ್ಯಾಗಿಯಾಗಿರಬೇಕು.

೨೨. ಅನಂತರ ಆದಿನ ಮಧ್ಯಾಹ್ನದಲ್ಲಿ ನದೀ ಮೊದಲಾದ ಶುದ್ಧಜಲದಲ್ಲಿ ಸ್ನಾನಮಾಡಿ, ದೇವಕೀದೇವಿಗೆ ಹೆರಿಗೆಯ ಮನೆಯನ್ನು ಶುಭಕರವಾಗಿ ನಿರ್ಮಿಸಬೇಕು.

೨೩. ಆ ಸೂತಿಕಾಗೃಹವು ಪದ್ಮರಾಗಗಳಿಂದಲೂ ನಾನಾಬಗೆಯ ರತ್ನವಾಹನಗಳು ಸೂಕ್ಷ್ಮವಸ್ತ್ರದ ಮೇಲ್ಕಟ್ಟು ಇವುಗಳಿಂದ ಶೋಭಿತವಾಗಿಯೂ ಸುವಾಸನೆಯ ಗಂಧಾದಿಗಳಿಂದ ಲಿಪ್ತವಾಗಿಯೂ ವನಮಾಲೆಗಳಿಂದ ಅಲಂಕೃತವಾಗಿಯೂ ರಕ್ಷಾಮಣಿಗಳಿಂದ ಭೂಷಿತವಾಗಿಯೂ ಇರಬೇಕು.

ಸರ್ವಂ ಗೋಕುಲವತ್ಕಾರ್ಯಂ ಗೋಪೀಜನಸಮಾಕುಲಂ ।
ಘಂಟಾಮರ್ದಲಸಂಗೀತಮಾಂಗಲ್ಯಕಲಶಾನ್ವಿತಂ ॥ ೨೯ ॥

ಯುವಾರ್ಥಂ ಸ್ವಸ್ತಿಕಾ ಕುಡ್ಯೈಃ ಶಂಖವಾದಿತ್ರಸಂಕುಲಂ ।
ಬದ್ಧಾಸುರಾಲೋಹಖಡ್ಗೈಃ ಪ್ರಿಯಚ್ಛಾಗಸಮನ್ವಿತಂ ॥ ೨೩ ॥

ಧಾನ್ಯೇ ವಿನ್ಯಸ್ಯ ಮುಸಲಂ ರಕ್ಷಿತಂ ರಕ್ಷಪಾಲಕೈಃ ।
ಷಷ್ಠ್ಯಾ ದೇವ್ಯಾ ಚ ಸಂಪೂರ್ಣೈರ್ನೈರ್ವೇದ್ಯೈರ್ವಿವಿಧೈಃ ಕೃತೈಃ ॥೨೬॥

ಏವಮಾದಿ ಯಥಾಶೇಷಂ ಕರ್ತವ್ಯಂ ಸೂತಿಕಾಗೃಹಂ ।
ಏತನ್ಮಧ್ಯೇ ಪ್ರತಿಷ್ಠಾಪ್ಯಾ ಸಾ ಚಾಪ್ಯಷ್ಟವಿಧಾ ಸ್ಮೃತಾ ॥ ೨೭ ॥

ಕಾಂಚನೀ ರಾಜತೀ ತಾಮ್ರೀ ಪೈತ್ತಲೀ ಮೃನ್ಮಯೀ ತಥಾ ।
ದಾರ್ವೀ ಮಣಿಮಯೀ ಚೈವ ವರ್ಣಿಕಾ ಲಿಖಿತಾಥ ವಾ ॥ ೨೮ ॥

---

೨೪. ಮತ್ತು ಆ ಸೂತಿಕಾಗೃಹವನ್ನು ಎಲ್ಲಾ ವಿಧದಲ್ಲೂ ಗೋಕುಲ ಸದೃಶವಾಗಿ ಮಾಡಬೇಕು. ಗೋಪಿಕಾಸ್ತ್ರೀವಿಗ್ರಹಗಳು ಘಂಟೆ, ಮದ್ದಳೆ, ಸಂಗೀತ, ಮಂಗಲಕಲಶ ಇವುಗಳೂ ಆ ಸೂತಿಕಾಗೃಹದಲ್ಲಿರಬೇಕು.

೨೫. ಮತ್ತು ಆ ಮನೆಯ ಗೋಡೆಗಳ ಮೇಲೆ ಸ್ವಸ್ತಿಕವನ್ನು ಬರೆಯ ಬೇಕು. ಶಂಖ ಭೇರ್ಯಾದಿ ವಾದ್ಯಗಳಿಂದ ಕೂಡಿರಬೇಕು. ಲೋಹಮಯ ಖಡ್ಗಗಳನ್ನು ತೂಗಹಾಕಿರಬೇಕು. ದೇವಕಿಗೆ ಪ್ರಿಯವಾದ ಆಡು ಅಲ್ಲಿರಬೇಕು.

೨೬. ಧಾನ್ಯದ ಮೇಲೆ ಒನಕೆಯನ್ನಿಟ್ಟು ರಕ್ಷಕರಿಂದ ಅದು ರಕ್ಷಿಸಲ್ಪಡು ತ್ತಿರಬೇಕು. ಮತ್ತು ಆ ಸೂತಿಕಾಗೃಹದಲ್ಲಿ ಆ ದೇವಕೀದೇವಿಗೆ ವಿವಿಧವಾದ ಅರವತ್ತು ಬಗೆಯ ನೈವೇದ್ಯ ವಸ್ತುಗಳನ್ನು ತಯಾರಿಸಿ ಇಡಬೇಕು.

೨೭. ಇದೇ ರೀತಿಯಾಗಿ ಸೂತಿಕಾಗೃಹ ಉಳಿದ ಇತರ ಸಂವಿಧಾನವನ್ನು ಸಮಗ್ರವಾಗಿ ಮಾಡಿ, ಆ ಗೃಹದ ಮಧ್ಯದಲ್ಲಿ ದೇವಕೀ ವಿಗ್ರಹವನ್ನು ಸ್ಥಾಪಿಸ ಬೇಕು. ಆ ವಿಗ್ರಹವು ಎಂಟು ಬಗೆಯದಾಗಿರಬಹುದೆಂದು ಉಕ್ತವಾಗಿದೆ.

೨೮. ಭಂಗಾರ, ಬೆಳ್ಳಿ, ತಾಮ್ರ, ಹಿತ್ತಾಳೆ, ಮಣ್ಣು, ಮರ, ಮಣಿ ಇವು ಗಳಲ್ಲಿ ಯಾವುದಾದರೂ ಒಂದರಿಂದ ರಚಿತವಾದುದೋ, ಅಥವಾ ದೇವಕಿಯ ಆಕಾರವಾಗಿ ಕೈಯಿಂದ ಬಣ್ಣದಲ್ಲಿ ಬರೆಯಲ್ಪಟ್ಟದ್ದೋ ಆಗಿರಬೇಕು. ಹೀಗೆ ಆ ವಿಗ್ರಹವನ್ನು ಎಂಟು ಪ್ರಕಾರವಾಗಿ ಮಾಡಬಹುದು.

ಸರ್ವಲಕ್ಷಣಸಂಪನ್ನಾ ಪರ್ಯಂಕೇಚಾರ್ಧಸುಪ್ತಿಕಾ ।
ಪ್ರತಪ್ತಕಾಂಚನಾಭಾಸಾ ಮಯಾ ಸಹ ತಪಸ್ವಿನೀ || ೨೯ ||

ಪ್ರಸ್ತುತಾ ಚ ಪ್ರಸೂತಾ ಚ ತತ್ಕ್ಷಣಾಚ್ಚ ಪ್ರಹರ್ಷಿತಾ ।
ಮಾಂ ಚಾಪಿ ಬಾಲಕಂ ಸುಪ್ತಂ ಪರ್ಯಂಕೇ ಸ್ತನಪಾಯಿನಂ || ೩೦ ||

ಶ್ರೀವತ್ಸವಕ್ಷಸಂ ಪೂರ್ಣಂ ನೀಲೋತ್ಪಲದಲಚ್ಛವಿಂ ।
ಯಶೋದಾ ಚಾಪಿ ತತ್ರೈವ ಪ್ರಸೂತಾ ವರಕನ್ಯಕಾಂ || ೩೧ ||

ತತ್ರ ದೇವಗೃಹಂ ನಾಗಾ ಯಕ್ಷವಿದ್ಯಾಧರಾ ನರಾಃ ।
ಪ್ರಣತಾಃ ಪುಷ್ಪಮಾಲಾಗ್ರವ್ಯಗ್ರಹಸ್ತಾಃ ಸುರಾಸುರಾಃ || ೩೨ ||

---

೨೯. ಮತ್ತು ಆ ದೇವಕಿಯ ವಿಗ್ರಹವು ಸರ್ವಲಕ್ಷಣಸಂಪನ್ನವಾಗಿಯೂ, ಮಂಚದಲ್ಲಿ ಶರೀರದ ಅರ್ಧಭಾಗ ಮಲಗಿರುವಂತೆಯೂ, ಪುಟಪಾಕಮಾಡಿದ ಭಂಗಾರದಂತೆ ಮೈಬಣ್ಣವುಳ್ಳದಾದ ನನ್ನ ಪ್ರತಿಕೃತಿಯಿಂದ ಕೂಡಿರುವುದಾಗಿಯೂ ಶಾಂತರೂಪವಾಗಿಯೂ ಇರಬೇಕು.

೩೦. ಮತ್ತು ಆ ದೇವಕಿಯ ಪ್ರಸವ ಪ್ರಾರಂಭದ ಸ್ವರೂಪವನ್ನೂ ಪ್ರಸವ ಆದ ಮೇಲಿನ ಸ್ಥಿತಿಯನ್ನೂ ತತ್ಕ್ಷಣದಲ್ಲೇ ಪುತ್ರ ಮುಖದರ್ಶನದಿಂದ ಸಂತೋಷ ಹೊಂದಿದ ಸ್ವರೂಪವನ್ನೂ ಆ ವಿಗ್ರಹಗಳಲ್ಲಿ ಚಿತ್ರಿಸಿರಬೇಕು. ಆ ದೇವಕಿಯ ಮಂಚದಲ್ಲಿ ಶಯನಮಾಡಿಕೊಂಡೇ ಅವಳ ಸ್ತನ್ಯಪಾನಮಾಡುತ್ತಿರುವ ಬಾಲರೂಪದ ನನ್ನ ವಿಗ್ರಹವನ್ನೂ ಇಡಬೇಕು.

೩೧. ಮತ್ತು ನನ್ನ ವಿಗ್ರಹವು ಶ್ರೀವತ್ಸವೆಂಬ ಮಣಿಯಿಂದ ಭೂಷಿತವಾದ ಎದೆಯುಳ್ಳದ್ದಾಗಿಯೂ, ಕನ್ನೈದಿಲೆಯ ದಳದಂತೆ ಕಪ್ಪಾದ ಮೈಬಣ್ಣವುಳ್ಳದ್ದಾಗಿಯೂ, ಇರಬೇಕು. ಮತ್ತು ಯೋಗಮಾಯೆ ಎಂಬ ಕನ್ನಿಕೆಯನ್ನು ಪ್ರಸುವಿಸಿರುವ ಯಶೋದೆಯ ವಿಗ್ರಹವನ್ನೂ ಈ ಸೂತಿಕಾಗೃಹದಲ್ಲೇ ಇರಿಸಿ ಅಲಂಕರಿಸಬೇಕು.

೩೨. ಈ ದೇವಗೃಹದಲ್ಲಿ ಸರ್ಪಗಳು, ಯಕ್ಷರು, ವಿದ್ಯಾಧರರು, ದೇವಾಸುರರು ಇವರೆಲ್ಲಾ ಪುಷ್ಪಮಾಲಿಕೆಯನ್ನು ಕೈಯಲ್ಲಿ ಹಿಡಿದುಕೊಂಡು ನಮಸ್ಕರಿಸುತ್ತಿರುವಂತೆ ಚಿತ್ರಿಸಿರಬೇಕು.

ಸಂಹರಂತ ಇವಾಕಾಶೇ ಪ್ರಾಕಾರೈರುದಿತೋದಿತೈಃ ।
ವಸುದೇವೋಽಪಿ ತತ್ರೈವ ಖಡ್ಗಚರ್ಮಧರಃ ಸ್ಥಿತಃ ॥ ೩೩ ॥

ಕಶ್ಯಪೋ ವಸುದೇವೋಽಯಮದಿತಿಶ್ಚಾಪಿ ದೇವಕೀ ।
ಬಲಭದ್ರಃ ಶೇಷನಾಗೋ ಯಶೋದಾದಿತ್ಯಜಾಯತ ॥ ೩೪ ॥

ನಂದಃ ಪ್ರಜಾಪತಿರ್ದಕ್ಷೋ ಗರ್ಗಶ್ಚಾಪಿ ಚತುರ್ಮುಖಃ ।
ಏಷೋಽವತಾರೋ ರಾಜೇಂದ್ರ ಕಂಸೋಽಯಂ ಕಾಲನೇಮಿಜಃ ॥೩೫॥

ತತ್ರ ಕಂಸನಿಯುಕ್ತಾ ಯೇ ದಾನವಾ ವಿವಿಧಾಯುಧಾಃ ।
ತೇ ಚ ಪ್ರಾಹಾರಿಕಾಃ ಸರ್ವೇ ಸುಪ್ತಾ ನಿದ್ರಾವಿಮೋಹಿತಾಃ ॥ ೩೬ ॥

---

೩೩. ಮತ್ತು ಅಂತರಿಕ್ಷದಲ್ಲಿ ದೇವತೆಗಳೂ ದಾನವರೂ ಇವರುಗಳು ಸಂಚರಿಸುತ್ತಾ ಪ್ರಣಾಮ, ಪುಷ್ಪಮಾಲಿಕಾದಿಸಮರ್ಪಣ ಸೇವೆಯನ್ನೂ ಕಾಲೋಚಿತವಾದ ಇತರ ಸೇವೆಗಳನ್ನೂ ಮಾಡುತ್ತಿರುವ ಹಾಗೆ ಚಿತ್ರಿಸಬೇಕು. ಆ ಗೃಹದಲ್ಲೇ ಕತ್ತಿ, ಗುರಾಣಿ, ಈಟಿಗಳನ್ನು ಧರಿಸಿ ಇರುವ ವಸುದೇವನ ವಿಗ್ರಹವನ್ನೂ ಇಟ್ಟಿರಬೇಕು.

೩೪. ಎಲೈ ರಾಜೇಂದ್ರನೇ! ಕಶ್ಯಪನು ಈ ವಸುದೇವರೂಪದಿಂದ ಈಗ ಅವತರಿಸಿರುವನು. ಅತಿಯು ದೇವಕೀ ರೂಪದಿಂದ ಅವತಾರ ಮಾಡಿರುತ್ತಾಳೆ. ಬಲರಾಮನು ಆದಿಶೇಷನ ಅವತಾರವು. ದಿತಿಯು ಯಶೋದೆಯಾಗಿ ಅವತರಿಸಿದ್ದಾಳೆ.

೩೫. ನಂದಗೋಪನು ದಕ್ಷ ಪ್ರಜಾಪತಿಯ ಅವತಾರವು. ಗರ್ಗನು ಚತುರ್ಮುಖ ಬ್ರಹ್ಮನ ಅವತಾರವು. ಈ ಪ್ರಕಾರವಾಗಿ ಇವರೆಲ್ಲರೂ ಅವತಾರ ಪುರುಷರು. ಈ ಕಂಸನು ಕಾಲನೇಮಿ ಎಂಬ ಅಸುರನ ಅಂಶದಿಂದ ಜನಿಸಿದವನು.

೩೬. ಹೀಗೆ ದೇವಪ್ರತಿಷ್ಠಿತವಾದ ಆ ಸೂತಿಕಾಗೃಹದಲ್ಲಿ ಕಂಸನ ಅಪ್ಪಣೆಯ ಪ್ರಕಾರ ವಿವಿಧ ಆಯುಧ, ಶಸ್ತ್ರ ಇವುಗಳನ್ನು ಹಿಡಿದು ಸರದಿಯ ಪ್ರಕಾರ ಯಾಮಯಾಮಗಳಲ್ಲೂ ಕಾವಲುಕಾಯುತ್ತಿರುವ,

ಗೋಧೇನುಕುಂಜರಾಶ್ಚಾಸ್ಯ ದಾನವಾಃ ಶಸ್ತ್ರಪಾಣಯಃ ।
ನೃತ್ಯಂತ್ಯಪ್ಸರಸೋ ಲೈಖ್ಯಾ ಗಂಧರ್ವಾ ಗೀತತತ್ಪರಾಃ ॥ ೩೭ ॥

ಲೇಖನೀಯಶ್ಚ ತತ್ರೈವ ಕಾಲೀಯೋ ಯಮುನಾಹ್ರದೇ ।
ರಮ್ಯಮೇವಂ ವಿಧಿಂ ಕೃತ್ವಾ ದೇವಕೀಂ ನವಸೂತಿಕಾಂ ॥ ೩೮ ॥

ತಾಂ ಪಾರ್ಥ ಪೂಜಯೇದ್ಭಕ್ತ್ಯಾ ಗಂಧಪುಷ್ಪಾಕ್ಷತೈಃ ಫಲೈಃ ।
ಕೂಷ್ಮಾಂಡೈರ್ನಾಲಿಕೇರೈಶ್ಚ ಖರ್ಜೂರೈರ್ದಾಡಿಮೀಫಲೈಃ ॥ ೩೯ ॥

ಬೀಜಪೂರೈಃ ಸ್ಪೂಗಫಲೈರ್ಲಕುಚೈಸ್ತ್ರಪುಸೈಸ್ತಥಾ ।
ಕಾಲದೇಶೋದ್ಭವೈರ್ಮೃಷ್ಟೈಃ ಪುಷ್ಪೈಶ್ಚಾಪಿ ಯುಧಿಷ್ಠಿರ ॥ ೪೦ ॥

---

೩೭. ವೃಷಭ, ಧೇನುಕ, ಕುಂಜರ ಇತ್ಯಾದಿ ಎಲ್ಲಾ ದಾನವರೂ ನಿದ್ರಾ ಪರವಶರಾಗಿ ಶಯನಮಾಡಿರುವಂತೆ ಚಿತ್ರ ಬರೆಯಬೇಕು. ಮತ್ತು ಅಪ್ಸರ ಸ್ತ್ರೀಯರು ನರ್ತನಮಾಡುವಂತೆಯೂ,ಗಂಧರ್ವರು ಗಾನತತ್ಪರರಾಗಿರುವಂತೆಯೂ ಚಿತ್ರಿಸಬೇಕು.

೩೮. ಎಲೈ ಕುಂತೀಪುತ್ರನೇ ! ಮತ್ತು ಅದೇ ಗೃಹದಲ್ಲಿ ಯಮುನೆಯ ಹ್ರದವನ್ನು (ಮಡು) ಚಿತ್ರಿಸಿ, ಅದರಲ್ಲಿ ಕಾಲಿಯ ಎಂಬ ಸರ್ಪದ ಆಕಾರವನ್ನು ಬರೆಯಬೇಕು. ಈರೀತಿ ಸೂತಿಕಾಗೃಹವನ್ನು ರಮ್ಯವಾಗಿ ಅಲಂಕರಿಸಬೇಕು.

೩೯. ಅದರಲ್ಲಿ ದೇವಕಿಯ ವಿಗ್ರಹವನ್ನು ಆಗತಾನೇ (ಹೊಸವಾಗಿ) ಪ್ರಸವಿಸಿದಂತೆ ಭಾವಿಸಿ ಸ್ಥಾಪನೆಮಾಡಿ, ಭಕ್ತಿಪೂರ್ವಕವಾಗಿ ಗಂಧ, ಪುಷ್ಪ, ಅಕ್ಷತ, ಫಲ, ಕೂಷ್ಮಾಂಡ, ತೆಂಗಿನಕಾಯಿ, ಖರ್ಜೂರ, ದಾಳಿಂಬ ಇತ್ಯಾದಿ ಗಳಿಂದ ಪೂಜಿಸಬೇಕು.

೪೦. ಅಯ್ಯಾ ಯುಧಿಷ್ಠಿರನೇ ! ಮತ್ತು ಮಾದಲಫಲ, ಅಡಿಕೆ, ನಿಂಬೆ ಫಲ ಮತ್ತು ತತ್ಕಾಲದೇಶಗಳಲ್ಲಿ ಸಿಗುವ ಇತರ ರಸವತ್ತಾದ ಸ್ವಾದು ಫಲಗಳು ಇವುಗಳನ್ನು ಸಮರ್ಪಿಸಿ ಇತರ ನಾನಾ ಪುಷ್ಪಗಳಿಂದ ಪೂಜಿಸಬೇಕು.

ಧ್ಯಾತ್ವಾವತಾರಂ ಪ್ರಾಗುಕ್ತಂ ಮಂತ್ರೇಣಾನೇನ ಪೂಜಯೇತ್ ॥ ೪೧ ॥

ಗಾಯದ್ಭಿಃ ಕಿನ್ನರಾದ್ಯೈಃ ಸತತಪರಿವೃತಾ ವೇಣುವೀಣಾನಿನಾದೈಃ ।
ಭೃಂಗಾರಾದರ್ಶಕುಂಭಪ್ರಮರಕೃತಕರೈಃ ಸೇವ್ಯಮಾನಾ ಮುನೀಂದ್ರೈಃ
ಪರ್ಯಂಕೇ ಸ್ವಾಸ್ತೃತೇ ಯಾ ಮುದಿತತರಮನಾಃ ಪುತ್ರಿಣೀ ಸಮ್ಯಗಾಸ್ತೇ
ಸಾ ದೇವೀ ದೇವಮಾತಾ ಜಯತಿ ಸುವದನಾ ದೇವಕೀ ಕಾಂತರೂಪಾ॥

ಪಾದಾವಭ್ಯಂಜಯಂತೀ ಶ್ರೀರ್ದೇವಕ್ಯಾಶ್ಚರಣಾಂತಿಕೇ ।
ನಿಷಣ್ಣಾ ಪಂಕಜೇ ಪೂಜ್ಯಾ ನಮೋ ದೇವ್ಯೈ ಚ ಮಂತ್ರತಃ ॥ ೪೩ ॥

---

೪೧. ಮತ್ತು ಹಿಂದೆ ಹೇಳಿದ ಕಶ್ಯಪಾದಿಗಳು ವಸುದೇವಾದಿ ರೂಪದಲ್ಲಿ ಅವತಾರಮಾಡಿರುವ ಈ ಸ್ವರೂಪವನ್ನು ಧ್ಯಾನಮಾಡಿ ಮುಂದೆ ಹೇಳುವ ಮಂತ್ರದಿಂದ ಪೂಜಿಸಬೇಕು.

೪೨. ಗಾಯದ್ಭಿಃ ಕಿನ್ನರಾದ್ಯೈಃ ಸತತ ಪರಿವೃತಾ ವೇಣು ವೀಣಾನಿನ್ಯಾದೈಃ ।
ಭೃಂಗಾರಾದರ್ಶಕುಂಭ ಪ್ರಮರ ಕೃತಕರೈಃ ಸೇವ್ಯಮಾನಾ ಮುನೀಂದ್ರೈಃ
ಪರ್ಯಂಕೇ ಸ್ವಾಸ್ತೃತೇಯಾ ಮುದಿತತರಮನಾಃ ಪುತ್ರಿಣೀ ಸಮ್ಯಗಾಸ್ತೇ ।
ಸಾದೇವೀ ದೇವಮಾತಾ ಜಯತಿ ಸುವದನಾ ದೇವಕೀ ಕಾಂತರೂಪಾ ॥

ಈ ಮಂತ್ರಪೂರ್ವಕವಾಗಿ ಭಕ್ತಿಯಿಂದ ಪೂಜಿಸಬೇಕು.

(ಕೊಳಲು, ವೀಣೆ, ಮೊದಲಾದ ವಾದ್ಯ ಶಬ್ದಗಳೊಡನೆ ಗಾನಮಾಡುವ ಕಿನ್ನರಾದಿ ದೇವಯೋನಿವಿಶೇಷದಿಂದ ಯಾವಾಗಲೂ ಪರಿವೃತಳಾಗಿಯೂ, ಭಂಗಾರದ ಬಟ್ಟಲು, ಕನ್ನಡಿ, ಕಲಶ ಇತ್ಯಾದಿಗಳನ್ನು ಕೈಯಲ್ಲಿ ಹಿಡಿದುಕೊಂಡ ಋಷಿಶ್ರೇಷ್ಠರಿಂದ ಸೇವಿಸಲ್ಪಡುವವಳಾಗಿಯೂ, ಚೆನ್ನಾಗಿ ಹಾಸಿದ ಹಾಸಿಗೆ ಸಮೇತವಾದ ಮಂಚದ ಮೇಲೆ ಪುತ್ರಸಮೇತಳಾಗಿ ಅತಿಸಂತುಷ್ಟವಾದ ಮನಸ್ಸಿನಿಂದ ಶೋಭಿಸುವವಳಾಗಿಯೂ, ದೇವಮಾತೆಯಾಗಿಯೂ, ಸುಂದರಮುಖಿಯಾಗಿಯೂ, ಮನೋಹರವಾದ ರೂಪವುಳ್ಳವಳಾಗಿಯೂ ಇರುವ ಆ ದೇವಕೀ ದೇವಿಯು ಸರ್ವೋತ್ಕೃಷ್ಟಳಾಗಿ ಪೂಜ್ಯಳಾಗಿದ್ದಾಳೆ, ಇದು ಈ ಮಂತ್ರಾರ್ಥ).

೪೩. ಮತ್ತು ಕಮಲ ನಿವಾಸಿನಿಯಾದ ಆ ಶ್ರೀ ದೇವಿಯು ದೇವಕಿಯ ಅಡಿದಾವರೆಗಳಿಗೆ ಅಭ್ಯಂಗನ ಮಾಡಿಸುತ್ತಿರುವ ಹಾಗೆ ಭಾವಿಸಿ ಪೂಜಿಸಿ ವಂದಿಸಿದ ಮೇಲೆ ಈ ಮುಂದೆ ಹೇಳುವ ನಾಮಮಂತ್ರಗಳಿಂದ ಪೂಜಿಸಬೇಕು.

**ಓಂ ದೇವಕ್ಯೈ ನಮಃ । ಓಂ ವಸುದೇವಾಯನಮಃ ।**
**ಓಂ ಬಲಭದ್ರಾಯನಮಃ । ಓಂ ಶ್ರೀಕೃಷ್ಣಾಯನಮಃ ।**
**ಓಂ ಸುಭದ್ರಾಯೈನಮಃ । ಓಂ ನಂದಾಯನಮಃ ।**
**ಓಂ ಯಶೋದಾಯೈನಮಃ ।**

**ಏವಮಾದೀನಿ ನಾಮಾನಿ ಸಮುಚ್ಚಾರ್ಯ ಪೃಥಕ್ಪೃಥಕ್ ।**
**ಪೂಜಯೇಯು ರ್ದ್ವಿಜಾಃ ಸರ್ವೇ ಸ್ತ್ರೀಶೂದ್ರಾಣಾಮಮಂತ್ರಕಂ ॥೪೪॥**

**ವಿಧ್ಯಂತರಮಪೀಚ್ಛಂತಿ ಕೇಚಿದತ್ರ ದ್ವಿಜೋತ್ತಮಾಃ ।**
**ಚಂದ್ರೋದಯೇ ಶಶಾಂಕಾಯ ಅರ್ಘ್ಯಂ ದದ್ಯಾದ್ಧರಿಂ ಸ್ಮರೇತ್॥೪೫॥**

**ಅನಘಂ ವಾಮನಂ ಶೌರಿಂ ವೈಕುಂಠಂ ಪುರುಷೋತ್ತಮಂ ।**
**ವಾಸುದೇವಂ ಹೃಷೀಕೇಶಂ ಮಾಧವಂ ಮಧುಸೂದನಂ ॥ ೪೬ ॥**

---

ಓಂ ದೇವಕ್ಯೈ ನಮಃ, ಓಂ ವಸುದೇವಾಯ ನಮಃ, ಓಂ ಬಲಭದ್ರಾಯ ನಮಃ, ಓಂ ಕೃಷ್ಣಾಯ ನಮಃ, ಓಂ ಸುಭದ್ರಾಯೈ ನಮಃ, ಓಂ ನಂದಾಯ ನಮಃ, ಓಂ ಯಶೋದಾಯೈ ನಮಃ ಇತ್ಯಾದಿ ನಾಮಗಳಿಂದ ಪೂಜಿಸಬೇಕು.

೪೪. ಬ್ರಾಹ್ಮಣಾದಿ ತ್ರೈವರ್ಣೀಕರೂ ಈ ರೀತಿಯಾದ ನಾಮಮಂತ್ರಗಳನ್ನು ಬೇರೆ ಬೇರೆಯಾಗಿ ಹೇಳಿ ಪೂಜಿಸಬೇಕು. ಸ್ತ್ರೀಯರು ಮತ್ತು ಶೂದ್ರರು ಮಂತ್ರವನ್ನುಚ್ಚರಿಸದೆ ಪೂಜೆ ಮಾಡಬೇಕು.

೪೫. ಕೆಲವು ಬ್ರಾಹ್ಮಣೋತ್ತಮರು ಈ ವ್ರತಾನುಷ್ಠಾನದ ವಿಧಿಯನ್ನು ಪ್ರಕಾರಾಂತರವಾಗಿ ಎಂದರೆ ಆ ಕೃಷ್ಣ ಜನ್ಮಾಷ್ಟಮೀ ದಿವಸ ಚಂದ್ರೋದಯ ಕಾಲದಲ್ಲಿ ಶ್ರೀ ಹರಿಧ್ಯಾನ ನಿರತನಾಗಿ ಚಂದ್ರನಿಗೆ ಅರ್ಘ್ಯಪ್ರದಾನ ಮಾಡಬೇಕು ಎಂದು ಹೇಳಿದ್ದಾರೆ.

೪೬. ಶ್ರೀ ಹರಿಯನ್ನು ಈ ಮುಂದೆ ಹೇಳುವ ಸ್ವರೂಪವಾಗಿ ಧ್ಯಾನಿಸಬೇಕು. ಶ್ರೀ ಹರಿಯು ಅನಘನು ಅಂದರೆ ನಿಷ್ಪಾಪನು, ವಾಮನಸ್ವರೂಪಿಯು, ಶೌರಿಯು, ವೈಕುಂಠವಾಸಿಯು, ಕ್ಷರಾಕ್ಷರ ಪುರುಷದ್ವಯದಿಂದ ಉತ್ತಮನು, ವಸುದೇವ ಪುತ್ರನು, ಅಂತರ್ಯಾಮಿ ಸ್ವರೂಪನಾಗಿ ಇಂದ್ರಿಯಗಳಿಗೆ ಪ್ರೇರಕನು, ಲಕ್ಷ್ಮೀಪತಿಯು ಮಧುನಾಮಕ ದೈತ್ಯಸಂಹಾರ ಮಾಡಿದವನು.

ನಾರಾಹಂ ಪುಂಡರೀಕಾಕ್ಷಂ ನೃಸಿಂಹಂ ಬ್ರಾಹ್ಮಣಪ್ರಿಯಂ ।
ದಾಮೋದರಂ ಪದ್ಮನಾಭಂ ಕೇಶವಂ ಗರುಡಧ್ವಜಂ ॥ ೪೭ ॥

ಗೋವಿಂದಮಚ್ಯುತಂ ಕೃಷ್ಣಮನಂತಮಪರಾಜಿತಂ ।
ಅಧೋಕ್ಷಜಂ ಜಗದ್ಬೀಜಂ ಸರ್ಗಸ್ಥಿತ್ಯಂತಕಾರಣಂ ॥ ೪೮ ॥

ಅನಾದಿನಿಧನಂ ವಿಷ್ಣುಂ ತ್ರೈಲೋಕ್ಯೇಶಂ ತ್ರಿವಿಕ್ರಮಂ ।
ನಾರಾಯಣಂ ಚತುರ್ಬಾಹುಂ ಶಂಖಚಕ್ರಗದಾಧರಂ ॥ ೪೯ ॥

ಪೀತಾಂಬರಧರಂ ನಿತ್ಯಂ ವನಮಾಲಾವಿಭೂಷಿತಂ ।
ಶ್ರೀವತ್ಸಾಂಕಂ ಜಗತ್ಸೇತುಂ ಶ್ರೀಧರಂ ಶ್ರೀಪತಿಂ ಹರಿಂ ॥ ೫೦ ॥

---

೪೭. ವರಾಹಾವತಾರವನ್ನು ಮಾಡಿದವನು, ಕಮಲದಳಗಳಂತೆ ವಿಶಾಲ ನೇತ್ರನು, ನರಸಿಂಹಾವತಾರಮಾಡಿದ ಮಹಾತ್ಮನು, ಬ್ರಾಹ್ಮಣರಲ್ಲಿ ಪ್ರೀತಿಯುಳ್ಳವನು, ದಾಮೋದರನು, ಪದ್ಮನಾಭನು, ಕೇಶವನೆಂಬ ನಾಮಧೇಯವುಳ್ಳವನು, ಗರುಡವಾಹನು.

೪೮–೪೯. ಇಂದ್ರಿಯಗಳಿಗೆ ಅಧಿಷ್ಠಾತೃವು, ಭಕ್ತಪರಿಪಾಲಕ ಎಂಬ ಬಿರುದಿನಿಂದ ಚ್ಯುತಿಯನ್ನು ಹೊಂದದವನು, ಭಕ್ತಜನರ ದುಃಖವನ್ನೂ ಪಾಪಗಳನ್ನೂ ಆಕರ್ಷಿಸುವವನು, ತ್ರಿವಿಧಪರಿಚ್ಛೇದರಹಿತನು, ಶತ್ರುಗಳಿಂದ ಸೋಲಿಲ್ಲದವನು, ಅಧೋಕ್ಷಜನು, ಜಗತ್ಕಾರಣನು, ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನು, ಉತ್ಪತ್ತಿ ವಿನಾಶರಹಿತನು, ವ್ಯಾಪಕನು, ತ್ರಿಲೋಕೇಶನು, ವಾಮನಾವತಾರಮಾಡಿ ಮೂರು ಲೋಕಗಳನ್ನೂ ಸಹ ಮೂರು ಅಡಿಯಿಂದ ಆಕ್ರಮಿಸಿದವನು, ಜೀವರಿಗೆ ನಿಯಾಮಕನಾದ ಅಂತರ್ಯಾಮಿ ಸ್ವರೂಪನು, ಶಂಖ, ಚಕ್ರ, ಗದಾ ಪದ್ಮಗಳನ್ನು ಧರಿಸಿದ ನಾಲ್ಕು ತೋಳುಗಳುಳ್ಳವನು.

೫೦. ಮತ್ತು ಪೀತಾಂಬರವನ್ನುಟ್ಟವನೂ, ಸದಾ ವನಮಾಲಾಲಂಕೃತನೂ, ಶ್ರೀವತ್ಸವನ್ನೇ ಚಿಹ್ನೆಯಾಗಿವುಳ್ಳವನೂ, ಪ್ರಾಣಿಗಳಿಗೆ ಸಂಸಾರ ಸಾಗರವನ್ನು ದಾಟಿಸಲು ಸೇತುವೆಯಂತಿರುವವನೂ, ಜಗನ್ಮಯಾಧಾರಕನೂ, ಲಕ್ಷ್ಮೀಧರನೂ, ಲಕ್ಷ್ಮೀಪತಿಯೂ, ಭಕ್ತದುರಿತನಾಶಕನೂ ಆಗಿರುತ್ತಾನೆ ಎಂದು ಧ್ಯಾನಿಸಬೇಕು.

**ಯೋಗೇಶ್ವರಾಯ ಯೋಗೇಶಭವಾಯ ಯೋಗಪತಯೇ ।**
**ಗೋವಿಂದಾಯ ನಮೋನಮಃ ।**

**(ಇತಿ ಸ್ನಾನಮಂತ್ರಃ)**

**ಯಜ್ಞೇಶ್ವರಾಯ ಯಜ್ಞಸಂಭವಾಯ ಯಜ್ಞಪತಯೇ ।**
**ಗೋವಿಂದಾಯ ನಮೋನಮಃ** ॥ ೫೧ ॥

**(ಇತ್ಯನುಲೇಪನಾಘ್ರ್ಯಾದ್ಯರ್ಚನ ಧೂಪಮಂತ್ರಃ)**

**ವಿಶ್ವಾಯ ವಿಶ್ವೇಶ್ವರಾಯ ವಿಶ್ವಸಂಭವಾಯ ವಿಶ್ವಪತಯೇ**
**ಗೋವಿಂದಾಯ ನಮೋನಮಃ** ॥ ೫೨ ॥

**(ಇತಿ ನೈವೇದ್ಯಮಂತ್ರಃ)**

---

೫೧. ಯೋಗೋಶ್ವರಾಯ ಯೋಗೇಶ ಭವಾಯ ।
ಯೋಗಪತಯೇ ಗೋವಿಂದಾಯ ನಮೋನಮಃ ॥

ಇದು ದೇವತಾಸ್ನಾನಮಂತ್ರ. (ಯೋಗೇಶ್ವರನಾಗಿಯೂ, ಯೋಗಿಗಳಲ್ಲಿ ಸನ್ನಿಹಿತನೂ, ಯೋಗಪತಿಯೂ, ಇಂದ್ರಿಯಗಳಿಗೆ ಅಧಿಷ್ಠಾತೃವೂ ಆಗಿ ಇರುವ ಶ್ರೀಹರಿಗೆ ಅನಂತವಂದನೆಗಳು ಇದು ಅಭಿಷೇಕ ಮಂತ್ರಾರ್ಥ).

ಯಜ್ಞೇಶ್ವರಾಯ ಯಜ್ಞಸಂಭವಾಯ ।
ಯಜ್ಞಪತಯೇ ಗೋವಿಂದಾಯ ನಮೋನಮಃ ॥

ಅನುಲೇಪನ ಅಘ್ರ್ಯಾದಿ ಪೂಜೆಗೂ ಧೂಪ ಸಮರ್ಪಣೆಗೂ ಈ ಮಂತ್ರವನ್ನು ಹೇಳಬೇಕು.

(ಯಜ್ಞಗಳಿಗೆ ಅಧಿಪತಿಯೂ, ಯಜ್ಞಸಂಭವನೂ, ಯಜ್ಞಭೋಕ್ತೃವೂ ಆಗಿರುವ ಶ್ರೀಹರಿಗೆ ನಮಸ್ಕಾರ ಇದು ಈ ಮಂತ್ರಾರ್ಥ).

೫೨. ವಿಶ್ವಾಯ ವಿಶ್ವೇಶ್ವರಾಯ ವಿಶ್ವಸಂಭವಾಯ ।
ವಿಶ್ವಪತಯೇ ಗೋವಿಂದಾಯ ನಮೋನಮಃ ॥

ಇದು ನೇವೇದ್ಯ ಮಂತ್ರ. (ಸರ್ವ ಪ್ರಪಂಚಾತ್ಮಕನೂ, ಸರ್ವ ಪ್ರಪಂಚೇಶ್ವರನೂ, ಪ್ರಪಂಚೋತ್ಪತ್ತಿ ಕಾರಣನೂ, ಪ್ರಪಂಚಾಧಿಪತಿಯೂ ಆಗಿರುವ ಗೋವಿಂದನಿಗೆ ನನ್ನ ನಮಸ್ಕಾರ. ಇದು ನೈವೇದ್ಯ ಮಂತ್ರಾರ್ಥ.)

ಧರ್ಮೇಶ್ವರಾಯ ಧರ್ಮಪತಯೇ ಧರ್ಮಸಂಭವಾಯ
ಗೋವಿಂದಾಯ ನಮೋನಮಃ ॥ ೫೩ ॥

(ಇತಿ ದೀಪಾಸನಮಂತ್ರಃ)

ಕ್ಷೀರೋದಾರ್ಣವಸಂಭೂತ ಅತ್ರಿನೇತ್ರಸಮುದ್ಭವ ।
ಗೃಹಾಣಾರ್ಘ್ಯಂ ಶಶಾಂಕೇಂದೋ ರೋಹಿಣ್ಯಾ ಸಹಿತೋ ಮಮ॥೫೪॥

ಸ್ಥಂಡಿಲೇ ಸ್ಥಾಪಯೇದ್ದೇವಂ ಸಚಂದ್ರಾಂ ರೋಹಿಣೀಂ ತಥಾ ।
ದೇವಕೀಂ ವಸುದೇವಂ ಚ ಯಶೋದಾಂ ನಂದಮೇವ ಚ ॥ ೫೫ ॥

ಬಲದೇವಂ ತಥಾ ಪೂಜ್ಯ ಸರ್ವಪಾಪೈಃ ಪ್ರಮುಚ್ಯತೆ ।
ಅರ್ಧರಾತ್ರೇ ವಸೋರ್ಧಾರಾಂ ಪಾತಯೇದ್ಗುಡಸರ್ಪಿಷಾ ॥ ೫೬ ॥

---

೫೩. ಧರ್ಮೇಶ್ವರಾಯ ಧರ್ಮಪತಯೇ ।
ಧರ್ಮಸಂಭವಾಯ ಗೋವಿಂದಾಯ ನಮೋನಮಃ ॥

ಇದು ದೀಪಾಸನ ಮಂತ್ರ. (ಧರ್ಮನಿಯಾಮಕನಾಗಿಯೂ, ಧರ್ಮಾಧಿಪತಿಯಾಗಿಯೂ, ಧರ್ಮೋತ್ಪತ್ತಿಹೇತುವಾಗಿಯೂ ಇರುವ ಗೋವಿಂದನಿಗೆ ನಮಸ್ಕಾರಗಳು ಎಂಬುದು ಇದರ ಅರ್ಥ).

೫೪. ಕ್ಷೀರೋದಾರ್ಣವ ಸಂಭೂತ ಅತ್ರಿನೇತ್ರಸಮುದ್ಭವ ।
ಗೃಹಣಾರ್ಘ್ಯಂ ಶಶಾಂಕೇಂದೋ ರೋಹಿಣ್ಯಾಸಹಿತೋ ಮಮ ॥

ಇದು ಚಂದ್ರನಿಗೆ ಅರ್ಘ್ಯಕೊಡುವಾಗ ಹೇಳುವ ಮಂತ್ರ. (ಸಮುದ್ರ ಮಥನ ಕಾಲದಲ್ಲಿ ಕ್ಷೀರಸಾಗರದಲ್ಲಿ ಹುಟ್ಟಿದವನೂ, ಅತ್ರಿಮಹರ್ಷಿಯ ನಯನದಿಂದ ಉತ್ಪನ್ನನೂ, ಶಶಾಂಕ, ಇಂದು ಇತ್ಯಾದಿ ಪದಗಳಿಂದ ಹೇಳಲ್ಪಡುವವನೂ ಆಗಿರುವ ಎಲೈ ಚಂದ್ರನೇ! ನೀನು ನಿನ್ನ ಪತ್ನಿಯಾದ ರೋಹಿಣೀ ಸಹಿತನಾಗಿ ನನ್ನ ಈ ಅರ್ಘ್ಯವನ್ನು ಸ್ವೀಕರಿಸು. ಇದು ಅರ್ಘ್ಯ ಮಂತ್ರಾರ್ಥ).

೫೫. ಈ ವ್ರತಕಾಲದಲ್ಲಿ ಸ್ಥಂಡಿಲವಲ್ಲಿ ಶ್ರೀ ಕೃಷ್ಣನನ್ನೂ ಮತ್ತು ರೋಹಿಣೀ ಸಹಿತನಾದ ಚಂದ್ರ, ದೇವಕೀ, ವಸುದೇವ, ಯಶೋದೆ, ನಂದಗೋಪ, ಬಲರಾಮ ಇವರುಗಳನ್ನೂ ಪ್ರತಿಷ್ಠೆಮಾಡಿ ಪೂಜಿಸಿದವನು, ಸರ್ವಪಾಪ ವಿನಿರ್ಮುಕ್ತನಾಗುತ್ತಾನೆ.

೫೬. ಈ ಜನ್ಮಾಷ್ಟಮಿಯ ದಿನ ಅರ್ಧರಾತ್ರಿಯ ವೇಳೆಯಲ್ಲಿ ಬೆಲ್ಲ ಮಿಶ್ರ ಮಾಡಿದ ತುಪ್ಪದ ವಸುಧಾರೆಯನ್ನು ಶ್ರೀ ಕೃಷ್ಣನ ಶಿರಸ್ಸಿನಲ್ಲಿ ಬೀಳುವ ಹಾಗೆ ಬಿಡಬೇಕು.

ತತೋ ವರ್ಧಾಪನಂ ಷಷ್ಠೀನಾಮಾದಿಕರಣಂ ಮಮ ।
ಕರ್ತವ್ಯಂ ತತ್ಕ್ಷಣಾದ್ರಾತ್ರೌ ಪ್ರಭಾತೇ ನವಮೀದಿನೇ ॥ ೫೭ ॥

ಯಥಾ ಮಮ ತಥಾ ಕಾರ್‍ಯೋ ಭಗವತ್ಯಾ ಮಹೋತ್ಸವಃ ।
ಬ್ರಾಹ್ಮಣಾನ್ಭೋಜಯೇಚ್ಛಕ್ತ್ಯಾ ತೇಭ್ಯೋ ದದ್ಯಾಚ್ಚ ದಕ್ಷಿಣಾಂ॥೫೮॥

ಹಿರಣ್ಯಂ ಕಾಂಚನಂ ಗಾವೋ ವಾಸಾಂಸಿ ಕುಸುಮಾನಿ ಚ ।
ಯದ್ಯದಿಷ್ಟತಮಂ ತತ್ತತ್ಕೃಷ್ಣೋ ಮೇ ಪ್ರೀಯತಾಮಿತಿ ॥ ೫೯ ॥

ಯಮೇವಂ ದೇವಕೀ ದೇವೀ ವಸುದೇವಾದಜೀಜನತ್ ।
ಭೌಮಸ್ಯ ಬ್ರಹ್ಮಣೋ ಗುಪ್ತ್ಯೈ ತಸ್ಮೈ ಬ್ರಹ್ಮಾತ್ಮನೇ ನಮಃ ॥೬೦॥

---

೫೭. ಅನಂತರ ಆ ದಿನ ರಾತ್ರಿಯಲ್ಲೇ ತತ್‌ಕ್ಷಣವೇ ನನಗೆ ವರ್ಧಾಪನ ಕರ್ಮ, ನಾಮಕರಣ ಇವುಗಳನ್ನು ಮಾಡಬೇಕು. ಆ ರಾತ್ರಿ ಬೆಳಗಾದ ಮೇಲೆ ಆ ನವಮಿಯದಿನ ನನಗೆ ಮಹೋತ್ಸವ ಮಾಡಿದಂತೆ.

೫೮. ಆ ದಿನ ಪೂಜ್ಯಳಾದ ದೇವಕಿಗೂ ಮಹೋತ್ಸವವನ್ನು ಆಚರಿಸಬೇಕು. ಮತ್ತು ಆ ದಿನ ಸ್ವಶಕ್ತ್ಯಾನುಸಾರವಾಗಿ ಬ್ರಾಹ್ಮಣ ಭೋಜನವನ್ನೂ ಮಾಡಿಸಿ ಆ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಬೇಕು.

೫೯. ಮತ್ತು ಹಿರಣ್ಯ, ಧನ, ಗೋವು, ವಸ್ತ್ರಗಳು, ಪುಷ್ಪಗಳು ಮತ್ತು ಶ್ರೀ ಕೃಷ್ಣನಿಗೆ ಇಷ್ಟತಮವಾದ ಪದಾರ್ಥಗಳು ಇವೆಲ್ಲವನ್ನೂ "ಶ್ರೀ ಕೃಷ್ಣೋ ಮೇ ಪ್ರೀಯತಾಂ" ಎಂದು ಹೇಳಿ ದಾನಮಾಡಬೇಕು.

೬೦. ಯಮೇವಂ ದೇವಕೀದೇವೀ ವಸುದೇವಾದಜೀಜನತ್ ।
ಭೌಮಸ್ಯ ಬ್ರಹ್ಮಣೋಗುಪ್ತ್ಯೈ ತಸ್ಮೈ ಬ್ರಹ್ಮಾತ್ಮನೇನಮಃ ॥
ಸುಜನ್ಮ ವಾಸುದೇವಾಯ ಗೋಬ್ರಾಹ್ಮಣ ಹಿತಾಯಚ ।
ಶಾಂತಿರಸ್ತು ಶಿವಂಚಾಸ್ತು

ಈ ಮಂತ್ರವನ್ನು ಹೇಳಿ ದೇವತಾ ವಿಸರ್ಜನೆಯನ್ನು ಮಾಡಬೇಕು. (ಭೂಲೋಕ ವಾಸಿಗಳಾದ ಬ್ರಾಹ್ಮಣವರ್ಗದವರ ರಕ್ಷಣೆಗಾಗಿ ದೇವಕೀದೇವಿಯು ವಸುದೇವನಿಂದ ಗರ್ಭವಾಂತು ಯಾವ ಪರಮಾತ್ಮನನ್ನು ಪುತ್ರರೂಪವಾಗಿ ಪ್ರಸವಿಸಿದಳೋ ಅಂತಹ ಪರಬ್ರಹ್ಮಸ್ವರೂಪನಿಗೆ ನಮಸ್ಕಾರಗಳು).

ಸುಜನ್ಮವಾಸುದೇವಾಯ ಗೋಬ್ರಾಹ್ಮಣಹಿತಾಯ ಚ ।
ಶಾಂತಿರಸ್ತು ಶಿವಂ ಚಾಸ್ತು ಇತ್ಯುಕ್ತ್ವಾ ತು ವಿಸರ್ಜಯೇತ್ ॥ ೬೧ ॥

ಏವಂ ಯಃ ಕುರುತೇ ದೇವ್ಯಾ ದೇವಕ್ಯಾಃ ಸುಮಹೋತ್ಸವಂ ।
ವರ್ಷೇವರ್ಷೇ ಭಗವತೋ ಮದ್ಭಕ್ತೋ ಧರ್ಮನಂದನ ॥ ೬೨ ॥

ನರೋ ವಾ ಯದಿ ವಾ ನಾರೀ ಯಥೋಕ್ತಫಲಮಾಪ್ನುಯಾತ್॥೬೩॥

ಪುತ್ರಸಂತಾನಮಾರೋಗ್ಯಂ ಧನಧಾನ್ಯಾದಿಸದ್ಗೃಹಂ ।
ಶಾಲೀಕ್ಷುಯವಸಂಪೂರ್ಣಮಂಗಲಂ ಸುಮನೋಹರಂ ॥ ೬೪ ॥

ತಸ್ಮಿನ್ರಾಷ್ಟ್ರೇ ಪ್ರಭುರ್ಭುಂಕ್ತೇ ದೀರ್ಘಾಯುರ್ಮನಸೇಪ್ಸಿತಾನ್ ।
ಪರಚಕ್ರಭಯಂ ನಾಸ್ತಿ ತಸ್ಮಿನ್ರಾಜ್ಯೇಽಪಿ ಪಾಂಡವ ॥ ೬೫ ॥

---

೬೧. ಮತ್ತು ವಸುದೇವಪುತ್ರನಾಗಿ ಜನ್ಮವನ್ನು ಹೊಂದಿದವನೂ, ಗೋಬ್ರಾಹ್ಮಣರಿಗೆ ಪ್ರಿಯನೂ, ಹಿತಕಾರಿಯೂ ಆಗಿರುವ ಶ್ರೀ ಪರಬ್ರಹ್ಮಸ್ವರೂಪಿಯಾದ ಶ್ರೀ ಕೃಷ್ಣನಿಗೆ ನಮಸ್ಕಾರಗಳು. ನನಗೆ ಈ ಸ್ವಾಮಿಯ ದಯೆಯಿಂದ ಸರ್ವೋಪದ್ರವ ಶಾಂತಿಯಾಗಲಿ, ಮಂಗಳವಾಗಲಿ ಇದೇ ವಿಸರ್ಜನಾ ಮಂತ್ರಾರ್ಥ.

೬೨-೬೩. ಎಲೈ ಧರ್ಮಪುತ್ರನೇ ! ನನ್ನ ಭಕ್ತನಾದವನು ಗಂಡಸಾಗಲಿ ಅಥವಾ ಹೆಂಗಸಾಗಲಿ ಈ ಕ್ರಮದಲ್ಲಿ ಪ್ರತಿ ವರ್ಷದಲ್ಲೂ ಶ್ರೀ ದೇವಕೀದೇವಿಯ ಮಹೋತ್ಸವವನ್ನೂ ಮತ್ತು ಭಗವದುತ್ಸವವನ್ನೂ ಮಾಡಿದರೆ ಈ ವ್ರತಕ್ಕೆ ಉಕ್ತವಾಗಿರುವ ಫಲವು ಅವರಿಗೆ ಖಂಡಿತವಾಗಿ ಲಭಿಸುವುದು.

೬೪. ಈ ವ್ರತಾಚರಣೆಯಿಂದ ಪುತ್ರಸಂತಾನ, ದೇಹಾರೋಗ್ಯ, ಧನಧಾನ್ಯಾಧಿ ಸಮೃದ್ಧವಾದ ಸದ್ಗೃಹಪ್ರಾಪ್ತಿ, ಭತ್ತ, ಕಬ್ಬು, ಯವವೆಂಬ ಧಾನ್ಯವಿಶೇಷ ಇವುಗಳಿಂದ ಭರಿತವಾಗಿ ಸುಂದರವಾಗಿರುವ ಸಮೃದ್ಧಕ್ಷೇತ್ರ ಇವೆಲ್ಲಾ ಲಭಿಸುತ್ತವೆ.

೬೫. ಎಲೈ ಪಾಂಡುಪುತ್ರನೇ ! ಅಂತಹ ಸಮೃದ್ಧ ರಾಷ್ಟ್ರಾಧಿಪತಿಯಾಗಿ ಅಲ್ಲಿ ದೀರ್ಘಾಯುಷ್ಮಂತನಾಗಿ ಮನೋಭಿಲಷಿತವಾದ ಭೋಗ್ಯಪದಾರ್ಥಗಳನ್ನೆಲ್ಲಾ ಭೋಗಿಸುವನು. ಆ ರಾಷ್ಟ್ರದಲ್ಲಿ ಪರರಾಜರುಗಳೊಡನೆ ಯುದ್ಧ ಸಂಭವಿಸುವುದೇ ಇಲ್ಲ.

ಪರ್ಜನ್ಯಃ ಕಾಮವರ್ಷೀ ಸ್ಯಾದೀತಿಭ್ಯೋ ನ ಭಯಂ ಭವೇತ್ ।
ಯಸ್ಮಿನ್ಗೃಹೇ ಪಾಂಡುಪುತ್ರ ಕ್ರಿಯತೇ ದೇವಕೀವ್ರತಂ || ೬೬ ||

ನ ತತ್ರ ಮೃತನಿಷ್ಕ್ರಾಂತಿರ್ನ ಗರ್ಭಪತನಂ ತಥಾ ।
ನ ಚ ವ್ಯಾಧಿಭಯಂ ತತ್ರ ಭವೇದಿತಿ ಮತಿರ್ಮಮ || ೬೭ ||

ನ ವೈದ್ಯಜನಸಂಯೋಗೋ ನ ಚಾಪಿ ಕಲಹೋ ಗೃಹೇ ।
ಸಂಪರ್ಕೇಣಾಪಿ ಯಃ ಕಶ್ಚಿತ್ಕುರ್ಯಾಜ್ಜನ್ಮಾಷ್ಟಮೀವ್ರತಂ ।
ವಿಷ್ಣುಲೋಕಮವಾಪ್ನೋತಿ ಸೋಽಪಿ ಪಾರ್ಥ ನ ಸಂಶಯಃ || ೬೮ ||

ಜನ್ಮಾಷ್ಟಮೀ ಜನಮನೋನಯನಾಭಿರಾಮಾ ।
ಪಾಪಾಪಹಾ ಸಪದಿ ನಂದಿತನಂದಗೋಪಾ ।

---

೬೬. ಎಲೈ ಕುಂತೀಸುತನೇ ! ಯಾವ ಗೃಹದಲ್ಲಿ ಜನ್ಮಾಷ್ಟಮೀ ದಿನ ದೇವಕೀ ಪೂಜಾವ್ರತವು ಆಚರಿಸಲ್ಪಡುವುದೋ ಆ ಮನೆಯಲ್ಲಿ ಮೂಷಿಕಾದಿ ಈತಿಬಾಧೆಯು ಇರುವುದಿಲ್ಲ. ಮತ್ತು ಆ ಪ್ರಾಂತದಲ್ಲಿ ಮೇಘಗಳು ಕಾಲಕಾಲಕ್ಕೆ ಸರಿಯಾಗಿ ಮಳೆಸುರಿಸುವುವು.

೬೭. ಮತ್ತು ಈ ವ್ರತಾಚರಣೆಯುಳ್ಳ ಗೃಹದಲ್ಲಿ ಶವಶರೀರ ನಿರ್ಗಮನವು ಸಂಭವಿಸುವುದಿಲ್ಲ. ಹಾಗೆಯೇ ಆ ಗೃಹದಲ್ಲಿ ಗರ್ಭಿಣಿಯರಿಗೆ ಗರ್ಭಪಾತವೂ ಆಗಲಾರದು. ಆ ಸ್ಥಳದಲ್ಲಿ ರೋಗಭಯವಿರಕೂಡದು ಎಂಬುದೇ ನನ್ನ ದೃಢ ಸಂಕಲ್ಪ.

೬೮. ಎಲೈ ಪಾರ್ಥಸಹೋದರನೇ ! ಅಂತಹ ಮನೆಯಲ್ಲಿ ರೋಗಿಗಳಿಲ್ಲ ದಿರುವಕಾರಣ ವೈದ್ಯಜನ ಪ್ರವೇಶಕ್ಕೇ ಅವಕಾಶವಿಲ್ಲ. ಮತ್ತು ಮನೆಯವರಲ್ಲಿ ಪರಸ್ಪರ ಯಾವ ಕಲಹಕ್ಕೂ ಸಂಭವವಿಲ್ಲ, ಇತರರ ಸಂಪರ್ಕವಶದಿಂದಾದರೂ ಯಾವಾತನು ಈ ವ್ರತವನ್ನು ಮನಸ್ತುಷ್ಟಿಯಿಂದ ಆಚರಿಸುವನೋ ಅವನೂ ಸಹ ನಿಸ್ಸಂಶಯವಾಗಿ ವಿಷ್ಣು ಲೋಕವನ್ನು ಹೊಂದುವನು.

೬೯. ಈ ಜನ್ಮಾಷ್ಟಮೀ ವ್ರತವು ಜನರ ಕಣ್ಮನಗಳಿಗೆ ಆನಂದದಾಯ ಕವೂ, ತತ್‌ಕ್ಷಣದಲ್ಲೇ ಅನುಷ್ಠಾತೃವಿನ ಪಾಪನಾಶಕವೂ ಆಗಿದೆ. ಮತ್ತು ನಂದಗೋಪನಿಗೆ ಪ್ರೀತಿಪಾತ್ರವೆನಿಸಿದೆ. ಈ ಜನ್ಮಾಷ್ಟಮೀ ದಿನದಲ್ಲಿ ದೇವಕೀ

ಯೋ ದೇವಕೀಂ ಸದಯಿತಾಂ ಯಜತೀಹ ತಸ್ಯಾಂ ।
ಪುತ್ರಾನವಾಪ್ಯ ಸಮುಪೈತಿ ಪದಂ ಚ ವಿಷ್ಣೋಃ ॥ ೬೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಜನ್ಮಾಷ್ಟಮೀ ವ್ರತವರ್ಣನಂ ನಾಮ ಪಂಚಪಂಚಾಶತ್ತಮೋಽಧ್ಯಾಯಃ.



---

ಸಹಿತನಾದ ಶ್ರೀ ಕೃಷ್ಣನನ್ನು ಯಾವನು ಪೂಜಿಸುವನೋ ಅಂಥವನು ಈ ಲೋಕದಲ್ಲಿ ಸತ್ಸಂತಾನವುಳ್ಳವನಾಗಿ ಮರಣಾನಂತರದಲ್ಲಿ ಶ್ರೀ ವಿಷ್ಣುಪದವನ್ನು ಪಡೆಯುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಕೃಷ್ಣ ಜನ್ಮಾಷ್ಟಮೀ ವ್ರತವರ್ಣನೆಯೆಂಬ ಐವತ್ತೈದನೆಯ ಅಧ್ಯಾಯವು ಮುಗಿದುದು.



|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಷಟ್ಪಂಚಾಶತ್ತಮೋಽಧ್ಯಾಯಃ

---

**|| ಶ್ರೀ ಕೃಷ್ಣ ಉವಾಚ ||**

**ಶುಕ್ಲೇ ಭಾದ್ರಪದಸ್ಯೈವ ಪಕ್ಷೇಽಷ್ಟಮ್ಯಾಂ ಯುಧಿಷ್ಠಿರ ।**
**ದೂರ್ವಾಷ್ಟಮೀವ್ರತಂ ಪುಣ್ಯಂ ಯಃ ಕುರ್ಯಾಚ್ಛ್ರದ್ಧಯಾನ್ವಿತಃ || ೧ ||**

**ನ ತಸ್ಯ ಕ್ಷಯಮಾಪ್ನೋತಿ ಸಂತಾನಂ ಸಪ್ತಪೌರುಷಂ ।**
**ಸಂದತೇ ವರ್ಧತೇ ನಿತ್ಯಂ ಯಥಾಪೂರ್ವಂ ತಥಾ ಕುಲಂ || ೨ ||**

---

## ಐವತ್ತಾರನೆಯ ಅಧ್ಯಾಯ

೧–೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೆ! ಭಾದ್ರಪದ ಮಾಸದ ಶುದ್ಧ ಅಷ್ಟಮಿಯ ದಿನದಲ್ಲಿ ಪುಣ್ಯದಾಯಕವಾದ ದೂರ್ವಾಷ್ಟಮಿಯ ವ್ರತವನ್ನು ಯಾವನು ಶ್ರದ್ಧಾಪೂರ್ವಕವಾಗಿ ಆಚರಿಸುವನೋ ಅವನಿಗೆ ಮುಂದೆ ಏಳು ತಲೆಮಾರಿನವರೆಗೂ ಸಂತಾನಕ್ಷಯವು ಸಂಭವಿಸುವುದಿಲ್ಲ. ಮತ್ತು ಅವನು ಜೀವಿಸಿರುವ ಕಾಲದಲ್ಲಿ ಹೇಗೆ ಸಂತೋಷ ಸಮೃದ್ಧಿ ಇವುಗಳಿದ್ದುವೋ ಅದರಂತೆ ಅವನ ವಂಶವು ಸಪ್ತಪುರುಷಾಧಿಕವಾಗಿ ಯಾವಾಗಲೂ ಆನಂದ, ವೃದ್ಧಿ ಇವುಗಳಿಂದ ಕೂಡಿರುವುದು.

॥ ಯುಧಿಷ್ಠಿರ ಉವಾಚ ॥
ಕುತ ಏಷಾ ಸಮುತ್ಪನ್ನಾ ದೂರ್ವಾ ಕಸ್ಮಾಚ್ಚಿರಾಯುಷಾ ।
ಕಸ್ಮಾಚ್ಚ ಸಾ ಪವಿತ್ರಾ ಚ ಲೋಕನಾಥ ಬ್ರವೀಹಿ ಮೇ ॥ ೩ ॥

॥ ಶ್ರೀ ಕೃಷ್ಣ ಉವಾಚ ॥
ಕ್ಷೀರೋದಸಾಗರೇ ಪೂರ್ವಂ ಮಥ್ಯಮಾನೇಽಮೃತಾರ್ಥಿನಾ ।
ವಿಷ್ಣುನಾ ಬಾಹುಜಂಘಾಭ್ಯಾಂ ಯದ್ಧೃತೋ ಮಂದರೋ ಗಿರಿಃ ॥ ೪ ॥

ಭ್ರಮಿತೋ ವೈ ಸ ವೇಗೇನ ರೋಮಾಣ್ಯುದ್ಧರ್ಷಿತಾನಿ ವೈ ।
ತಾನ್ಯೇತಾನಿ ಜಲೋರ್ಮಿಭಿರುತ್ಕ್ಷಿಪ್ತಾನಿ ತದರ್ಣವಾತ್ ॥ ೫ ॥

ಅಜಾಯತ ಶುಭಾ ದೂರ್ವಾ ರಮ್ಯಾ ಹರಿತಶಾದ್ವಲಾ ।
ಏವಮೇಷಾ ಸಮುತ್ಪನ್ನಾ ದೂರ್ವಾ ವಿಷ್ಣುತನೂರುಹಾ ॥ ೬ ॥

---

೩. ಯುಧಿಷ್ಠಿರನು ಕೇಳುತ್ತಾನೆ–" ಎಲೈ ಜಗತ್ಪತಿಯೇ ! ಈ ದೂರ್ವೆಯು ಯಾರಿಂದ ಜನಿಸಿತು. ಯಾವ ಕಾರಣದಿಂದ ಅದು (ಆ ಗರಿಕೆಯು) ಬಹು ಕಾಲ ಬದುಕಿರುತ್ತದೆ. ಆ ದೂರ್ವೆಯು ಏತಕ್ಕೆ ಪವಿತ್ರವೆನಿಸಿಕೊಂಡಿದೆ? ಈ ವಿಷಯಗಳನ್ನು ನನಗೆ ತಿಳಿಸು '' ಎಂದನು.

೪. ಶ್ರೀ ಕೃಷ್ಣನು ಹೇಳುತ್ತಾನೆ—ಓ ಯುಧಿಷ್ಠಿರನೇ ! ಪೂರ್ವದಲ್ಲಿ ಅಮೃತ ಪ್ರಾಪ್ತ್ಯಭಿಲಾಷೆಯಿಂದ ಕ್ಷೀರಸಾಗರವನ್ನು ಕಡೆಯುತ್ತಿರುವಾಗ ಕಡಗೋಲಾದ ಮಂದರಪರ್ವತವನ್ನು ವಿಷ್ಣುವು ತನ್ನ ತೋಳುಗಳು ಮತ್ತು ಮೊಣಕಾಲುಗಳು ಇವುಗಳಿಂದ ಸಮುದ್ರದಲ್ಲಿ ಮುಳುಗದ ಹಾಗೆ ಎತ್ತಿಹಿಡಿದನು.

೫. ಮಥನ ಕಾಲದಲ್ಲಿ ಆ ಮಂದರಪರ್ವತವು ಗಿರಗಿರನೆ ಸುತ್ತುತ್ತಿದ್ದಿತು. ವೇಗಪೂರ್ವಕವಾದ ಆ ಭ್ರಮಣದಿಂದ ಶ್ರೀ ಮಹಾವಿಷ್ಣುವಿನ ರೋಮಗಳಿಗೆ ಘರ್ಷಣೆಯುಂಟಾಗಿ ಅವುಗಳು ಅವನ ಶರೀರದಿಂದ ಬೇರ್ಪಟ್ಟು ಕ್ಷೀರಸಾಗರದ ನೀರಿನಲ್ಲಿ ಸೇರಿಕೊಂಡು ಅಲೆಗಳ ಮೂಲಕ ಆ ಸಮುದ್ರದಿಂದ ಮೇಲಕ್ಕೆ (ದಡಕ್ಕೆ) ಎಸೆಯಲ್ಪಟ್ಟವು.

೬. ಅನಂತರ ಅವು ಹಚ್ಚಗಿರುವ ಎಳೆಯ ಹುಲ್ಲಿನ ರೂಪವಾಂತು ಮನೋಹರವಾದ ಶುಭ ದೂರ್ವೆಗಳಾಗಿ ಪರಿಣಮಿಸಿದುವು. ಈ ಪ್ರಕಾರವಾಗಿ ಶ್ರೀ ಮಹಾವಿಷ್ಣುವಿನ ಶರೀರದ ರೋಮಗಳೇ ಈ ದೂರ್ವೆಯಾಗಿ ಪರಿಣಮಿಸಿದುವು.

ತಸ್ಯಾಶ್ಚೋಽಪರಿ ವಿನ್ಯಸ್ತಂ ಮಥಿತಾಮೃತಮುತ್ತಮಂ ।
ದೇವದಾನವಗಂಧರ್ವೈರ್ಯಕ್ಷವಿದ್ಯಾಧರೈಸ್ತಥಾ　　॥ ೭ ॥

ತತ್ರಾಪ್ಯಮೃತಕುಂಭಸ್ಯ ಪೇತುರ್ನಿಷ್ಯಂದಬಿಂದವಃ ।
ತೈರಿಯಂ ಸ್ಪೃಷ್ಟಮಾತ್ರಾಭೂದ್ದೂರ್ವಾ ರಸ್ಯಾಽಜರಾಽಮರಾ　　॥ ೮ ॥

ವಂದ್ಯಾ ಪವಿತ್ರಾ ದೇವೈಸ್ತು ವಂದಿತಾಭ್ಯರ್ಚಿತಾ ಪುರಾ ।
ಅಷ್ಟಮ್ಯಾಂ ಫಲಪುಷ್ಪೈಸ್ತು ಖರ್ಜೂರೈರ್ನಾಲಿಕೇರಕೈಃ　　॥ ೯ ॥

ದ್ರಾಕ್ಷಾಕ್ಷೋಟ ಕಪಿತ್ಥೈಶ್ಚ ಬರ್ಬರೈರ್ಲಕುಚೈಸ್ತಥಾ ।
ನಾರಿಂಗೈರ್ಜಂಬುಕೈರಾಮ್ರೈರ್ಬೀಜಪೂರೈಶ್ಚ ದಾಡಿಮೈಃ　　॥ ೧೦ ॥

ದಧ್ಯಕ್ಷತೈಃ ಸುಪುಷ್ಪೈಶ್ಚ ಧೂಪನೈವೇದ್ಯದೀಪಕೈಃ ।
ಮಂತ್ರೇಣಾನೇನ ರಾಜೇಂದ್ರ ಶೃಣುಷ್ವಾವಹಿತೇನ ಚ　　॥ ೧೧ ॥

---

೭. ಅನಂತರ ದೇವತೆಗಳು, ದಾನವರು, ಗಂಧರ್ವರು, ಯಕ್ಷರು, ವಿದ್ಯಾಧರರು, ಇವರುಗಳು ಕ್ಷೀರಸಾಗರ ಮಥನಮಾಡಿ ಪಡೆದ ಉತ್ತಮವಾದ ಆ ಅಮೃತವನ್ನು ಆ ದೂರ್ವೆಯ ಮೇಲೆ ಇರಿಸಿದರು.

೮. ಈರೀತಿ ಅಮೃತಪೂರ್ಣವಾದ ಗಡಿಗೆಗಳನ್ನು ಆ ದೂರ್ವೆಯ ಮೇಲೆ ಇರಿಸುವಾಗ ಅಮೃತದ ಬಿಂದುಗಳು ಬಿದ್ದುವು. ಆ ಅಮೃತ ಬಿಂದುಸ್ಪರ್ಶ ಮಾತ್ರದಿಂದಲೇ ದೂರ್ವೆಯು ರಸವತ್ತಾದುದೂ ಮುಪ್ಪು, ಮರಣಗಳು ಇಲ್ಲದುದೂ ಆಯಿತು.

೯. ಆದುದರಿಂದ ಈ ದೂರ್ವೆಯು ನಮಸ್ಕಾರಾರ್ಹವೂ, ಪರಮಪಾವನವೂ ಆಗಿದೆ. ಪೂರ್ವದಲ್ಲಿ ದೇವತೆಗಳು ಅಷ್ಟಮೀ ತಿಥಿಯಲ್ಲಿ ಈ ದೂರ್ವೆಯನ್ನು ಫಲ, ಪುಷ್ಪ, ಖರ್ಜೂರ, ತೆಂಗಿನಕಾಯಿ ಇವುಗಳಿಂದಲೂ

೧೦, ಮತ್ತು ದ್ರಾಕ್ಷೆ, ಅಕ್ಷೋಟ (ಬೆಟ್ಟದ ಗೋನುಮುದ ಫಲ) ಬೇಲದ ಹಣ್ಣು, ಮಾವಿನ ಹಣ್ಣು, ಮಾದಲಫಲ, ದಾಳಿಂಬ ಮುಂತಾದ ಫಲಗಳ ನೈವೇದ್ಯದಿಂದಲೂ ಪೂಜಿಸಿದ್ದರು.

೧೧. ಎಲೈ ರಾಜೇಂದ್ರನೇ! ಆ ದೇವತೆಗಳು ಈ ದೂರ್ವೆಯನ್ನು ಮೊಸರು, ಮಂತ್ರಾಕ್ಷತೆ, ಸುಗಂಧಪುಷ್ಪ, ಧೂಪ, ದೀಪ, ನೈವೇದ್ಯ ಇತ್ಯಾದಿಗಳಿಂದ ಅರ್ಚಿಸಿರುತ್ತಾರೆ.

ತ್ವಂ ದೂರ್ವೇಽಮೃತಜನ್ಮಾಸಿ ವಂದಿತಾ ಚ ಸುರಾಸುರೈಃ ।
ಸೌಭಾಗ್ಯಂ ಸಂತತಿಂ ಕೃತ್ವಾ ಸರ್ವಕಾರ್ಯಕರೀ ಭವ ॥ ೧೨ ॥

ಯಥಾ ಶಾಖಾಪ್ರಶಾಖಾಭಿರ್ವಿಸ್ತೃತಾಸಿ ಮಹೀತಲೇ ।
ತಥಾ ಮಮಾಪಿ ಸಂತಾನಂ ದೇಹಿ ತ್ವಮಜರಾಮರೇ ॥ ೧೩ ॥

ಏವಮೇಷಾ ಪುರಾ ಪಾರ್ಥ ಪೂಜಿತಾ ತ್ರಿದಶೋತ್ತಮೈಃ ।
ತೇಷಾಂ ಪತ್ನೀವಧೂಭಿಶ್ಚ ಭಗಿನೀಭಿಸ್ತಥೈವ ಚ ॥ ೧೪ ॥

---

೧೨-೧೩. ಪೂಜೆಯ ಕೊನೆಯಲ್ಲಿ ಹೇಳಬೇಕಾದ ಮಂತ್ರವನ್ನು ಹೇಳುತ್ತೇನೆ ಸಾವಧಾನದಿಂದ ಶ್ರವಣಮಾಡು.

ತ್ವಂ ದೂರ್ವೇಽಮೃತಜನ್ಮಾಸಿ ವಂದಿತಾ ಚ ಸುರಾ ಸುರೈಃ ।
ಸೌಭಾಗ್ಯಂ ಸಂತತಿಂ ಕೃತ್ವಾ ಸರ್ವಕಾರ್ಯಕರೀಭವ ॥
ಯಥಾ ಶಾಖಾ ಪ್ರಶಾಖಾಭಿರ್ವಿಸ್ತೃತಾಸಿ ಮಹೀತಲೇ ।
ತಥಾ ಮಮಾಪಿ ಸಂತಾನಂ ದೇಹಿತ್ವಮಜರಾಮರೇ ॥

ಇದು ಪ್ರಾರ್ಥನಾ ಮಂತ್ರ. (ಎಲೌ ದೂರ್ವೆಯೇ! ನೀನು ಅಮೃತದಿಂದ ಜನಿಸಿದವಳು. ಸುರಾಸುರರಿಂದ ನಮಸ್ಕೃತಳು. ಅಂತಹ ನೀನು ನನಗೆ ಸೌಭಾಗ್ಯವನ್ನೂ ಸಂತತಿಯನ್ನೂ ಕೊಟ್ಟು, ನನ್ನ ಸರ್ವಕಾರ್ಯಸಿದ್ಧಿಗೂ ಅನುಕೂಲಳಾಗು. ಮರಣರಹಿತಳಾದ ಎಲೌ ದೂರ್ವೆಯೇ! ನೀನು ಭೂಮಿಯಲ್ಲಿ ಶಾಖೆ ಪ್ರಶಾಖೆಗಳಿಂದ ವಿಸ್ತಾರವಾಗಿ ಹೇಗೆ ಹರಡಿರುವೆಯೋ ಹಾಗೆಯೇ ನನಗೂ ಪುತ್ರಪೌತ್ರಾದಿಗಳು ಜನಿಸಿ ಸಂತಾನದಿಂದ ನನ್ನ ವಂಶವು ವಿಸ್ತಾರವಾಗಿ ಹರಡುವಂತೆ ಅನುಗ್ರಹಮಾಡು ಎಂದು ಇದರ ಅರ್ಥ).

೧೪. ಓ ಪಾಂಡುಪುತ್ರನೇ! ಪೂರ್ವದಲ್ಲಿ ಉತ್ತಮರಾದ ದೇವತೆಗಳು ಈ ರೀತಿಯಲ್ಲಿ ಈ ದೂರ್ವೆಯನ್ನು ಪೂಜಿಸಿರುವರು. ಅಲ್ಲದೆ ಅವರ ಹೆಂಡತಿಯರೂ, ಸಹೋದರಿಯರೂ, ಸೊಸೆಯರೂ ಸಹ ಪೂಜಿಸಿರುತ್ತಾರೆ.

ಪಜಿತಾಭ್ಯರ್ಹಿತಾ ವಾಚಾ ಗೌರ್ಯಾ ರಾಜಞ್ಶ್ರಿಯಾ ತಥಾ ।
ಮರ್ತ್ಯಲೋಕೇ ವೇದವತ್ಯಾ ದಮಯಂತ್ಯಾಪಿ ಸೀತಯಾ ॥ ೧೫ ॥

ಸುಕೇಶ್ಯಾ ಚ ಘೃತಾಚ್ಯಾ ಚ ರಂಭಯಾ ಚ ಸುಕೇಶಯಾ ।
ಸಹನ್ಯಾ ಕಾಮಕಂದನ್ಯಾ ಮೇನಕೋರ್ವಶಿಕಾದಿಭಿಃ ॥ ೧೬ ॥

ಸ್ತ್ರೀಭಿರೇವಾರ್ಚಿತಾ ದೂರ್ವಾ ಸೌಭಾಗ್ಯಸುಖದಾಯಿನೀ ।
ಸ್ನಾತಾಭಿಃ ಶುಚಿವಸ್ತ್ರಾಭಿಃ ಸಖೀಭಿಃ ಸಸುಹೃಜ್ಜನೈಃ ॥ ೧೭ ॥

ದತ್ವಾ ದಾನಾನಿ ವಿಪ್ರೇಭ್ಯಃ ಫಲಂ ದತ್ವಾರ್ಚಯೇತ್ಪ್ರಭೋಃ ।
ತಿಲಪಿಷ್ಟಕಗೋಧೂಮಸಪ್ತಧಾನ್ಯಾನಿ ಪಾಂಡವ ॥ ೧೮ ॥

---

೧೫. ಅಯ್ಯಾ ರಾಜನೇ! ಈ ದೂರ್ವೆಯನ್ನು ಸರಸ್ವತೀ, ಗೌರೀ, ಮಹಾಲಕ್ಷ್ಮಿ ಇವರುಗಳೂ ಪೂಜಿಸಿ ಗೌರವಿಸಿರುತ್ತಾರೆ. ಮನುಷ್ಯಲೋಕದಲ್ಲಿ ವೇದವತಿ, ದಮಯಂತಿ, ಸೀತೆ ಮುಂತಾದ ಮಹಾ ಮಹಾಪತಿವ್ರತೆಯರು ಪೂಜಿಸಿರುತ್ತಾರೆ.

೧೬. ಮತ್ತು ಸುಕೇಶೀ, ಘೃತಾಚೀ, ಮತ್ತು ಸುಂದರವಾದ ಕೇಶರಾಶಿಗಳನ್ನುಳ್ಳ ರಂಭೆ, ಸಹನೀ, ಕಾಮಕಂದನೀ, ಮೇನಕ, ಊರ್ವಶಿ ಮೊದಲಾದ ಸುರಸುಂದರಿಯರಿಂದಲೂ ಈ ದೂರ್ವೆಯು ಪೂಜಿತವಾಗಿದೆ.

೧೭. ಸೌಭಾಗ್ಯವನ್ನೂ ಸುಖವನ್ನೂ ಕೊಡುವ ದೂರ್ವೆಯನ್ನು ನಾರಿಯರು ನಿಯಮಪೂರ್ವಕವಾಗಿ ಸ್ನಾನಮಾಡಿ ಮಡಿ ವಸ್ತ್ರವನ್ನುಟ್ಟು ಸಖೀ ಸುಹೃಜ್ಜನಾದಿಗಳಿಂದ ಸಮೇತರಾಗಿ ದೇವಸ್ತ್ರೀಯರು ಪೂರ್ವದಲ್ಲಿ ಅರ್ಚಿಸಿದಂತೆ ಪೂಜಿಸಬೇಕು.

೧೮. ಓ ಪಾಂಡುಪುತ್ರನೇ! ಈ ವ್ರತಾನುಷ್ಠಾತೃವು ಬ್ರಾಹ್ಮಣರಿಗೆ ಉಪಾಯನಾದಿ ದಾನಗಳನ್ನು ಕೊಡಬೇಕು. ಮತ್ತು ತನ್ನ ಪೂಜ್ಯ ಪ್ರಭುವಾದ ದೇವತೆಗೆ ಫಲ ಸಮರ್ಪಣೆಮಾಡಿ ಸಾಂಗಮಾಡಬೇಕು.

ಭಕ್ಷಯಿತ್ವಾ ಸುಹೃನ್ಮಿತ್ರಸಂಬಂಧಿಸ್ವಜನೈಸ್ತಥಾ ।
ಯಾ ನಾರ್ಯೋ ವಿಚರಿಷ್ಯಂತಿ ವ್ರತಮೇತತ್ಪುರಾತನಂ ॥ ೧೯ ॥

ದೂರ್ವಾಷ್ಟಮೀತಿ ವಿಖ್ಯಾತಂ ಪುಣ್ಯಂ ಸಂತಾನಕಾರಕಂ ।
ತಾಃ ಸರ್ವಾಃ ಸುಖಸೌಭಾಗ್ಯಪುತ್ರಪೌತ್ರಾದಿಭಿಸ್ತಥಾ ॥ ೨೦ ॥

ಮರ್ತ್ಯೇ ಲೋಕೇ ಚಿರಂ ಸ್ಥಿತ್ವಾ ತತಃ ಸ್ವರ್ಗಂ ಗತಾಃ ಪುನಃ ।
ದೇವೈರಾನಂದಿತಾಸ್ತತ್ರ ಭರ್ತೃಭಿಃ ಸಹ ಬಾಂಧವೈಃ ॥ ೨೧ ॥

ವಸಂತಿ ರಮಮಾಣಾಸ್ತಾ ಯಾವದಾಭೂತಸಂಪ್ಲವಂ ॥ ೨೨ ॥

ಮೇಘಾವೃತೇಂಬರತಲೇ ಹರಿತೇ ವನಾಂತೇ ।
ಯಾ ಸಾಷ್ಟಮೀ ಶುಭಫಲಾ ಸಫಲಾ ನಭಸ್ಯೇ ।

---

೧೯. ಅನಂತರ ಎಳ್ಳುಹುಡಿ, ಗೋಧಿ, ಸಪ್ತಧಾನ್ಯ ಇವುಗಳಿಂದ ಸಿದ್ಧ ಮಾಡಿದ ವಸ್ತುಗಳನ್ನು ತನ್ನ ಸುಹೃತ್ತುಗಳು, ಮಿತ್ರರು, ಸಂಬಂಧಿಗಳು, ಸ್ವಜನರು ಇವರ ಜೊತೆಯಲ್ಲಿ ಭಕ್ಷಣ ಮಾಡಬೇಕು.

೨೦. ಪ್ರಸಿದ್ಧವೂ, ಪುಣ್ಯಪ್ರದವೂ, ಸಂತಾನಕಾರಕವೂ ಆಗಿರುವ ಪುರಾತನವಾದ ದೂರ್ವಾಷ್ಟಮಿ ಎಂಬ ಈ ವ್ರತವನ್ನು ಯಾವ ಸ್ತ್ರೀಯರು ಆಚರಿಸುವರೋ ಅವರೆಲ್ಲರೂ ಸುಖ, ಸೌಭಾಗ್ಯ, ಪುತ್ರ, ಪೌತ್ರಾದಿಗಳಿಂದ ಕೂಡಿ ಶೋಭಿಸುತ್ತಾರೆ.

೨೧-೨೨. ಅವರು ಈ ಫಲಗಳನ್ನು ಅನುಭವಿಸುತ್ತಾ ಮನುಷ್ಯಲೋಕದಲ್ಲಿ ಬಹು ಕಾಲದವರೆಗೆ ಇದ್ದು ಅನಂತರ ಸ್ವರ್ಗಲೋಕಕ್ಕೆ ಹೋಗಿ ಅಲ್ಲಿ ದೇವತೆಗಳಿಂದ ಸನ್ಮಾನವನ್ನು ಪಡೆದವರಾಗಿ ತಮ್ಮ ಜ್ಞಾತಿಗಳು ಮತ್ತು ಬಂಧುಗಳು, ಇವರ ಜತೆಯಲ್ಲಿ ಪ್ರಳಯಕಾಲಪರ್ಯಂತ ಕ್ರೀಡಿಸುತ್ತಾ ಇರುವರು.

೨೩. ನಭಸ್ಥಳವು ಮೋಡಗಳಿಂದ ಆವೃತವಾಗಿಯೂ, ಅರಣ್ಯಪ್ರದೇಶಗಳು ಎಳೆಯ ಹುಲ್ಲುಗಳಿಂದ ಹಸುರಾಗಿಯೂ, ಸಸ್ಯಸಮೃದ್ಧವಾಗಿಯೂ ಪರಿಣಮಿಸುವ ಭಾದ್ರಪದ ಮಾಸದ ಶುಕ್ಲಪಕ್ಷದ ಅಷ್ಟಮಿ ದಿನದಲ್ಲಿ ಸಂಪ್ರದಾಯವನ್ನರಿತ ಹೆಂಗಸು ಶುಭಫಲದಾಯಕವೂ ಪವಿತ್ರತಮವೂ ಆದ ಈ ದೂರ್ವೆ

ದೂರ್ವಾಫಲಾಕ್ಷತತಿಲೈಃ ಪ್ರತಿಪೂಜ್ಯ ಯೋಷಿ ।
ದ್ದೂರ್ವೇವ ವೃದ್ಧಿಮುಪಯಾತಿ ಸುತೈಃ ಸುಹೃದ್ಭಿಃ　　|| ೨೩ ||

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ದೂರ್ವಾಷ್ಟಮೀವ್ರತ ವರ್ಣನಂ
ನಾಮ ಷಟ್ಪಂಚಾಶತ್ತಮೋಧ್ಯಾಯಃ.



---

ಯನ್ನು ನಿಶ್ಚಲಭಕ್ತಿಯಿಂದ ಫಲ, ಪುಷ್ಪ, ಅಕ್ಷತೆ, ಗಂಧ, ಧೂಪ, ದೀಪಾದಿಗಳನ್ನು ಸಮರ್ಪಿಸಿ ಪೂಜೆಮಾಡಿದರೆ ಆ ವ್ರತಿಯೂ ಸಹ ಪುತ್ರಮಿತ್ರಾದಿಗಳಿಂದ ಕೂಡಿ ಆ ದೂರ್ವೆಯಂತೆಯೇ ವೃದ್ಧಿಯನ್ನು ಹೊಂದುವಳು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ದೂರ್ವಾಷ್ಟಮಿ ವ್ರತವರ್ಣನೆಯೆಂಬ ಐವತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಸಪ್ತಪಂಚಾಶತ್ತಮೋಽಧ್ಯಾಯಃ

|| ಶ್ರೀ ಕೃಷ್ಣ ಉವಾಚ ||

ಕೃಷ್ಣಾಷ್ಟಮೀವ್ರತಂ ಪಾರ್ಥ ಶೃಣು ಪಾಪಭಯಾಪಹಂ |
ಧರ್ಮಸಂಜನನಂ ಲೋಕೇ ರುದ್ರಪ್ರೀತಿಕರಂ ಪರಂ || ೧ ||

ಮಾಸಿ ಮಾರ್ಗಶಿರೇ ಪ್ರಾಪ್ತೇ ದಂತಧಾವನಪೂರ್ವಕಂ |
ಉಪವಾಸಸ್ಯ ನಿಯಮಂ ಕುರ್ಯಾನ್ನಕ್ತಸ್ಯ ವಾ ಪುನಃ || ೨ ||

---

## ಐವತ್ತೇಳನೆಯ ಅಧ್ಯಾಯ

೧. ಎಲೈ ಪಾರ್ಥನೇ! ಪಾಪಭಯನಿವಾರಕವಾಗಿಯೂ, ಪುಣ್ಯಜನಕವಾಗಿಯೂ, ರುದ್ರನಿಗೆ ಅತಿಶಯ ಪ್ರೀತಿಕಾರಕವಾಗಿಯೂ ಇರುವ ಶ್ರೀ ಕೃಷ್ಣಾಷ್ಟಮೀ ವ್ರತವನ್ನು ಹೇಳುತ್ತೇನೆ; ಶ್ರವಣಮಾಡು.

೨. ಮಾರ್ಗಶೀರ್ಷಮಾಸದ ಕೃಷ್ಣಪಕ್ಷದ ಅಷ್ಟಮೀದಿನ ಪುರುಷನು ದಂತಧಾವನ ಪೂರ್ವಕವಾಗಿ ಉಪವಾಸನಿಯಮವನ್ನೋ ಅಥವಾ ನಕ್ತಭೋಜನದ ಸಂಕಲ್ಪವನ್ನೋ ಮಾಡಬೇಕು.

**ಅಶಕ್ತಶಕ್ತಭೇದೇನ ಗೃಹಾನ್ನಿಷ್ಕ್ರಮ್ಯ ಬಾಹ್ಯತಃ ।**
**ಕೃಷ್ಣಾಷ್ಟಮ್ಯಾಂ ವರ್ಷಮೇಕಂ ಗುರುಂ ಪೃಷ್ಟ್ವಾ ವಿಚಕ್ಷಣಃ　|| ೩ ||**

**ಬ್ರಹ್ಮಚಾರೀ ಜಿತಕ್ರೋಧಃ ಶಿವಾರ್ಚನಜಪೇ ರತಃ ।**
**ತತೋಽಪರಾಹ್ಣಸಮಯೇ ಸ್ನಾತ್ವಾ ನದ್ಯಾಂ ವಿಶುದ್ಧಧೀಃ　|| ೪ ||**

**ಶಿವಲಿಂಗಂ ಸಮಭ್ಯರ್ಚ್ಯ ಸುಮನೋಭಿಃ ಸುಗಂಧಿಭಿಃ ।**
**ಗಗ್ಗುಲುಂ ಚ ಶುಭಂ ದಗ್ಧ್ವಾ ದದ್ಯಾನ್ನೈವೇದ್ಯಮುತ್ತಮಂ　|| ೫ ||**

**ತತೋ ದೇವಸ್ಯ ಪುರತೋ ಹೋಮಂ ಕುರ್ಯಾತ್ತಿಲೈರ್ಗುರುಃ ।**
**ಮಾರ್ಗಶೀರ್ಷೇ ಶುಭೇ ಮಾಸಿ ಶಂಕರಾಯೇತಿ ಪೂಜಯೇತ್　|| ೬ ||**

---

೩. ಆ ದಿನವೆಲ್ಲಾ ಉಪವಾಸಮಾಡಲು ಅಶಕ್ತನಾದವನು ನಕ್ತಭೋಜನ ಮಾಡಬಹುದು. ಶಕ್ತನಾದರೆ ಉಪವಾಸವನ್ನೇ ಆಚರಿಸುವುದು ಉತ್ತಮ. ಈರೀತಿ ಉಪವಾಸ, ನಕ್ತಭೋಜನಗಳು ಸಂದರ್ಭಾನುಸಾರ ವಿಕಲ್ಪವಾಗಿದೆ. ಕೃಷ್ಣಾಷ್ಟಮಿಯಲ್ಲಿ ಈ ವ್ರತವನ್ನಾಚರಿಸುವ ಪಂಡಿತನು ಊರುಬಿಟ್ಟು ಪರಸ್ಥಳದಲ್ಲಿದ್ದಾಗ ಇಲ್ಲಿಂದ ಒಂದು ವರ್ಷದವರೆಗೆ ಈ ವ್ರತವನ್ನಾಚರಿಸುವೆನೆಂದು ಆಚಾರ್ಯನಿಗೆ (ಗುರುವಿಗೆ) ವಿಜ್ಞಾಪಿಸಿ ಅವನ ಅನುಜ್ಞೆಯನ್ನು ಪಡೆಯಬೇಕು.

೪. ಈ ವ್ರತಿಯು ಆ ಕಾಲದಲ್ಲಿ ಬ್ರಹ್ಮಚರ್ಯೆಯುಳ್ಳವನೂ, ಕೋಪವನ್ನು ನಿಗ್ರಹಿಸಿದವನೂ, ಶಿವಾರ್ಚನ, ಶಿವಮಂತ್ರ, ಜಪ ಇವುಗಳಲ್ಲಿ ತತ್ಪರನೂ ಆಗಿರಬೇಕು. ವ್ರತವದಿನ ನದಿಯಲ್ಲಿ ಸ್ನಾನಮಾಡಿ ಅಪರಾಹ್ಣ ಸಮಯದಲ್ಲಿ ಶುದ್ಧಾಂತಃಕರಣನಾಗಿ ಪೂಜಿಸಬೇಕು.

೫. ಸುಗಂಧವುಳ್ಳ ಪುಷ್ಪಗಳಿಂದ ಶಿವಲಿಂಗವನ್ನು ಚೆನ್ನಾಗಿ ಅರ್ಚನೆ ಮಾಡಿ ಶುಭಕರವಾದ ಗುಗ್ಗುಲು ಧೂಪವನ್ನೂ ಉತ್ತಮವಾದ ನೈವೇದ್ಯವನ್ನೂ ಸಮರ್ಪಿಸಬೇಕು.

೬. ಅನಂತರ ಈ ವ್ರತಾನುಷ್ಠಾತೃವಿನ ಗುರುವು ಶ್ರೀ ಪರಮೇಶ್ವರನ ಸಮ್ಮುಖದಲ್ಲಿ ತಿಲಹೋಮವನ್ನು ಮಾಡಬೇಕು. ಈ ಶುಭ ಮಾರ್ಗಶೀರ್ಷ ಮಾಸದ ಪೂಜೆಯಲ್ಲಿ "ಶ್ರೀ ಶಂಕರಾಯನಮಃ" ಎಂದು ಹೇಳಿ ಅರ್ಚಿಸಬೇಕು.

ಗೋಮೂತ್ರಪ್ರಾಶನಂ ಕೃತ್ವಾ ಸ್ವಪ್ಯಾದ್ಭೂಮೌ ತತೋ ನಿಶಿ ।
ಅತಿರಾತ್ರಸ್ಯ ಯಜ್ಞಸ್ಯ ಫಲಮಾಪ್ನೋತಿ ಮಾನವಃ ॥ ೭ ॥

ಏವಂ ಪುಷ್ಯೇಽಪಿ ಸಂಪೂಜ್ಯ ಶಂಭುಂ ನಾಮ ಮಹೇಶ್ವರಂ ।
ಕೃಷ್ಣಾಷ್ಟಮ್ಯಾಂ ಘೃತಂ ಪ್ರಾಶ್ಯ ವಾಜಪೇಯಫಲಂ ಭಜೇತ್ ॥ ೮ ॥

ಮಾಘೇ ಮಹೇಶ್ವರಂ ನಾಮ ಕೃಷ್ಣಾಷ್ಟಮ್ಯಾಂ ಪ್ರಪೂಜಯೇತ್ ।
ನಿಶಿ ಪೀತ್ವಾ ಗವಾಂ ಕ್ಷೀರಂ ಗೋಮೇಧಾಷ್ಟಕಮಾಪ್ನುಯಾತ್ ॥ ೯ ॥

ಫಾಲ್ಗುನೇ ಚ ಮಹಾದೇವಂ ಸಂಪೂಜ್ಯ ಪ್ರಾಶಯೇತ್ತಿಲಾನ್ ।
ರಾಜಸೂಯಸ್ಯ ಯಜ್ಞಸ್ಯ ಫಲಮಷ್ಟಗುಣಂ ಭಜೇತ್ ॥ ೧೦ ॥

---

೭. ಅನಂತರ ಆದಿನ ರಾತ್ರಿಯಲ್ಲಿ ಗೋಮೂತ್ರ ಪ್ರಾಶನೆಯನ್ನು ಮಾಡಿ ಭೂಶಯನವನ್ನಾಚರಿಸಬೇಕು. ಈರೀತಿ ಆಚರಿಸಿದ ಪುರುಷನು ಅತಿ ರಾತ್ರವೆಂಬ ಮಹಾಯಾಗದ ಫಲವನ್ನು ಹೊಂದುತ್ತಾನೆ.

೮. ಇದೇ ಪ್ರಕಾರವಾಗಿ ಪುಷ್ಯಮಾಸದ ಕೃಷ್ಣಾಷ್ಟಮಿಯಲ್ಲಿ "ಶಂಭು" ಎಂಬ ನಾಮವನ್ನು ಹೇಳಿ ಈಶ್ವರಾರ್ಚನೆಮಾಡಿ, ರಾತ್ರಿಯಲ್ಲಿ ಘೃತಪ್ರಾಶನೆ ಮಾಡಿ, ಈ ವ್ರತವನ್ನು ಸಾಂಗವಾಗಿ ಆಚರಿಸಿದರೆ ವಾಜಪೇಯ ಯಾಗದ ಫಲವು ಬರುವುದು.

೯. ಮಾಘಮಾಸದ ಕೃಷ್ಣಾಷ್ಟಮಿಯಲ್ಲಿ "ಮಹೇಶ್ವರ" ಎಂಬ ನಾಮವನ್ನುಚ್ಚರಿಸಿ ಈಶ್ವರನನ್ನು ಪೂಜಿಸಬೇಕು. ಆದಿನ ರಾತ್ರಿಯಲ್ಲಿ ಗೋಕ್ಷೀರವನ್ನು ಪಾನಮಾಡಿ ಈ ವ್ರತವನ್ನಾಚರಿಸಿದರೆ ಎಂಟು ಗವಾಲಂಭಯಜ್ಞಗಳಿಂದ ಲಭಿಸುವ ಪುಣ್ಯವು ಪ್ರಾಪ್ತವಾಗುವುದು.

೧೦. ಫಾಲ್ಗುಣಮಾಸದ ಕೃಷ್ಣಾಷ್ಟಮಿಯಲ್ಲಿ "ಮಹಾದೇವ"ನೆಂಬ ನಾಮವನ್ನು ಹೇಳಿ ಈಶ್ವರಾರ್ಚನೆಯನ್ನು ಮಾಡಿ ಆದಿನ ರಾತ್ರಿಯಲ್ಲಿ ತಿಲ ಪ್ರಾಶನೆಮಾಡಿದರೆ ರಾಜಸೂಯ ಯಾಗಮಾಡಿದ ಪುಣ್ಯದ ಎಂಟರಷ್ಟು ಹೆಚ್ಚು ಪುಣ್ಯವು ಬರುತ್ತದೆ.

ಚೈತ್ರೇ ಚ ಸ್ಥಾಣುನಾಮಾನಂ ಕೃಷ್ಣಾಷ್ಟಮ್ಯಾಂ ಶಿವಂ ಯಜೇತ್ ।
ಯವಾಹಾರೋಽಶ್ವಮೇಧಸ್ಯ ಯಜ್ಞಸ್ಯ ಫಲಮಾಪ್ನುಯಾತ್ ॥ ೧೧ ॥

ವೈಶಾಖೇ ಶಿವನಾಮಾನಮಿಷ್ಟ್ವಾ ರಾತ್ರೌ ಕುಶೋದಕಂ ।
ಪೀತ್ವಾ ಪುರುಷಮೇಧಸ್ಯ ಫಲಂ ದಶಗುಣಂ ಭಜೇತ್ ॥ ೧೨ ॥

ಜ್ಯೇಷ್ಠೇ ಪಶುಪತಿಂ ಪೂಜ್ಯ ಗವಾಂ ಶೃಂಗೋದಕಂ ಪಿಬೇತ್ ।
ಗವಾಂ ಲಕ್ಷಪ್ರದಾನಸ್ಯ ನರಃ ಫಲಮವಾಪ್ನುಯಾತ್ ॥ ೧೩ ॥

ಆಷಾಢೇ ಚೋಗ್ರನಾಮಾನಮಿಷ್ಟ್ವಾ ಸಂಪ್ರಾಶ್ಯ ಗೋಮಯಂ ।
ವರ್ಷಾಣಾಂ ನಿಯುತಂ ಸಾಗ್ರಂ ರುದ್ರಲೋಕೇ ಮಹೀಯತೆ ॥ ೧೪ ॥

---

೧೧. ಚೈತ್ರ ಕೃಷ್ಣಾಷ್ಟಮಿಯಲ್ಲಿ "ಸ್ಥಾಣು" ಎಂಬ ಈಶ್ವರನಾಮವನ್ನುಚ್ಚರಿಸಿ ಶಿವಪೂಜೆ ಮಾಡಿದನಂತರ ಆ ರಾತ್ರಿಯಲ್ಲಿ ಯವಪ್ರಾಶನೆಯನ್ನು ಮಾಡತಕ್ಕದ್ದು. ಈರೀತಿ ಆಚರಿಸಿದವನು ಅಶ್ವಮೇಧ ಯಜ್ಞ ಮಾಡಿದಷ್ಟು ಫಲವನ್ನು ಹೊಂದುತ್ತಾನೆ.

೧೨. ವೈಶಾಖ ಕೃಷ್ಣಾಷ್ಟಮಿಯಲ್ಲಿ "ಶಿವ" ಎಂಬ ನಾಮದಿಂದ ಪರಮೇಶ್ವರನನ್ನು ಪೂಜಿಸಿ ಆ ರಾತ್ರಿ ಕುಶೋದಕವನ್ನು ಪ್ರಾಶನೆಮಾಡಿದರೆ ನರಮೇಧ ಯಾಗದಿಂದ ಒರುವ ಪುಣ್ಯದ ಹತ್ತರಷ್ಟು ಹೆಚ್ಚಾದ ಪುಣ್ಯವನ್ನು ಹೊಂದುತ್ತಾನೆ.

೧೩. ಜ್ಯೇಷ್ಠ ಕೃಷ್ಣಾಷ್ಟಮಿಯಲ್ಲಿ "ಪಶುಪತಿ" ಎಂಬ ನಾಮವನ್ನು ಹೇಳಿ ಪೂಜಿಸಿ ಗೋಶೃಂಗೋದಕವನ್ನು ಪಾನಮಾಡಬೇಕು. ಈ ಪ್ರಕಾರ ಮಾಡಿದ ಪುರುಷನು ಲಕ್ಷಗೋದಾನ ಮಾಡಿದರೆ ಬರುವಷ್ಟು ಪುಣ್ಯಫಲವನ್ನು ಹೊಂದುತ್ತಾನೆ.

೧೪. ಆಷಾಢಮಾಸದ ಕೃಷ್ಣಾಷ್ಟಮಿಯಲ್ಲಿ "ಉಗ್ರ" ಎಂಬ ಈಶ್ವರ ನಾಮದಿಂದ ಶ್ರೀ ಶಿವಾರ್ಚನೆಯನ್ನು ಮಾಡಿ ರಾತ್ರಿಯಲ್ಲಿ ಗೋಮಯವನ್ನು ಪ್ರಾಶನೆಮಾಡಿದರೆ ಅವನು ಒಂದು ನಿಯುತ (ಹತ್ತುಸಾವಿರ) ಸಂಖ್ಯಾಕ ವರ್ಷಗಳಿಗಿಂತ ಹೆಚ್ಚಾಗಿ ರುದ್ರಲೋಕದಲ್ಲಿ ಪೂಜಿತನಾಗುವನು.

ಶ್ರಾವಣೇ ಶರ್ವನಾಮಾನಮಿಷ್ಟ್ವಾsರ್ಕಂ ನಿಶಿ ಭಕ್ಷಯೇತ್ ।
ಬಹುಸ್ವರ್ಣಸ್ಯ ಯಜ್ಞಸ್ಯ ನರಃ ಫಲಮವಾಪ್ನುಯಾತ್ ॥ ೧೫ ॥

ಮಾಸಿ ಭಾದ್ರಪದೇಷ್ಟಮ್ಯಾಂ ತ್ರ್ಯಂಬಕಂ ನಾಮ ಪೂಜಯೇತ್ ।
ಬಿಲ್ವಪತ್ರಂ ನಿಶಿ ಪ್ರಾಶ್ಯ ಅನ್ನದೀಕ್ಷಾಫಲಂ ಭಜೇತ್ ॥ ೧೬ ॥

ಭವನಾಮಾಶ್ವಿನೇ ಪೂಜ್ಯಃ ಪ್ರಾಶಯೇತ್ತಂಡುಲೋದಕಂ ।
ಪೌಂಡರೀಕಸ್ಯ ಯಜ್ಞಸ್ಯ ಫಲಂ ಶತಗುಣಂ ಭಜೇತ್ ॥ ೧೭ ॥

ಕಾರ್ತಿಕೇ ರುದ್ರನಾಮಾನಂ ಸಂಪೂಜ್ಯ ಪ್ರಾಶಯೇದ್ದಧಿ ।
ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೧೮ ॥

---

೧೫. ಶ್ರಾವಣ ಕೃಷ್ಣಾಷ್ಟಮಿಯಲ್ಲಿ "ಶರ್ವ" ನಾಮದಿಂದ ಈಶ್ವರನಿಗೆ ಪೂಜೆಮಾಡಿ ಆ ರಾತ್ರಿಯಲ್ಲಿ ಎಕ್ಕದ ಹೂವನ್ನು ಸೇವನೆ ಮಾಡಿದವನು ಬಹುಸ್ವರ್ಣಯಾಗ ಮಾಡಿದ ಪುಣ್ಯಫಲವನ್ನು ಪಡೆಯುತ್ತಾನೆ.

೧೬. ಭಾದ್ರಪದ ಕೃಷ್ಣಾಷ್ಟಮಿಯಲ್ಲಿ "ತ್ರ್ಯಂಬಕ" ಎಂಬ ಹೆಸರಿನಿಂದ ಈಶ್ವರಾರ್ಚನೆ ಮಾಡಬೇಕು. ಆದಿನ ರಾತ್ರಿಯಲ್ಲಿ ಬಿಲ್ವಪತ್ರ ಪ್ರಾಶನೆಮಾಡಿ ಭೂಶಯನಮಾಡಿದರೆ ಅನ್ನದೀಕ್ಷಾ ಫಲವನ್ನು ಹೊಂದುತ್ತಾನೆ.

೧೭. ಆಶ್ವಯುಜ ಕೃಷ್ಣಾಷ್ಟಮಿಯಲ್ಲಿ "ಭವ" ಎಂಬ ನಾಮದಿಂದ ಪೂಜಿಸಿ ರಾತ್ರಿಯಲ್ಲಿ ತಂಡುಲೋದಕವನ್ನು ಪ್ರಾಶನೆಮಾಡಬೇಕು. ಹೀಗೆ ಮಾಡಿದವನು ಪೌಂಡರೀಕಯಾಗದ ಪುಣ್ಯಕ್ಕೆ ನೂರರಷ್ಟು ಅಧಿಕವಾದ ಪುಣ್ಯವನ್ನು ಹೊಂದುತ್ತಾನೆ.

೧೮. ಕಾರ್ತಿಕ ಕೃಷ್ಣಾಷ್ಟಮಿಯಲ್ಲಿ ರುದ್ರ ಎಂಬ ನಾಮವನ್ನು ಹೇಳಿ ಈಶ್ವರಾರ್ಚನೆಮಾಡಿ ರಾತ್ರಿಯಲ್ಲಿ ದಧಿಪ್ರಾಶನೆ ಮಾಡಬೇಕು. ಹೀಗೆ ಮಾಡಿದವನು ಅಗ್ನಿಷ್ಟೋಮಯಾಗದ ಫಲವನ್ನು ಹೊಂದುತ್ತಾನೆ.

ಅಬ್ದಾಂತೇ ಭೋಜಯೇದ್ವಿಪ್ರಾಞ್ಛಿವಭಕ್ತಿಪರಾಯಣಾನ್ ।
ಪಾಯಸಂ ಮಧುಸಂಯುಕ್ತಂ ಘೃತೇನ ಸಮಭಿಪ್ಲುತಂ ।
ಶಕ್ತ್ಯಾ ಹಿರಣ್ಯವಾಸಾಂಸಿ ಭಕ್ತ್ಯಾ ತೇಭ್ಯೋ ನಿವೇದಯೇತ್ ॥ ೧೯ ॥

ಸತಿಲಾಃ ಕೃಷ್ಣಕಲಶಾ ಭಕ್ಷ್ಯಭೋಜ್ಯೇನ ಸಂಯುತಾಃ ।
ದ್ವಾದಶಾತ್ರ ಪ್ರದಾತವ್ಯಾಶ್ಛತ್ರೋಪಾನದ್ಯುಗಾನ್ವಿತಾಃ ।
ನಿವೇದಯತಿ ರುದ್ರಾಣಾಂ ಗಾಂ ಚ ಕೃಷ್ಣಾಂ ಪಯಸ್ವಿನೀಂ ॥ ೨೦ ॥

ವರ್ಷಮೇಕಂ ಚರೇದೇವಂ ನೈರಂತರ್ಯೇಣ ಯೋ ನರಃ ।
ಕೃಷ್ಣಾಷ್ಟಮೀವ್ರತಂ ಭಕ್ತ್ಯಾ ತಸ್ಯ ಪುಣ್ಯಫಲಂ ಶೃಣು ॥ ೨೧ ॥

ಸರ್ವಪಾಪವಿನಿರ್ಮುಕ್ತಃ ಸರ್ವೈಶ್ವರ್ಯಸಮನ್ವಿತಃ ।
ಮೋದತೇ ಭೂಪವನ್ನಿತ್ಯಂ ಮರ್ತ್ಯಲೋಕೇ ಶತಂ ಸಮಾಃ ॥ ೨೨ ॥

---

೧೯. ಈರೀತಿ ಆಚರಿಸಿ ವರ್ಷದ ಕೊನೆಯಲ್ಲಿ ಶಿವಭಕ್ತಿ ಪರಾಯಣರಾದ ಬ್ರಾಹ್ಮಣರಿಗೆ ಮಧು, ಘೃತ, ಭಕ್ಷ್ಯ ಭೋಜ್ಯಗಳು ಪರಮಾನ್ನ ಇವುಗಳಿಂದ ಭೋಜನವನ್ನು ಮಾಡಿಸಬೇಕು. ಮತ್ತು ಸ್ವಶಕ್ತಿಯನ್ನ ಸರಿಸಿ ಅವರಿಗೆ ಹಿರಣ್ಯ ವಸ್ತ್ರ, ಛತ್ರಿ, ಪಾದುಕೆ ಇವುಗಳನ್ನು ಭಕ್ತಿಯಿಂದ ದಾನಮಾಡಬೇಕು.

೨೦. ಅಲ್ಲದೆ ಎಳ್ಳು, ಭಕ್ಷ್ಯಭೋಜ್ಯ ಮುಂತಾದುವುಗಳು ತುಂಬಿದ ಹನ್ನೆರಡು ಕೃಷ್ಣಕಲಶಗಳನ್ನೂ ಸಾಧ್ಯವಾದರೆ ಕರುಸಹಿತವಾದ ಕರೆಯುವ ಹಸುವನ್ನೂ ದಾನ ಮಾಡಬೇಕು.

೨೧. ಅಯ್ಯಾ ಯುಧಿಷ್ಠಿರನೇ! ಭಕ್ತಿಪೂರ್ವಕವಾಗಿ ಒಂದುವರ್ಷದ ವರೆಗೆ ಈ ಕೃಷ್ಣಾಷ್ಟಮೀ ವ್ರತವನ್ನು ನಿರಂತರವಾಗಿ ಯಾವ ಪುರುಷನು ಆಚರಿಸುವನೋ ಅಂಥವನಿಗೆ ಬರುವ ಪುಣ್ಯಫಲವನ್ನು ಹೇಳುತ್ತೇನೆ ಕೇಳು.

೨೨. ಅವನು ಸರ್ವಪಾಪ ವಿನಿರ್ಮುಕ್ತನೂ ಸರ್ವೈಶ್ವರ್ಯ ಸಮನ್ವಿತನೂ ಆಗಿ, ಈ ಮನುಷ್ಯಲೋಕದಲ್ಲಿ ರಾಜನ ಹಾಗೆ ಸುಖವಾಗಿ ನೂರುವರ್ಷಗಳವರೆಗೆ ಜೀವಿಸುತ್ತಾನೆ.

ಅನೇನ ವಿಧಿನಾ ದೇವಾಃ ಸರ್ವೇ ದೇವತ್ವಮಾಗತಾಃ ।
ದೇವೀ ದೇವೀತ್ವಮಾಪನ್ನಾ ಗುಹಃ ಸ್ಕಂದತ್ವಮಾಗತಃ ॥ ೨೩ ॥

ಬ್ರಹ್ಮಾ ಬ್ರಹ್ಮತ್ವಮಾಪನ್ನೋ ಹ್ಯಹಂ ವಿಷ್ಣುತ್ವಮಾಗತಃ ।
ಇಂದ್ರಶ್ಚ ದೇವರಾಜತ್ವಂ ಗಾಣಪತ್ಯಂ ಗಣೋ ಗತಃ ॥ ೨೪ ॥

ನಾರೀ ವಾ ಪುರುಷೋ ವಾಪಿ ಕೃತ್ವಾ ಕೃಷ್ಣಾಷ್ಟಮೀವ್ರತಂ ।
ಅಖಂಡಿತಂ ಮಹಾರಾಜ ಪುಣ್ಯಂ ಪ್ರಾಪ್ನೋತ್ಯನುತ್ತಮಂ ॥ ೨೫ ॥

ಸೂರ್ಯಕೋಟಿಪ್ರತೀಕಾಶೈರ್ವಿಮಾನೈಃ ಸರ್ವಕಾಮಿಕೈಃ ।
ರುದ್ರಕನ್ಯಾಸಮಾಕೀರ್ಣೈರ್ಹಂಸಸಾರಸಸಂಯುತೈಃ ॥ ೨೬ ॥

ನೃತ್ಯವಾದಿತ್ರಸಂಯುಕ್ತೈರುತ್ಕೃಷ್ಟಧ್ವನಿನಾದಿತೈಃ ।
ದೋಧೂಯಮಾನಶ್ಚಮರೈಃ ಸ್ತೂಯಮಾನಃ ಸುರಾಸುರೈಃ ॥ ೨೭ ॥

೨೩. ಈ ವ್ರತವನ್ನಾಚರಿಸಿದುದರಿಂದಲೇ ಎಲ್ಲಾ ದೇವತೆಗಳೂ ದೇವತ್ವವನ್ನು ಪಡೆದರು. ದೇವಿಯೂ ಸಹ ದೇವೀ ಪದವಿಯನ್ನು ಹೊಂದಿದಳು. ಗುಹನು ಷಣ್ಮುಖತ್ವವನ್ನು ಹೊಂದಿದನು.

೨೪. ಮತ್ತು ಈಗಿರುವ ಬ್ರಹ್ಮನು ಈ ವ್ರತಾಚರಣೆಯಿಂದಲೇ ಬ್ರಹ್ಮ ಪದವಿಯನ್ನು ಪಡೆದನು. ನಾನೂ ಸಹ ವಿಷ್ಣುವಾದೆನು. ಇದರಿಂದಲೇ ಇಂದ್ರನು ದೇವರಾಜನಾದನು. ಗಣಪತಿಯು ಗಣಾಧಿಪತ್ವವನ್ನು ಹೊಂದಿದನು.

೨೫. ಎಲೈ ಮಹಾರಾಜನೇ! ಹೆಂಗಸಾಗಲಿ, ಗಂಡಸಾಗಲಿ, ಈ ಕೃಷ್ಣಾಷ್ಟಮೀ ವ್ರತವನ್ನಾಚರಿಸಿದರೆ ಅವರು ಸರ್ವೋತ್ತಮವೂ, ಅಖಂಡವೂ ಆದ ಪುಣ್ಯನಿಧಿಯನ್ನು ಹೊಂದುತ್ತಾರೆ.

೨೬-೨೭. ಮತ್ತು ಈ ವ್ರತಾನುಷ್ಠಾತೃವು ತೇಜಸ್ಸಿನಲ್ಲಿ ಕೋಟಿಸೂರ್ಯನಂತೆ ಹೊಳೆಯುವುದಾಗಿಯೂ, ಸರ್ವಕಾಮದಾಯಕವೂ, ರುದ್ರಕನ್ನಿಕೆಯರಿಂದ ಆವೃತವೂ, ಹಂಸಸಾರಸಾದಿ ಪಕ್ಷಿಗಳಿಂದ ಯುಕ್ತವೂ, ಉತ್ಕೃಷ್ಟವಾದ ಸಂಗೀತ ನೃತ್ಯವಾದ್ಯಾದಿಗಳಿಂದ ಸಹಿತವೂ, ಬೀಸುವ ಚಾಮರಗಳನ್ನುಳ್ಳದ್ದೂ ಆಗಿರುವ ಉತ್ತಮವಾದ ವಿಮಾನದಲ್ಲಿ ಆರೂಢನಾಗಿ ಸಮಸ್ತ ಸುರಾಸುರರಿಂದ ಸ್ತುತಿಸಲ್ಪಡುತ್ತಾ ಶಿವಲೋಕಕ್ಕೆ ಹೋಗಿ, ಅಲ್ಲಿ ಶಿವನಂತೆಯೇ ತ್ರಿನೇತ್ರನೂ, ತ್ರಿಶೂಲಪಾಣಿಯೂ, ಅಷ್ಟೈಶ್ವರ್ಯಯುಕ್ತನೂ ಆಗಿ ಆ ಶಿವಪುರದಲ್ಲಿ ಎಂಟು ಕಲ್ಪಗಳವರೆಗೆ ವಾಸಿಸುತ್ತಾನೆ.

ತ್ರಿನೇತ್ರಃ ಶೂಲಪಾಣಿಶ್ಚ ಶಿವೈಶ್ವರ್ಯಸಮನ್ವಿತಃ ।
ಆಸ್ತೇ ಶಿವಪುರೇ ತಾವದ್ಯಾವತ್ಕಲ್ಪೇಷು ಚಾಷ್ಟಕಂ ॥ ೨೮ ॥

ಇತ್ಯೇತತ್ತೇ ಸಮಾಖ್ಯಾತಂ ಪಾರ್ಥ ಕೃಷ್ಣಾಷ್ಟಮೀವ್ರತಂ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೨೯॥

ಕೃಷ್ಣಾಷ್ಟಮೀವ್ರತಮಿದಂ ಶಿವಭಾವಿತಾತ್ಮಾ ।
ಸತ್ಯಾಶನೈರುದಿತನಾಮಯುತೈರುಪೋಷ್ಯ ।
ಕೃಷ್ಣಾನ್ದದಾತಿ ಕಲಶಾನ್ಸತಿಲಾನ್ನಯುಕ್ತಾ ।
ನ್ಯೋಽಸೌ ಪ್ರಯಾತಿ ಪದಮುತ್ತಮಮಿಂದುಮೌಲೇಃ ॥ ೩೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಕೃಷ್ಣಾಷ್ಟಮೀ ವ್ರತವರ್ಣನಂ ನಾಮ ಸಪ್ತಪಂಚಾಶತ್ತಮೋಽಧ್ಯಾಯಃ.

---

೨೯. ಎಲೈ ಪಾರ್ಥಸಹೋದರನೇ ! ಈ ರೀತಿಯಾಗಿ ಈ ಕೃಷ್ಣಾಷ್ಟಮೀ ವ್ರತವನ್ನು ನಿನಗೆ ನಾನು ಹೇಳಿದೆನು. ಈ ವ್ರತ ಗ್ರಂಥವನ್ನು ಶ್ರವಣಮಾಡಿದವನು ಸರ್ವಪಾಪದಿಂದಲೂ ಮುಕ್ತನಾಗುತ್ತಾನೆ. ಈ ವಿಷಯವಲ್ಲಿ ಯಾವ ಸಂದೇಹವೂ ಇಲ್ಲ.

೩೦–೩೧. ಶಿವನಲ್ಲೇ ನೆಲೆಯಾಗಿ ನಿಲ್ಲಿಸಿದ ಮನಸ್ಸುಳ್ಳವನಾಗಿ ತತ್ತನ್ಮಾಸಗಳಿಗೆ ವಿಧಾಯಕವಾದ ಶಿವನಾಮ ಪೂರ್ವಕವಾದ ಅರ್ಚನೆ, ಉಪವಾಸಾಚರಣೆ, ಆಯಾ ಮಾಸಗಳಲ್ಲಿ ಪ್ರಾಶನೆಗಾಗಿ ಹೇಳಿದ ದ್ರವ್ಯಗಳ ಪ್ರಾಶನೆ; ವರ್ಷಾಂತದಲ್ಲಿ ತಿಲ ಮತ್ತು ಭಕ್ಷ್ಯ, ಭೋಜ್ಯ ಸಹಿತವಾದ ಹನ್ನೆರಡು ಕೃಷ್ಣ ಕಲಶಗಳ ದಾನ, ಈ ನಿಯಮಪುರಸ್ಸರವಾಗಿ ಯಾವನು ಈ ಕೃಷ್ಣಾಷ್ಟಮೀ ವ್ರತವನ್ನು ಆಚರಿಸುವನೋ ಅಂತಹವನು ಉತ್ತಮವಾದ ಚಂದ್ರಶೇಖರನ ಸ್ಥಾನವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಕೃಷ್ಣಾಷ್ಟಮೀ ವ್ರತವರ್ಣನೆಯೆಂಬ ಐವತ್ತೇಳನೆಯ ಅಧ್ಯಾಯವು ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಅಷ್ಟಪಂಚಾಶತ್ತಮೋಽಧ್ಯಾಯಃ

|| ಶ್ರೀ ಕೃಷ್ಣ ಉವಾಚ ||

ಬ್ರಹ್ಮಪುತ್ರೋ ಮಹಾತೇಜಾ ಅತ್ರಿರ್ನಾಮ ಮಹಾನೃಷಿಃ |
ತಸ್ಯ ಪತ್ನೀ ಮಹಾಭಾಗ ಅನಸೂಯಾ ಪತಿವ್ರತಾ || ೧ ||

ತಯೋಃ ಕಾಲೇನ ಮಹತಾ ಜಾತಃ ಪುತ್ರೋ ಮಹಾತಪಾಃ |
ದತ್ತೋ ನಾಮ ಮಹಾಯೋಗೀ ವಿಷ್ಣೋರಂಶೋ ಮಹೀತಲೇ || ೨ ||

ದ್ವಿತೀಯೋ ನಾಮ ಲೋಕೇಸ್ಮಿನ್ನನಘಶ್ಚೇತಿ ವಿಶ್ರುತಃ |
ತಸ್ಯ ಭಾರ್ಯಾ ನದೀ ನಾಮ ಬಭೂವ ಸಹಚಾರಿಣೀ || ೩ ||

---

## ಐವತ್ತೆಂಟನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ಮಹಾಭಾಗ್ಯಶಾಲಿಯೇ ! ವಿಷ್ಣುವಿಗೆ ಮಹಾತೇಜಸ್ವಿಯೂ, ಮಹರ್ಷಿಯೂ ಆದ ಅತ್ರಿ ಎಂಬ ಮಗನು ಇದ್ದನು. ಆ ಅತ್ರಿಮಹರ್ಷಿಗೆ ಪತಿವ್ರತೆಯಾದ ಅನಸೂಯೆಯು ಪತ್ನಿಯಾಗಿದ್ದಳು.

೨, ಹೀಗೆ ಬಹುಕಾಲ ಕಳೆದ ಮೇಲೆ ಆ ದಂಪತಿಗಳಿಗೆ ಮಹಾತಪಸ್ವಿಯೂ, ಮಹಾಯೋಗಿಯೂ, ಆದ ದತ್ತನೆಂಬ ಪುತ್ರನು ವಿಷ್ಣುವಿನ ಅಂಶದಿಂದ ಜನಿಸಿದನು.

೩. ಬಳಿಕ ಆ ಅತ್ರಿಋಷಿಗೆ ಅನಘನೆಂದು ಲೋಕಪ್ರಖ್ಯಾತನಾದ ಎರಡನೆಯ ಮಗನು ಜನಿಸಿದನು. ನದೀ ಎಂಬ ಆಕೆಯು ಆ ಅನಘನಿಗೆ ಸಹಧರ್ಮಿಣಿಯಾಗಿದ್ದಳು.

ಅಷ್ಟಪುತ್ರಾ ಜೀವವತ್ಸಾ ಸರ್ವಬ್ರಾಹ್ಮಗುಣೈರ್ವೃತಾ ।
ಅನಯೋರ್ವಿಷ್ಣುರೂಪೇಣ ಲಕ್ಷ್ಮ್ಯಂಶೈವ ನದೀ ಸ್ಮೃತಾ ॥ ೪ ॥

ಏವಂ ತಸ್ಯ ಸಭಾರ್ಯಸ್ಯ ಯೋಗಾಭ್ಯಾಸರತಸ್ಯ ವಾ ।
ಆಜಗ್ಮುಃ ಶರಣಂ ದೇವಾಃ ಜಂಭದೈತ್ಯೇನ ಪೀಡಿತಾಃ ॥ ೫ ॥

ಬ್ರಹ್ಮಲಬ್ಧಪ್ರಸಾದೇನ ದ್ರುತಂ ಗತ್ವಾಮರಾವತೀಂ ।
ಸಂರುದ್ಧಾಂ ಜಂಭದೈತ್ಯೇನ ದಿವ್ಯವರ್ಷಶತಂ ನೃಪ ॥ ೬ ॥

ದೇವದಾನವಸಂಯೋಗೇ ಪಾತಾಲಾದೇತ್ಯ ಭಾರತ ।
ತಸ್ಯ ಸೈನ್ಯಮಸಂಖ್ಯೇಯಂ ದೈತ್ಯದಾನವರಾಕ್ಷಸೈಃ ॥ ೭ ॥

---

೪. ಆ ನದಿಯು ಎಂಟು ಮಂದಿ ಪುತ್ರರನ್ನು ಪಡೆದಳು. ಆ ಪುತ್ರರೆಲ್ಲಾ ಸುಖವಾಗಿ ಬಾಳುತ್ತಿದ್ದರು. ಆಕೆ, ಬ್ರಾಹ್ಮಣ ಸ್ತ್ರೀಯಲ್ಲಿರಬೇಕಾದ ಎಲ್ಲಾ ಗುಣಗಳಿಂದಲೂ ಕೂಡಿದವಳಾಗಿದ್ದಳು. ಈ ದತ್ತ, ಅನಘರು ವಿಷ್ಣುವಿನ ಅಂಶದಿಂದ ಅವತರಿಸಿದ ಹಾಗೆಯೇ ನದಿಯು ಲಕ್ಷ್ಮಿಯ ಅಂಶವವಳೆಂದೂ ಪ್ರತೀತಿ.

೫, ಯೋಗಾಭ್ಯಾಸ ನಿರತನಾದ ಆ ಅನಘನು ಪತ್ನೀ ಸಮೇತನಾಗಿ ಕುಳಿತಿರುವಾಗ ಜಂಭಾಸುರನಿಂದ ಪೀಡಿತರಾದ ದೇವತೆಗಳು ಇವನನ್ನು ಮರೆ ಹೊಗುವುದಕ್ಕಾಗಿ ಬಂದರು.

೬. ಓ ರಾಜನೇ ! ಆ ಜಂಭನ ವಿಚಾರವನ್ನು ಹೇಳುವೆನು. ಪೂರ್ವದಲ್ಲಿ ಜಂಭನೆಂಬ ದೈತ್ಯನು ಬ್ರಹ್ಮನನ್ನುದ್ದೇಶಿಸಿ ತಪಸ್ಸನ್ನಾಚರಿಸಿ ಬ್ರಹ್ಮನ ಪ್ರಸಾದದಿಂದ ಲಬ್ಧವಾದ ವರದ ಬಲದಿಂದ ಶೀಘ್ರವಾಗಿ ಅಮರಾವತಿಗೆ ಹೋಗಿ ಆ ಪಟ್ಟಣಕ್ಕೆ ಮುತ್ತಿಗೆ ಹಾಕಿ ದಿವ್ಯ ಸಹಸ್ರ ವರ್ಷಗಳವರೆಗ ಯುದ್ಧಮಾಡಿದನು.

೭. ಅಯ್ಯಾ ಭರತವಂಶಜನೇ ! ಕೇಳು ಈರೀತಿ ದೇವತೆಗಳೂ, ದಾನವರೂ ಯುದ್ಧಮಾಡುತ್ತಿರುವಲ್ಲಿ ಪಾತಾಳಲೋಕದಿಂದ ಆ ಜಂಭನ ಸೈನಿಕರಾದ ಲೆಕ್ಕವಿಲ್ಲದಷ್ಟು ಮಂದಿ ದೈತ್ಯ ದಾನವ ರಾಕ್ಷಸರುಗಳು ಯುದ್ಧಕ್ಕಾಗಿ ಅಮರಾವತೀ ಪಟ್ಟಣಕ್ಕೆ ಬಂದರು.

ತೇನ ನಿರ್ಭಾಸಿತಾ ದೇವಾಃ ಸೇಂದ್ರಚಂದ್ರಮರುದ್ಗಣಾಃ ।
ತ್ಯಾಜಿತಾಃ ಸ್ವಾನಿ ಧಿಷ್ಣ್ಯಾನಿ ತ್ಯಕ್ತ್ವಾ ಜಗ್ಮುರ್ದಿಶೋ ದಶ ॥ ೮ ॥

ಅಗ್ರತಃ ಪ್ರಲಯಂ ಯಾಂತಃ ಸೇಂದ್ರಾ ದೇವಾ ಭಯಾರ್ದಿತಾಃ ।
ಪೃಷ್ಠತೋಽನುವ್ರಜಂತಿ ಸ್ಮ ದೈತ್ಯಾ ಜಂಭಪುರಸ್ಸರಾಃ ॥ ೯ ॥

ಯುಧ್ಯಂತಶ್ಶರಸಂಘಾತೈಃ ಗದಾಮುಸಲಮುದ್ಗರೈಃ ।
ನರ್ದಂತೋ ವೃಷಭಾರೂಢಾಃ ಕೇಚಿನ್ಮಹಿಷವಾಹನಾಃ ॥ ೧೦ ॥

ಶರಭೈರ್ಗಂಡಕೈರ್ವ್ಯಾಘ್ರೈರ್ವಾನರೈ ರಭಸೈರ್ದ್ರುತಾಃ ।
ಮುಂಚಂತೋ ಯಾಂತಿ ಪಾಷಾಣಾನ್ ಶತಘ್ನೀಸ್ತೋಮರಾಣ್ಯಪಿ॥

---

೮. ಸೈನ್ಯಸಮೇತನಾದ ಆ ಜಂಭಾಸುರನು ದೇವತೆಗಳನ್ನೆಲ್ಲಾ ಅಮರಾವತಿಯಿಂದ ಓಡಿಸಿದನು. ಇಂದ್ರ, ಚಂದ್ರ, ಸಪ್ತಮರುದ್ಗಣಗಳು ಮೊದಲಾದವರು ತಮ್ಮ ತಮ್ಮ ಸ್ಥಾನವನ್ನು ಬಿಟ್ಟು ದಶದಿಕ್ಕುಗಳಿಗೂ ಓಡಿಹೋದರು.

೯. ಇಂದ್ರ ಸಹಿತರಾದ ಆ ದೇವತೆಗಳು ಜಂಭಾಸುರಭಯಗ್ರಸ್ತರಾಗಿ ದೈತ್ಯರ ದೃಷ್ಟಿಗೆ ಗೋಚರವಾಗದಂತೆ ಮುಂದೆ ಓಡುತ್ತಿದ್ದರು. ದೈತ್ಯರು ಆ ದೇವತೆಗಳನ್ನು ಬೆನ್ನಟ್ಟಿಕೊಂಡು ಹೋಗುತ್ತಿದ್ದರು.

೧೦. ದೇವತೆಗಳನ್ನಟ್ಟಿಕೊಂಡು ಹೋಗುವ ದೈತ್ಯಸೇನೆಯವರು ಶರಸಮೂಹಗಳನ್ನು ಪ್ರಯೋಗಿಸಿ ಯುದ್ಧಮಾಡುತ್ತಲೂ, ವೀರಗರ್ಜನೆಗಳಿಂದ ಗರ್ಜಿಸುತ್ತಲೂ ಇದ್ದರು. ಅವರಲ್ಲಿ ಕೆಲವರು ವೃಷಭಾರೂಢರಾಗಿಯೂ ಮತ್ತೆ ಕೆಲವರು ಕೋಣಗಳನ್ನೇರಿಯೂ ಇದ್ದರು.

೧೧. ಇತರರು ಕತ್ತೆಕಿರುಬ, ಖಡ್ಗಮೃಗ, ಹುಲಿ, ಕೋತಿ ಇವುಗಳ ಮೇಲೆ ಏರಿ, ಎಲ್ಲರೂ ವೇಗವಾಗಿ ಹೋಗುತ್ತಿದ್ದರು. ಹಾಗೆ ಹೋಗುವಾಗ ದೇವತೆಗಳ ಮೇಲೆ ಕಲ್ಲುಗಳನ್ನೆಸೆಯುತ್ತಲೂ, ಶತಘ್ನೀ, ತೋಮರ ಬಾಣ ಇತ್ಯಾದ್ಯಾಯುಧಗಳಿಂದ ಹೊಡೆಯುತ್ತಲೂ ಇದ್ದರು.

ಯಾವದ್ವಿಂಧ್ಯಗಿರಿಂ ಪ್ರಾಪ್ತಾಸ್ತತ್ರಸ್ಯಾಶ್ರಮಮಂಡಲಂ ।
ಅನಘಶ್ಚಾನದೀ ಚೈವ ದಾಂಪತ್ಯಂ ಯತ್ರ ತಿಷ್ಠತಿ　　॥ ೧೨ ॥

ತಯೋಃ ಸಮೀಪಂ ಸಂಪ್ರಾಪ್ತಾಸ್ತೇ ನರಾಃ ಶರಣಾರ್ಥಿನಃ ।
ಅನಘೋಽಪಿ ಚ ತಾನ್ದೇವಾನ್ಲೀಲಯೈವ ಸವಾಸವಾನ್　　॥ ೧೩ ॥

ಅಭ್ಯಂತರೇ ಪ್ರವಿಶ್ಯಾಥ ತಿಷ್ಠಧ್ವಂ ವಿಗತಜ್ವರಾಃ ।
ತಥೇತಿ ನಾಮ ತೇ ಕೃತ್ವಾ ಸರ್ವೇ ತುಷ್ಟಿಂ ಸಮಾಸ್ಥಿತಾಃ　　॥ ೧೪ ॥

ದೈತ್ಯಾ ಅಪಿ ದ್ರುತಂ ಪ್ರಾಪ್ತಾ ಘ್ನಂತಃ ಪ್ರಹರಣೈರರೀನ್ ।
ಇತ್ಯೂಚುರುಲ್ಬಣಾ ಘೋರಾ ಗೃಹ್ಣೀಧ್ವಂ ಬ್ರಾಹ್ಮಣೀಂ ಮುನೇಃ ॥

ದ್ರುತಂ ದ್ರುಮಾನಾಕ್ಷಿಪಧ್ವಂ ಪುಷ್ಪೋಪಗಫಲೋಪಗಾನ್ ।
ಅಥಾರೋಪ್ಯಾನಘಂ ಮೂರ್ಧ್ನಿ ದೈತ್ಯಾ ಜಗ್ಮುಸ್ತದಾಶ್ರಮಾತ್ ॥೧೬ ॥

---

೧೨. ಹೀಗೆ ಅವರು ಹಿಂಬಾಲಿಸುತ್ತಿರಲು ದೇವತೆಗಳು ವಿಂಧ್ಯಪರ್ವತದ ವರೆಗೆ ಬಂದು ಅನಘ ಮತ್ತು ನದೀ ಎಂಬ ಈ ದಂಪತಿಗಳು ಯೋಗಾಭ್ಯಾಸ ನಿರತರಾಗಿದ್ದ ಆ ಆಶ್ರಮದ ಬಳಿಗೆ ಬಂದರು.

೧೩-೧೪. ದೇವತೆಗಳು ಆ ದಂಪತಿಗಳ ಸಮೀಪಕ್ಕೆ ಬಂದ ಕೂಡಲೆ ಆ ತಪಸ್ವಿ ಅನಘನನ್ನು ಶರಣುಹೊಕ್ಕರು. ಇಂದ್ರಸಮೇತರಾಗಿ ಶರಣಾಗತರಾಗಿ ಬಂದ ದೇವತೆಗಳನ್ನು ಕುರಿತು ಅನಘನು ಲೀಲೆಯಿಂದಲೇ "ಎಲೈ ದೇವತೆಗಳಿರಾ ! ನೀವು ನಮ್ಮ ಆಶ್ರಮದ ಒಳಕ್ಕೆ ಬಂದು ನಿರ್ಭಯರಾಗಿರಿ" ಎಂದು ನುಡಿದನು. ಆ ದೇವತೆಗಳೂ ಹಾಗೆಯೇ ಆಗಲೆಂದು ಅಂಗೀಕರಿಸಿ ಆಶ್ರಮ ಪ್ರವೇಶಮಾಡಿ ಎಲ್ಲರೂ ಸಂತೋಷದಿಂದಿದ್ದರು.

೧೫. ದೈತ್ಯರು ಶತಘ್ನ್ಯಾದಿ ಆಯುಧಗಳಿಂದ ತಮ್ಮ ಶತ್ರುಗಳಾದ ದೇವತೆಗಳನ್ನು ದೂರದಿಂದಲೇ ಹೊಡೆಯುತ್ತಾ ಶೀಘ್ರವಾಗಿ ಆ ಆಶ್ರಮದ ಒಳಗೆ ಬಂದರು. ಕೂಡಲೆ ಆ ಘೋರ ದೈತ್ಯರು "ಅಗೋ ! ಮುನಿಯ ಪತ್ನಿಯಾದ ಈ ಬ್ರಾಹ್ಮಣಿಯನ್ನು ಹಿಡಿದುಕೊಳ್ಳಿ ಬಿಡಬೇಡಿ" ಎಂಬದಾಗಿಯೂ,

೧೬. ಮತ್ತು ಪುಷ್ಪ, ಫಲಭರಿತವಾದ ಈ ಆಶ್ರಮದ ಮರಗಳನ್ನು ಮುರಿದು ಎಸೆಯಿರಿ" ಎಂದೂ ಕೂಗಿಕೊಂಡುದಲ್ಲದೆ ಯೋಗಾರೂಢನಾಗಿದ್ದ ಆ ಅನಘನನ್ನು ತಲೆಯ ಮೇಲೆ ಹೊತ್ತುಕೊಂಡು ಆ ಆಶ್ರಮದಿಂದ ಹೊರಟರು.

ತಸ್ಯ ಧ್ಯಾನಾಚ್ಚಾಪಿ ದೈತ್ಯಾನಾಂ ಶ್ರೀರ್ಬಭೂವ ಶಿರೋಗತಾ ।
ದತ್ತಕೇನಾಪಿ ತೇ ದೃಷ್ಟಾ ನಷ್ಟಾ ಧ್ಯಾನಾಗ್ನಿನಾ ಕ್ಷಣಾತ್ ॥ ೧೭ ॥

ನಿಸ್ತೇಜಸೋ ಬಭೂವುರ್ಹಿ ನಿಃಶ್ರೀಕಾ ಮದಪೀಡಿತಾಃ ।
ದೇವೈರಪಿ ಗೃಹೀತಾಸ್ತೇ ದೈತ್ಯಾಶ್ಚ ಪರಣೇ ರಣೇ ।
ರುದಂತೋ ನಿಷ್ಟನಂತಶ್ಚ ನಿಶ್ಚೇಷ್ಟಾ ಬ್ರಹ್ಮಕಂಟಕಾಃ ॥ ೧೮ ॥

ಯಷ್ಟಿಭಿಃ ಶರಶ್ಯೈಃ ಶೂಲೈಸ್ತ್ರಿಶೂಲೈಃ ಪರಿಘೈರ್ಘನೈಃ ।
ಏವಂ ತೇ ಪ್ರಲಯಂ ಜಗ್ಮುಸ್ತತ್ಪ್ರಭಾವಾನ್ಮುನೇಸ್ತದಾ ॥ ೧೯ ॥

ಅಸುರಾ ದೇವಶಸ್ತ್ರೌಘೈರ್ಜಿತಾ ಇಂದ್ರೇಣ ಘಾತಿತಾಃ ।
ದೇವಾ ಅಪಿ ಸ್ವರಾಷ್ಟ್ರೇಷು ತಸ್ಥುಃ ಸರ್ವೇ ಯಥಾ ಪುರಾ ।
ಸುರೈರಪಿ ಮುನೇಸ್ತಸ್ಯ ದೇವರ್ಷೇರ್ಮಹಿಮಾಽಭವತ್ ॥ ೨೦ ॥

---

೧೭. ಆ ಋಷಿಯನ್ನು ಶಿರಸ್ಸಿನಲ್ಲಿ ಏರಿಸಿಕೊಂಡು ಆಶ್ರಮದಿಂದ ಹೊರಟ ಅಪರಾಧಕ್ಕಾಗಿ ಆ ಕ್ಷಣದಲ್ಲಿಯೇ ಆ ದೈತ್ಯರ ಲಕ್ಷ್ಮಿಯು ಶಿರೋಗತಳಾದಳು. ಎಂದರೆ ಸಂಪತ್ತು ನಾಶೋನ್ಮುಖವಾಯಿತು. ಆಗ ಅನಘನ ಅಗ್ರಜನಾದ ದತ್ತನು ದೈತ್ಯರನ್ನು ದುರುದುರನೆ ನೋಡಲಾಗಿ ಅವನ ಯೋಗಮಹಿಮೆಯಿಂದ ಅವರು ಸುಟ್ಟು ನಾಶವಾದರು. ಉಳಿದ ಕೆಲವು ಮದೋನ್ಮತ್ತ ದೈತ್ಯರು ಅಲಕ್ಷ್ಮೀಕರೂ ನಿಸ್ತೇಜಸ್ಕರೂ ಆದರು.

೧೮–೧೯. ಆಗ ಆ ಅನಘಮುನಿಯನ್ನು ಹಿಡಿದೊಯ್ಯುತ್ತ ಒಯ್ಯುತ್ತಲೇ ಯಷ್ಟಿ, ಶೂಲ, ತ್ರಿಶೂಲ, ಪರಿಘ ಇತ್ಯಾದ್ಯಾಯುಧಗಳನ್ನು ಹಿಡಿದು ಯುದ್ಧ ಮಾಡುತ್ತಿರುವ ಆ ದೈತ್ಯರನ್ನು ದೇವತೆಗಳು ಆಯುಧಸಮೇತವಾಗಿ ಹಿಡಿದರು. ಬ್ರಾಹ್ಮಣ ದ್ವೇಷಿಗಳೂ, ಬ್ರಾಹ್ಮಣರಿಗೆ ಕಂಟಕರೂ ಆಗಿರುವ ಆ ದೈತ್ಯರು ರೋದಿಸತೊಡಗಿ ಘೋರವಾಗಿ ಕೂಗಿಕೊಳ್ಳುತ್ತಾ ನಿಶ್ಚೇಷ್ಟರಾದರು. ಆ ದತ್ತಕ ನೆಂಬ ಋಷಿಯ ಮಹಿಮೆಯಿಂದ ಈ ರೀತಿಯಾಗಿ ಆ ದೈತ್ಯರು ನಾಶವಾದರು.

೨೦. ಹೀಗೆ ಅಸುರರೆಲ್ಲರೂ ದೇವತೆಗಳ ಶಸ್ತ್ರಸಮೂಹಗಳಿಂದ ಪರಾಜಯ ಹೊಂದಿದರು. ಕೆಲವರು ದೇವರಾಜನಾದ ಇಂದ್ರನಿಂದ ಹತರಾದರು. ಅನಂತರ ದೇವತೆಗಳು ಮೊದಲಿನಂತೆಯೇ ತಮ್ಮ ತಮ್ಮ ರಾಷ್ಟ್ರಗಳಲ್ಲಿ ಸುಖವಾಗಿದ್ದರು. ಆ ದೇವತೆಗಳ ಆಶಯದಿಂದ ಆ ದತ್ತನಿಗೆ ದೇವರ್ಷಿಗಳ ಮಹಿಮೆಯುಂಟಾಯಿತು.

**ತತಃ ಸ ಸರ್ವಲೋಕಾನಾಂ ಭವಾಯ ಸತತೋತ್ಥಿತಃ ।**
**ಕರ್ಮಣಾ ಮನಸಾ ವಾಚಾ ಶುಭಾನ್ಯೇವ ಸಮಾಚರತ್ ॥ ೨೦ ॥**

**ಕಾಷ್ಠಕುಡ್ಯಶಿಲಾಭೂತ ಊರ್ಧ್ವಬಾಹುರ್ಮಹಾತಪಾಃ ।**
**ಬ್ರಹ್ಮೋತ್ತರಂ ನಾಮ ತಪಸ್ತೇಪೇ ಸುನಿಯತವ್ರತಃ ॥ ೨೨ ॥**

**ನೇತ್ರೇ ಹ್ಯನಿಮಿಷೇ ಕೃತ್ವಾ ಭ್ರುವೋರ್ಮಧ್ಯೇ ವಿಲೋಕಯನ್ ।**
**ತ್ರೀಣಿ ವರ್ಷಸಹಸ್ರಾಣಿ ದಿವ್ಯಾನೀತಿ ಹಿ ನಃ ಶ್ರುತಂ ॥ ೨೩ ॥**

**ತಥೋರ್ಧ್ವರೇತಸಸ್ತಸ್ಯ ಸ್ಥಿತಸ್ಯಾನಿಮಿಷಸ್ಯ ಹಿ ।**
**ಯೋಗಾಭ್ಯಾಸಪ್ರಯುಕ್ತಸ್ಯ ಮಾಹಿಷ್ಮತ್ಯಾಃ ಪತಿಃ ಪ್ರಭುಃ ॥ ೨೪ ॥**

---

೨೧. ಅಂದಿನಿಂದ ಆ ದತ್ತಮುನಿಯು ಯಾವಾಗಲೂ ಸರ್ವಲೋಕ ಹಿತಾರ್ಥವಾಗಿಯೇ ಉದ್ಯುಕ್ತನಾಗಿದ್ದನು. ಆ ಮಹಾತ್ಮನು ಮನೋವಾಕ್ಕಾಯ ಗಳೆಂಬ ತ್ರಿಕರಣಗಳಿಂದಲೂ ಲೋಕಕ್ಕೆ ಶುಭಗಳನ್ನೇ ಮಾಡುತ್ತಿದ್ದನು.

೨೨. ಒಂದುಸಲ ಮಹಾತಪಸ್ವಿಯಾದ ಆ ದತ್ತನು ತೋಳುಗಳನ್ನು ಮೇಲ್ಮುಖವಾಗಿ ಎತ್ತಿಕೊಂಡು, ಕಾಷ್ಠ, ಗೋಡೆ, ಶಿಲೆ ಇವುಗಳಂತೆ ಅಲು ಗಾಡದೆ ದೃಢವ್ರತವುಳ್ಳವನಾಗಿ ಬ್ರಹ್ಮೋತ್ತರವೆಂಬ ಮಹಾ ತಪಸ್ಸನ್ನು ಆಚರಿ ಸಲು ಪ್ರಾರಂಭಿಸಿದನು.

೨೩. ಆ ಋಷಿಯು ತಪೋನುಷ್ಠಾನಕಾಲದಲ್ಲಿ ಕಣ್ಣುಗಳನ್ನು ಅರೆ ಮುಚ್ಚಿ, ನಿಶ್ಚಲಹೃದಯನಾಗಿ ಚಿತ್ತಚಾಂಚಲ್ಯ ನಿವಾರಣೆಗಾಗಿ ಹುಬ್ಬುಗಳ ಮಧ್ಯೆ ದೃಷ್ಟಿಯನ್ನು ನಿಲ್ಲಿಸಿದನು. ಮೂರುಸಹಸ್ರ ದಿವ್ಯವರ್ಷಗಳಕಾಲ ಅವನು ಈರೀತಿ ತಪಸ್ಸನ್ನು ಆಚರಿಸಿದನೆಂದು ನಾವು ಕೇಳಿದ್ದೇವೆ.

೨೪–೨೫. ಈರೀತಿ ಊರ್ಧ್ವರೇತಸ್ಕನೂ, ಅನಿಮಿಷನೂ ಆಗಿ ಯೋಗಾ ಭ್ಯಾಸ ಕ್ರಮದಿಂದ ಪ್ರಯತ್ನಪೂರ್ವಕವಾಗಿ ತಪಸ್ಸನ್ನು ಆಚರಿಸುವ ಆ ದತ್ತ ಮಹರ್ಷಿಯ ಬಳಿಗೆ ಮಾಹಿಷ್ಮತೀ ನಗರಾಧೀಶ್ವರನಾದ ಕಾರ್ತವೀರ್ಯಾರ್ಜುನ ನೆಂಬ ಅರಸನು ಒಂದೇದಿನದಲ್ಲಿ ಶೀಘ್ರವಾಗಿ ಬಂದು ನಿದ್ರಾಲಸ್ಯಗಳನ್ನು

ಏಕಾಹಾದ್ದ್ರುತಮಭ್ಯೇತ್ಯ ಕಾರ್ತವೀರ್ಯಾರ್ಜುನೋ ನೃಪಃ ।
ಶುಶ್ರೂಷಾಂ ವಿನಯಂ ಚಕ್ರೇ ದಿವಾರಾತ್ರಮತಂದ್ರಿತಃ ॥ ೨೫ ॥

ಗಾತ್ರಸಂವಾಹನಂ ಪೂಜಾಂ ಮನಸಾ ಚಿಂತಿತಂ ತಥಾ ।
ಸಂಪೂರ್ಣೇ ನಿಯಮೇ ವೃತ್ತೇ ದೃಢತುಷ್ಟ್ಯಾ ಸಮನ್ವಿತಃ ॥ ೨೬ ॥

ತಸ್ಮೈ ದದೌ ವರಾನ್ಪುಷ್ಟಾಂಶ್ಚತುರೋ ಭೂರಿತೇಜಸಃ ।
ಪೂರ್ವಂ ಬಾಹುಸಹಸ್ರಂ ತು ಸ ವವ್ರೇ ಪ್ರಥಮಂ ವರಂ ॥ ೨೭ ॥

ಅಧರ್ಮಾದ್ಧೀಯಮಾನಸ್ಯ ಸದ್ಭಿಸ್ತಸ್ಮಾನ್ನಿವಾರಣಂ ।
ಧರ್ಮೇಣ ಪೃಥಿವೀಂ ಜಿತ್ವಾ ಧರ್ಮೇಣೈವಾನುಪಾಲನಂ ॥ ೨೮ ॥

---

ತ್ಯಜಿಸಿ ಹಗಲೂ ರಾತ್ರಿ ವಿನಯದಿಂದ ಆ ಮುನಿಯ ಶುಶ್ರೂಷೆಯನ್ನು ಮಾಡ ತೊಡಗಿದನು,

೨೬. ಆ ತಪಸ್ವಿಯ ಕಾಲು ಮೊದಲಾದ ಅವಯವಗಳನ್ನು ಒತ್ತುವುದು, ಅವನ ಪೂಜೆ ಮಾಡುವುದು, ಆ ತಪಸ್ವಿಯ ಮನಸ್ಸಂಕಲ್ಪಿತವಾದ ಪದಾರ್ಥ ಗಳನ್ನು ತಂದುಕೊಡುವುದು, ಇವೇ ಮೊದಲಾದ ರೀತಿಯಲ್ಲಿ ಶುಶ್ರೂಷೆ ಮಾಡಿ ದನು. ಫಲಪ್ರಾಪ್ತಿಪರ್ಯಂತ ಅವನ ತಪೋನಿಯಮವು ಮುಗಿದಮೇಲೆ ಈ ಕಾರ್ತ ವೀರ್ಯಾರ್ಜುನನು ದೃಢಮನಸ್ಸಿನಿಂದ ನಡೆಯಿಸಿದ ಶುಶ್ರೂಷೆಗಾಗಿ ಆ ಋಷಿಯು ಇವನಲ್ಲಿ ಸಂತುಷ್ಟನಾದನು.

೨೭. ಅನಂತರ ಆ ದತ್ತಮುನಿಯು ಬಹುತೇಜಸ್ವಿಯಾದ ಆ ಕಾರ್ತ ವೀರ್ಯಾರ್ಜುನನಿಗೆ ಉತ್ತಮವಾದ ನಾಲ್ಕು ವರಗಳನ್ನು ಕೊಡುವೆನೆಂದನು. ಆಗ ಆ ಕಾರ್ತವೀರ್ಯಾರ್ಜುನನು ಮೊದಲನೆಯ ವರಕ್ಕೆ ಸಾವಿರ ಬಾಹುಗಳನ್ನೇ ಬೇಡಿಕೊಂಡನು.

೨೮. ಅಧಾರ್ಮಿಕನಾಗಿ ಹೀನಸ್ಥಿತಿಯಲ್ಲಿರುವನಿಗೆ ಸನ್ಮಾರ್ಗೋಪದೇಶ ಮಾಡಿ, ಅವನ ಅಧರ್ಮಾಚರಣೆಯನ್ನು ನಿವಾರಿಸುವ ಸಾಮರ್ಥ್ಯವನ್ನು ಎರಡನೆಯ ವರವಾಗಿ ಬೇಡಿದನು. ಮತ್ತು ನಾನು ಧರ್ಮಮಾರ್ಗದಿಂದಲೇ ಭೂಮಂಡಲವನ್ನು ಜಯಿಸಿ ಆ ಭೂಮಂಡಲವನ್ನು ಧರ್ಮದಿಂದಲೇ ಪಾಲಿಸ ಬೇಕೆಂದು ಮೂರನೆಯ ವರವನ್ನು ಬೇಡಿದನು.

ಸಂಗ್ರಾಮಮಾಸ್ಸುಬಹೂಸ್ಜಿತ್ವಾ ಹತ್ವಾ ವೀರಾನ್ಸಹಸ್ರಶಃ ।
ಸಂಗ್ರಾಮೇ ಯುಧ್ಯಮಾನಸ್ಯ ವಧೋ ಮೇ ಸ್ಯಾದ್ಧರೇಃ ಕರಾತ್ ॥

ತೇನ ದತ್ತೇನ ಲೋಕೇಸ್ಮಿನ್ಸಕ್ತಂ ರಾಜ್ಯಂ ಮಹೀತಲೇ ।
ಕಾರ್ತವೀರ್ಯಾಯ ಕೌಂತೇಯ ಯೋಗಾಭ್ಯಾಸಃ ಸವಿಸ್ತರಃ ।
ಚಕ್ರವರ್ತಿಪದಂ ಚೈವ ಅಷ್ಟಸಿದ್ಧಿಸಮನ್ವಿತಂ ॥ ೩೦ ॥

ತೇನಾಪಿ ಪೃಥಿವೀ ಕೃತ್ಸ್ನಾ ಸಪ್ತದ್ವೀಪಾ ಸಪರ್ವತಾ ।
ಸಸಮುದ್ರಾಕರವತೀ ಧರ್ಮೇಣ ವಿಧಿನಾ ಜಿತಾ ॥ ೩೧ ॥

ತಸ್ಯ ಬಾಹುಸಹಸ್ರಂ ತು ಪ್ರಭಾವಾತ್ಕಿಲ ಧೀಮತಃ ।
ಯಾಗಾದ್ರಥೋ ಧ್ವಜಶ್ಚೈವ ಪ್ರಾದುರ್ಭವತಿ ಮಾಯಯಾ ॥ ೩೨ ॥

---

೨೯. ಯುದ್ಧಗಳಲ್ಲಿ ಸಾವಿರಾರು ವೀರರನ್ನು ಕೊಂದು, ಅನೇಕ ಯುದ್ಧಗಳಲ್ಲಿ ಜಯವನ್ನು ಪಡೆದು, ಕೊನೆಗೆ ರಣರಂಗದಲ್ಲಿ ಯುದ್ಧಮಾಡುತ್ತಿರುವಾಗ ಶ್ರೀಹರಿಯ ಕೈಯಿಂದಲೇ ನನಗೆ ಮರಣವಾಗಬೇಕು ಎಂದು ನಾಲ್ಕನೆಯ ವರವನ್ನು ಕೇಳಿಕೊಂಡನು.

೩೦. ಎಲೈ ಕುಂತೀಪುತ್ರನೇ! ಆ ದತ್ತಮಹರ್ಷಿಯು ಕಾರ್ತವೀರ್ಯಾರ್ಜುನನ ಬೇಡಿಕೆಯಂತೆ ಈ ಲೋಕದಲ್ಲಿ ಇಡೀ ಭೂಮಂಡಲವೇ ನಿನ್ನ ರಾಜ್ಯವಾಗಲೆಂದು ವರ ಕೊಟ್ಟದ್ದಲ್ಲದೆ ಅವನಿಗೆ ಯೋಗಾಭ್ಯಾಸ ಕ್ರಮವನ್ನು ವಿಸ್ತಾರವಾಗಿ ಉಪದೇಶಮಾಡಿದನು. ಮತ್ತು ಅಣಿಮಾದ್ಯಷ್ಟಸಿದ್ಧಿ ಸಹಿತವಾದ ಚಕ್ರವರ್ತಿ ಪದವಿಯನ್ನೂ ಕೊಟ್ಟನು.

೩೧. ಆ ಕಾರ್ತವೀರ್ಯಾರ್ಜುನನು ಏಳುದ್ವೀಪಗಳು, ಪರ್ವತಗಳು, ಸಮುದ್ರಗಳು, ಸುವರ್ಣಾದಿಗಳ ಗಣಿಗಳು ಇವುಗಳಿಂದ ಸಹಿತವಾದ ಸಮಸ್ತ ಭೂಮಂಡಲವನ್ನೂ ಧರ್ಮಯುದ್ಧದಿಂದಲೇ ಗೆದ್ದನು.

೩೨. ಪ್ರಾಜ್ಞನಾದ ಆ ಮಹರ್ಷಿಯು ವರಪ್ರಭಾವದಿಂದ ಆ ಕಾರ್ತವೀರ್ಯಾರ್ಜುನನಿಗೆ ಸಾವಿರ ತೋಳುಗಳು ಉತ್ಪನ್ನವಾದುವು. ಮತ್ತು ಅವನು ಯಾಗ ಮಾಡಲಾಗಿ ದಿವ್ಯರಥ ಮತ್ತು ದಿವ್ಯಧ್ವಜ ಇವುಗಳು ಯಜ್ಞೇಶ್ವರನಿಂದ ಅವನಿಗೆ ಲಭ್ಯವಾದುವು.

ದಶಯಜ್ಞಸಹಸ್ರಾಣಿ ತೇಷು ದ್ವೀಪೇಷು ಸಪ್ತಸು ।
ನಿರರ್ಗಲಾನಿ ವೃತ್ತಾನಿ ಸ್ವಯಂ ಪೈ ತಸ್ಯ ಪಾಂಡವ ॥ ೩೩ ॥

ಸರ್ವೇ ಯಜ್ಞಾ ಮಹಾಬಾಹೋ ಪ್ರಸನ್ನಾ ಭೂರಿದಕ್ಷಿಣಾಃ ।
ಸರ್ವೇ ಕಾಂಚನವೇದಿಕ್ಯಾಃ ಸರ್ವೇ ಯೂಪೈಶ್ಚ ಕಾಂಚನೈಃ ॥ ೩೪ ॥

ಸರ್ವದೇವೈರ್ಮಹಾಭಾಗೈರ್ವಿಮಾನಸ್ಥೈರಲಂಕೃತಾಃ ।
ಗಂಧರ್ವೈರಪ್ಸರೋಭಿಶ್ಚ ನಿತ್ಯಮೇವೋಪಶೋಭಿತಾಃ ॥ ೩೫ ॥

ತಸ್ಯ ಯಜ್ಞೇ ಜಗುರ್ಗಾಥಾಂ ಗಂಧರ್ವಾ ನಾರದಸ್ತಥಾ ।
ಚರಿತಂ ರಾಜಸಿಂಹಸ್ಯ ಮಹಿಮಾನಂ ನಿರೀಕ್ಷ್ಯ ತೇ ॥ ೩೬ ॥

ನ ನೂನಂ ಕಾರ್ತವೀರ್ಯಸ್ಯ ಗತಿಂ ಯಾಸ್ಯಂತಿ ಪಾರ್ಥಿವಾಃ ।
ಯಜ್ಞೈರ್ದಾನೈಸ್ತಪೋಭಿರ್ವಾ ವಿಕ್ರಮೇಣ ಶ್ರುತೇನ ಚ ॥ ೩೭ ॥

---

೩೩. ಎಲೈ ಪಾಂಡುಪುತ್ರನೇ! ಆ ಏಳು ದ್ವೀಪಗಳಲ್ಲಿ ಆ ಕಾರ್ತವೀರ್ಯಾರ್ಜುನನು ನಿರರ್ಗಳವಾಗಿ ಹತ್ತುಸಹಸ್ರ ಯಾಗಗಳನ್ನು ನಡೆಯಿಸಿದನು.

೩೪. ಅಯ್ಯಾ ಮಹಾಬಾಹುವೇ! ಆ ಕಾರ್ತವೀರ್ಯಾರ್ಜುನನು ಆಚರಿಸಿದ ಎಲ್ಲಾ ಯಾಗಗಳೂ ಅನಿಂದಿತಗಳೂ, ಬಹು ದಕ್ಷಿಣೆಯುಳ್ಳವುಗಳೂ, ಭಂಗಾರದ ವೇದಿಕೆ ಮತ್ತು ಭಂಗಾರದ ಯೂಪಸ್ತಂಭವುಳ್ಳವುಗಳೂ ಆಗಿದ್ದುವು.

೩೫. ಮತ್ತು ಆ ಎಲ್ಲಾ ಯಾಗಕಾಲದಲ್ಲೂ ಮಹಾಮಹಿಮರಾದ ಸರ್ವದೇವತೆಗಳೂ, ಗಂಧರ್ವರೂ, ಅಪ್ಸರಸ್ಸುಗಳೂ ವಿಮಾನಾರೂಢರಾಗಿ ಬಂದು ಆ ಯಜ್ಞಮಂಟಪಗಳನ್ನಲಂಕರಿಸಿದರು. ಅಲ್ಲದೆ,

೩೬. ಆ ಕಾರ್ತವೀರ್ಯಾರ್ಜುನನ ಯಾಗದಲ್ಲಿ ಗಂಧರ್ವರೂ ಮತ್ತು ನಾರದ ಮಹರ್ಷಿಯೂ, ಆ ರಾಜಸಿಂಹನ ಮಹಿಮೆಯನ್ನೂ ಮತ್ತು ನಡತೆಯನ್ನೂ ಪದ್ಯರೂಪವಾಗಿ ರಚಿಸಿ ಗಾನಮಾಡಿದರು.

೩೭. ಯಜ್ಞ, ದಾನ, ತಪಸ್ಸು, ಪರಾಕ್ರಮ ಶಾಸ್ತ್ರಶ್ರವಣದಿಂದ ಬರುವ ತಿಳುವಳಿಕೆ, ಇವುಗಳ ವಿಷಯದಲ್ಲಿ ಇತರ ರಾಜರುಗಳು ಕಾರ್ತವೀರ್ಯಾರ್ಜುನನ ಅಂತಸ್ತಿಗೆ ನಿಜವಾಗಿಯೂ ಬರುವರಾಗಿಲ್ಲ ಎಂಬದಾಗಿ ಹೊಗಳಿದರು.

ದ್ವೀಪೇಷು ಸಪ್ತಸು ಸ ವೈ ಖಡ್ಗಚರ್ಮಶರಾಸನೀ ।
ವ್ಯಚರಚ್ಛ್ಯೇನವದ್ಯೋ ವೈ ದೂರಾದಾರಾದವೈಕ್ಷತ ॥ ೩೮ ॥

ಅನಷ್ಟದ್ರವ್ಯತಾ ಚಾಸ್ಯ ನ ಶೋಕೋ ನ ಚ ವೈ ಕ್ಲಮಃ ।
ಪ್ರಭಾವೇಣ ಮಹೀರಾಜೋರಕ್ಷದ್ಧರ್ಮೇಣ ಚ ಪ್ರಜಾಃ ॥ ೩೯ ॥

ಪಂಚಾಶೀತಿಸಹಸ್ರಾಣಿ ವರ್ಷಾಣಾಂ ವೈ ನರಾಧಿಪ ।
ಸಮುದ್ರವಸನಾಯಾಂ ಸ ಚಕ್ರವರ್ತೀ ಬಭೂವ ಹ ॥ ೪೦ ॥

ಸ ಏವ ಪಶುಪಾಲೋಽಭೂತ್ಕ್ಷೇತ್ರಪಾಲಃ ಸ ಏವ ಚ ।
ಸ ಏವ ವೃಷ್ಟ್ಯಾ ಪರ್ಜನ್ಯೋ ಯೋಗಿತ್ವಾದರ್ಜುನೋಽಭವತ್ ॥

---

೩೮. ಆ ಕಾರ್ತವೀರ್ಯಾರ್ಜುನನು ಖಡ್ಗ, ಗುರಾಣಿ, ಧನುಸ್ಸು ಇವು ಗಳನ್ನು ಧರಿಸಿ ಭೂಮಂಡಲದ ಏಳು ದ್ವೀಪಗಳಲ್ಲಿಯೂ, ಸಂಚರಿಸುತ್ತಿರುವಾಗ ಶ್ಯೇನ (ಹದ್ದು) ಪಕ್ಷಿಯಂತೆ ದೂರದೃಷ್ಟಿ ಮತ್ತು ಸಮೀಪದೃಷ್ಟಿ ಈ ಎರಡು ಶಕ್ತಿಗಳನ್ನೂ ಹೊಂದಿದ್ದನು.

೩೯. ಅವನು ತನ್ನ ಪ್ರಭುಶಕ್ತಿಯಿಂದಲೇ ಆರ್ಜನೆಮಾಡಿದ ದ್ರವ್ಯ ಗಳನ್ನು ಸ್ವಲ್ಪವೂ ಕಳೆದುಕೊಳ್ಳದೆ ಶೋಕರಹಿತನತಿ, ದೇಹಾಯಾಸರಹಿತನೂ ಆಗಿ ಇದ್ದನು. ಮತ್ತು ಆ ರಾಜನು ಧರ್ಮಮಾರ್ಗದಿಂದಲೇ ಪ್ರಜಾಪಾಲನೆ ಯನ್ನು ಮಾಡುತ್ತಿದ್ದನು.

೪೦ ಎಲೈ ರಾಜನೇ! ಆ ಕಾರ್ತವೀರ್ಯಾರ್ಜುನನು ಸಮುದ್ರವಸನೆ ಯಾದ ಈ ಅಖಂಡ ಭೂಮಂಡಲಕ್ಕೆ ಎಂಭತ್ತೈದುಸಾವಿರ ವರ್ಷಗಳವರೆಗೆ ಚಕ್ರವರ್ತಿಯಾಗಿದ್ದನು.

೪೧. ಈ ರಾಜನೇ! ಪಶುಪಾಲಕನೂ, ಕ್ಷೇತ್ರಪಾಲಕನೂ, ಮಳೆಯ ರೂಪವಾಗಿ ಭೂಮಿಯಲ್ಲಿ ಬೀಳುವ ಪರ್ಜನ್ಯಸ್ವರೂಪನೂ, ಯೋಗಾಭ್ಯಾಸ ಪ್ರವೀಣನಾಗಿರುವುದರಿಂದ ಶುಕ್ಲವರ್ಣವಾಚಕವಾದ ಅರ್ಜುನ ಎಂಬ ನಾಮ ಧೇಯವುಳ್ಳವನೂ ಆದನು. (ಅದರಿಂದ ಶುಕ್ಲಾಂತರಂಗ ಸಾತ್ವಿಕನೆಂದು ಹೇಳಿದ ಹಾಗಾಯಿತು.)

ಸ ವೈ ಬಾಹುಸಹಸ್ರೇಣ ವ್ಯಾಘಾತಕಠಿನತ್ವಚಾ ।
ವಾತಿ ರಶ್ಮಿಸಹಸ್ರೇಣ ಕ್ಷೋಭ್ಯಮಾಣೇ ಮಹೋದಧೌ ॥ ೪೨ ॥

ಸ ಹಿ ನಾಗಮನುಷ್ಯೈಸ್ತು ಮಾಹಿಷ್ಮತ್ಯಾಂ ಮಹಾದ್ಯುತಿಃ ।
ಕರ್ಕೋಟಕಾದೇಃ ಸುತಾಞ್ಜಿತ್ವಾ ಪುರಿ ತತ್ರ ನ್ಯವೇಶಯತ್ ॥ ೪೩ ॥

ಸ ವೈ ಪತ್ನೀಂ ಸಮುದ್ರಸ್ಯ ಪ್ರಾವೃಟ್ಕಾಲೇಂಬುಜೇಕ್ಷಣಾಂ ।
ಕ್ರೀಡತೇ ಚ ಮದೋನ್ಮತ್ತಃ ಪ್ರತಿಸ್ರೋತಶ್ಚಕಾರ ಹ ॥ ೪೪ ॥

ಲಲಿತಂ ಕ್ರೀಡಿತಾ ತೇನ ಫೇನನಿಷ್ಪನ್ದಮಾಲಿನೀ ।
ಊರ್ಮಿಭ್ರುಕುಟಿಮತ್ಯೇವ ಶಂಕಿತಾಸ್ಯೇತಿ ನರ್ಮದಾ ॥ ೪೫ ॥

---

೪೨. ಸಹಸ್ರರಶ್ಮಿಯಿಂದ ಮಹಾಸಾಗರವು ಕ್ಷುಭಿತವಾಗುವ ವೇಳೆಯಲ್ಲಿ ಆ ಕಾರ್ತವೀರ್ಯಾರ್ಜುನನು ಹೆದೆಯ ಹಿಡಿತದಿಂದ ಜಡ್ಡುಗಟ್ಟಿದ ಕಠಿಣವಾದ ತನ್ನ ಸಹಸ್ರಬಾಹುಗಳಿಂದ ವಾಯುವಿನ ಕರ್ಮವನ್ನೂ ಮಾಡುತ್ತಾನೆ.

೪೩. ಮಹಾತೇಜಸ್ವಿಯಾದ ಆ ರಾಜನು ನಾಗಲೋಕದವರ ಜತೆಯಲ್ಲಿ ಕಾದಾಡಿ ಕರ್ಕೋಟಕ ಎಂಬ ಸರ್ಪನ ಪುತ್ರರನ್ನು ಜಯಿಸಿ ಅವರನ್ನು ತನ್ನ ರಾಜಧಾನಿಯಾದ ಮಾಹಿಷ್ಮತೀ ನಗರದಲ್ಲಿ ಬಂಧನದಲ್ಲಿಟ್ಟನು.

೪೪. ಮತ್ತು ಆ ಕಾರ್ತವೀರ್ಯಾರ್ಜುನನು ವರ್ಷಋತುವಿನಲ್ಲಿ (ಮಳೆಗಾಲ) ಕಮಲಗಳೆಂಬ ನೇತ್ರಗಳುಳ್ಳಸಮುದ್ರರಾಜನ ಪತ್ನಿಯಾದ ನದಿಯಲ್ಲಿ ಕ್ರೀಡಿಸುವಾಗ ಮದೋನ್ಮತ್ತನಾಗಿ ಕೆಳಗಡೆಗೆ ಹರಿಯುತ್ತಿರುವ ಪ್ರವಾಹವನ್ನು ತಡೆದು ಮೇಲ್ಮುಖವಾಗಿ ಹರಿಯುವಂತೆ ಮಾಡಿದನು.

೪೫. ಆ ಕಾರ್ತವೀರ್ಯಾರ್ಜುನನು ಕದಾಚಿತ್ ನರ್ಮದಾನದಿಯಲ್ಲಿ ಮನೋಹರವಾಗಿ ಕ್ರೀಡಿಸುತ್ತಿರುವಾಗ ನೊರೆಗಳ ಸಾಲಿನಿಂದ ಕೂಡಿದ ಆ ನರ್ಮದೆಯ ಅಲೆಗಳನ್ನು ನೋಡಿ, ಅವಳು ತನ್ನ ವಿಷಯದಲ್ಲಿ ಹುಬ್ಬುಗಂಟಿಕ್ಕಿರುವಳೆಂದು ಶಂಕೆಪಡುವನು.

ತಸ್ಯ ಬಾಹುಸಹಸ್ರೇಣ ಕ್ಷೋಭ್ಯಮಾಣೇ ಮಹೋದಧೌ ।
ಭವಂತ್ಯಾಲೀನನಿಶ್ಚೇಷ್ಟಾಃ ಪಾತಾಲಸ್ಥಾ ಮಹಾಸುರಾಃ　　|| ೪೬ ||

ತೂಷ್ಣೀಂಕೃತೋ ಮಹಾಭಾಗ ಲೀನಾಹೀನಮಹಾಪತಿಃ ।
ಚಕಾರೋತ್ತುಂಗಕ್ಷುಬ್ಧೋರ್ಮಿಂ ದೋಃಸಹಸ್ರೇಣ ಸಾಗರಂ || ೪೭ ||

ಕ್ರಾಂತಾ ನಿಶ್ಚಲಮೂರ್ಧಾನೋ ಬಭೂವುಶ್ಚ ಮಹೋರಗಾಃ ।
ಸಾಯಾಹ್ನೇ ಕದಲೀಖಂಡಾನ್ನಿರ್ಘಾತನಿಹತಾ ಇವ ।
ಜಿತಾ ಧನುರ್ಧರಾಃ ಸರ್ವೇ ಸುತ್ಯಕ್ತೈಃ ಪಂಚಭಿಃ ಶರೈಃ　　|| ೪೮ ||

ಲಂಕಾಧಿಪಂ ಮೋಹಯಿತ್ವಾ ಸಬಲಂ ರಾವಣಂ ಬಲಾತ್ ।
ನಿರ್ಜಿತ್ಯ ವಶಮಾನೀಯ ಮಾಹಿಷ್ಮತ್ಯಾಂ ಬಬಂಧ ಚ　　|| ೪೯ ||

---

೪೬. ಮತ್ತು ಆ ಕಾರ್ತವೀರ್ಯಾರ್ಜುನನ ಸಹಸ್ರಬಾಹುಗಳಿಂದ ಮಹಾಸಾಗರವು ಕ್ಷುಭಿತವಾದಾಗ ಪಾತಾಳಲೋಕವಾಸಿಗಳಾದ ಮಹಾದೈತ್ಯರು ನಿಶ್ಚೇಷ್ಟರಾಗಿ ಒಂದುಕಡೆ ಅವಿತುಕೊಳ್ಳುತ್ತಿದ್ದರು.

೪೭. ಓ ಮಹಾಭಾಗ್ಯಶಾಲಿಯೇ ! ಆ ರಾಜನು ತನ್ನ ಸಹಸ್ರಬಾಹುಗಳಿಂದ ಸಮುದ್ರದ ನೀರನ್ನು ತಡೆದು ನಿಲ್ಲಿಸಿ, ಆ ನೀರು ಉಕ್ಕಿ, ಎತ್ತರವಾದ ಅಲೆಗಳು ಹುಟ್ಟುವಹಾಗೆ ಕ್ಷೋಭವನ್ನುಂಟುಮಾಡಿ, ಸರ್ಪರಾಜನಾದ ಶೇಷನೂ ಒಂದುಕಡೆಯಲ್ಲಿ ಗುಪ್ತವಾಗಿ ಸುಮ್ಮನಿರುವಂತೆ ಮಾಡಿರುತ್ತಾನೆ.

೪೮. ಮತ್ತು ಆ ರಾಜನು ಮಹಾಸರ್ಪಗಳನ್ನು ಬಲಾತ್ಕಾರದಿಂದ ಹಿಡಿದು, ಅವು ತಮ್ಮ ಹೆಡೆಗಳನ್ನು ಅಲುಗಾಡಿಸದ ಹಾಗೆ ಮಾಡಿರುತ್ತಾನೆ. ಅಲ್ಲದೆ ಸಾಯಂಕಾಲವಾದಮೇಲೆ ಕಾಮನು ಕಾಮುಕರಮೇಲೆ ತನ್ನ ಐದು ಪುಷ್ಪಬಾಣಗಳನ್ನು ಪ್ರಯೋಗಿಸಿ ಅವರನ್ನು ಕಾಮಪರವಶರಾಗುವಂತೆಮಾಡಿ ಗೆದ್ದಂತೆ, ಆ ಕಾರ್ತವೀರ್ಯಾರ್ಜುನನೂ ಲೋಕದಲ್ಲಿರುವ ಧನುರ್ಧಾರಿಗಳ ಮೇಲೆ ಬಾಣಪ್ರಯೋಗಮಾಡಿ ಅವರನ್ನು ಬಾಳೇದಿಂಡುಗಳನ್ನು ಕತ್ತರಿಸಿದಂತೆ ಕತ್ತರಿಸಿ ಹಾಕಿ, ಎಲ್ಲಾ ಧನುರ್ಧಾರಿಗಳನ್ನೂ ಜಯಿಸಿರುತ್ತಾನೆ.

೪೯. ಮತ್ತು ಅವನು ಸ್ವಶಕ್ತಿಯಿಂದ ಲಂಕಾರಾಜ್ಯಾಧಿಪತಿಯಾದ ರಾವಣನನ್ನು ಅವನ ಸೇನಾಸಮೇತವಾಗಿ ಗೆದ್ದು ಕೈಸೆರೆಹಿಡಿದುಕೊಂಡು, ತನ್ನ ರಾಜಧಾನಿಯಾದ ಮಾಹಿಷ್ಮತೀ ನಗರದಲ್ಲಿ ಬಂಧನದಲ್ಲಿಟ್ಟನು.

ತತೋಽಭ್ಯೇತ್ಯ ಪುಲಸ್ತ್ಯಸ್ತು ಅರ್ಜುನಂ ಸಂಪ್ರಸಾದಯನ್ ।
ಮುಮೋಚ ರಕ್ಷಃ ಪೌಲಸ್ತ್ಯಂ ಪೌಲಸ್ತ್ಯೇನಾನುಗಾಮಿನಾ ।
ತಸ್ಯ ಬಾಹುಸಹಸ್ರಸ್ಯ ಬಭೂವ ಜ್ಯಾತಲಸ್ವನಃ ॥ ೫೦ ॥

ಕ್ಷುಧಿತೇನ ಕದಾಚಿತ್ಸಪ್ರಾರ್ಥಿತಶ್ಚಿತ್ರಭಾನುನಾ ।
ಸಪ್ತದ್ವೀಪಾಂ ಚಿತ್ರಭಾನೋಃ ಪ್ರಾದಾದ್ಭಿಕ್ಷಾಂ ಮಹೀಮಿಮಾಂ ॥೫೧॥

ಕುಂಡೇಶಯಸ್ತತೋಽದ್ಯಾಪಿ ದೃಶ್ಯತೇ ಭಗವಾನ್ಹರಿಃ ।
ನಿಂಬಾದಿತ್ಯಶ್ಚ ಪ್ರತ್ಯಕ್ಷೋ ಜಾಗ್ರತ್ಸಂಸ್ತಸ್ಯ ವೇಶ್ಮನಿ ।
ಬಭೂವ ದುಹಿತುರ್ಹೇತೋಃ ಶರದೋಽದ್ಯಾಪಿ ತಿಷ್ಠತಿ ॥ ೫೨ ॥

ಸ ಏವಂ ಗುಣಸಂಯುಕ್ತೋ ರಾಜಾಭೂದರ್ಜುನೋ ಭುವಿ ।
ಅನಘಸ್ಯ ಪ್ರಸಾದೇನ ಯೋಗಾಚಾರ್ಯಸ್ಯ ಪಾಂಡವ ॥ ೫೪ ॥

---

೫೦. ಅನಂತರ ಆ ರಾವಣನ ತಂದೆಯಾದ ಪುಲಸ್ತ್ಯನು ಮಾಹಿಷ್ಮತೀ ನಗರಿಗೆ ಬಂದು ಆ ಕಾರ್ತವೀರ್ಯಾರ್ಜುನನನ್ನು ಹೊಗಳಿ ಪ್ರಸನ್ನನನ್ನಾಗಿ ಮಾಡಿದಮೇಲೆ ಪುಲಸ್ತ್ಯಪುತ್ರನಾದ ಆ ರಾವಣನನ್ನು ಬಂಧನದಿಂದ ಬಿಡಿಸಿ ಕಳುಹಿಸಿದನು. ಆ ಕಾರ್ತವೀರ್ಯಾರ್ಜುನನು ಸಹಸ್ರಬಾಹುಗಳಿಂದ ಬಿಲ್ಲುಗಳ ಹೆದೆಯನ್ನು ಎಳೆಯುವಾಗ ಘೋರವಾದ ಶಬ್ದವುಂಟಾಗುತ್ತಿದ್ದಿತು.

೫೧. ಕದಾಚಿತ್ ಹೊಟ್ಟೆಹಸಿದ ಅಗ್ನಿಯು ತನ್ನ ಕ್ಷುಧಾನಿವೃತ್ಯರ್ಥವಾಗಿ ಆ ಕಾರ್ತವೀರ್ಯಾರ್ಜುನನನ್ನು ಪ್ರಾರ್ಥಿಸಲಾಗಿ, ಅವನು ಆ ಏಳುದ್ವೀಪಗಳಿಂದ ಕೂಡಿದ ಈ ಭೂಮಿಯನ್ನೇ ಅಗ್ನಿಗೆ ಭಿಕ್ಷಾರೂಪವಾಗಿ ಕೊಟ್ಟನು.

೫೨. ಆದುದರಿಂದಲೇ ಪೂಜ್ಯನಾದ ಅಗ್ನಿಯು ಈಗಲೂ ಭೂಗರ್ಭದಲ್ಲಿರುವ ಅಗ್ನಿಕುಂಡದಲ್ಲಿ ವಾಸವಾಗಿದ್ದು ಎಲ್ಲರಿಗೂ ದೃಗ್ಗೋಚರನಾಗುತ್ತಾನೆ. ನಿಂಬಾದಿತ್ಯನೂ ತನ್ನ ಮಗಳಿಗಾಗಿ ಅವನಿಗೆ ಪ್ರತ್ಯಕ್ಷನಾಗಿ ಅಷ್ಟು ವರ್ಷಗಳಿಂದಲೂ ಅವನ ಮನೆಯಲ್ಲಿ ಜಾಗರೂಕನಾಗಿ ವಾಸವಾಗಿ ಇದ್ದಾನೆ.

೫೩. ಓ ಪಾಂಡವನೇ ! ಆ ಕಾರ್ತವೀರ್ಯಾರ್ಜುನನು ಆ ಅನಘನ ಅನುಗ್ರಹದಿಂದ ಯೋಗಸಂಪ್ರದಾಯಪ್ರವರ್ತಕನಾಗಿ ಯೋಗಾಚಾರ್ಯನೆಂದು ಪ್ರಸಿದ್ಧಿ ಪಡೆದು ಈ ಭೂಲೋಕದಲ್ಲಿ ಈ ಸಕಲಗುಣಗಳಿಂದ ಸಂಪನ್ನನಾಗಿದ್ದನು.

**ತೇನೇಯಂ ವರಲಬ್ಧೇನ ಕಾರ್ತವೀರ್ಯೇಣ ಯೋಗಿನಾ ।**
**ಪ್ರವರ್ತಿತಾ ಮರ್ತ್ಯಲೋಕೇ ಪ್ರಸಿದ್ಧಾ ಹ್ಯನಘಾಷ್ಟಮೀ ॥ ೫೪ ॥**

**ಅಘಂ ಪಾಪಂ ಸ್ಮೃತಂ ಲೋಕೇ ತಚ್ಚಾಪಿ ತ್ರಿವಿಧಂ ಭವೇತ್ ।**
**ಯಸ್ಮಾದಘಂ ನಾಶಯತಿ ತೇನಾಸಾವನಘಾ ಸ್ಮೃತಾ ॥ ೫೫ ॥**

**ತಸ್ಯಾಷ್ಟಗುಣಮೈಶ್ವರ್ಯಂ ವಿನೋದಾರ್ಥಂ ವಿಭಾವ್ಯತೆ ।**
**ಅಣಿಮಾ ಮಹಿಮಾ ಪ್ರಾಪ್ತಿಃ ಗರಿಮಾ ಲಘಿಮಾ ತಥಾ ॥ ೫೬ ॥**

**ಈಶಿತ್ವಂ ಚ ವಶಿತ್ವಂ ಚ ಸರ್ವಕಾಮಾವಸಾಯಿತಾ ।**
**ಇತ್ಯಷ್ಟೌ ಯೋಗಸಿದ್ಧಸ್ಯ ಸಿದ್ಧಯೋ ಮೋಕ್ಷಲಕ್ಷಣಾಃ ॥ ೫೭ ॥**

---

೫೪. ಆ ಕಾರ್ತವೀರ್ಯಾರ್ಜುನ ಯೋಗಿಯು ಆ ಅನಘನಿಂದ ವರರೂಪ ವಾಗಿ ಪಡೆದ ಈ ಅನಘಾಷ್ಟಮೀ ವ್ರತವನ್ನು ಭೂಲೋಕದಲ್ಲಿ ಆಚರಣೆಗೆ ತಂದು ಪ್ರಸಿದ್ಧಿಪಡಿಸಿದನು.

೫೫. ಅಘ ಎಂಬ ಪದಕ್ಕೆ ಪಾಪವೆಂಬ ಅರ್ಥವು ವೃದ್ಧರಿಂದ ಉಕ್ತವಾಗಿದೆ. ಆ ಪಾಪವು ಕಾಯಿಕ, ವಾಚಿಕ ಮತ್ತು ಮಾನಸಿಕವೆಂದು ಮೂರುತರಹ ವಾಗಿವೆ. ಈ ಅನಘಾಷ್ಟಮೀ ವ್ರತವು ಅಘವನ್ನು ನಾಶಮಾಡುತ್ತದೆಯಾದುದ ರಿಂದ ಅನಘವೆಂದು ಉಕ್ತವಾಗಿದೆ.

೫೬-೫೭. ಅಷ್ಟವಿಧವಾದ ಐಶ್ವರ್ಯವು ಆ ಅನಘನೆಂಬ ಯೋಗಿಯಲ್ಲಿ ವಿನೋದಾರ್ಥವಾಗಿ ಇದ್ದಿತು. ಆ ಅಷ್ಟೈಶ್ವರ್ಯಗಳಿವು.—1. ಅಣಿಮಾ (ಸೂಕ್ಷ್ಮ ವಾಗಿ ರೂಪವನ್ನು ಹರಿಸುವಶಕ್ತಿ), 2. ಮಹಿಮಾ (ದೊಡ್ಡದಾಗುವಶಕ್ತಿ), 3. ಪ್ರಾಪ್ತಿ (ದೇಶಕಾಲ ವಿಪ್ರಕೃಷ್ಟಗಳಾದ ವಸ್ತುಗಳನ್ನು ತತ್ಕ್ಷಣದಲ್ಲೇ ಪಡೆಯುವ ಶಕ್ತಿ), 4. ಗರಿಮಾ (ಭಾರವಾಗುವಿಕೆ), 5. ಲಘಿಮಾ (ಹಗುರವಾಗುವಿಕೆ), 6. ಈಶಿತ್ವಂ (ಸರ್ವನಿಯಮನಶಕ್ತಿ), 7. ವಶಿತ್ವಂ (ಸರ್ವವನ್ನೂ ಸ್ವಾಧೀನವಾಗಿಟ್ಟುಕೊಳ್ಳೋಣ), 8. ಪ್ರಾಕಾಮ್ಯ—ಸರ್ವಕಾಮಾವಸಾಯಿತ್ವ (ಸಮಸ್ತ ಅಭಿಲಷಿತ ವಸ್ತು ಪ್ರಾಪ್ತಿ, ಮನೋರಥ ಪೂರ್ತಿಯಾಗುವಿಕೆ), ಈ ಅಣಿಮಾದಿ ಎಂಟು ಸಿದ್ಧಿಗಳು ಯೋಗಾಭ್ಯಾಸಿಗೆ ಬರುವ ಯೋಗಫಲಗಳು. ಜೀವನ್ಮುಕ್ತರಿಗೆ ವಿದೇಹಕೈವಲ್ಯ ಬರುವುದಕ್ಕೆ ಮೊದಲು ಅವರಲ್ಲಿರುವ ಜೀವನ್ಮುಕ್ತಿಗೆ ಗುರುತಾಗಿ ಇರುವುವು.

ಸಮುತ್ಪನ್ನಾ ದತ್ತಕಸ್ಯ ಲೋಕೇ ಪ್ರತ್ಯಯಕಾರಕಾಃ ।
ಯಾತ್ರಾಸಮಾಪ್ತೌ ಸಂಗೃಹ್ಯ ಯದಘಾನಿ ತಥೈವ ವಾ ॥ ೫೮ ॥

ಜಗತ್ಸಮಸ್ತಮನಘಂ ಕುರ್ಯಾದಸ್ಮಾದತೋಽನಘಾ ।
ಮದಂಶೋ ಮದ್ಗತಪ್ರಾಣೋ ಲೋಕೇಽಸ್ಮಿನ್ಸೃತ್ತಕೋ ದ್ವಿಜಃ॥ ೫೯ ॥

॥ ಯುಧಿಷ್ಠಿರ ಉವಾಚ ॥

ಕೀದೃಶಂ ಪುಂಡರೀಕಾಕ್ಷ ಸ ವೈ ರಾಜಾರ್ಜುನೋ ವ್ರತಂ ।
ಚಕ್ರೇ ವಾ ತ್ರಿಷು ಲೋಕೇಷು ಕೈರ್ಮಂತ್ರೈಃ ಸಮಯೈಶ್ಚ ಕೈಃ ।
ಕಸ್ಮಿನ್ಕಾಲೇ ತಿಥೌ ಕಸ್ಯಾಮೇತನ್ಮೇ ವದ ಕೇಶವ ॥ ೬೦ ॥

---

೫೮-೫೯. ಈ ಹಿಂದೆ ಹೇಳಿದ ಅಷ್ಟೈಶ್ವರ್ಯಗಳು ಆ ದತ್ತನೆಂಬ ಯೋಗಿಯಲ್ಲಿ ಆವಿರ್ಭಾವವಾಗಿ ಅವನು ಮಹಾಮಹಿಮನೆಂಬ ನಂಬಿಕೆಯನ್ನು ಲೋಕದಲ್ಲಿ ಹುಟ್ಟಿಸಿದುವು. ಅಂತಹ ಅಷ್ಟೈಶ್ವರ್ಯಗಳು ಪ್ರಕೃತದ ಅನಘಾಷ್ಟಮೀ ವ್ರತದ ಫಲವಾಗಿ ಇರುತ್ತವೆ. ಪುಣ್ಯತೀರ್ಥಯಾತ್ರೆಗಳು ಸಮಾಪ್ತಿಯಾದ ಮೇಲೆ ಯಾತ್ರಿಕನ ಸಮಸ್ತಪಾಪವನ್ನೂ ಸಂಗ್ರಹಿಸಿ ಅವನಿಂದ ಹೇಗೆ ಬೇರ್ಪಡಿಸುವುವೋ ಹಾಗೆಯೇ ಈ ಅನಘಾಷ್ಟಮೀ ವ್ರತವೂ ಸಹ ಅನುಷ್ಠಾತೃವಿನ ಪಾಪವಿಮೋಚನೆ ಮಾಡುವುದರಿಂದ ಈ ವ್ರತಕ್ಕೆ ಅನಘಾ ಎಂಬ ಹೆಸರಾಗಿದೆ. ಈ ಅನಘಾಷ್ಟಮೀ ವ್ರತವನ್ನು ಆಚರಿಸುವ ಬ್ರಾಹ್ಮಣನು ಈಶ್ವರನ ಅಂಶದಿಂದ ಹುಟ್ಟಿದವನು. ಮತ್ತು ಈಶ್ವರನಲ್ಲಿಯೇ ಪ್ರಾಣಶಬ್ದವಾಚ್ಯಗಳಾದ ಸರ್ವೇಂದ್ರಿಯಗಳನ್ನೂ ಸಮರ್ಪಿಸಿದವನೂ ಆಗಿರುತ್ತಾನೆ ಎಂದನು.

೬೦. ಯುಧಿಷ್ಠಿರನು ಹೇಳುತ್ತಾನೆ–"ಎಲೈ ಪುಂಡರೀಕಾಕ್ಷನೇ ! ಆ ಕಾರ್ತವೀರ್ಯಾರ್ಜುನನು ಈ ವ್ರತವನ್ನು ಹೇಗೆ ಆಚರಿಸಿದನು ? ಯಾವ ಮಂತ್ರಗಳನ್ನು ಹೇಳಿ ಈ ವ್ರತವನ್ನು ತ್ರಿಲೋಕಗಳಲ್ಲಿ ಆಚರಿಸುತ್ತಾರೆ ? ಇದಕ್ಕಿರುವ ನಿಯಮಗಳೇನು ? ಎಲೈ ಕೇಶವನೇ ! ಈ ವ್ರತವನ್ನು ಯಾವ ಕಾಲದಲ್ಲಿ ಯಾವ ತಿಥಿಯಲ್ಲಿ ಆಚರಿಸಬೇಕೆಂಬುದನ್ನು ನನಗೆ ಹೇಳು" ಎಂದನು.

॥ ಶ್ರೀ ಕೃಷ್ಣ ಉವಾಚ ॥

ಕೃಷ್ಣಾಷ್ಟಮ್ಯಾಂ ಮಾರ್ಗಶೀರ್ಷೇ ದಂಪತೀ ದರ್ಭನಿರ್ಮಿತೌ ।
ಅನಘಂ ಚಾನಘಾಂ ಚೈವ ಬಹುಪುತ್ರೈಃ ಸಮನ್ವಿತಾಂ ॥ ೬೧ ॥

ಪುರಾ ಕೃತೀಕೃತೌ ಶಾಂತೌ ಭೂಮಿಭಾಗೇ ಸ್ಥಿತೌ ಶುಭೌ ।
ಸ್ನಾತ್ವೈವಮರ್ಚಯೇತ್ಪುಷ್ಪೈಃ ಸಸುಗಂಧೈರ್ಯುಧಿಷ್ಠಿರ ॥ ೬೨ ॥

ಋಗ್ವೇದೋಕ್ತಋಚಾ ವಿಪ್ರೋ ವಿಷ್ಣುಂ ಧ್ಯಾತ್ವಾ ಮಮಾಂಶಜಂ ।
ಅನಘಂ ವಾಸುದೇವೇನಾನಘಾಂ ಲಕ್ಷ್ಮೀಂ ವ್ರಜಾಂ ತನುಂ ।
ಪ್ರದ್ಯುಮ್ನಾದಿಪುತ್ರವರ್ಗಂ ಹರಿವಂಶೇ ಯಥೋದಿತಂ ॥ ೬೩ ॥

ಓಂ ಅತೋ ದೇವಾ ಅವಂತು ನೋ ಯತೋ ವಿಷ್ಣುರ್ವಿಚಕ್ರಮೆ ।
ಪೃಥಿವ್ಯಾಸ್ಸಪ್ತಧಾಮಭಿಃ । ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ
ಪದಂ । ಸಮೂಳ್ಹಮಸ್ಯಪಾಂ ಸುರೇ । ತ್ರೀಣಿ ಪದಾ ವಿಚಕ್ರಮೇ
ವಿಷ್ಣುರ್ಗೋಪಾ ಅದಾಭ್ಯಃ । ಅತೋ ಧರ್ಮಾಣಿ ಧಾರಯನ್ ।

---

೬೧–೬೨. ಶ್ರೀ ಕೃಷ್ಣನು ಹೇಳುತ್ತಾನೆ–ಎಲೈ ಯುಧಿಷ್ಠಿರನೇ! ಮಾರ್ಗಶೀರ್ಷ ಬಹುಳ ಅಷ್ಟಮಿಯ ದಿನದಲ್ಲಿ ಅನಘ, ಮತ್ತು ಬಹುಪುತ್ರಸಮನ್ವಿತೆಯಾದ ಅನಘಾ (ನದೀ ಎಂಬ ಅನಘನ ಹೆಂಡತಿ). ಈ ದಂಪತಿಗಳ ಆಕೃತಿಯನ್ನು ದರ್ಭೆಗಳಿಂದ ನಿರ್ಮಿಸಬೇಕು. ಆ ಶುಭದಂಪತಿ ಮೂರ್ತಿಗಳು ಭೂಮಿಯಲ್ಲಿ ಕುಳಿತು ಶಾಂತರಾಗಿ ಪುರಾತನ ಯೋಗಾಭ್ಯಾಸದಲ್ಲಿ ನಿರತರಾವ ಹಾಗೆ ಸ್ಥಾಪನೆ ಮಾಡಬೇಕು. ವ್ರತಾನುಷ್ಠಾತೃವು ಸ್ನಾನಮಾಡಿ ಆ ದಂಪತಿಗಳನ್ನು ಈ ಮುಂದೆ ಹೇಳುವಂತೆ ಪುಷ್ಪ, ಸುಗಂಧ ಇವುಗಳಿಂದರ್ಚಿಸಬೇಕು.

೬೩. ಈ ವ್ರತವನ್ನಾಚರಿಸುವ ಬ್ರಾಹ್ಮಣನು ವಿಷ್ಣುಧ್ಯಾನ ಪುರಸ್ಸರವಾಗಿ ನನ್ನ ಅಂಶದಿಂದ ಜನಿಸಿರುವ ಅನಘನನ್ನು ವಸುದೇವಪುತ್ರನಾದ ವಾಸುದೇವ ರೂಪಿಯನ್ನಾಗಿಯೂ, ಆ ಅನಘೆಯನ್ನು ನಂದಗೋಕುಲದಲ್ಲಿರುವ ಲಕ್ಷ್ಮೀ ಸ್ವರೂಪಿಣಿಯನ್ನಾಗಿಯೂ ಭಾವಿಸಿ ಋಗ್ವೇದದಲ್ಲಿ ಹೇಳಿರುವ,

"ಓಂ ಅತೋದೇವಾ ಅವಂತುನೋ" ಎಂದು ಪ್ರಾರಂಭಿಸಿ "ವಿಷ್ಣೋರ್ಯತ್ಪರಮಂಪದಂ" ಎನ್ನುವವರೆಗಿನ ಮಂತ್ರಗಳಿಂದ ಪೂಜಿಸಬೇಕು. ಪರಿ

**ವಿಷ್ಣೋಃ ಕರ್ಮಾಣಿ ಪಶ್ಯತ ಯತೋ ವ್ರತಾನಿ ಪಸ್ಪಶೇ ।**
**ಇಂದ್ರಸ್ಯ ಯುಜ್ಯಃ ಸಖಾ । ತದ್ವಿಷ್ಣೋಃ ಪರಮಂ ಪದಂ**
**ಸದಾ ಪಶ್ಯಂತಿ ಸೂರಯಃ । ದಿವೀವ ಚಕ್ಷುರಾತತಂ ।**
**ತದ್ವಿಪ್ರಾಸೋವಿಪನ್ಯವೋ ಜಾಗೃವಾಂಸಃ ಸಮಿಂಧತೇ ।**
**ವಿಷ್ಣೋರ್ಯತ್ಪರಮಂ ಪದಂ ।**

**ಲೋಕೋದ್ಭವೈಃ ಫಲೈಃ ಕಂದೈಃ ಶೃಂಗಾರೈರ್ಬದರೈಃ ಶುಭೈಃ ।**
**ವಿತ್ತೈಶ್ಚ ಧಾನ್ಯೈಃ ಪುಷ್ಪೈಶ್ಚ ಗಂಧಧೂಪೈಃ ಸದೀಪಕೈಃ ॥ ೬೪ ॥**

**ಯಃ ಪೂಜಯೇದ್ಭಕ್ತಿಯುಕ್ತಃ ಸರ್ವಪಾಪೈಃ ಪ್ರಮುಚ್ಯತೆ ।**
**ತತೋ ದ್ವಿಜಾನ್ಭೋಜಯೇಚ್ಚ ಸುಹೃತ್ಸಂಬಂಧಿಬಾಂಧವಾನ್ ॥ ೬೫ ॥**

**ವ್ರತಾವಸಾನೇ ಗೃಹ್ಣೀಯಾತ್ಕಿಂಚಿದೇಕೋ ನರೋ ವ್ರತಂ ।**
**ತೇಷಾಂ ಮಧ್ಯೇ ದೃಢಾಶ್ಚಕ್ರುರನಘವ್ರತಪಾರಗಾಃ ॥ ೬೬ ॥**

---

ವಂಶದಲ್ಲಿ ಹೇಳಿದಂತೆಯೇ ಆ ವಾಸುದೇವನ ಪುತ್ರರಾದ ಪ್ರದ್ಯುಮ್ನಾದಿಗಳನ್ನು ಅರ್ಚಿಸಬೇಕು.

೬೪. ಆ ಪ್ರಾಂತದಲ್ಲಿ ದೊರೆಯುವ ನಾನಾವಿಧ ಫಲಗಳನ್ನೂ ಕಂದ ಮೂಲಗಳನ್ನೂ (ಗೆಡ್ಡೆ, ಗೆಣಸು) ಮತ್ತು ಮಂಗಳಕರವಾದ ಬೋರೇಹಣ್ಣು ಗಳನ್ನೂ ಸಂಪಾದಿಸಬೇಕು. ಮತ್ತು ಧನ, ಧಾನ್ಯ, ಪುಷ್ಪ, ಗಂಧ, ಧೂಪ, ದೀಪ ಇತ್ಯಾದಿಗಳಿಂದಲೂ ಪೂಜಿಸಬೇಕು.

೬೫. ಅನಂತರ ಬ್ರಾಹ್ಮಣಭೋಜನವನ್ನು ಮಾಡಿಸಿ, ಮಿತ್ರರು, ಸಂಬಂಧಿಗಳು, ಬಂಧುಗಳು ಇವರುಗಳಿಗೂ ಭೋಜನ ಮಾಡಿಸಬೇಕು. ಈರೀತಿ ಭಕ್ತಿ ಪೂರ್ವಕವಾಗಿ ಯಾವ ಪುರುಷನು ಪೂಜಿಸುತ್ತಾನೋ ಅವನು ಸರ್ವಪಾಪ ವಿನಿರ್ಮುಕ್ತನಾಗುವನು.

೬೬. ಒಂದುಸಲ ಈ ವ್ರತವನ್ನಾಚರಿಸಿ ಆದ ಮೇಲೆ ಆ ಪುರುಷನು ಈ ಅನಘ ವ್ರತ ವಿಧಾನವನ್ನು ಚೆನ್ನಾಗಿ ಅರಿತು, ಇದರಲ್ಲಿ ಪಾರಂಗತರಾಗಿರುವ ಬ್ರಾಹ್ಮಣರ ಮಧ್ಯೆ ನಿಂತು, ದೃಢನಿಶ್ಚಯವುಳ್ಳವನಾಗಿ ಈ ಮುಂದೆ ಹೇಳುವಂತೆ ನಿಯಮವನ್ನು ಆಚರಿಸುವೆನೆಂದು ಪ್ರತಿಜ್ಞೆಮಾಡಬೇಕು.

ಇದಂ ಜೀವನಘಾತೀ ಚೇತ್ಸತ್ಯಂ ತು ಸಮುಯೋಷಿತಂ ।
ವರ್ಷಮೇಕಂ ತತಃ ಸ್ವೇಚ್ಛಾ ಇದಂ ತವಾನಘವ್ರತಂ ॥ ೬೭ ॥

ತತ್ರೋತ್ಪ್ರೇಕ್ಷಣಕಂ ಕಾರ್ಯಂ ನಟನರ್ತಕಗಾಯಕೈಃ ।
ಪ್ರಭಾತೇ ತು ನವಮ್ಯಾಂ ತಂ ತೋಯಮಧ್ಯೇ ವಿಸರ್ಜಯೇತ್ ॥೬೮॥

ಏವಂ ಯಃ ಕುರುತೇ ಪೂಜಾಂ ವರ್ಷೇವರ್ಷೇ ಚ ಹರ್ಷಿತಃ ।
ಭಕ್ತಿಯುಕ್ತಃ ಶ್ರದ್ಧಯಾ ಚ ಸರ್ವಪಾಪೈಃ ಪ್ರಮುಚ್ಯತೆ ॥ ೬೯ ॥

ಕುಟುಂಬಂ ವರ್ಧತೇ ತಸ್ಯ ತಸ್ಯ ವಿಷ್ಣುಃ ಪ್ರಸೀದತಿ ।
ಆರೋಗ್ಯಂ ಸಪ್ತಜನ್ಮಾನಿ ತತೋ ಯಾತಿ ಪರಾಂ ಗತಿಂ ॥ ೭೦ ॥

---

೬೭. "ಶ್ರೀ ಪರಮಾತ್ಮನೇ! ನಿನ್ನ ಸಂಬಂಧಿಯಾದ ಅನಘಾಷ್ಟಮೀವ್ರತವು ನನಗೆ ಪ್ರಾಣಾಪಾಯಕರವಾಗಿ ತೊಂದರೆಮಾಡಿದರೂ ಇವನ್ನು ಬಿಡದೆ ಸತ್ಯವಾಗಿ ಒಂದು ವರ್ಷದವರೆಗೆ ಆಚರಿಸುತ್ತೇನೆ. ಒಂದುವರ್ಷ ಆದ ಮೇಲೆ ಸ್ವೇಚ್ಛಾನುಸಾರವಾಗಿ ಇದನ್ನು ಆಚರಿಸುವೆನು'' ಎಂದು ಪ್ರತಿಜ್ಞಾಪೂರ್ವಕವಾಗಿ ನಿಯಮ ಪರಿಗ್ರಹಮಾಡಬೇಕು.

೬೮. ಅನಂತರ ಆ ಅಷ್ಟಮಿಯ ರಾತ್ರಿಯಲ್ಲಿ ಜಾಗರಣೆಯ ಕಾಲದಲ್ಲಿ ನಟರು, ನರ್ತಕರು, ಗಾಯಕರು ಇವರುಗಳಿಂದ ಪ್ರೇಕ್ಷಣೀಯವಾದ ವಿನೋದಾವಳಿಗಳನ್ನು ಮಾಡಿಸಿ ಜಾಗರಣೆ ಮಾಡಬೇಕು. ಆ ಮಾರನೆಯ (ನವಮಿ) ದಿನ ಆ ಅನಘ ದಂಪತಿಗಳನ್ನು ಆವಾಹನೆಮಾಡಿ ಅರ್ಚಿಸಿದ ಆ ದರ್ಭೆಯ ಪ್ರತಿಕೃತಿಯನ್ನು ನೀರಿನ ಸಮೀಪದಲ್ಲಿ ವಿಸರ್ಜನೆ ಮಾಡಬೇಕು.

೬೯. ಈ ರೀತಿಯಾಗಿ ಯಾವನು ಸಂತೋಷದಿಂದ ಭಕ್ತಿಶ್ರದ್ಧಾಪೂರ್ವಕವಾಗಿ ಪ್ರತಿವರ್ಷದಲ್ಲಿ ಈ ಪೂಜೆಯನ್ನು ಮಾಡುವನೋ ಅಂಥವನಿಗೆ ಸರ್ವಪಾಪಗಳೂ ನಿವೃತ್ತಿಯಾಗುವುವು.

೭೦. ಮತ್ತು ಅವನ ಕುಟುಂಬವು ವೃದ್ಧಿಯಾಗುವುದು. ಅಲ್ಲದೆ ಅವನು ವಿಷ್ಣುವಿನ ಅನುಗ್ರಹಕ್ಕೆ ಪಾತ್ರನಾಗುತ್ತಾನೆ. ಮತ್ತು ಏಳು ಜನ್ಮದಲ್ಲೂ ಅವನು ಆರೋಗ್ಯವಾಗಿರುತ್ತಾನೆ. ಅನಂತರ ಪರಮ ಸದ್ಗತಿಯನ್ನು ಹೊಂದುತ್ತಾನೆ.

ಏತಾಮುಘೌಘಶಮನಾಮನಘಾಷ್ಟಮೀಂ ಚ ।
ಕೌಂತೇಯ ಸಂಪ್ರತಿ ಮಯಾ ಕಥಿತಾಂ ಹಿತಾಯ ।
ಕುರ್ವಂತ್ಯನನ್ಯಮನಸಃ ಸ್ವಯಶೋಭಿವೃದ್ಧ್ಯೈ ।
ಋದ್ಧಿಂ ಪ್ರಯಾಂತಿ ಕೃತವೀರ್ಯಸುತಾನುರೂಪಾಂ ॥ ೭೧ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಅನಘಾಷ್ಟಮೀ ವ್ರತಂ ನಾಮಾಷ್ಟಪಂಚಾಶತ್ತಮೋಽಧ್ಯಾಯಃ.



---

೭೧. ಓ ಕುಂತೀ ಪುತ್ರನೇ! ನಿನ್ನ ಹಿತಕ್ಕಾಗಿ ಈಗ ನಾನು ಹೇಳಿರುವ ಸರ್ವಪಾಪ ನಾಶಕವಾದ ಈ ಅನಘಾಷ್ಟಮೀ ವ್ರತವನ್ನು ತಮ್ಮ ಯಶೋಭಿವೃದ್ಧಿಗಾಗಿ ಚಿತ್ತೈಕಾಗ್ರತೆಯಿಂದ ಯಾರು ಆಚರಿಸುವರೋ ಅಂಥವರು ಕೃತವೀರ್ಯ ಪುತ್ರನಾದ ಕಾರ್ತವೀರ್ಯಾರ್ಜುನನಿಗೆ ಸಮಾನವಾದ ಸಂಪತ್ತನ್ನು ಹೊಂದುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಅನಘಾಷ್ಟಮೀ ವ್ರತವರ್ಣನೆ ಎಂಬ ಐವತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಏಕೋನಷಷ್ಟಿತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

**ಅಥಾನ್ಯತ್ಸಂಪ್ರವಕ್ಷ್ಯಾಮಿ ವ್ರತಂ ಶ್ರೇಯಸ್ಕರಂ ಪರಂ ।**
**ಶಿವಲೋಕಪ್ರದಂ ಪುಣ್ಯಂ ವಿಧಿವನ್ಮೇ ನಿಬೋಧತಾಂ ॥ ೧ ॥**

**ವಾರೇ ಸೋಮೇ ಸಿತಾಷ್ಟಮ್ಯಾಂ ಪಕ್ಷೇ ಸೋಮಂ ಸಮರ್ಚಯೇತ್ ।**
**ವಿಧಿನಾ ಚಂದ್ರಚೂಡಾಲಂ ಪ್ರಾಪ್ಯಮೇತತ್ಸಚಂದ್ರಕಂ ॥ ೨ ॥**

---

### ಐವತ್ತೊಂಭನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಓ ಯುಧಿಷ್ಠಿರನೇ! ಈಗ ಪರಮ ಶ್ರೇಯಸ್ಕರವೂ, ಶಿವಲೋಕಪ್ರಾಪ್ತಿ ಸಾಧನವೂ, ಪುಣ್ಯಪ್ರದವೂ ಆಗಿರುವ ಇನ್ನೊಂದು ವ್ರತವನ್ನೂ, ಅದರ ನಿಯಮಗಳನ್ನೂ ಹೇಳುತ್ತೇನೆ ಕೇಳು.

೨-೩. ಶುಕ್ಲಪಕ್ಷದ ಅಷ್ಟಮೀ ತಿಥಿಯು ಸೋಮವಾರಯುತವಾದರೆ ಆ ದಿನ ಚಂದ್ರಶೇಖರನಾದ ಶ್ರೀ ಪರಮೇಶ್ವರನನ್ನು ಅರ್ಚಿಸಬೇಕು. ಇದರಿಂದ ಶಿವಲೋಕ ಪ್ರಾಪ್ತಿಯೇ ಮೊದಲಾದ ಪೂರ್ವೋಕ್ತ ಫಲವನ್ನು ಹೊಂದುತ್ತಾನೆ ಆ ಅರ್ಚನೆಗೆ ಉಪಯೋಗಿಸುವ ಪ್ರತಿಮೆಯ ಬಲಭಾಗದಲ್ಲಿ ಚಂದ್ರಮೌಳಿಯಾದ ಶ್ರೀ ಪರಮೇಶ್ವರನನ್ನು ಚಂದ್ರಸಹಿತವಾಗಿ ಆವಾಹನೆಮಾಡಿ ಅರ್ಚಿಸಬೇಕು. ಮಧ್ಯಭಾಗದಲ್ಲೂ ಮತ್ತು ಸುತ್ತಲೂ ಸ್ವಾಮಿಯಾದ ಶ್ರೀ ಹರಿಯನ್ನು

ದಕ್ಷಿಣಾರ್ಧೇ ಹರಿಂ ಧ್ಯಾತ್ವಾ ಮಧ್ಯೇ ತು ಪರಿತಃ ಪ್ರಭುಂ ।
ಪಂಚಾಮೃತಾದಿನಾ ದೇವಂ ಸ್ನಾಪಯಿತ್ವಾ ಯತವ್ರತೀ ॥ ೩ ॥

ಚಂದನೇನೇಂದುಯುಕ್ತಂಚ ದಕ್ಷಿಣಾರ್ಧಂ ವಿಲೇಪಯೇತ್ ।
ಹರಭಾಗಂ ಶುಕ್ಲರಕ್ತಂ ಶಿವಸ್ಯೋಪರಿ ಮೌಕ್ತಿಕಂ ॥ ೪ ॥

ಪಶ್ಚಾತ್ಪುಷ್ಪೈಃ ಸಮಭ್ಯರ್ಚ್ಯ ಸಿತೈ ರಕ್ತೈರನುತ್ತಮೈಃ ।
ನೀರಾಜನಂ ಪುನಃ ಕುರ್ಯಾತ್ಪಂಚವಿಂಶತಿದೀಪಕೈಃ ।
ಅಥ ಸಿದ್ಧೈಃ ಶುಭೈರ್ಭಕ್ಷ್ಯೈರ್ನೈವೇದ್ಯಂ ವಿನಿವೇದಯೇತ್ ॥ ೫ ॥

ಏವಂ ಕೃತೋಪವಾಸಸ್ತು ಪ್ರಭಾತೇ ಪೂರ್ವವಚ್ಛಿವಂ ।
ಸಂಪೂಜ್ಯಾಜ್ಯಂ ತಿಲೈರ್ಮಿಶ್ರಂ ಜುಹುಯಾಜ್ಜಾತವೇದಸಿ ॥ ೬ ॥

---

ಧ್ಯಾನಿಸಿ ಪೂಜಿಸಬೇಕು. ನಿಯಮಪೂರ್ವಕವಾಗಿ ಈ ವ್ರತವನ್ನಾಚರಿಸುವವನು ಈ ರೀತಿ ದೇವತಾಸ್ಥಾಪನೆ ಮಾಡಿದ ಮೇಲೆ ಪಂಚಾಮೃತಾಭಿಷೇಕಾದಿಗಳನ್ನು ಮಾಡತಕ್ಕದ್ದು.

೪. ಅಭಿಷೇಕಾನಂತರ ಚಂದ್ರಶೇಖರನಾದ ಹರನನ್ನು ಆವಾಹಿಸಿರುವ ಬಲಭಾಗದಲ್ಲಿ ಚಂದನ ವಿಲೇಪನವನ್ನು ಮಾಡಬೇಕು. ವಿಶೇಷತಃ ಹರನನ್ನು ಆವಾಹಿಸಿದ ಭಾಗದಲ್ಲಿ ಬಿಳಿಯದಾದ ಶ್ರೀ ಗಂಧವನ್ನು ಹಚ್ಚಬೇಕು. ಹರಿಯನ್ನು ಆವಾಹಿಸಿದ ಭಾಗಕ್ಕೆ ರಕ್ತಚಂದನವನ್ನು ಹಚ್ಚಿ ಕೆಂಪಾಗಿ ಮಾಡಬೇಕು. ಶಿವನನ್ನು ಆವಾಹಿಸಿದ ಭಾಗದಲ್ಲಿ ಶಿವನ ಶಿರಸ್ಸಿನಲ್ಲಿ ಬಿಳಿಯ ಮುಕ್ತಾಫಲಗಳನ್ನು ಇಡಬೇಕು.

೫. ಅನಂತರ ಉತ್ತಮವಾದ ಬಿಳುಪು ಮತ್ತು ಕೆಂಪು ಪುಷ್ಪಗಳಿಂದ ಪೂಜೆಮಾಡಿ ಪುನಃ ಇಪ್ಪತ್ತೈದು ದೀಪಗಳನ್ನಿಟ್ಟು ನೀರಾಜನವನ್ನು ಮಾಡಬೇಕು. ಅನಂತರ ತತ್ಕಾಲದಲ್ಲಿ ಸಾಧ್ಯವಾಗುವ ಶುಭಕರವಾದ ಭಕ್ಷ್ಯಗಳನ್ನು ಮಾಡಿಸಿ ನೈವೇದ್ಯ ಸಮರ್ಪಣೆ ಮಾಡಬೇಕು.

೬. ಈ ರೀತಿ ಆ ಅಷ್ಟಮೀ ದಿನದಲ್ಲಿ ಪೂಜೆಮಾಡಿ ಉಪವಾಸದಿಂದಿದ್ದು ಮರುದಿನ ಬೆಳಗಾದಮೇಲೆ ಪೂರ್ವದಿನದಲ್ಲಾಚರಿಸಿದಂತೆಯೇ ಶಿವಾರ್ಚನೆ ಮಾಡಿ ಅಗ್ನಿಯಲ್ಲಿ ಆಜ್ಯ (ತುಪ್ಪ) ಮಿಶ್ರವಾದ ತಿಲದಿಂದ ಹೋಮ ಮಾಡಬೇಕು.

ವ್ರತಿನೋ ಬ್ರಾಹ್ಮಣಾನ್ಪತ್ನೀರ್ಭೋಜಯಿತ್ವಾ ವಿಧಾನತಃ ।
ಮಿಥುನಾನಿ ತು ಸಂಭೋಜ್ಯ ಯಥಾಶಕ್ತ್ಯನುಪೂಜಯೇತ್ ॥ ೭ ॥

ಆವರ್ತ್ಯ ಪುನರಭ್ಯರ್ಚ್ಯ ವಿಧಿನಾ ತೇನ ಸುವ್ರತ ।
ಸಂವತ್ಸರಾಂತೇ ಕರ್ತವ್ಯಂ ಯತ್ತತ್ಸರ್ವಂ ನಿಬೋಧ ಮೇ ॥ ೮ ॥

ಪ್ರಾಗುಕ್ತವಿಧಿನಾ ಪೂಜ್ಯಾ ಸಿತಪೀತಯುಗದ್ವಯಂ ।
ದದ್ಯಾದ್ವಿತಾನಕಂ ಚೈವ ಪತಾಕಾಂ ಘಂಟಿಕಾಂ ತಥಾ ॥ ೯ ॥

ಧೂಪಗಂಧಾರಸೀ ಚಾಪಿ ದೀಪವೃಕ್ಷಂ ಸುಶೋಭನಂ ।
ಏವಮಾದೀನಿ ಯೋಜ್ಯಾನಿ ಪೂರ್ವವದ್ಭೋಜ್ಯಮಾಚರೇತ್ ॥ ೧೦ ॥

---

೭. ಅನಂತರ ನಿಯಮಯುಕ್ತರಾದ ಬ್ರಾಹ್ಮಣರಿಗೂ ಅವರ ಪತ್ನಿಯರಿಗೂ ವಿಧ್ಯುಕ್ತರೀತಿಯಿಂದ ಭೋಜನ ಮಾಡಿಸಬೇಕು. ಮತ್ತು ಯಥಾಶಕ್ತಿ ಆ ದಂಪತಿಗಳಿಗೆ ವಸ್ತ್ರಾಲಂಕಾರಗಳಿಂದ ಪೂಜೆ ಮಾಡಬೇಕು.

೮. ಎಲೈ ಆಚಾರಸಂಪನ್ನನೇ ! ಪ್ರತಿಮಾಸವಲ್ಲೂ ಈ ಕ್ರಮದಿಂದಲೇ ಅರ್ಚನೆಮಾಡಿ ಈ ವ್ರತವನ್ನು ಅನುಷ್ಠಾನಮಾಡಿದ ಮೇಲೆ ವರ್ಷದ ಕೊನೆಯಲ್ಲಿ ಮಾಡಬೇಕಾದುದನ್ನು ಹೇಳುತ್ತೇನೆ ತಿಳಿಯುಕೋ.

೯. ಆ ವರ್ಷಾಂತದಲ್ಲೂ ಹಿಂದೆ ಹೇಳಿದ ರೀತಿಯಾಗಿ ಹರಿಹರರಿಬ್ಬರನ್ನೂ ಕೆಂಪು ಮತ್ತು ಬಿಳಪು ಬಣ್ಣದ ಗಂಧ, ಪುಷ್ಪ ಇತ್ಯಾದಿಗಳಿಂದ ಅರ್ಚನೆ ಮಾಡುವುದರಿಂದ ತತ್ತದ್ವರ್ಣದವರನ್ನಾಗಿಯೇ ಮಾಡಿ ಆ ದೇವತಾ ಅಲಂಕಾರಾರ್ಥವಾಗಿ ಮೇಲ್ಕಟ್ಟು, ಪತಾಕೆ, ಘಂಟೆ ಇತ್ಯಾದಿಗಳನ್ನು ಕಟ್ಟಿ ಅರ್ಚಿಸಬೇಕು.

೧೦. ಮತ್ತು ಧೂಪ, ಗಂಧ ಮನೋಹರವಾದ ದೀಪಸ್ತಂಭ ಇವೇ ಮೊದಲಾದುವುಗಳನ್ನು ಆ ಪೂಜೆಯಲ್ಲಿ ಉಪಯೋಗಿಸತಕ್ಕದ್ದು. ಹಿಂದೆ ಹೇಳಿದಂತೆಯೇ ಭಕ್ಷ್ಯ ಭೋಜ್ಯಗಳನ್ನು ತಯಾರಿಸಿ ನೈವೇದ್ಯದ ಸಮರ್ಪಣವನ್ನು ಮಾಡಬೇಕು.

ಚತುರಸ್ರಂ ತ್ರಿಕೋಣಂ ಚ ಮಂಡಲಂ ಕಾರಯೇತ್ತತಃ ।
ತ್ರಿಕೋಣೇ ಪಾರ್ವತೀಂ ಧ್ಯಾಯೇಚ್ಚತುರಸ್ರೇ ಮಹೇಶ್ವರಂ ॥ ೧೧ ॥

ಸಂಕಲ್ಪ್ಯ ದ್ವಿಜದಾಂಪತ್ಯಂ ವಾಸೋಭಿರ್ಭೂಷಣೈಸ್ತಥಾ ।
ಪೂಜಯಿತ್ವಾ ಯಥಾಶಕ್ತ್ಯಾ ಕುರ್ಯಾನ್ನೀರಾಜನಂ ಶುಭೈಃ ।
ದೀಪಕೈಃ ಪಂಚವಿಂಶದ್ಭಿರ್ಭೋಜಯಿತ್ವಾ ವಿಸರ್ಜಯೇತ್ ॥ ೧೨ ॥

ಅಬ್ದಪಂಚಕಮೇಕಂ ವಾ ಏವಂ ಯಃ ಕುರುತೇ ನರಃ ।
ಉಭಾಭ್ಯಾಂ ಲೋಕಮಾಸಾದ್ಯ ಪದಂ ಯಾಸ್ಯತ್ಯನಾಮಯಂ ॥ ೧೩ ॥

ಆದೇಹಪತನಾದ್ಯಸ್ತು ನಿತ್ಯಮೇತತ್ಸಮಾಚರೇತ್ ।
ಇಹೈವ ಸ ಹರಿಃ ಸಾಕ್ಷಾನ್ನರರೂಪೋ ವಿಭಾವ್ಯತೆ ॥ ೧೪ ॥

---

೧೧. ಅನಂತರ ಚತುರಸ್ರಾಕೃತಿ (ನಾಲ್ಕುಕೋಣವುಳ್ಳ) ತ್ರಿಕೋಣಾಕೃತಿ ಈ ಎರಡು ಮಂಡಲವನ್ನು ಮಾಡಿಸಬೇಕು. ಅದರಲ್ಲಿ ತ್ರಿಕೋಣ ಮಂಡಲದಲ್ಲಿ ಶ್ರೀ ಪಾರ್ವತೀದೇವಿಯನ್ನು ಆವಾಹಿಸಿ ಧ್ಯಾನಮಾಡಬೇಕು. ಚತುರಸ್ರ ಮಂಡಲದಲ್ಲಿ ಶ್ರೀ ಪರಮೇಶ್ವರನನ್ನು ಧ್ಯಾನಿಸಬೇಕು.

೧೨. ಅನಂತರ ಬ್ರಾಹ್ಮಣದಂಪತಿಗಳಿಗೆ ಯಥಾಶಕ್ತಿ ವಸ್ತ್ರ ಮತ್ತು ಭೂಷಣಗಳನ್ನು ಕೊಟ್ಟು ಸಂಕಲ್ಪಪೂರ್ವಕವಾಗಿ ಪೂಜೆಮಾಡಿ ಇಪ್ಪತ್ತೈದು ದೀಪಗಳನ್ನು ಹಚ್ಚಿ ಮಂಗಳಾರತಿಯನ್ನು ಬೆಳಗಿ, ಅವರಿಗೆ ಭೋಜನಮಾಡಿಸಿ ಕಳುಹಬೇಕು.

೧೩. ಈ ಕ್ರಮದಲ್ಲಿ ಯಾವ ಪುರುಷನು ಐದುವರ್ಷ ಅಥವಾ ಒಂದು ವರ್ಷ ಆಚರಿಸುತ್ತಾನೋ ಅಂತಹವನು ಆ ಎರಡು ವಿಧವಾದ ಆಚರಣೆಯಿಂದಲೂ ಶುಭಲೋಕವನ್ನು ಪಡೆದು ನಶ್ವರತ್ವಾದಿ ಯಾವ ದೋಷವೂ ಇಲ್ಲದ ಸ್ಥಾನವನ್ನು ಹೊಂದುತ್ತಾನೆ.

೧೪. ಯಾವನು ಈ ತನ್ನ ಶರೀರ ಪತನವಾಗುವವರೆಗೂ ಈ ವ್ರತವನ್ನು ಸದಾ ಆಚರಿಸುತ್ತಾನೋ ಅಂತಹವನನ್ನು ಈ ಲೋಕದಲ್ಲಿ ನರರೂಪಿಯಾದ ಸಾಕ್ಷಾತ್ ವಿಷ್ಣುವೆಂದು ಭಾವಿಸಬೇಕು.

ನ ಸ್ಪೃಶಂತ್ಯಾಪದಸ್ತಸ್ಯ ನ ದುಃಖೀ ಭವತಿ ಕ್ವಚಿತ್ ।
ಜ್ವರಗ್ರಹಾದಿಭಿರ್ನೈವ ಪೀಡ್ಯತೇಽಸೌ ಕದಾಚನ ॥ ೧೫ ॥

॥ ಶ್ರೀ ಕೃಷ್ಣ ಉವಾಚ ॥

ಅಥವಾ ತೇನ ಮಾರ್ಗೇಣ ತಾಮುವೇಹಿ ಸಿತಾಷ್ಟಮೀಂ ।
ಸಂಪ್ರಾಪ್ಯಾದಿತ್ಯಯೋಗೇನ ಪ್ರಾಗ್ವಿಧಾನೇನ ಚಾಭ್ಯಸೇತ್ ॥ ೧೬ ॥

ಕಿಂತು ದಕ್ಷಿಣನೇತ್ರಸ್ಥಂ ಭಾಸ್ಕರಂ ವಾರ್ಚಯೇದ್ಬುಧಃ ।
ಪದ್ಮರಾಗೇಣ ದಿವ್ಯೇನ ಸುವರ್ಣೇನ ಚ ಪಾರ್ವತೀಂ ॥ ೧೭ ॥

---

೧೫. ಮತ್ತು ಅವನಿಗೆ ಯಾವ ರೀತಿಯ ಆಪತ್ತುಗಳೂ ಸಂಭವಿಸುವುದಿಲ್ಲ. ಯಾವ ದೇಶಕಾಲಗಳಲ್ಲೂ ಅವನು ದುಃಖಭಾಗಿಯಾಗುವುದಿಲ್ಲ. ಮತ್ತು ಜ್ವರದುಷ್ಟಗ್ರಹಾದಿ ಭಾಧೆಗಳು ಅವನನ್ನು ಯಾವ ಕಾಲದಲ್ಲೂ ಪೀಡಿಸಲಾರವು.

೧೬. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ಯುಧಿಷ್ಠಿರನೇ! ಹಿಂದೆ ಹೇಳಿದ ರೀತಿಯಾಗಿ ಅಲ್ಲದೆ ಶುಕ್ಲಪಕ್ಷದ ಅಷ್ಟಮಿಯು ಭಾನುವಾರದ ದಿನ ಸಂಭವಿಸಿದರೂ ಈ ಹಿಂದೆ ಹೇಳಿದ ಪೂಜಾಕ್ರಮವನ್ನನುಸರಿಸಿಯೇ ಆವೃತ್ತಿಯಿಂದ (ಅನೇಕ ಸಾರಿ) ಈ ವ್ರತವನ್ನು ಆಚರಿಸಬಹುದು.

೧೭. ಪಂಡಿತನಾದವನು ಈಶ್ವರನನ್ನು ಪುರುಷನ ದಕ್ಷಿಣಾಕ್ಷಿಸ್ಥನನ್ನಾಗಿಯೋ ಆದಿತ್ಯಮಂಡಲಸ್ಥನನ್ನಾಗಿಯೋ ಭಾವಿಸಿ ಅರ್ಚಿಸಬೇಕು. ಈ ವಿಷಯದಲ್ಲಿ,

"ಅಥಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋದೃಶ್ಯತೇ ।
ಅಥಯ ಏಷೋಂತರಕ್ಷಿಣೇ ಪುರುಷೋದೃಶ್ಯತೆ"

ಇತ್ಯಾದಿ ಛಾಂದೋಗ್ಯಾದಿ ಶ್ರುತಿ ವಾಕ್ಯಗಳೂ

"ದಕ್ಷಿಣಾಕ್ಷಿ ಮುಖೇ ವಿಶ್ವಃ"

ಧ್ಯೇಯಃ ಸದಾಸವಿತೃ ಮಂಡಲ ಮಧ್ಯವರ್ತೀ ನಾರಾಯಣಃ

ಇತ್ಯಾದಿ ಸ್ಮೃತಿ ವಚನಗಳೂ ಇದಕ್ಕೆ ಪ್ರಮಾಣವಾಗಿವೆ. ಅವರಲ್ಲೂ ಈಶ್ವರ ವಿಗ್ರಹವನ್ನು ದಿವ್ಯವಾದ ಪದ್ಮರಾಗಮಣಿಯಿಂದ ಮಾಡಿಸಬೇಕು. ಪಾರ್ವತಿಯ ವಿಗ್ರಹವನ್ನು ಭಂಗಾರದಿಂದ ತಯಾರಿಸತಕ್ಕದ್ದು.

ಕುಂಕುಮೇನ ಸಮಾಲಭ್ಯ ಚಂದನೇನ ಶಿವಂ ತಥಾ ।
ಅಭಾವೇ ಸರ್ವರತ್ನಾನಾಂ ಹೇಮ ಸರ್ವತ್ರ ಯೋಜಯೇತ್ ॥ ೧೮ ॥

ರುದ್ರಬೀಜಂ ಪರಂ ಪೂತಂ ಪ್ರಿಯಂ ರುದ್ರಸ್ಯ ಸರ್ವದಾ ।
ರಕ್ತಮಾಲ್ಯಾಂಬರಧರಂ ನೈವೇದ್ಯಂ ಘೃತಪಾಚಿತಂ ॥ ೧೯ ॥

ಶೇಷಃ ಪೂರ್ವವಿಧಾನೇನ ಕರ್ತವ್ಯೋ ವಿಧಿವಿಸ್ತರಃ ।
ತಿಥೌ ಪೂರ್ಣೇ ಚ ಕುರ್ವೀತ ಗವ್ಯೇನಾನಘ ಪಾರಣಂ ॥ ೨೦ ॥

ಏತತ್ಪ್ರೋಕ್ತ ವಿಧಾಯಾಬ್ದಂ ಪಂಚಾಬ್ದಾನೇವಮೇವ ಚ ।
ಕೃತ್ವಾ ಸೂರ್ಯಾದಿಲೋಕೇಷು ಭುಕ್ತ್ವಾ ಭೋಗಾನ್ವ್ರಜೇತ್ಪರಂ ॥೨೧॥

---

೧೮. ಪಾರ್ವತಿಯನ್ನು ಕುಂಕುಮದಿಂದ ಅರ್ಚಿಸಬೇಕು. ಶ್ರೀ ಶಿವನಿಗೆ ಚಂದನವನ್ನು ಲೇಪಿಸಿ ಅರ್ಚನೆಯನ್ನು ಮಾಡಬೇಕು. ಪದ್ಮರಾಗಾದಿ ರತ್ನಗಳು ದುರ್ಲಭವಾದರೆ ಅವುಗಳನ್ನು ಪಯೋಗಿಸಬೇಕೆಂದು ಹೇಳಿದ ಸ್ಥಲಗಳಿಗೆ ಆ ರತ್ನಗಳ ಪ್ರತಿನಿಧಿಯಾಗಿ ಆ ಸ್ಥಾನದಲ್ಲಿ ಭಂಗಾರವನ್ನು ಪಯೋಗಿಸಬೇಕು.

೧೯. ಪರಮಪವಿತ್ರವೂ, ಸರ್ವದಾ ರುದ್ರನಿಗೆ ಪ್ರಿಯವೂ ಆಗಿರುವ ರುದ್ರ ಬೀಜಾಕ್ಷರ (ಮೂಲಮಂತ್ರ) ಮಂತ್ರದ ಜಪವನ್ನು ಮಾಡಬೇಕು. ಅಥವಾ ಪರಮ ಪವಿತ್ರವಾಗಿಯೂ, ಸದಾ ಶ್ರೀ ಶಿವನಿಗೆ ಪ್ರಿಯವಾಗಿರುವ ಶ್ರೀ ರುದ್ರ ಬೀಜ (ರುದ್ರಾಕ್ಷಿ) ವನ್ನಿಟ್ಟು ಅಲಂಕರಿಸಬೇಕು. ರಕ್ತಮಾಲ್ಯಗಳಿಂದಲೂ ರಕ್ತವಸ್ತ್ರಗಳಿಂದಲೂ ಅರ್ಚಿಸಿ ಈ ರೀತಿ ರಕ್ತಮಾಲ್ಯಾಂಬರಧರನನ್ನಾಗಿ ಮಾಡಬೇಕು. ಮತ್ತು ಘೃತಪಕ್ವವಾದ ನೈವೇದ್ಯವನ್ನು ಅರ್ಪಿಸಬೇಕು.

೨೦. ಎಲೈ ನಿಷ್ಕಲ್ಮಷನಾದ ಯುಧಿಷ್ಠಿರನೇ! ಉಳಿದ ಪೂಜಾವಿಧಿ ವಿಧಾನವನ್ನು ಹಿಂದೆ ಹೇಳಿದ ಕ್ರಮದಿಂದಲೇ ಜರುಗಿಸಬೇಕು. ಆ ಅಷ್ಟಮಿ ತಿಥಿಯು ಪೂರ್ತ ಕಳೆದಮೇಲೆ ಹಸುವಿನ ಹಾಲು, ಮೊಸರು, ತುಪ್ಪ ಈ ಪದಾರ್ಥಗಳನ್ನು ಪಯೋಗಿಸಿ ವ್ರತಾಂಗವಾದ ಪಾರಣೆಯನ್ನು ಮಾಡಬೇಕು.

೨೧. ಮೊದಲು ಹೇಳಿದಂತೆಯೇ ಐದುವರ್ಷ ಅಥವಾ ಒಂದುವರ್ಷ ಈ ರೀತಿಯಾಗಿ ಈ ವ್ರತವನ್ನಾಚರಿಸಿದವನು, ಸೂರ್ಯಲೋಕಾದಿ ಉತ್ತಮಲೋಕಗಳಲ್ಲಿ ಸುಖವನ್ನನುಭವಿಸಿ ಅನಂತರ ಪರಮಪದವನ್ನು ಪಡೆಯುತ್ತಾನೆ.

ಪತಂಗವತ್ಪ್ರತಾಪೀ ಸ್ಯಾದದೀನಶ್ಚ ಜನಪ್ರಿಯಃ ।
ಅಸ್ಮಿನ್ರೋಗೋ ನ ಬಾಧೇತ ಧನವಾನ್ಪುತ್ರವಾನ್ಭವೇತ್ ॥ ೨೨ ॥

ಯದ್ಯಷ್ಟಮೀ ಭವತಿ ಸೋಮಯುತಾ ಕದಾಚಿ ।
ದರ್ಕೇಣ ವಾ ಕುರುಕುಲೋದ್ವಹ ತಾಮುಪೋಷ್ಯ ।
ಪೂಜ್ಯೋ ಮಯಾ ಸಹ ಹರಂ ಹರಿಣಾಂಕಚಿಹ್ನಂ ।
ಭಕ್ತ್ಯಾಯುಷಾಂ ಪದಮುಪೈತಿ ಪದಂ ಪುರಾರೇಃ ॥ ೨೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಸೋಮಾಷ್ಟಮೀ ವ್ರತವರ್ಣನಂ ನಾಮೈಕೋನಷಷ್ಟಿತಮೋಽಧ್ಯಾಯಃ.



೨೨. ಮತ್ತು ಅವನು ಮನುಷ್ಯಲೋಕದಲ್ಲಿ ಸೂರ್ಯನಂತೆ ಪ್ರತಾಪಶಾಲಿಯಾಗಿಯೂ, ದೈನ್ಯ (ದಾರಿದ್ರ್ಯ) ರಹಿತನೂ, ಜನರ ಪ್ರೀತಿಗೆ ಪಾತ್ರನೂ, ವ್ಯಾಧಿಬಾಧಾರಹಿತನೂ, ಧನಿಕನೂ, ಸತ್ಸಂತಾನವುಳ್ಳವನೂ ಆಗುತ್ತಾನೆ.

೨೩. ಅಯ್ಯಾ ಕುರುಕುಲೋತ್ತಮನೇ! ಕದಾಚಿತ್ ಶುಕ್ಲಪಕ್ಷದ ಅಷ್ಟಮಿ ತಿಥಿಯಲ್ಲಿ ಸೋಮವಾರ ಅಥವಾ ಭಾನುವಾರ ಸಂಭವಿಸಿದರೆ ಆ ದಿನದಲ್ಲಿ ಯಾವನು ಉಪವಾಸವನ್ನಾಚರಿಸಿ, ಭಕ್ತಿಪೂರ್ವಕವಾಗಿ (ನನ್ನಿಂದ) ಹರಿಯು ಸಮೇತ ಚಂದ್ರಶೇಖರನಾದ ಶ್ರೀ ಹರನನ್ನು ಅರ್ಚಿಸುವನೋ, ಅಂಥವನು ಪುರುಷಾಯುಸ್ಸು ಪೂರ್ತಿ ಬದುಕಿ ಮರಣಾನಂತರದಲ್ಲಿ ತ್ರಿಪುರಾಂತಕನ ಶ್ರೀ ಪರಮ ಪದವನ್ನು ಹೊಂದುವನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಸೋಮಾಷ್ಟಮಿ ವ್ರತವರ್ಣನೆಯೆಂಬ ಐವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

ಅಷ್ಟಮೀಕಲ್ಪ ಸಮಾಪ್ತವಾದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಷಷ್ಟಿತಮೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಸಮುತ್ಪನ್ನೇಷು ರತ್ನೇಷು ಕ್ಷೀರೋದಮಥನೇ ಪುರಾ ।
ದೈತ್ಯಾನಾಂ ಮೋಹನಾರ್ಥಾಯ ಯೋಷಿದ್ಭೂತೇ ಜನಾರ್ದನೇ ॥ ೧ ॥

ಬಿಲ್ವೇ ವೃಕ್ಷೇ ಕ್ಷಣಂ ಶ್ರಾಂತಾ ವಿಶ್ರಾಂತಾ ಕಮಲಾಲಯಾ ।
ಯಾಮೇವಮಿತಿ ವಾನ್ಯೋನ್ಯಂ ಯುಯುಧುರ್ದೇವದಾನವಾಃ ॥ ೨ ॥

---

## ಅರವತ್ತನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಓ ಯುಧಿಷ್ಠಿರನೇ ! ಪೂರ್ವದಲ್ಲಿ ಕ್ಷೀರಸಾಗರವನ್ನು ಮಥನಮಾಡುವಾಗ ಕೌಸ್ತುಭಮಣಿ ಮುಂತಾದ ಶ್ರೇಷ್ಠವಸ್ತುಗಳು ಹುಟ್ಟುತ್ತಿರಲು, ದೈತ್ಯರನ್ನು ಮೋಹಗೊಳಿಸುವ ಉದ್ದೇಶದಿಂದ ಶ್ರೀ ಮಹಾವಿಷ್ಣುವು ಮೋಹಿನೀ ರೂಪವನ್ನು ಧರಿಸಿದನು.

೨. ಅದೇ ಸಮುದ್ರ ಮಥನಕಾಲದಲ್ಲಿ ಶ್ರೀ ಮಹಾಲಕ್ಷ್ಮಿಯು ಆವಿರ್ಭೂತಳಾದಾಗ ನನಗೆ, ತನಗೆ ಎಂದು ಹೇಳಿಕೊಂಡು ದೇವತೆಗಳೂ ದಾನವರೂ ಅನ್ಯೋನ್ಯವಾಗಿ ಯುದ್ಧಮಾಡುತ್ತಿರುವಾಗ, ಕಮಲ ವನವಾಸಿನಿಯಾದ ಆ ಶ್ರೀ ಮಹಾಲಕ್ಷ್ಮಿಯು ಬಳಲಿದವಳಾಗಿ ಒಂದು ಕ್ಷಣಕಾಲ ಬಿಲ್ವವೃಕ್ಷದಲ್ಲಿ ವಾಸಿಸಿ ವಿಶ್ರಾಂತಿಯನ್ನನುಭವಿಸಿದಳು.

ಜಿತಾಃ ಸರ್ವೇ ಪುರಾ ಪಾರ್ಥ ಯುದ್ಧೇ ಕೃಷ್ಣೇನ ಚಕ್ರಿಣಾ ।
ಪಾತಾಲಂ ಗಮಿತಾ ದೈತ್ಯಾಃ ಸಶ್ರೀಕಃ ಸ್ವಯಮಾಯಯೌ ॥ ೩ ॥

ಶ್ರೀಃ ಸಮಾವಾಸಿತಾ ಯಸ್ಮಾಚ್ಛ್ರೀವೃಕ್ಷಸ್ತು ತತಃ ಸ್ಮೃತಃ ।
ತಸ್ಮಾದ್ಭಾದ್ರಪದಸ್ಯೈವ ಶುಕ್ಲಪಕ್ಷೇ ಕುರೂತ್ತಮ ॥ ೪ ॥

ನವಮ್ಯಾಮರ್ಚಯೇದ್ಭಕ್ತ್ಯಾ ಈಷತ್ಸೂರ್ಯೋದಯೇ ನಗಂ ।
ಶ್ರೀವೃಕ್ಷಂ ವಿವಿಧೈಃ ಪುಷ್ಪೈರನಗ್ನಿಪಾಚಿತೈಃ ಫಲೈಃ ॥ ೫ ॥

ತಿಲಪಿಷ್ಟಾನ್ನಗೋಧೂಮೈರ್ಧೂಪಗಂಧಸ್ರಗಂಬರೈಃ ।
ಈಷದ್ಬಾಲಕರಾತಾಮ್ರತಾಮ್ರೀಕೃತ ನಭಸ್ತಲೇ ॥ ೬ ॥

---

೩. ಅಯ್ಯಾ ಕುಂತೀಪುತ್ರನೇ! ಆ ಪೂರ್ವಕಾಲದಲ್ಲಿ ಶ್ರೀ ಮಹಾ ವಿಷ್ಣುವು ಚಕ್ರಪಾಣಿಯಾಗಿ ಯುದ್ಧದಲ್ಲಿ ಎಲ್ಲಾ ದೈತ್ಯರನ್ನೂ ಸೋಲಿಸಿ, ಪಾತಾಳಲೋಕಕ್ಕೆ ಓಡಿಸಿದ ಮೇಲೆ ತಾನು ಆ ಬಿಲ್ವವೃಕ್ಷದಲ್ಲಿ ವಿಶ್ರಾಂತಳಾದ ಆ ಲಕ್ಷ್ಮೀ ಸಮೇತನಾಗಿ ಬಂದನು.

೪-೫. ಓ ಕುರುಕುಲಶ್ರೇಷ್ಠನೇ! ಈ ರೀತಿ ಆ ಬಿಲ್ವವೃಕ್ಷದಲ್ಲಿ ಶ್ರೀಯು ವಾಸಮಾಡಿದ್ದರಿಂದ ಆ ವೃಕ್ಷಕ್ಕೆ ಶ್ರೀವೃಕ್ಷವೆಂದು ನಾಮಾಂತರವುಂಟಾಯಿತು. ಆದುದರಿಂದ ಭಾದ್ರಪದಮಾಸದ ಶುಕ್ಲಪಕ್ಷದ ನವಮೀ ತಿಥಿಯಲ್ಲಿ ಸೂರ್ಯನು ಸ್ವಲ್ಪ ಉದಯಿಸುತ್ತಿರುವಾಗಲೇ ಆ ಶ್ರೀ ವೃಕ್ಷವನ್ನು ಭಕ್ತಿಪೂರ್ವಕವಾಗಿ ವಿವಿಧ ಪುಷ್ಪಗಳಿಂದ ಅರ್ಚನೆಮಾಡಿ, ಸೂರ್ಯಾದಿ ತೇಜಸ್ಸಂಪರ್ಕದಿಂದ ಒಣಗದೆ ರಸವತ್ತಾಗಿರುವ ಫಲಗಳನ್ನು ಸಮರ್ಪಿಸಬೇಕು.

೬. ಅರ್ಧಸೂರ್ಯೋದಯವಾಗುತ್ತಾ ಇರುವಾಗ ಅಂತಹ ಬಾಲಸೂರ್ಯನ ಕೆಂಪಾದ ಕಿರಣಗಳು ಹರಡಿ, ನಭಸ್ಥಲವು ಕೆಂಪಾಗಿ ಕಾಣಿಸುವ ಹೊತ್ತಿನ ತಿಲಪಿಷ್ಟ (ಎಳ್ಳುಹುಡಿ) ಗೋಧಿ, ಧೂಪ, ಗಂಧ ಮಾಲ್ಯ, ವಸ್ತ್ರ ಇವುಗಳಿಂದ ಪೂಜೆ ಮಾಡಬೇಕು.

ಮಂತ್ರೇಣಾನೇನ ರಾಜೇಂದ್ರ ಕೃತ್ವಾ ಬ್ರಾಹ್ಮಣಭೋಜನಂ ।
ತತೋ ಭುಂಜೀತ ಮೌನೇನ ತೈಲಕ್ಷಾರವಿವರ್ಜಿತಃ ।
ಅನಗ್ನಿಪಾಕಂ ಭೂಪಾತ್ರೇ ದಧಿಪುಷ್ಪಫಲೈಃ ಶುಭಂ ॥ ೭ ॥

ಏವಂ ಯಃ ಕುರುತೇ ಪಾರ್ಥ ಶ್ರೀವೃಕ್ಷಸ್ಯಾರ್ಚನಂ ನರಃ ।
ನಾರೀ ವಾ ದುಃಖಶೋಕಾಭ್ಯಾಂ ಮುಚ್ಯತೇ ನಾತ್ರ ಸಂಶಯಃ ॥ ೮ ॥

ಸಪ್ತಜನ್ಮಾಂತರಂ ಯಾವತ್ಸುಖಸೌಭಾಗ್ಯಸಂಯುತಾ ।
ಶ್ರೀಮತೀ ಫಲಿನೀ ಧನ್ಯಾ ಮರ್ತ್ಯಲೋಕೇ ಮಹೀಯತೆ ॥ ೯ ॥

ಶ್ರೀವೃಕ್ಷಮಕ್ಷತಫಲಂ ವಸಿತಂ ನವಮ್ಯಾಂ ।
ನೈವೇದ್ಯಪುಷ್ಪಫಲವಸ್ತ್ರವಿಚಿತ್ರಧಾನ್ಯೈಃ ।

---

೭. ಓ ರಾಜೇಂದ್ರನೇ! ಈ ರೀತಿ ಮಂತ್ರಪೂರ್ವಕವಾಗಿ ಪೂಜೆಮಾಡಿದ ಮೇಲೆ ಬ್ರಾಹ್ಮಣರಿಗೆ ಭೋಜನಮಾಡಿಸಿ ಅನಂತರ ತಾನೂ ಭೂಮಿಯನ್ನೇ ಭೋಜನ ಪಾತ್ರೆಯನ್ನಾಗಿ ಮಾಡಿಕೊಂಡು ಅಗ್ನಿಪಕ್ವವಾಗದೆ ಇರುವ (ಅಗ್ನಿ ಪಕ್ವ ಪದಾರ್ಥಗಳನ್ನು ತ್ಯಜಿಸಿ) ಶುಭಕರವಾದ ದಧಿ, ಪುಷ್ಪ, ಫಲಾದಿಗಳನ್ನೇ ಸೇವಿಸಬೇಕು. ಆಹಾರದಲ್ಲಿ ಎಣ್ಣೆ, ಉಪ್ಪು ಇವುಗಳನ್ನು ಉಪಯೋಗಿಸಬಾರದು. ಮತ್ತು ಮೌನವಾಗಿ ಭುಂಜಿಸಬೇಕು.

೮. ಅಯ್ಯಾ ಕುಂತೀಪುತ್ರನೇ! ಈ ರೀತಿಯಾಗಿ ಶ್ರೀ ವೃಕ್ಷಾರ್ಚನ ವ್ರತವನ್ನು ಭಕ್ತಿಯಿಂದ ನೆರವೇರಿಸಿದ ಸ್ತ್ರೀಯರಾಗಲಿ, ಪುರುಷರಾಗಲಿ ಎಂದೂ ದುಃಖಶೋಕಗಳನ್ನು ಹೊಂದುವುದಿಲ್ಲ. ಇದಕ್ಕೆ ಸಂಶಯವಿಲ್ಲ.

೯. ಮತ್ತು ಇದನ್ನಾಚರಿಸಿದ ಹೆಂಗಸು ಮುಂದೆ ಏಳುಜನ್ಮ ಪ್ರಾಪ್ತವಾಗುವವರೆಗೂ ಸೌಖ್ಯ ಮತ್ತು ಸೌಭಾಗ್ಯಯುತಳಾಗಿಯೂ, ಶ್ರೀಮಂತಳಾಗಿಯೂ, ಪುತ್ರಾದಿ ಸಂಪದ್ಯುಕ್ತೆಯಾಗಿಯೂ, ಯಾವಾಗಲೂ ಕೃತಕೃತ್ಯಳಾಗಿಯೂ ಇರುತ್ತಾ ಮನುಷ್ಯಲೋಕದಲ್ಲಿ ಸರ್ವತ್ರ ಪೂಜ್ಯಳಾಗಿರುತ್ತಾಳೆ.

೧೦. ಅಯ್ಯಾ ಧರ್ಮಸೂನುವೇ! ಲಕ್ಷ್ಮಿಯು ವಾಸಿಸಿರುವುದಾಗಿಯೂ ಅವಳ ಪ್ರೀತಿಗೆ ಪಾತ್ರವಾಗಿಯೂ, ಸದಾ ಅಕ್ಷತ ಫಲಭರಿತವಾಗಿಯೂ ಇರುವ ಶ್ರೀ ವೃಕ್ಷವನ್ನು ಭಾದ್ರಪದ ಶುದ್ಧ ನವಮಿಯಲ್ಲಿ ಮಹಾನೈವೇದ್ಯಾದಿಗಳನ್ನು

ಪೂಜ್ಯ ಪ್ರಭಾತಸಮಯೇ ಪುರುಷೋತ್ತಮೇಷ್ಟಂ ।
ಸಂಪ್ರಾಪ್ನುವಂತಿ ಪುರುಷಾಃ ಪುರುಷೇಂದ್ರವಂದ್ಯಾಂ ॥ ೧೦ ॥

ಇತಿ ಶ್ರೀಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಶ್ರೀ ವೃಕ್ಷನವಮೀ ವ್ರತವರ್ಣನಂ
ನಾಮ ಷಷ್ಟಿತಮೋಽಧ್ಯಾಯಃ.



ಸಿದ್ಧಮಾಡಿಕೊಂಡು ಪುಷ್ಪ, ಫಲ, ವಸ್ತ್ರ, ವಿವಿಧಧಾನ್ಯ ಇತ್ಯಾದಿಗಳಿಂದ ಪ್ರಾತಃಕಾಲದಲ್ಲಿ ಯಾವ ಪುರುಷರು ಅರ್ಚನೆಮಾಡುತ್ತಾರೋ ಅಂತಹ ಪುಣ್ಯಾತ್ಮರು ಈ ಲೋಕದಲ್ಲಿ ರಾಜವಂದ್ಯರಾಗಿರುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ವೃಕ್ಷ
ನವಮೀ ವ್ರತನಿರೂಪಣವೆಂಬ ಅರವತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಏಕಷಷ್ಟಿಶತತಮೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಮಹಿಷಾಸುರೇ ವಿನಿಹತೇ ಭಗವತ್ಯಾ ಮಹಾಸುರೈಃ ।
ಪೂರ್ವವೈರಮನುಸ್ಮೃತ್ಯ ಸಂಗ್ರಾಮಾ ಬಹವಃ ಕೃತಾಃ ॥ ೧ ॥

ನಾನಾರೂಪಧರಾ ದೇವೀ ಅವತೀರ್ಯ ಪುನಃಪುನಃ ।
ಧರ್ಮಸಂಸ್ಥಾಪನಾರ್ಥಾಯ ನಿಜಘ್ನೇ ದೈತ್ಯಸತ್ತಮಾನ್ ॥ ೨ ॥

---

### ಅರವತ್ತೊಂದನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಪೂಜ್ಯಳಾದ ದೇವಿಯು ಹಿಂದೆ ಮಹಿಷಾಸುರನನ್ನು ಸಂಹರಿಸಿದ ಮೇಲೆ ಮಹಾಬಲಶಾಲಿಗಳಾದ ಅಸುರರು ಪೂರ್ವವೈರವನ್ನು ನೆನಸಿಕೊಂಡು ಅನಂತರ ದೇವಿಯೊಡನೆ ಅನೇಕ ಯುದ್ಧಗಳನ್ನು ಮಾಡಿದರು.

೨. ಆಗ ದೇವಿಯು ನಾನಾರೂಪಗಳನ್ನು ಧರಿಸಿ ಪುನಃ ಪುನಃ ಅವತರಿಸಿ ಲೋಕದಲ್ಲಿ ಧರ್ಮಮಾರ್ಗವನ್ನು ಸ್ಥಾಪಿಸುವುದಕ್ಕಾಗಿ ಧರ್ಮವಿರೋಧಿಗಳಾದ ದೈತ್ಯಾಧೀಶರನ್ನು ಸಂಹರಿಸಿದಳು.

**ಅಥ ರಕ್ತಾಸುರೋ ನಾಮ ಮಹಿಷಸ್ಯ ಸುತೋ ಮಹಾನ್ ।**
**ಅಸೀತ್ತೇನ ತಪಸ್ತಪ್ತಂ ವರ್ಷಾಣಾಂ ನಿಯುತಾನಿ ಷಟ್ ।**
**ತಸ್ಮೈ ದದೌ ಚತುರ್ವಕ್ತ್ರೋ ರಾಜ್ಯಂ ತ್ರೈಲೋಕ್ಯಮಂಡಲೇ || ೩ ||**

**ತೇನ ಲಬ್ಧವರೇಣಾಥ ಮೇಲಯಿತ್ವಾ ದನೋಃ ಸುತಾನ್ ।**
**ಪ್ರಾರಬ್ಧಂ ಸಹ ಶಕ್ರೇಣ ಯುದ್ಧಂ ಗತ್ವಾಽಮರಾವತೀಂ || ೪ ||**

**ತದ್ದೃಷ್ಟ್ವಾ ದಾನವಬಲಂ ಸನ್ನದ್ಧಾತ್ಯುದ್ಧತಧ್ವಜಂ ।**
**ಯುಯುಧೇ ದಾನವೈಸ್ಸಾರ್ಧಂ ಸುರೈಃ ಶಕ್ರಪುರಸ್ಸರೈಃ || ೫ ||**

**ತತ್ರ ಪ್ರಾವರ್ತತ ನದೀ ಶೋಣಿತೌಘತರಂಗಿಣೀ ।**
**ಖಡ್ಗಮತ್ಸ್ಯಗದಾಗ್ರಾಹವಸಾನಂದಕಕಚ್ಛಪಾ ।**
**ವಹಂತೀ ಪಿತೃಲೋಕಾಯ ಸುರಾಸುರಭಯಾನಕಾ || ೬ ||**

---

೩. ದೇವಿಯಿಂದ ಮೃತಿ ಹೊಂದಿದ ಮಹಿಷಾಸುರನಿಗೆ ರಕ್ತಾಸುರನೆಂಬ ಮಹಾಬಲಶಾಲಿಯಾದ ಒಬ್ಬ ಮಗನಿದ್ದನು. ಅವನು ಆರು ನಿಯುತವರ್ಷಗಳ ಕಾಲ ಬ್ರಹ್ಮನನ್ನುದ್ದೇಶಿಸಿ ಘೋರವಾದ ತಪಸ್ಸನ್ನಾಚರಿಸಿದನು. ಆ ತಪಸ್ಸಿಗೆ ಮೆಚ್ಚಿದ ಚತುರ್ಮುಖಬ್ರಹ್ಮನು ಆ ರಕ್ತಾಸುರನಿಗೆ ತ್ರಿಲೋಕಾಧಿಪತ್ಯವನ್ನು ವರವಾಗಿ ಕೊಟ್ಟನು.

೪. ಬ್ರಹ್ಮನಿಂದ ವರವನ್ನು ಪಡೆದ ಆ ರಕ್ತಾಸುರನು ದನುಪುತ್ರರಾದ ದಾನವರನ್ನೆಲ್ಲಾ ಒಟ್ಟಿಗೆ ಸೇರಿಸಿಕೊಂಡು ಅಮರಾವತಿಗೆ ಹೋಗಿ ಅಲ್ಲಿ ಇಂದ್ರನ ಮೇಲೆ ಯುದ್ಧಮಾಡುವುದಕ್ಕೆ ತೊಡಗಿದನು.

೫. ಆಗ ಇಂದ್ರನೇ ಮೊದಲಾದ ದೇವತೆಗಳು ಅತ್ಯುದ್ಧತ ಧ್ವಜವನ್ನೇರಿಸಿ ಯುದ್ಧಕ್ಕೆ ಸನ್ನದ್ಧವಾಗಿ ಬಂದ ದಾನವಸೈನ್ಯವನ್ನು ನೋಡಿ, ತಾವೂ ಆ ದಾನವರನ್ನೆದುರಿಸಿ ಅವರೊಡನೆ ಯುದ್ಧಮಾಡಿದರು.

೬. ಆಗ ಆ ರಣರಂಗವು ರಕ್ತವೆಂಬ ಜಲಪ್ರವಾಹಗಳು, ಮತ್ತು ಅಲೆಗಳು ಖಡ್ಗವೆಂಬ ಮೀನುಗಳು, ಗದೆ ಎಂಬ ಮೊಸಳೆಗಳು, ಎಲುಬುಗಳಲ್ಲಿ ಅಂಟಿಕೊಂಡಿರುವ ಮೆದುಳುಗಳೆಂಬ ಆಮೆಗಳು ಉಳ್ಳ ಮಹಾರಕ್ತನದಿಯು ಉತ್ಪನ್ನವಾಗಿ ಸುರಾಸುರರಿಗೆ ಭಯಜನಕವಾಗಿ ಯಮಲೋಕದವರೆಗೂ ಹರಿದುಹೋಗಲು ಪ್ರಾರಂಭಿಸಿತು.

ಅಥ ರಕ್ತಾಸುರೋ ರೋಷಾದ್ಯುಯುಧೇ ವಿಬುಧೈಸ್ಸಹ |
ತೇ ಹನ್ಯಮಾನಾ ವಿಬುಧಾ ರಕ್ತಾಕ್ಷೇಣ ಮಹಾರಣೇ || ೭ ||

ಭ್ರಷ್ಟಾಃ ಸ್ವರ್ಗಂ ಪರಿತ್ಯಜ್ಯ ತ್ಯಕ್ತಪ್ರಹರಣಾ ದ್ರುತಂ |
ಕರಚ್ಛತ್ರಾಂ ಪುರೀಂ ಪ್ರಾಪ್ತಾ ಯತ್ರಾಸ್ತೇ ಭವವಲ್ಲಭಾ || ೮ ||

ದುರ್ಗಾ ಚಾಮುಂಡಯಾ ಸಾರ್ಧಂ ನವದುರ್ಗಾಸಮನ್ವಿತಾ |
ಆದ್ಯಾ ತಾವನ್ಮಹಾಲಕ್ಷ್ಮೀರ್ನಂದಾ ಕ್ಷೇಮಕರೀ ತಥಾ || ೯ ||

ಶಿವದೂತೀ ಮಹಾರುಂಡಾ ಭ್ರಾಮರೀ ಚಂದ್ರಮಂಗಲಾ |
ರೇವತೀ ಹರಸಿದ್ಧಿಸ್ತು ನವೈತಾಃ ಪರಿಕೀರ್ತಿತಾಃ |
ಏತಾಸಾಂ ತೇ ಸ್ತುತಿಂ ಚಕ್ರುಸ್ತ್ರಿದಶಾಃ ಪ್ರಣತಾನನಾಃ || ೧೦ ||

---

೭. ಅನಂತರ ಆ ರಕ್ತಾಸುರನು ಮಹಾರೋಷದಿಂದ ದೇವತೆಗಳ ಜತೆಯಲ್ಲಿ ಯುದ್ಧಮಾಡಿದನು. ಆಗ ಕೋಪದಿಂದ ಕೆಂಪಾದ ನಯನಗಳುಳ್ಳ ಆ ರಕ್ತಾಸುರನಿಂದ ಆ ಮಹಾರಣರಂಗದಲ್ಲಿ ದೇವತೆಗಳು ಘಾತಿಸಲ್ಪಟ್ಟವರಾಗಿ ಆ ಏಟುಗಳನ್ನು ಸಹಿಸಲಾರದೆ ಹೋಗಿ;

೮. ತಮ್ಮ ಆಯುಧಗಳನ್ನು ಅಲ್ಲೇ ಬಿಟ್ಟು ಆ ರಣರಂಗದಿಂದ ಪಲಾಯನಮಾಡಿ ಶೀಘ್ರವಾಗಿ ಸ್ವರ್ಗಲೋಕವನ್ನು ಬಿಟ್ಟು, ಹರವಲ್ಲಭಳಾದ ಶ್ರೀ ದುರ್ಗಾದೇವಿಯು ವಾಸವಾಗಿರುವ ಕರಛತ್ರವೆಂಬ ನಗರಿಗೆ ಓಡಿ ಬಂದರು.

೯. ಅಲ್ಲಿ ಶ್ರೀ ದುರ್ಗಾದೇವಿಯು ಚಾಮುಂಡಿ ಮತ್ತು ನವದುರ್ಗೆಯರ ಸಮೇತಳಾಗಿ ವಾಸಿಸುತ್ತಿರುವಳು. ಮಹಾಲಕ್ಷ್ಮೀ, ನಂದಾ, ಕ್ಷೇಮಕರೀ, ಶಿವದೂತೀ, ಮಹಾರುಂಡಾ, ಭ್ರಾಮರೀ, ಚಂದ್ರಮಂಗಲಾ, ರೇವತೀ, ಹರಸಿದ್ಧಿ ಎಂಬ ಈ ಒಂಭತ್ತು ಜನರೂ ನವದುರ್ಗಿಯರೆಂದು ಉಕ್ತವಾಗಿದೆ.

೧೦. ಭಯಗ್ರಸ್ತರಾಗಿ ರಣರಂಗದಿಂದ ಓಡಿ ಕರಛತ್ರನಗರಿಯನ್ನು ಸೇರಿದ ದೇವತೆಗಳು ತಲೆ ಬಗ್ಗಿಸಿಕೊಂಡು ನಮ್ರರಾಗಿ ನವದುರ್ಗೆಯರನ್ನು ಸ್ತೋತ್ರಮಾಡಿದರು.

ಅಮರಪತಿಮುಕುಟಿಚುಂಬಿತ ।
ಚರಣಾಂಬುಜಸಕಲಭುವನಸುಖಜನನೀ ।
ಜಯತಿ ಜಗದೀಶವಂದಿತ ।
ಸಕಲಾಮಲನಿಷ್ಕಲಾ ದುರ್ಗಾ　　॥ ೧೧ ॥

ವಿಕೃತನಖದಶನಭೂಷಣ ।
ರುಧಿರ ವಸಾಚ್ಛುರಿತಕ್ಷತಖಡ್ಗಹಸ್ತಾ ।
ಜಯತಿ ನರಮುಂಡಮುಂಡಿತ ।
ಪಿಶಿತಸುರಾಹಾರಕೃಚ್ಚಂಡೀ　　॥ ೧೨ ॥

ಪ್ರಚ್ಛಾದಿತಪಿಖಿಗಣೋದ್ಬಲ ।
ವಿಕಟಜಟಾಬದ್ಧಚಂದ್ರಮಣಿಶೋಭಾ ।
ಜಯತಿ ದಿಗಂಬರಭೂಷಾ ।
ಸಿದ್ಧವಟೇಶಾ ಮಹಾಲಕ್ಷ್ಮೀಃ　　॥ ೧೩ ॥

---

೧೧. ದೇವಪತಿಯಾದ ಇಂದ್ರನ ಕಿರೀಟದಿಂದ ಚುಂಬಿತವಾದ ಅಡಿದಾವರೆಗಳುಳ್ಳವಳೂ, ಸಕಲಭುವನ ಸುಖಜನಕಳೂ, ಜಗದೀಶನಿಂದ ನಮಸ್ಕೃತಳೂ, ಪರಿಪೂರ್ಣಳೂ, ನಿಷ್ಕಲ್ಮಷಳೂ, ನಿರವಯವಳೂ ಆಗಿರುವ ಶ್ರೀ ದುರ್ಗಾದೇವಿಯು ಸರ್ವೋತ್ತಮಳಾಗಲಿ.

೧೨. ವಕ್ರವಾಗಿರೋಣದ್ದರಿಂದ ವಿಕಾರವಾಗಿರುವ ಉಗುರು ಮತ್ತು ಕೋರೆದಾಡೆಗಳುಳ್ಳವಳೂ, ಅವುಗಳಿಗೆ ಅಲಂಕಾರಪ್ರಾಯವಾಗಿರುವ ರಕ್ತ ಮತ್ತು ಮಾಂಸ ಇವುಗಳಿಂದ ಸಂಶ್ಲಿಷ್ಟವಾದ ಕತ್ತಿಯನ್ನು ಕೈಯಲ್ಲಿ ಹಿಡಿದವಳೂ, ನರರುಂಡಗಳಿಂದ ಅಲಂಕೃತಳೂ, ಮಾಂಸಮದ್ಯಾಹಾರಿಯೂ ಆಗಿರುವ ಚಂಡಿಕಾದೇವಿಯು ಜಯಶೀಲಳಾಗಲಿ.

೧೩. [1]ಒಟ್ಟಾಗಿ ಸೇರಿಸಿ ಜಡೆಯಾಗಿ ಕಟ್ಟಿ ಶೋಭಾಯಮಾನವಾದ ಜಟೆಯಲ್ಲಿ ಧರಿಸಿರುವ ಚಂದ್ರಮಣಿಶೋಭೆಯುಳ್ಳವಳೂ, ದಿಕ್ಕುಗಳೇ ಅಂಬರ ಮತ್ತು ಭೂಷಣಗಳಾಗಿ ಉಳ್ಳವಳೂ ಸಿದ್ಧವಟೇಶ್ವರಿಯೂ ಆಗಿರುವ ಶ್ರೀ ಮಹಾಲಕ್ಷ್ಮಿಯು ಸರ್ವೋತ್ಕೃಷ್ಟಳಾಗಲಿ.

ಕರಕಮಲಜನಿತಶೋಭಾ ।
ಪದ್ಮಾಸನಬದ್ಧಪದ್ಮವದನಾ ಚ ।
ಜಯತಿ ಕಮಂಡಲುಹಸ್ತಾ ।
ನಂದಾ ದೇವೀ ನತಾರ್ತಿಹರಾ ॥ ೧೪ ॥

ದಿಗ್ವಸನಾ ವಿಕೃತಮುಖಾ ।
ಫೇತ್ಕಾರೋದ್ದಾಮ ಪೂರಿತದಿಶೌಘಾ ।
ಜಯತಿ ವಿಕರಾಲದೇಹಾ ।
ಕ್ಷೇಮಂಕರೀ ರೌದ್ರಭಾವಸ್ಥಾ ॥ ೧೫ ॥

ಕ್ರೋಶಿತಬ್ರಹ್ಮಾಂಡೋದರ ।
ಸುರವರಮುಖರಹುಂಕೃತನಿನಾದಾ ।
ಜಯತಿ ಮದಾತಿಮಿಹಸ್ತಾ ।
ಶಿವದೂತೀ ಪ್ರಥಮಶಿವಶಕ್ತಿಃ ॥ ೧೬ ॥

---

೧೪. ಕರಕಮಲಗಳಿಂದ ಶೋಭಿಸುತ್ತಿರುವವಳೂ, ಪದ್ಮಾಸನವನ್ನು ಹಾಕಿಕೊಂಡು ಕುಳಿತವಳೂ, ಕಮಲದಂತಿರುವ ಮುಖವುಳ್ಳವಳೂ, ಕಮಂಡಲು ಹಸ್ತಳೂ, ನಮಸ್ಕಾರಮಾಡುವ ಭಕ್ತಜನರ ದುಃಖವನ್ನು ನಿವಾರಿಸುವವಳೂ, ಆಗಿರುವ ನಂದಾದೇವಿಯು ಸರ್ವೋತ್ತಮಳಾಗಲಿ.

೧೫. ದಿಕ್ಕೇ ಅಂಬರವುಳ್ಳವಳೂ, ವಿಕೃತಮುಖಿಯೂ, ಫೇತ್ ಎಂಬ ಶಬ್ದದಿಂದ ಕೂಗಿ ಆ ಶಬ್ದಗಳನ್ನು ದಿಗಂತದಲ್ಲಿ ಉತ್ಕಟವಾಗಿ ವ್ಯಾಪಿಸುವ ಹಾಗೆ ಮಾಡುವವಳೂ, ವಿಕೃತಶರೀರಿಣಿಯೂ, ರೌದ್ರಭಾವವುಳ್ಳವಳೂ ಆಗಿರುವ ಕ್ಷೇಮಂಕರೀ ದೇವಿಯು ಸರ್ವೋತ್ಕೃಷ್ಟಳಾಗಲಿ.

೧೬. ತನ್ನ "ಹುಂ" ಕಾರ ಧ್ವನಿಯಿಂದ ಬ್ರಹ್ಮಾಂಡೋದರವಾಸಿಗಳಾದ ದೇವತಾಶ್ರೇಷ್ಠರೇ ಮೊದಲಾದವರನ್ನು ಭಯದಿಂದ ವಿಕ್ರೋಶನವುಳ್ಳವರನ್ನಾಗಿ ಮಾಡುವವಳೂ, ಮತ್ತು ತಿಮಿಂಗಿಲಾಕಾರದ ಹಸ್ತವುಳ್ಳವಳೂ ಆಗಿ ಶಿವನ ಆದಿಶಕ್ತಿ ಸ್ವರೂಪಳಾದ ಶಿವದೂತಿಯು ಸರ್ವೋತ್ತಮಳಾಗಲಿ.

ಮುಕ್ತಾಟ್ಟಹಾಸಭೈರವ ।
ದುಃಸಹತರಚಕಿತಸಕಲದಿಕ್ಚಕ್ರಾ ।
ಜಯತಿ ಭುಜಗೇಂದ್ರಮಣಿಗಣ ।
ಶೋಭಿತಕರ್ಣಾ ಮಹಾರುಂಡಾ ॥ ೧೭ ॥

ಪಟುಪಟಹಮುರಜಮರ್ದಲ ।
ಝಲ್ಲರಿ ಝುಂಕಾರನರ್ತಿತಾನಯುವಾ ।
ಜಯತಿ ಮಧುವ್ರತರೂಪಾ ।
ದೈತ್ಯಹರೀ ಭ್ರಾಮರೀ ದೇವೀ ॥ ೧೮ ॥

ಶಾಂತಾ ಪ್ರಶಾಂತವದನಾ ।
ಸಿಂಹರವಾ ಧ್ಯಾನಯೋಗತನ್ನಿಷ್ಠಾ ।
ಜಯತಿ ಚತುರ್ಭುಜದೇಹಾ ।
ಚಂದ್ರಕಲಾ ಚಂದ್ರಮಂಗಲಾ ದೇವೀ ॥ ೧೯ ॥

---

೧೭. ಸಹಿಸಲಸಾಧ್ಯವೂ, ಮಹಾಭಯಂಕರವೂ, ಆಗಿರುವ ಅಟ್ಟಹಾಸದಿಂದ ದಿಕ್‌ಸಮೂಹವೆಲ್ಲಾ ಭಯಗ್ರಸ್ತವಾಗುವಂತೆ ಮಾಡತಕ್ಕವಳೂ, ಉತ್ತಮವಾದ ನಾಗರತ್ನಗಳಿಂದ ಅಲಂಕೃತವಾದ ಕಿವಿಗಳುಳ್ಳವಳೂ ಆಗಿರುವ, ಮಹಾರುಂಡಾದೇವಿಯು ಸರ್ವೋತ್ತಮಳಾಗಲಿ.

೧೮. ಇಂಪಾದ ಧ್ವನಿಯುಳ್ಳ ತಮ್ಮಟೆ, ಮೃದಂಗ, ಮದ್ದಳೆ, ಗೆಜ್ಜೆ ಇವುಗಳ ಝುಂಕಾರವನ್ನನುಸರಿಸಿ ನರ್ತನಮಾಡುತ್ತಿರುವ ಅಂಗಾಂಗಗಳುಳ್ಳವಳೂ, ದುಂಬಿಯ ಆಕಾರವುಳ್ಳವಳೂ, ದೈತ್ಯಸಂಹಾರಕಳೂ ಆಗಿರುವ ಭ್ರಾಮರೀ ದೇವಿಯು ಸರ್ವೋತ್ಕೃಷ್ಟಳಾಗಲಿ.

೧೯. ಶಾಂತಳೂ, ಅತ್ಯಂತ ಶಾಂತವದನವುಳ್ಳವಳೂ, ಸಿಂಹಸಮಾನವಾದ ಗರ್ಜನೆಯುಳ್ಳವಳೂ, ಧ್ಯಾನಯೋಗನಿಷ್ಠಳೂ, ಚತುರ್ಭುಜಯುಕ್ತವಾದ ಶರೀರವುಳ್ಳವಳೂ ಆಗಿರುವ ಚಂದ್ರಮಂಗಲಾ ದೇವಿಯು ಸರ್ವೋತ್ತಮಳಾಗಲಿ.

ಪಕ್ಷಪುಟಚಂಚುಘಾತೈಃ ।
ಸಂಚೂರ್ಣಿತವಿವಿಧಶತ್ರುಸಂಘಾತಾ ।
ಜಯತಿ ಶಿತಶೂಲಹಸ್ತಾ ।
ಬಹುರೂಪಾ ರೇವತೀ ಭದ್ರಾ ॥ ೨೦ ॥

ಪರ್ಯಟತಿ ಜಗತಿ ಹೃಷ್ಟಾ ।
ಪಿತೃವನನಿಲಯೇಷು ಯೋಗಿನೀಸಹಿತಾ ।
ಜಯತಿ ಹರಸಿದ್ಧಿನಾಮ್ನೀ ।
ಹರಸಿದ್ಧಿರ್ವಂದಿತಾ ಸಿದ್ಧೈಃ ॥ ೨೧ ॥

ಇತಿ ನವದುರ್ಗಾಸಂಸ್ತವ ।
ಮನುಪಮ ಮಾರ್ಯಾಭಿರಮರರಾಟ್ಕೃತ್ವಾ ।
ಇದಮೂಚೇ ಸಹ ದೇವೈ ।
ಸ್ತ್ರಾಹ್ಯಸ್ಮಾನ್ಸರ್ವಭೀತಿಭ್ಯಃ ॥ ೨೨ ॥

---

೨೦. ರೆಕ್ಕೆಗಳು, ಕೊಕ್ಕು ಇವುಗಳಿಂದ ಹೊಡೆದು ಶತ್ರುಸಮೂಹವನ್ನು ಪಡಿಪುಡಿ ಮಾಡಿದವಳೂ, ಹರಿತವಾದ ತ್ರಿಶೂಲವನ್ನು ಕೈಯಲ್ಲಿ ಹಿಡಿದವಳೂ, ಬಹುರೂಪವತಿಯೂ, ಮಂಗಳಕರಳೂ ಅಗಿರುವ ರೇವತೀ ದೇವಿಯು ಸರ್ವೋತ್ತಮಳಾಗಲಿ.

೨೧. ಲೋಕದಲ್ಲಿ ಯೋಗಿನೀ ಸಹಿತಳಾಗಿ ಸಂತೋಷದಿಂದ ಸ್ಮಶಾನ ಭೂಮಿಗಳಲ್ಲಿ ಸಂಚರಿಸುತ್ತಿರುವವಳೂ, ಸಿದ್ಧಪುರುಷರಿಂದ ನಮಸ್ಕೃತೆಯಾಗಿ ಹರಸಿದ್ಧಿ ಎಂಬ ನಾಮಧೇಯವುಳ್ಳವಳೂ ಅಗಿರುವ ಹರಸಿದ್ಧಿಯು ಸರ್ವೋತ್ತಮಳಾಗಲಿ

೨೨. ಈ ರೀತಿ ಈ ಸ್ತೋತ್ರಕ್ಕೆ ಉಪಮಾನವಾದುದು (ಹೋಲಿಸುವುದಕ್ಕೆ ಯೋಗ್ಯವಾದ್ದು) ಇನ್ನೊಂದು ಸ್ತೋತ್ರವೇ ಲೋಕದಲ್ಲಿ ಇಲ್ಲದೇ ಇರುವುದರಿಂದ ನಿರುಪಮವೆಂದು ಹೇಳಬಹುದಾದ ಈ ನವದುರ್ಗಾ ಸ್ತೋತ್ರವನ್ನು ದೇವರಾಜನಾದ ಇಂದ್ರನು ಆರ್ಯಾವೃತ್ತದಲ್ಲಿ ರಚನೆಮಾಡಿ ಹೇಳಿ ಅನಂತರ ಸಮಸ್ತ ದೇವತಾಸಮೇತನಾಗಿ "ಎಲೌ ದೇವೀ! ಸಮಸ್ತ ಭೀತಿಗಳನ್ನೂ ನಿವಾರಿಸಿ ನಮ್ಮನ್ನು ರಕ್ಷಿಸು" ಎಂಬದಾಗಿ ಪ್ರಾರ್ಥಿಸಿದನು.

**ಪುನಃಪುನಃ ಪ್ರಣಮ್ಯೋಚುರ್ಭವಾನೀಂ ಸಿಂಹವಾಹಿನೀಂ |**
**ಅಸ್ಮಾಕಂ ಭಯಭೀತಾನಾಂ ಶರಣ್ಯೇ ಶರಣಂ ಭವ || ೨೩ ||**

**ದೇವಾನಾಂ ತದ್ವಚಃ ಶ್ರುತ್ವಾ ದತ್ವಾ ತೇಭ್ಯೋಽಭಯಂ ತತಃ |**
**ಸಿಂಹಾರೂಢಾ ವಿನಿರ್ಗತ್ಯ ದುರ್ಗಾಭಿಃ ಸಹಿತಾ ಪುರಾ || ೨೪ ||**

**ಯುಯುಧೇ ದಾನವೈಸ್ಸಾರ್ಧಂ ಮಹಾಸಮರದುರ್ದಿನಂ |**
**ಕುಮಾರೀ ವಿಂಶತಿಭುಜಾ ಘನವಿದ್ಯುಲ್ಲತೋಪಮಾ || ೨೫ ||**

**ತೇಽಪಿ ತತ್ರಾಸುರಾಃ ಪ್ರಾಪ್ತಾಃ ಪ್ರಚಂಡಾ ರುದ್ರರೂಪಿಣಃ |**
**ಸರ್ವೇ ಲಬ್ಧವರಾಃ ಶೂರಾಃ ಸುತಪ್ತತಪಸಸ್ತಥಾ || ೨೬ ||**

**ಮಹಾಗ್ರಾಹಪರಾಕ್ರಾಂತಾ ದುಷ್ಟಮಾಯಾನಿವಿಷ್ಟಯಾ |**
**ಅಬ್ರಹ್ಮಣ್ಯಾದ್ಧ್ಯಮಿಷಾ ನಾಮತಶ್ಚ ನಿಜೋದ್ಯತಾತ್ || ೨೭ ||**

---

೨೩. ಮತ್ತು ಆ ದೇವತೆಗಳು ಸಿಂಹವಾಹಿನಿಯಾದ ಭವಾನೀದೇವಿಗೆ ಪುನಃ ಪುನಃ ನಮಸ್ಕಾರಮಾಡಿ “ಶರಣಾರ್ಥಿಗಳಿಗೆ ಶರಣ್ಯಳಾದ ದೇವೀ! ಭಯದಿಂದ ಭೀತರಾದ ನಮಗೆ ನೀನು ರಕ್ಷಕಳಾಗು” ಎಂದು ಪ್ರಾರ್ಥಿಸಿದರು.

೨೪–೨೫. ಅನಂತರ ದೇವಿಯು ದೇವತೆಗಳ ಆ ಮಾತನ್ನು ಕೇಳಿ ಅವರಿಗೆ ಅಭಯಪ್ರದಾನಮಾಡಿ, ಸಿಂಹದಮೇಲೆ ಕುಳಿತುಕೊಂಡು ನವದುರ್ಗಾ ಸಮೇತ ಳಾಗಿ ಅಲ್ಲಿಂದ ಹೊರಟು ಇಪ್ಪತ್ತು ಭುಜಗಳುಳ್ಳವಳೂ, ಲತಾಕಾರವಾದ ಮಿಂಚುಗಳ ಹೋಲಿಕೆಯುಳ್ಳವಳೂ, ಕುಮಾರೀ ಸ್ವರೂಪಳೂ, ಆ ಮಹಾಸಮರ ವನ್ನು ಮೋಡಗಳಿಂದ ಮುಚ್ಚಿದ ದುರ್ದಿನದಂತೆ ಮಾಡುವವಳೂ ಆಗಿ, ದಾನವರ ಜತೆಯಲ್ಲಿ ಯುದ್ಧಮಾಡಿದಳು.

೨೬. ಆಗ ಪ್ರಚಂಡವಾದ ರೌದ್ರರೂಪವನ್ನು ತಾಳಿ ಯುದ್ಧಾರ್ಥವಾಗಿ ಆ ರಣರಂಗಕ್ಕೆ ಬಂದ ಆ ದೈತ್ಯರು ಸಾಂಗವಾದ ತಪೋನುಷ್ಠಾನವುಳ್ಳವರೂ ದೇವತೆಗಳಿಂದ ವರ ಪಡೆದವರೂ ಪರಾಕ್ರಮಶಾಲಿಗಳೂ ಆಗಿದ್ದರು.

೨೭. ಆದರೆ ಅವರು ಅನರ್ಥಕಾರಿಯಾದ ಮಾಯೆಯಿಂದ ಆವಿಷ್ಟರಾಗಿ, ದೊಡ್ಡ ಮೊಸಳೆಯಿಂದ ಸೆಳೆಯಲ್ಪಟ್ಟವರಂತೆ ಆಗಿ, ತಮ್ಮ ಹೆಸರಿಗೂ ಉದ್ಯ ಮಕ್ಕೂ ಅನುರೂಪವಾಗಿ, ಅಹಿಂಸೆಯಿಂದ ದೂರವಾದ (ಹಿಂಸಾಮಯವಾದ) ಕ್ರಿಯೆಯುಳ್ಳವರಾಗಿ ಇದ್ದರು.

ಇಂದ್ರಮಾರೀ ಅಸತ್ಕ್ಲೇಶಃ ಪ್ರಲಂಬೋ ನರಕಃ ಸುತಃ ।
ಕುಷ್ಮಃ ಪುಲೋಮಾ ಶರಭಃ ಶಂಬರೋ ದುಂದುಭಿಃ ಖರಃ ॥ ೨೮ ॥

ಇಲ್ವಲೋ ನಮುಚಿರ್ಭೌಮೋ ವಾತಾಪಿರ್ಧೇನುಕಃ ಕಲಿಃ ।
ಮಾಯಾವೃತೋ ಬಲೋ ಬಂಧುರ್ಮಧುಕೈಟಭಕಾಲಜಿತ್ ॥ ೨೯ ॥

ರಹಃ ಪೌಂಡ್ರಾದಿದೈತ್ಯೇಂದ್ರಾಃ ಪ್ರಾಧಾನ್ಯೇನ ಪ್ರಕೀರ್ತಿತಾಃ ।
ಘನಗೋಭಿರ್ಜನಾಃ ಸರ್ವೇ ಸನ್ನದ್ಧಾಃ ಸ್ವಾಗ್ರತೋ ಧ್ವಜಃ ॥ ೩೦ ॥

ರೂಪತೋ ವರ್ಣಿತಾಶ್ಚೈವ ಧ್ವಜಾಸ್ತೇಷಾಂ ಪೃಥಕ್ಪೃಥಕ್ ।
ಪ್ರತ್ಯದೃಶ್ಯಂತ ರಾಜೇಂದ್ರ ಜ್ವಲಿತಾ ಇವ ಪಾವಕಾಃ ॥ ೩೧ ॥

ಕಾಂಚನಾಃ ಕಾಂಚನಾಪೀಡಾಃ ಕಾಂಚನಸ್ರಗಲಂಕೃತಾಃ ।
ಪತಾಕಾ ವಿವಿಧೈರ್ವಾಲೈರುಚ್ಛ್ರಿತಾ ಲಕ್ಷಣಾನ್ವಿತಾಃ ॥ ೩೨ ॥

---

೨೮–೩೦. ಅವರಲ್ಲಿ ಪ್ರಮುಖರಾದ ಇಂದ್ರಮಾರೀ, ಅಸತ್ಕ್ಲೇಶ, ಪ್ರಲಂಬ ನರಕ, ಸುತ, ಕುಷ್ಮ, ಪುಲೋಮ, ಶರಭ, ಶಂಬರ, ದುಂದುಭಿ,, ಖರ, ಇಲ್ವಲ, ನಮುಚಿ, ಭೌಮ, ವಾತಾಪಿ, ಧೇನುಕ, ಕಲಿ, ಮಾಯಾವೃತ, ಬಲ, ಬಂಧು, ಮಧು, ಕೈಟಭ, ಕಾಲಜಿತ್, ರಹ, ಪೌಂಡ್ರ ಇತ್ಯಾದಿ ದೈತ್ಯೇಂದ್ರರು ಯುದ್ಧಕ್ಕೆ ಬಂದರು. ಪ್ರಾಧಾನ್ಯ ದೃಷ್ಟಿಯಿಂದ ಇಲ್ಲಿ ಕೆಲವರ ಹೆಸರನ್ನು ಮಾತ್ರ ನಿರ್ದೇಶಮಾಡಿ ಇದೆ. ಸರ್ವದೈತ್ಯರೂ ವಾಹನಾದಿ ಸಮೇತರಾಗಿ ತಮ್ಮ ಧ್ವಜವನ್ನು ಮುಂದೆ ಏರಿಸಿಕೊಂಡು ಯುದ್ಧ ಸನ್ನದ್ಧರಾಗಿ ಬಂದರು.

೩೧. ಎಲೈ ರಾಜೇಂದ್ರನೇ ! ಆ ದೈತ್ಯರ ಧ್ವಜಗಳು ಬೇರೆ ಬೇರೆಯಾದ ಬಣ್ಣವುಳ್ಳವಾಗಿದ್ದುವು. ಆ ಧ್ವಜಗಳು ಪ್ರಜ್ವಲಿಸುವ ಅಗ್ನಿಯಂತೆ ಕಾಣುತ್ತಿದ್ದುವು.

೩೨. ಅವುಗಳು ಭಂಗಾರದಿಂದ ಮಾಡಲ್ಪಟ್ಟುವು. ಜತೆಗೆ ಸುವರ್ಣಾಲಂಕಾರಯುಕ್ತಗಳು. ಸುವರ್ಣಮಾಲೆಯಿಂದ ಭೂಷಿತಗಳು. ಆ ಧ್ವಜಗಳಲ್ಲಿ ಕಟ್ಟಿರುವ ಪತಾಕೆಗಳು ವಿಚಿತ್ರವಾದ ವಸ್ತ್ರರಚಿತಗಳಾಗಿ ಬಾಲದಂತೆ ಸುಲಕ್ಷಣವಾಗಿದ್ದುವು.

ನೀಲ್ಯಃ ಪೀತಾಃ ಸಿತಾ ರಕ್ತಾಃ ಕೃಷ್ಣಾಸ್ತಾಃ ಪಂಚವರ್ಣಕಾಃ ।
ತತ್ರ ಪಟ್ಟಪಟೀಸೌತ್ರಾಃ ಕೃತಬುದ್ಬುದಕರ್ಬುರಾಃ ॥ ೩೩ ॥

ಪತಾಕಾಕಾಂತಿರನಲಾ ನರ್ತಕ್ಯ ಇವ ಶೋಭನಾಃ ॥ ೩೪ ॥

ತತೋ ಹಲಹಲಾರಾವಂ ಚಕ್ರುಸ್ತೇ ದಾನವೋತ್ತಮಾಃ ।
ಪ್ರಾಸ್ಫಾಲಯಂತ ಪಣವಭೇರೀರ್ಝರ್ಝರಗೋಮುಖಾನ್ ।
ನ್ಯವಾದಯಂತಾನಕಾನ್ಯೇ ಶಂಖಾಡಂಬರಡಿಂಡಿಮಾನ್ ॥ ೩೫ ॥

ಏವಂ ತೇ ಸಮಯುಧ್ಯಂತ ಭವಾನೀಂ ದೈತ್ಯದಾನವಾಃ ।
ಸಮಾಜಘ್ನುಃ ಶರೈಃ ಶೂಲೈಃ ಪರಿಘೈಃ ಶಕ್ತಿತೋಮರೈಃ ।
ಕರ್ಣಕೈರೀಷಣೈಃ ಕುಂತೈಃ ಶತಘ್ನೀಕೂಟಮುದ್ಗರೈಃ ॥ ೩೬ ॥

---

೩೩. ಆ ಪತಾಕೆಗಳು ಅಂಚಿನಲ್ಲಿ ನೀಲ, ಹಳದಿ, ಬಿಳುಪು, ಕೆಂಪು, ಕಪ್ಪು ಈ ತರಹವಾಗಿರುವ ಐದು ಬಣ್ಣವುಳ್ಳವುಗಳಾಗಿಯೂ ಪಟ್ಟೆಯ ವಸ್ತ್ರಕ್ಕೆ ಉಪಯೋಗಿಸುವ ರೇಷ್ಮೆಯ ದಾರಗಳುಳ್ಳವಗಳಾಗಿಯೂ, ಮಧ್ಯೆ ಚುಕ್ಕಿಗಳಿಂದ ಕೂಡಿ ಚಿತ್ರವರ್ಣವುಳ್ಳವುಗಳಾಗಿಯೂ ರಚಿತವಾಗಿದ್ದುವು.

೩೪. ಇಂತಹ ಧ್ವಜಪತಾಕೆಗಳ ಕಾಂತಿಯು ಅಗ್ನಿಕಾಂತಿಗೆ ಸಮಾನವಾಗಿದ್ದುವು. ಆ ಪತಾಕೆಗಳು ಧ್ವಜದ ಮೇಲಿದ್ದು ಗಾಳಿಗೆ ಒಲೆದಾಡುತ್ತಿರುವಾಗ ಸುಂದರಿಯರಾದ ನರ್ತಕಿಯರು ನರ್ತನಮಾಡುವ ಹಾಗೆ ಕಾಣಿಸುತ್ತಿದ್ದುವು.

೩೫. ಅನಂತರ ಆ ದಾನವೋತ್ತಮರು ಒಟ್ಟಿಗೆ ಕಲಕಲಧ್ವನಿಮಾಡಿದರು. ಮತ್ತು ಗೋಮುಖ, ಭೇರೀ, ಝಲ್ಲರಿ, ಮದ್ದಳೆ, ತಮ್ಮಟೆ, ಇವುಗಳನ್ನು ಬಾರಿಸಿದರು (ಶಬ್ದಮಾಡಿದರು). ಅಲ್ಲದೆ ಶಂಖ, ಡಮರುಕ ಇವುಗಳನ್ನೂ ಧ್ವನಿಮಾಡಿದರು.

೩೬. ಈರೀತಿ ಆ ದೈತ್ಯರು, ದಾನವರು ಇವರೆಲ್ಲರೂ ಬಾಣ, ಶೂಲ, ಪರಿಘ, ಶಕ್ತ್ಯಾಯುಧ, ಈಟಿ (ಡಾಣೆ), ಗದೆ, ಕುಂತ, ದೊಣ್ಣೆ ಮುಂತಾದ ಆಯುಧಗಳಿಂದ ಆ ಭವಾನಿದೇವಿಯನ್ನು ಎದುರಿಸಿ ಹೊಡೆದರು.

ಆಹತ್ಯ ಮಾನರೋಷೇಣ ಜಜ್ವಲುಃ ಸಮರೇಽಧಿಕಂ ।
ಸಿಂಹಾರೂಢಾ ದ್ರುತಂ ದೇವೀ ರಣಮಧ್ಯೇ ಪ್ರಧಾವಿತಾ ॥ ೩೭ ॥

ಆಚ್ಛಿದ್ಯಾಚ್ಛಿದ್ಯ ಚಿಹ್ನಾನಿ ಧ್ವಜಾನ್ನಾನಾವಿಧಾಂಸ್ತಥಾ ।
ಬಲಾತ್ಕಾರೇಣ ದೈತ್ಯಾನಾಮನಾಥಸಮರೇ ರುಷಾ ॥ ೩೮ ॥

ಚಿಹ್ನಕಾನಿ ದದೌ ತುಷ್ಟಾ ದೇವೇಭ್ಯಃ ಶೀಘ್ರಚಾರಿಣೀ ।
ಸುರೈರಪಿ ಗೃಹೀತಾನಿ ಜಯ ದೇವೀತಿ ವಾದಿಭಿಃ ॥ ೩೯ ॥

ಅಂಬಿಕಾ ತು ಭೃಶಂ ತುಷ್ಟಾ ತೇಷಾಂ ಚಕ್ರೇ ಕ್ಷಣಾತ್ಕ್ಷಯಂ ।
ಕಾಲರಾತ್ರೀ ದಾನವಾನಾಂ ಮಾರೀವ ನಿಪಪಾತ ಸಾ ।
ಜೀವಿತಾನಿ ಚ ಜಗ್ರಾಹ ದೈತ್ಯಾನಾಂ ದೇವನಂದಿನೀ ॥ ೪೦ ॥

---

೩೭. ಯುದ್ಧದಲ್ಲಿ ಆ ರೀತಿ ಹೊಡೆದ ಮೇಲೆ ದೈತ್ಯರು ಅಧಿಕವಾದ ಗರ್ವ, ಕೋಪ ಇವುಗಳಿಂದ ಜ್ವಲಿಸುತ್ತಿದ್ದರು. ಆಗ ದೇವಿಯು ಸಿಂಹ ವನ್ನೇರಿ ಕೊಂಡು, ಶೀಘ್ರವಾಗಿ ರಣರಂಗದ ಮಧ್ಯಭಾಗಕ್ಕೆ ನುಗ್ಗಿ ಹೋದಳು.

೩೮. ಅನಂತರ ನಾಯಕರಿಲ್ಲದ ಆ ಯುದ್ಧದಲ್ಲಿ ದೇವಿಯು ಕೋಪ ದಿಂದ ದೈತ್ಯರ ಚಿಹ್ನೆಗಳನ್ನೂ ಮತ್ತು ನಾನಾತರಹದ ಧ್ವಜಗಳನ್ನೂ ಬಲಾತ್ಕಾರ ದಿಂದ ಕತ್ತರಿಸಿ ಕತ್ತರಿಸಿ ಕೆಡವಿದಳು.

೩೯. ಆ ರೀತಿ ರಣರಂಗದದಲ್ಲೆಲ್ಲಾ ವೇಗವಾಗಿ ಸಂಚರಿಸುತ್ತಿದ್ದ ಆ ದೇವಿಯು, ದೇವತೆಗಳಲ್ಲಿ ಸಂತುಷ್ಟಳಾಗಿ ಯುದ್ಧಕಾಲದಲ್ಲಿ ರಾಕ್ಷಸರಿಂದ ಭೇದಿತರಾದಾಗ ಇವರು ದೇವತೆಗಳೆಂದು ಗುರ್ತಿಸುವುದಕ್ಕೆ ಅನುಕೂಲಗಳಾದ ಕೆಲವು ಚಿಹ್ನೆಗಳನ್ನು ಆ ದೇವತೆಗಳಿಗೆ ಅನುಗ್ರಹಿಸಿದಳು. ಆ ಚಿಹ್ನೆಗಳನ್ನು ದೇವತೆಗಳು " ಜಯ ದೇವೀ ! " (ಎಲೌ ದೇವೀ ಜಯಿಸು) ಎಂದು ಹೇಳುತ್ತಾ ತೆಗೆದುಕೊಂಡರು.

೪೦. ಆ ದೇವಿಯಾದರೋ ದೇವತೆಗಳ ಜಯಘೋಷ ಶಬ್ದವನ್ನು ಕೇಳಿ ಬಹು ಸಂತೋಷಪಟ್ಟು, ಮಹಾಮಾರಿಯಂತೆ ಆ ದಾನವರ ಮೇಲೆ ಬಿದ್ದು, ಪ್ರಳಯಕಾಲದ ಕಾಲರಾತ್ರಿಯಂತೆ ಕ್ಷಣಮಾತ್ರದಲ್ಲಿ ಅವರನ್ನು ಸಂಹರಿಸಿದಳು. ದೇವತೆಗಳಿಗೆ ಸಂತೋಷದಾಯಕಳಾದ ಆ ದೇವಿಯು ಈರೀತಿ ಅನೇಕ ದೈತ್ಯರ ಪ್ರಾಣವಾಯುಗಳನ್ನು ಸೆಳೆದು ಹಾಕಿದಳು.

ಅಥ ರಕ್ತಾಸುರಂ ಕಂಠೇ ಗೃಹೀತ್ವಾ ಪಾತ್ಯ ಭೂತಲೇ ।
ದೇವೀ ಜಘಾನ ತೀಕ್ಷ್ಣೇನ ತ್ರಿಶೂಲೇನ ಭೃಶಂ ದಿವಿ ॥ ೪೧ ॥

ಸ ಭಿನ್ನಹೃದಯಃ ಪಶ್ಚಾದ್ಭೂಮೌ ತತ್ರ ಪ್ರಪೋಥಿತಃ ।
ತಥಾಪಿ ದೇವ್ಯಾ ನಿಹತಃ ಪಪಾತ ಚ ಮಮಾರ ಚ ॥ ೪೨ ॥

ದೇವಾಸ್ತಾನಸುರಾಞ್ಜಿತ್ವಾ ಗತ್ವಾ ಶತ್ರುಪುರಂ ಜಿತಂ ।
ದದೃಶುಸ್ತೇ ರಣಪ್ರಾಂತೇ ಲಂಬಮಾನಾನ್ಮಹಾಧ್ವಜಾನ್ ।
ಯಾತ್ರಾಂ ಚಕ್ರುಃ ಸಂಪ್ರಹೃಷ್ಟಾ ನವಮ್ಯಾಂ ಧ್ವಜಚಿಹ್ನಿತಾಂ ॥ ೪೩ ॥

ಅತೋಽದ್ಯಾಪೀಹ ಭೂಪಾಲೈರ್ಜಯಲಬ್ಧೀಚ್ಛಯಾದೃತೈಃ ।
ಉಪೋಷ್ಯತೇ ಸರ್ವೈರ್ಭಕ್ತೈರ್ನಾರೀಭಿಶ್ಚೈವ ಪಾಂಡವ ॥ ೪೪ ॥

---

೪೧. ಅನಂತರ ದೇವಿಯು ಆ ರಕ್ತಾಸುರನ ಕುತ್ತಿಗೆಯನ್ನು ಜಗ್ಗಿ, ಅವನನ್ನು ಭೂಮಿಯಮೇಲೆ ಕೆಡವಿ, ತೀಕ್ಷ್ಣವಾದ ತ್ರಿಶೂಲದಿಂದ ಇರಿದು, ಅಂತರಿಕ್ಷಕ್ಕೆ ಹಾರಿಸಿದಳು.

೪೨. ಆಗ ಆ ದೈತ್ಯನು ಹೃದಯ ಒಡೆದು ಭೂಮಿಯಲ್ಲಿ ಬಿದ್ದನು. ಪುನಃ ದೇವಿಯು ಮತ್ತೆ ಎಸೆಯಲಾಗಿ ಅವನು ಹತನಾಗಿ ಭೂಶಾಯಿಯಾದನು.

೪೩. ಆಗ ದೇವತೆಗಳು ಮಿಕ್ಕುಳಿದ ಅಸುರರನ್ನೂ ಜಯಿಸಿ, ಶತ್ರು ಪಟ್ಟಣವನ್ನು ಪ್ರವೇಶಿಸಿದರು. ಆಗ ರಣಾಂಗಣದಲ್ಲಿ ಎಲ್ಲೆಲ್ಲೂ ಜೋತಾಡುತ್ತಿರುವ ಮಹಾಧ್ವಜಗಳನ್ನು ನೋಡಿ, ಅನಂತರ ಯಾವ ನವಮೀ ತಿಥಿಯಲ್ಲಿ ತಮಗೆ ಈ ಜಯಲಾಭವಾಯಿತೋ ಆ ನವಮಿಯಲ್ಲಿ ಸಂತೋಷದಿಂದ ಧ್ವಜಾಂಕಿತರಾಗಿ ವಿಜಯೋತ್ಸವವನ್ನು ಆಚರಿಸಿದರು.

೪೪. ಓ ಪಾಂಡುಕುಮಾರನೇ ! ಆದುದರಿಂದ ಈ ಲೋಕದಲ್ಲಿ ಈಗಲೂ ಕೂಡ ಜಯಾಭಿಲಾಷೆಯುಳ್ಳ ಅರಸರೂ, ದೇವಿಯ ಭಕ್ತರೆನಿಸಿದ ಇತರ ಸ್ತ್ರೀಯರೂ ಪುರುಷರೂ ಆ ದಿವಸ ಉಪವಾಸವನ್ನಾಚರಿಸಿ ಈ ಧ್ವಜನವಮೀ ವ್ರತವನ್ನು ಕೈಗೊಳ್ಳುತ್ತಾರೆ.

|| ಯುಧಿಷ್ಠಿರ ಉವಾಚ ||

ಕೀದೃಗ್ವಿಧಾನಂ ತಸ್ಯಾಸ್ತು ನವಮ್ಯಾ ಬ್ರೂಹಿ ಮೇ ಪ್ರಭೋ ।
ಸರಹಸ್ಯಂ ಸಮಂತ್ರಂ ಚ ಯೇನ ತುಷ್ಯತಿ ಚಂಡಿಕಾ || ೪೫ ||

|| ಶ್ರೀ ಕೃಷ್ಣ ಉವಾಚ ||

ಪೌಷಸ್ಯ ಶುಕ್ಲಪಕ್ಷೇ ಯಾ ನವಮೀ ಸಂಪರಿಶ್ರುತಾ ।
ತಸ್ಯಾಂ ಸ್ನಾತ್ವಾ ಶುಭೈಃ ಪುಷ್ಪೈರರ್ಚನೀಯಾ ಹರೇಃ ಸ್ವಸಾ || ೪೬ ||

ಕುಮಾರೀ ಸುಭಗಾ ದೇವೀ ಸಿಂಹಸ್ಯಂದನಗಾಮಿನೀ ।
ಧ್ವಜಾನ್ನಾನಾವಿಧಾನ್ಕೃತ್ವಾ ಪುರಸ್ತಸ್ಯಾಶ್ಚ ಪೂಜಯೇತ್ ।
ಮಾಲತೀಕುಸುಮೈರ್ದೀಪೈರ್ಗಂಧಧೂಪವಿಲೇಪನೈಃ || ೪೭ ||

ಬಲಿಭಿಃ ಪಶುಭಿರ್ಮೇಧ್ಯೈಃ ಸುರಾಮಾಂಸಾಸೃಗಂಬರೈಃ ।
ದಧಿಚಂದನಚೂರ್ಣೈಶ್ಚ ಭಗ್ನೈಶ್ಚಾನಗ್ನಿಪಾಚಿತೈಃ ।
ಮಂತ್ರೇಣಾನೇನ ಕೌಂತೇಯ ಬ್ರಾಹ್ಮಣೋಽಥವಾ ನನು || ೪೮ ||

---

೪೫. ಯುಧಿಷ್ಠಿರನು ಕೇಳುತ್ತಾನೆ—" ಓ ಪ್ರಭುವೇ ! ಆ ನವಮೀವ್ರತದ ವಿಧಾನವೇನು ? ಯಾವಾಗ ಆ ವ್ರತವನ್ನಾಚರಿಸಿದರೆ ಚಂಡಿಕಾದೇವಿಯು ಸಂತೋಷ ಹೊಂದುವಳು ? ಆ ವ್ರತವನ್ನು ಮಂತ್ರಪೂರ್ವಕವಾಗಿಯೂ ಸಾಂಗವಾಗಿಯೂ ನನಗೆ ಹೇಳು '' ಎಂದನು.

೪೬. ಶ್ರೀ ಕೃಷ್ಣನು ಹೇಳುತ್ತಾನೆ—ಪುಷ್ಯಮಾಸದ ಶುಕ್ಲಪಕ್ಷದ ನವಮೀ ತಿಥಿಯಲ್ಲಿ ಸ್ನಾನಮಾಡಿದ ಮೇಲೆ ಶ್ರೀಹರಿಯ ಭಗಿನಿಯಾದ ಆ ದುರ್ಗಾದೇವಿಗೆ ಶುಭಪುಷ್ಪಗಳಿಂದ ಅರ್ಚನೆ ಮಾಡಬೇಕು.

೪೭. ಕುಮಾರೀ ಸ್ವರೂಪಳಾಗಿಯೂ, ಸುಂದರಿಯಾಗಿಯೂ, ಸಿಂಹವಾಹನದಿಂದ ಶೋಭಿಸುವವಳಾಗಿಯೂ ಇರುವ ಆ ದೇವಿಯ ಮುಂಭಾಗದಲ್ಲಿ ನಾನಾತರಹ ಧ್ವಜಗಳನ್ನು ಸ್ಥಾಪಿಸಿ, ಮಲ್ಲಿಗೆಹೂವು, ಸುಗಂಧವಿಲೇಪನ, ಧೂಪ, ದೀಪ ಇತ್ಯಾದಿಗಳಿಂದ ಪೂಜಿಸಬೇಕು.

೪೮. ಓ ಕುಂತೀಪುತ್ರನೇ ! ಮತ್ತು ಆ ದೇವಿಗೆ ಯಾಗಾರ್ಹವಾಗಿ ಪವಿತ್ರವೆಂದೆನಿಸಿಕೊಂಡಿರುವ ಪಶುಗಳ ಬಲಿಗಳನ್ನೂ ಮದ್ಯ, ಮಾಂಸ, ರಕ್ತ ಇತ್ಯಾದಿಗಳನ್ನೂ ಸಮರ್ಪಿಸಿ ವಸ್ತ್ರ, ದಧಿ, ಚಂದನಚೂರ್ಣ, ಅಗ್ನಿಪಕ್ವವಾಗದಿರುವ ಫಲಾದಿಗಳು ಇವುಗಳಿಂದ ಅರ್ಚಿಸಬೇಕು. ಈ ವ್ರತವನ್ನಾಚರಿಸುವ ಬ್ರಾಹ್ಮಣನು ಅಥವಾ ರಾಜನು ಈ ಮುಂದೆ ಹೇಳುವ ಮಂತ್ರವನ್ನು ಪಠಿಸಬೇಕು.

**ಭದ್ರಾಂ ಭಗವತೀಂ ಕೃಷ್ಣಾಂ ವಿಶ್ವಸ್ಯ ಜಗತೋ ಹಿತಾಂ ।**
**ಸಂವೇಶಿನೀಂ ಸಂಯಮನೀಂ ಗ್ರಹನಕ್ಷತ್ರಮಾಲಿನೀಂ　　|| ೪೯ ||**

**ಪ್ರಪನ್ನೋಽಹಂ ಶಿವಾಂ ರಾತ್ರೀಂ ಭದ್ರೇ ಪಾರಯ ಮೇ ವ್ರತಂ ।**
**ಸರ್ವಭೂತಪಿಶಾಚೇಭ್ಯಃ ಸರ್ವಸತ್ವಸರೀಸೃಪೈಃ ।**
**ದೇವೇಭ್ಯೋ ಮಾನುಷೇಭ್ಯಶ್ಚ ಭಯೇಭ್ಯೋ ರಕ್ಷ ಮಾಂ ಸದಾ ||೫೦||**

**ತತಶ್ಚಾರೋಪಯೇದ್ರಾಜಾ ದೇವೀನಾಂ ಭವನೇ ತಥಾ ।**
**ಭೋಜಯೇತ ಕುಮಾರೀಂ ಚ ಪ್ರಣಿಪತ್ಯ ಕ್ಷಮಾಪಯೇತ್　|| ೫೧ ||**

**ಉಪವಾಸೇನ ಕುರ್ವೀತ ಏಕಭಕ್ತೇನ ವಾ ಪುನಃ ।**
**ಭಕ್ತ್ಯಾ ಭೂಪಾಲಪಂಚಾಸ್ಯ ಭಕ್ತಿಸ್ತಸ್ಯಾ ಗರೀಯಸೀ　　|| ೫೨ ||**

---

೪೯–೫೧. ಭದ್ರಾಂ ಭಗವತೀಂ ಕೃಷ್ಣಾಂ ವಿಶ್ವಸ್ಯ ಜಗತೋಽಹಿತಾಂ ।
ಸಂವೇಶಿನೀಂ ಸಂಯಮನೀಂ ಗ್ರಹನಕ್ಷತ್ರ ಮಾಲಿನೀಂ ॥
ಪ್ರಪನ್ನೋಽಹಂ ಶಿವಾಂ ರಾತ್ರೀಂ ಭದ್ರೇಪಾರಯಮೇವ್ರತಂ।
ಸರ್ವ ಭೂತ ಪಿಶಾಚೇಭ್ಯಃ ಸರ್ವ ಸತ್ವ ಸರೀಸೃಪೈಃ ॥
ದೇವೇಭ್ಯೋ ಮಾನುಷೇಭ್ಯಶ್ಚ ಭಯೇಭ್ಯೋ ರಕ್ಷಮಾಂ ಸದಾ ॥

ಈ ಶ್ಲೋಕಗಳನ್ನು ಪಠಿಸಿದನಂತರ ರಾಜನು ದೇವಿಯ ಗುಡಿಯಲ್ಲಿ ಧ್ವಜಾರೋಹಣ ಮಾಡಬೇಕು. (ಮಂಗಳಕರಳಾಗಿಯೂ, ಷಡ್ಗುಣೈಶ್ವರ್ಯ ಭರಿತಳಾಗಿಯೂ, ಸಮಸ್ತಪ್ರಪಂಚಕ್ಕೆ ಹಿತಳಾಗಿಯೂ, ಜಗತ್ಸ್ಥಿತಿಗೆ ಕಾರಣಳಾಗಿಯೂ ಜಗನ್ನಿಯಾಮಕಳಾಗಿಯೂ, ನವಗ್ರಹಗಳಿಗೂ ನಕ್ಷತ್ರಗಳಿಗೂ ಅಧಿಪಳಾಗಿಯೂ ಕಾಲರಾತ್ರಿಸ್ವರೂಪಳಾಗಿಯೂ, ಈಶ್ವರನ ಶಕ್ತಿಸ್ವರೂಪಳಾಗಿಯೂ, ಇರುವ ಓ ದೇವೀ! ನಿನ್ನನ್ನು ನಾನು ಶರಣುಹೊಂದಿರುವೆನು. ಈ ನನ್ನ ವ್ರತವನ್ನು ಪೂರ್ತಿಮಾಡಿಸು. ಮತ್ತು ನನಗೆ ಸರ್ವಭೂತ, ಪಿಶಾಚ, ವ್ಯಾಘ್ರಾದಿ ದುಷ್ಟಪ್ರಾಣಿಗಳು, ಸರ್ಪಗಳು, ದೇವತೆಗಳು, ಮನುಷ್ಯರು ಇವರ ಭಯವಿಲ್ಲದ ಹಾಗೆ ಮಾಡಿ ರಕ್ಷಿಸು ಎಂಬುದು ಈ ಶ್ಲೋಕಾರ್ಥ). ಅನಂತರ ಕುಮಾರಿಯರಿಗೆ ಭೋಜನಮಾಡಿಸಿ ನಮಸ್ಕಾರಮಾಡಿ ಕ್ಷಮೆ ಬೇಡಬೇಕು.

೫೨. ಎಲೈ ಭೂಪತಿಯೇ! ಸಾಧ್ಯವಾದರೆ ಉಪವಾಸವಿದ್ದು ಭಕ್ತಿಯಿಂದ ಈ ವ್ರತವನ್ನಾಚರಿಸಬೇಕು. ಅಥವಾ ಏಕಭುಕ್ತ (ನಕ್ತಭೋಜನ) ಮಾಡಿಯಾದರೂ ಈ ವ್ರತವನ್ನು ಭಕ್ತಿಯಿಂದ ಆಚರಿಸಬಹುದು. ಆ ದೇವಿಗೆ

ಏವಂ ಯೇ ಪೂಜಯಿಷ್ಯಂತಿ ಧ್ವಜೈರ್ಭಗವತೀಂ ನರಾಃ ।
ತೇಷಾಂ ದುರ್ಗಾ ದುರ್ಗಮಾರ್ಗೇ ಚೋರವ್ಯಾಲಾಗ್ನಿಸಂಕಟೇ ॥ ೫೩ ॥

ರಣೇ ರಾಜಕುಲೇ ಗೇಹೇ ಯುದ್ಧಮಧ್ಯೇ ಜಲೇ ಸ್ಥಿತೇ ।
ರಕ್ಷಾಂ ಕರೋತಿ ಸತತಂ ಭವಾನೀ ಸರ್ವಮಂಗಳಾ ॥ ೫೪ ॥

ಅಸ್ಯಾಂ ಬಭೂವ ವಿಜಯೋ ನವಮ್ಯಾಂ ಪಾಂಡುನಂದನ ।
ಭಗವತ್ಯಾಸ್ತು ತೇನೈಷಾ ನವಮೀ ಸತತಂ ಪ್ರಿಯಾ ॥ ೫೫ ॥

ಧನ್ಯಾ ಪುಣ್ಯಾ ಪಾಪಹರಾ ಸರ್ವೋಪದ್ರವನಾಶಿನೀ ।
ಅನುಷ್ಠೇಯಾ ಪ್ರಯತ್ನೇನ ಸರ್ವಾನ್ಕಾಮಾನಭೀಪ್ಸುಭಿಃ ॥ ೫೬ ॥

---

ಭಕ್ತಿಯೇ ಮುಖ್ಯವಾದುದು. ಆದ್ದರಿಂದ ಭಕ್ತಿಪೂರ್ವಕವಾಗಿ ಆಚರಿಸಿದರೆ ಅಲ್ಪ ಸ್ವಲ್ಪ ನ್ಯೂನಾತಿರೇಕವಿದ್ದರೂ ಸುಪ್ರೀತಳಾಗುತ್ತಾಳೆ.

೫೩-೫೪. ಯಾವ ಪುರುಷರು ಭಕ್ತಿಪರವಶರಾಗಿ ಈ ಹಿಂದೆ ಹೇಳಿದ ಪ್ರಕಾರವಾಗಿ ಶಿವಶಕ್ತಿ ಸ್ವರೂಪಳಾಗಿಯೂ, ಸರ್ವಮಂಗಲೆಯಾಗಿಯೂ, ಇರುವ ಪೂಜ್ಯಳಾದ ದೇವಿಯನ್ನು ಧ್ವಜಾರೋಹಣೆಮಾಡಿ ಪೂಜಿಸುತ್ತಾರೋ ಅಂತಹ ವರಿಗೆ ಆ ದುರ್ಗಾದೇವಿಯು ದುರ್ಗಮವಾಗಿರುವ ಮಾರ್ಗದಲ್ಲಿ ಚೋರರು, ಸರ್ಪಗಳು, ಅಗ್ನಿ ಇವುಗಳ ಸಂಬಂಧವಾದ ಭಯವನ್ನೂ ಕೋಟಿಕೊತ್ತಲಗಳು ಮತ್ತು ಯುದ್ಧ, ಅರಮನೆ, ಸ್ವಗೃಹ, ಯುದ್ಧರಂಗ, ಜಲ ಈ ಸನ್ನಿವೇಶಗಳ ಭಯವನ್ನೂ ತಪ್ಪಿಸಿ ರಕ್ಷಕಳಾಗುತ್ತಾಳೆ.

೫೫. ಓ ಪಾಂಡುಪುತ್ರನೇ ! ಈ ಪುಷ್ಯಮಾಸದ ಶುಕ್ಲಪಕ್ಷದ ನವಮಿ ದಿನವೇ, ದೇವಿಗೆ ದೈತ್ಯಯುದ್ಧದಲ್ಲಿ ಜಯವು ಲಭಿಸಿದ್ದರಿಂದ ಆ ಪರಮ ಪೂಜ್ಯ ಳಾದ ದೇವಿಗೆ ಯಾವಾಗಲೂ ಈ ನವಮಿ ತಿಥಿಯು ಪ್ರಿಯವಾಗಿದೆ.

೫೬. ಆದುದರಿಂದಲೇ ಈ ನವಮಿ ತಿಥಿಯು ಕೃತಾರ್ಥವೂ, ಪುಣ್ಯ ಪ್ರದವೂ, ಪಾಪನಿವಾರಕವೂ, ಸರ್ವೋಪದ್ರವ ನಾಶಕವೂ ಆಗಿದೆ. ಆದುದರಿಂದ ಸಕಲರೂ ಈ ವ್ರತವನ್ನು ಈ ಪುಣ್ಯದಿನದಲ್ಲಿ ಸರ್ವಕಾಮಾವಾಪ್ತಿಗಾಗಿ ಪ್ರಯತ್ನ ಪೂರ್ವಕವಾಗಿ ಅನುಷ್ಠಾನ ಮಾಡಬೇಕು.

ದೇವ್ಯರ್ಚನಾಹಿತಮತಿರ್ಮನುಜೋ ನವಮ್ಯಾಂ ।
ಹೇಮಸ್ರಜಂ ಧ್ವಜವರಂ ಸ ಹಿ ರೋಪಯೇದ್ಯಃ ।
ಭೋಗಾನವಾಪ್ಯ ಮನಸೋಽಭಿಮತಾನ್ಸ್ವಕಾಮಂ ।
ದೇಹಂ ವಿಹಾಯ ಸಮುಪೈತಿ ಸ ವೀರಲೋಕಂ　　॥ ೫೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಧ್ವಜನವಮೀ ವ್ರತವರ್ಣನಂ
ನಾಮೈಕಷಷ್ಟಿತಮೋಽಧ್ಯಾಯಃ.



---

೫೭. ಬ್ರಾಹ್ಮಣನಾಗಲಿ, ರಾಜನಾಗಲಿ, ಯಾವ ಪುರುಷನು ಶ್ರೀ ದೇವಿಯ ಅರ್ಚನದಲ್ಲೇ ಮನಸ್ಸಿಟ್ಟವನಾಗಿ ಈ ನವಮಿಯಲ್ಲಿ ಶ್ರೀದೇವಿಗೆ ಭಂಗಾಶದ ಮಾಲಿಕೆಯನ್ನು ಸಮರ್ಪಿಸಿ ಧ್ವಜಾರೋಹಣ ಮಾಡಿ ಪೂಜಿಸುವನೋ ಅಂತಹವನು ಇಹದಲ್ಲಿ ಮನೋಭಿಲಷಿತಗಳಾದ ಸರ್ವಕಾಮಗಳನ್ನೂ ಪಡೆದು, ಸರ್ವ ಭೋಗಗಳನ್ನೂ ಅನುಭವಿಸಿ, ದೇಹತ್ಯಾಗಮಾಡಿದಮೇಲೆ ವೀರ ಪುರುಷರು ಹೊಂದುವ ವೀರಸ್ವರ್ಗವನ್ನು ಪಡೆಯುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಧ್ವಜನವಮೀ
ವ್ರತವರ್ಣನೆಯೆಂಬ ಅರವತ್ತೊಂದನೆಯ
ಅಧ್ಯಾಯ ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ದ್ವಿಷಷ್ಟಿತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥
ಉಲ್ಕಾಖ್ಯಾಂ ನವಮೀಂ ರಾಜನ್ಕಥಯಾಮಿ ನಿಬೋಧ ತಾಂ ।
ಯಾ ಕಾಶ್ಯಪೇನ ಕಥಿತಾ ತಾರಕಸ್ಯಾರ್ತಿನಾಶಿನೀ ॥ ೧ ॥

ಆಶ್ವಯುಕ್ಛುಕ್ಲಪಕ್ಷೇ ಯಾ ನವಮೀ ಲೋಕವಿಶ್ರುತಾ ।
ನದ್ಯಾಂ ಸ್ನಾತ್ವಾ ಸಮಭ್ಯರ್ಚ್ಯ ಪಿತೃದೇವಾನ್ ಯಥಾವಿಧಿ ॥ ೨ ॥

ಪಶ್ಚಾತ್ಸಂಪೂಜಯೇದ್ದೇವೀಂ ಚಾಮುಂಡಾಂ ಭೈರವಪ್ರಿಯಾಂ ।
ಪುಷ್ಪೈರ್ಧೂಪೈಸ್ಸನೈವೇದ್ಯೈರ್ಮಾಂಸಮತ್ಸ್ಯಸುರಾಸವೈಃ ॥ ೩ ॥

---

## ಅರವತ್ತೆರಡನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಎಲೈ ರಾಜನೇ ! ಪೂರ್ವದಲ್ಲಿ ತಾರಕಾಸುರನ ಪೀಡೆ ನಿವೃತ್ತಿಯಾಗುವುದಕ್ಕಾಗಿ ಕಶ್ಯಪ ಮಹರ್ಷಿಯು ದೇವತೆಗಳಿಗೆ ಉಪದೇಶಿಸಿದ ಉಲ್ಕಾ ನವಮೀ ವ್ರತವನ್ನು ಹೇಳುತ್ತೇನೆ ಶ್ರವಣಮಾಡು.

೨. ಲೋಕದಲ್ಲಿ ವಿಖ್ಯಾತವಾದ ಆಶ್ವಯುಜ ಶುದ್ಧ ನವಮಿಯ ತಿಥಿಯಲ್ಲಿ ನದಿಯಲ್ಲಿ ಅಥವಾ ಶ್ರೇಷ್ಠ ಪುಷ್ಕರಿಣಿ ಮುಂತಾದ ತೀರ್ಥಗಳಲ್ಲಿ ಸ್ನಾನಮಾಡಿ, ಶಾಸ್ತ್ರಪ್ರಕಾರವಾಗಿ ದೇವಪೂಜಾನಂತರ ಪಿತೃದೇವತೆಗಳಿಗೆ ತರ್ಪಣಕೊಡಬೇಕು

೩. ಅನಂತರ ಭೈರವ ಮೂರ್ತಿಗೆ ಪ್ರಿಯಳಾದ ಶ್ರೀ ಚಾಮುಂಡಾಂಬೆಯನ್ನು ಪುಷ್ಪ, ಧೂಪ, ಮಾಂಸ, ಮತ್ಯ, ಮದ್ಯ, ದ್ರಾಕ್ಷಾದ್ಯಾಸವ, ನೈವೇದ್ಯ ಇತ್ಯಾದಿಗಳಿಂದ ಪೂಜಿಸಬೇಕು.

ಪೂಜಯಿತ್ವಾ ಸ್ತವಂ ಕುರ್ಯಾನ್ಮಂತ್ರೇಣಾನೇನ ಮಾನವಃ ।
ಸಮಾರೋಪ್ಯಾಂಜಲಿಂ ಮೂರ್ಧ್ನಿ ಜಾನುಭ್ಯಾಮವನೀಂ ಗತಃ ॥ ೪ ॥

ಮಹಿಷಘ್ನಿ ಮಹಾಮಾಯೇ ಚಾಮುಂಡೇ ಮುಂಡಮಾಲಿನಿ ।
ದ್ರವ್ಯಮಾರೋಗ್ಯವಿಜಯೌ ದೇಹಿ ದೇವಿ ನಮೋಽಸ್ತು ತೇ ॥ ೫ ॥

ಕುಮಾರೀರ್ಭೋಜಯೇತ್ಪಶ್ಚಾನ್ನವನೀಲಸಕಂಚುಕೈಃ ।
ಪರಿಧಾನೈರ್ಭೂಷಣೈಶ್ಚ ಭೂಷಯಿತ್ವಾ ಕ್ಷಮಾಪಯೇತ್ ॥ ೬ ॥

ಸಪ್ತ ಪಂಚಾಪ್ಯಥೈಕಾಂ ವಾ ಚಿತ್ತವಿತ್ತಾನುರೂಪತಃ ।
ಶ್ರದ್ಧಯಾ ತುಷ್ಯತೇ ದೇವೀ ಇತಿ ವೀರಾನುಶಾಸನಂ ॥ ೭ ॥

---

೪. ವ್ರತಿಯು ಪೂಜಾನಂತರದಲ್ಲಿ ಅಂಜಲಿಯನ್ನು ಶಿರಸ್ಸಿನ ಮೇಲಿರಿಸಿಕೊಂಡು ಮೊಣಕಾಲುಗಳನ್ನು ಭೂಮಿಗೆ ಸೋಂಕಿಸಿ ನಿಂತು ಈ ಶ್ಲೋಕ ಹೇಳಬೇಕು.

೫. ಮಹಿಷಘ್ನಿ ಮಹಾಮಾಯೇ ಚಾಮುಂಡೇ ಮುಂಡಮಾಲಿನೀ ।
ದ್ರವ್ಯ ಮಾರೋಗ್ಯ ವಿಜಯೌ ದೇಹಿ ದೇವಿ ನಮೋಸ್ತುತೇ ॥
(ಮಹಿಷಾಸುರ ಮರ್ದಿನಿಯಾಗಿಯೂ, ಮಹಾಮಾಯಾ ಸ್ವರೂಪಿಣಿಯಾಗಿಯೂ ನರಮುಂಡ ಮಾಲಿಕೆಯನ್ನು ಧರಿಸಿದವಳಾಗಿಯೂ, ಇರುವ ಓ ಚಾಮುಂಡಾ ದೇವಿಯೇ ! ನೀನು ಧನ, ಧಾನ್ಯ, ಆರೋಗ್ಯ ಇವುಗಳನ್ನು ನನಗೆ ಅನುಗ್ರಹಿಸು. ನಿನಗೆ ನಮಸ್ಕರಿಸುವೆನು ಎಂದು ಇದರ ಅರ್ಥ).

೬. ಅನಂತರ ಕುಮಾರಿಯರಿಗೆ ಭೋಜನಮಾಡಿಸಿ ಹೊಸವಾದ ಕಪ್ಪು ಬಣ್ಣದ ಕುಪ್ಪಸ, ಸೀರೆ, ಭೂಷಣ ಇವುಗಳಿಂದ ಅಲಂಕರಿಸಿ ಕ್ಷಮಾಪ್ರಾರ್ಥನೆ ಮಾಡಬೇಕು.

೭. ತನ್ನ ಔದಾರ್ಯ, ಧನ ಇವುಗಳಿಗೆ ಅನುಸಾರವಾಗಿ ಏಳುಮಂದಿ ಇಲ್ಲವೇ ಐದುಮಂದಿ ಅಥವಾ ಒಬ್ಬಳಾದರೂ ಕನ್ನಿಕೆಯನ್ನು ಈರೀತಿ ಭೋಜನಾದಿಗಳಿಂದ ತೃಪ್ತಿಪಡಿಸಬೇಕು. ಅದರಲ್ಲಿ ಶ್ರದ್ಧೆಯು ಅತ್ಯಾವಶ್ಯಕ. ಏತಕ್ಕೆಂದರೆ ಶ್ರೀದೇವಿಯು ಶ್ರದ್ಧೆಗೆ ಸುಪ್ರೀತಳಾಗುವಳು ಎಂದು ವೀರವಚನವಿದೆ.

ಅಭ್ಯುಕ್ಷ್ಯ ಮಂಡಲಂ ಕೃತ್ವಾ ಗೋಮಯೇನ ಶುಚಿಸ್ಮಿತಃ |
ದತ್ವಾಸನೇ ಚೋಪವಿಶೇತ್ಪಾತ್ರಂ ಚ ಪುರತೋ ನ್ಯಸೇತ್ || ೮ ||

ತತಃ ಸುಸಿದ್ಧಮನ್ನಂ ಯತ್ತತ್ಸರ್ವಂ ಪರಿವೇಷಯೇತ್ |
ಸಘೃತಂ ಪಾಯಸಂ ಚಾಪಿ ಸ್ಥಾಪಯೇತ್ಪಾತ್ರಸನ್ನಿಧೌ || ೯ ||

ತೃಣಾನಿ ಷಷ್ಟಿಮಾದಾಯ ಚಾದಾಯ ಧಮನೀಂ ತಥಾ |
ಪ್ರಜ್ವಾಲಯೇತ್ತತೋ ಭೋಜ್ಯಂ ಯಾವಜ್ಜ್ವಲತಿ ಪಾವಕಃ || ೧೦ ||

ಪ್ರಶಾಂತೇ ಭೋಜನಂ ತ್ಯಕ್ತ್ವಾ ಸಮಾಚಮ್ಯ ಪ್ರಸನ್ನಧೀಃ |
ಚಾಮುಂಡಾಂ ಹೃದಯೇ ಧ್ಯಾತ್ವಾ ಗೃಹಕೃತ್ಯಪರೋ ಭವೇತ್ ||೧೧||

ಅನೇನ ವಿಧಿನಾ ಸರ್ವಂ ಮಾಸಿಮಾಸಿ ಸಮಾಚರೇತ್ |
ತತಃ ಸಂವತ್ಸರಸ್ಯಾಂತೇ ಭೋಜಯಿತ್ವಾ ಕುಮಾರಿಕಾಃ || ೧೨ ||

---

೮. ಅನಂತರ ಭೂಮಿಯನ್ನು ಜಲದಿಂದ ಪ್ರೋಕ್ಷಣೆಮಾಡಿ ಅದನ್ನು ಗೋಮಯದಿಂದ ಮಂಡಲಾಕಾರವಾಗಿ ಲೇಪನೆಮಾಡಿ (ಸಾರಿಸಿ) ಶುಚಿಯಾದ ಆ ಸ್ಥಳದಲ್ಲಿ ಆಸನವನ್ನಿಟ್ಟು ಅದರ ಮೇಲೆ ತಾನು ಕುಳಿತು ಮುಂಭಾಗದಲ್ಲಿ ಭೋಜನಪಾತ್ರೆಯನ್ನು ಇರಿಸಿಕೊಳ್ಳಬೇಕು.

೯. ಆ ಮೇಲೆ ಸುಸಂಸ್ಕರಿಸಿ ಪಾಕಮಾಡಿದ ಅಡಿಗೆಯನ್ನೆಲ್ಲಾ ಬಡಿಸಬೇಕು. ಆ ಭೋಜನ ಪಾತ್ರೆಯ ಸಮೀಪದಲ್ಲಿ ತುಪ್ಪ ಮಿಶ್ರವಾದ ಪಾಯಸವನ್ನೂ ಇರಿಸಬೇಕು.

೧೦. ಅನಂತರ ಅರವತ್ತು ತೃಣಗಳನ್ನಿಟ್ಟು ಅವುಗಳಿಗೆ ಬೆಂಕಿ ಹತ್ತಿಸಿ ಗಾಳಿ ಹಾಕುವ ಕೊಳವೆ (ಹೊಗೆ ಊದುವ ಕೊಳವೆ) ಯನ್ನು ತೆಗೆದುಕೊಂಡು ಆ ಅಗ್ನಿಯನ್ನು ಉರಿಸಿ ಆ ಜ್ವಾಲೆ ಉರಿಯುವವರೆಗೂ ಭೋಜನ ಮಾಡಬೇಕು.

೧೧. ಆ ಅಗ್ನಿಯು ಶಾಂತವಾದ ಮೇಲೆ ಭೋಜನವನ್ನು ತ್ಯಜಿಸಿ ಶುದ್ಧಾಚಮನವನ್ನು ಮಾಡಿ ಪ್ರಸನ್ನವಾದ ಚಿತ್ತದಿಂದ ಶ್ರೀ ಚಾಮುಂಡೇಶ್ವರಿಯನ್ನು ಹೃದಯದಲ್ಲಿ ಧ್ಯಾನಿಸುತ್ತಾ ಕಾರ್ಯತತ್ಪರನಾಗಿರಬೇಕು.

೧೨. ಈ ಕ್ರಮದಲ್ಲಿ ಪ್ರತಿಮಾಸದಲ್ಲೂ ಎಲ್ಲವನ್ನೂ ಆಚರಿಸಬೇಕು. ಅನಂತರ ಆ ವರ್ಷದ ಕೊನೆಯಲ್ಲಿ ವ್ರತಾಂಗವಾಗಿ ಕುಮಾರಿಯರಿಗೆ ಭೋಜನ ಮಾಡಿಸಬೇಕು.

ವಸ್ತ್ರೈರಾಭರಣೈಃ ಪೂಜ್ಯ ಪ್ರಣಿಪತ್ಯ ಕ್ಷಮಾಪಯೇತ್ ।
ಸುವರ್ಣಂ ಶಕ್ತಿತೋ ದದ್ಯಾದ್ಗಾಂ ಚ ವಿಪ್ರಾಯ ಶೋಭನಾಂ ॥ ೧೩ ॥

ಯ ಏವಂ ಕುರುತೇ ಪಾರ್ಥ ಪುರುಷೋ ನವಮೀವ್ರತಂ ।
ನ ತಸ್ಯ ಶತ್ರವೋ ನಾರ್ತಿಃ ಸ ರಾಜಾ ನಷ್ಟತಸ್ಕರಃ ॥ ೧೪ ॥

ಭೂತಾಃ ಪ್ರೇತಾಃ ಪಿಶಾಚಾ ನೋ ಜನಯಂತಿ ಭಯಂ ಗೃಹೇ ।
ಸಮುದ್ಯತೇಷು ಶಸ್ತ್ರೇಷು ಹಂತಾ ತಸ್ಯ ನ ವಿದ್ಯತೇ ॥ ೧೫ ॥

ತಂ ರಕ್ಷತಿ ಸದೋದ್ಯುಕ್ತಾ ಸರ್ವಾಸ್ವಾಪತ್ಸು ಚಂಡಿಕಾ ।
ನರೋ ವಾ ಯದಿ ವಾ ನಾರೀ ವ್ರತಮೇತತ್ಸಮಾಚರೇತ್ ।
ಉಲ್ಕಾವತ್ಸಾಸಪತ್ನಾನಾಂ ಜ್ವಲನ್ನಾಸ್ತೇ ಸದಾ ಹೃದಿ ॥ ೧೬ ॥

---

೧೩. ಮತ್ತು ಆ ಕನ್ನಿಕೆಯರಿಗೆ ವಸ್ತ್ರ, ಆಭರಣ ಇವುಗಳನ್ನು ಕೊಟ್ಟು ಪೂಜೆಮಾಡಿ ಯಥಾಶಕ್ತಿ ಸುವರ್ಣದಾನವನ್ನು ಮಾಡಿ ನಮಸ್ಕರಿಸಿ ಅಪರಾಧ ಕ್ಷಮೆಯನ್ನು ಬೇಡಬೇಕು. ಅಲ್ಲದೆ ಬ್ರಾಹ್ಮಣನಿಗೆ ಉತ್ತಮವಾದ ಗೋವನ್ನೂ ದಾನಮಾಡಬೇಕು.

೧೪. ಎಲೈ ಕುಂತೀಪುತ್ರನೇ! ಈರೀತಿ ಈ ನವಮೀವ್ರತವನ್ನು ಆಚರಿಸುವವನು ಶತ್ರುರಹಿತನೂ, ಪೀಡಾರಹಿತನೂ, ರಾಜಬಾಧೆ, ಚೋರಬಾಧೆ ಇವುಗಳಿಂದ ರಹಿತನೂ ಆಗುವನು.

೧೫. ಮತ್ತು ಅವನಿಗೆ ಸ್ವಗೃಹದಲ್ಲಿ ಭೂತ, ಪ್ರೇತ, ಪಿಶಾಚ ಇವುಗಳ ಭಯವಿರುವುದಿಲ್ಲ. ಅಲ್ಲದೆ ಇವನು ಶಸ್ತ್ರಗ್ರಹಣಮಾಡಿ ಯುದ್ಧಕ್ಕೆ ನಿಂತರೆ ಇವನನ್ನು ಎದುರಿಸುವವರೇ ಇಲ್ಲದಮಟ್ಟಿಗೆ ಅಜೇಯನಾಗುವನು.

೧೬. ಹಾಗೆಯೇ ಈ ವ್ರತವನ್ನಾಚರಿಸಿದವನ ಸಮಸ್ತ ಆಪತ್ತುಗಳಲ್ಲಿಯೂ ಸದಾ ಶ್ರೀ ಚಂಡಿಕಾದೇವಿಯು ರಕ್ಷಣೆಗಾಗಿ ಉದ್ಯುಕ್ತಳಾಗಿರುತ್ತಾಳೆ. ಈ ವ್ರತವನ್ನು ಗಂಡಸಾಗಲಿ, ಹೆಂಗಸಾಗಲಿ ಆಚರಿಸಬಹುದು. ಈರೀತಿ ಆಚರಿಸಿದವರ ಶತ್ರುಗಳ ಹೃದಯದಲ್ಲಿ ಯಾವಾಗಲೂ ಶ್ರೀ ಚಂಡಿಕಾದೇವಿಯು ಜ್ವಾಲೆಯುಳ್ಳ ಬೆಂಕಿಯ ಕೊಳ್ಳಿಯಂತೆ ಜ್ವಲಿಸುತ್ತಾ ಭೀತಿಪಡಿಸುತ್ತಾಳೆ.

**ತಾಂ ಶುಷ್ಕಕೋಟರಮುಖೀಂ ಪ್ರಕಟೋರುದಂಷ್ಟ್ರಾಂ ।**
**ಕಾಪಾಲಿನೀಂ ಸಮವಲಂಬಿತಮುಂಡಮಾಲಾಂ ।**
**ಉಕ್ತವ್ರತೇಷು ಪುರುಷೋ ನವಮೀಷು ಚಂಡೀಂ ।**
**ಸಂಪೂಜ್ಯ ಕಸ್ಯ ಹೃದಯೇ ನ ಚ ಶಂ ಕರೋತಿ ॥ ೧೭ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಉಲ್ಕಾನವಮೀವ್ರತವರ್ಣನಂ ನಾಮ ದ್ವಿಷಷ್ಟಿತಮೋऽಧ್ಯಾಯಃ.**



---

೧೭. ಶುಷ್ಕ ಕೋಟರಮುಖವುಳ್ಳವಳಾಗಿಯೂ ಸ್ಪಷ್ಟವಾದ ದೊಡ್ಡ ಕೋರೆ ದಾಡೆಗಳುಳ್ಳವಳಾಗಿಯೂ, ಕಪಾಲಧಾರಿಣಿಯಾಗಿಯೂ, ರುಂಡ ಮಾಲಿಕೆಯನ್ನು ಧರಿಸಿದವಳಾಗಿಯೂ ಇರುವ ಆ ಚಂಡಿಕಾದೇವಿಯನ್ನು ಈ ಹಿಂದೆ ಹೇಳಿದ ಪ್ರಕಾರ ಪೂಜಿಸಿದರೆ ಯಾರ ಮನಸ್ಸಿಗೆ ತಾನೆ ಆಕೆಯು ಸುಖವನ್ನುಂಟು ಮಾಡುವುದಿಲ್ಲ. ಪ್ರತಿಯೊಬ್ಬನಿಗೂ ಸುಖದಾತೃವಾಗುವಳು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಉಲ್ಕಾನವಮೀ ವ್ರತವರ್ಣನೆಯೆಂಬ ಅರವತ್ತೆರಡನೆಯ ಅಧ್ಯಾಯ ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ತ್ರಿಷಷ್ಟಿತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ಪೂರ್ವಂ ಕೃತಯುಗಸ್ಯಾದೌ ಭೃಗೋರ್ಭಾರ್ಯಾ ಮಹಾಸತೀ ।
ದಿವ್ಯಾರಾಮಾಶ್ರಮೇ ರಮ್ಯಾ ಗೃಹಕಾರ್ಯೈಕತತ್ಪರಾ ॥ ೧ ॥

ಬಭೂವ ಸಾ ಭೃಗೋರ್ನಿತ್ಯಂ ಹೃದಯೇಪ್ಸಿತಕಾರಿಣೀ ।
ತಸ್ಯಾಂ ಮುನಿರ್ಮಹಾತೇಜಾ ಅಗ್ನಿಹೋತ್ರಂ ನಿಧಾಯ ಚ ॥ ೨ ॥

ವಿಷ್ಣೋಸ್ತ್ರಾಸಾದ್ದಾನವಾನಾಂ ಕುಲತ್ರಾಣಸಮಾಕುಲಂ ।
ಮುಕ್ತ್ವಾ ಯುದ್ಧಸ್ಥಿತಂ ಪಾರ್ಶ್ವೇ ಸಮುಪ್ಯ ಮುನಿಪುಂಗವಃ ॥ ೩ ॥

---

### ಅರವತ್ತಮೂರನೆಯ ಅಧ್ಯಾಯ

೧. ಪೂರ್ವದಲ್ಲಿ ಕೃತಯುಗದ ಆದಿಯಲ್ಲಿ ಮಹಾಪತಿವ್ರತೆಯಾಗಿಯೂ, ಸುಂದರಿಯಾಗಿಯೂ ಇರುವ ದಿವ್ಯೆ ಎಂಬ ಹೆಸರುಳ್ಳ ಭೃಗು ಮಹರ್ಷಿಯ ಪತ್ನಿಯು ರಮ್ಯವಾದ ಆಶ್ರಮದಲ್ಲಿ ಗೃಹಕಾರ್ಯತತ್ಪರಳಾಗಿದ್ದಳು.

೨-೪. ಮತ್ತು ಅವಳು ಯಾವಾಗಲೂ ಭೃಗುಮಹರ್ಷಿಯ ಮನೋಭಿಪ್ರಾಯವನ್ನರಿತು ಅವನಿಗಿಷ್ಟವಾದ ಕಾರ್ಯವನ್ನೇ ಮಾಡುತ್ತಿದ್ದಳು. ಮಹಾತಪಸ್ವಿಯಾಗಿಯೂ, ಮಹಾತೇಜಸ್ವಿಯಾಗಿಯೂ ಇರುವ ಆ ಭೃಗುಮಹರ್ಷಿಯು ಕದಾಚಿತ್ ದಾನವರು ವಿಷ್ಣುವನ್ನು ಎದುರಿಸಿ ಯುದ್ಧಮಾಡಿದಾಗ ಮಹಾವಿಷ್ಣುವಿನಿಂದ ಭಯಪಟ್ಟ ದಾನವಕುಲವು ಈ ಋಷಿಯಲ್ಲಿ ರಕ್ಷಣೆಯನ್ನು ಬೇಡಿತು. ಈ ಋಷಿಶ್ರೇಷ್ಠನು ತಾನು ಮಾಡಬೇಕಾದ ಅಗ್ನಿಹೋತ್ರವನ್ನೂ ತನ್ನ

**ದತ್ವಾ ನಿಕ್ಷೇಪಕಂ ಸರ್ವಂ ದಿವ್ಯಾಯೈ ಸುಮಹಾತಪಾಃ ।**
**ಜಗಾಮ ಹಿಮವತ್ಪಾರ್ಶ್ವೇ ಹರಂ ತೋಷಯಿತುಂ ರಹಃ ॥ ೪ ॥**

**ಸಂಜೀವನೀಕೃತೇ ನಿತ್ಯಂ ಕಣ್ವೈರ್ಧೂಮಮಧೋಮುಖಃ ।**
**ಪಪೌ ದಾನವರಾಜಸ್ಯ ವಿಜಯಾಯ ಪುರೋಹಿತಃ ॥ ೫ ॥**

**ಆಜಗಾಮ ಗತೇ ತಸ್ಮಿನ್ಗರುಡೇನಾಶ್ರಿತೋ ಹರಿಃ ।**
**ಅಭ್ಯೇತ್ಯ ಜಲ್ಪನಂ ಚಕ್ರೇ ಚಕ್ರೇಣೋತ್ಕೃತ್ತಕಂಧರಂ ॥ ೬ ॥**

**ಗಲದ್ರುಧಿರಸಂಪನ್ನಂ ಲೋಹಿತಾರ್ಣವಸಂನಿಭಂ ।**
**ದೃಷ್ಟ್ವಾ ಸುರಬಲಂ ಸರ್ವಂ ನಿಹತಂ ವಿಷ್ಣುನಾ ತದಾ ।**
**ದಿವ್ಯಾ ಸಂಶಪ್ತುಕಾಮಾಭೂದ್ವಿಷ್ಣುಂ ಸಾಸ್ರಾವಿಲೇಕ್ಷಣಾ ॥ ೭ ॥**

---

ಸರ್ವ ಧನವನ್ನೂ, ಭಯಗ್ರಸ್ತವಾದ ದಾನವಕುಲವನ್ನೂ, ತನ್ನ ಹೆಂಡತಿಯಾದ ದಿವ್ಯಳಿಗೆ ವಹಿಸಿಕೊಟ್ಟು, ರಹಸ್ಯವಾದ ತಪಸ್ಸಿನಿಂದ ಶ್ರೀ ಪರಮೇಶ್ವರನನ್ನು ಸಂತೋಷಪಡಿಸಿ ವರ ಪಡೆಯಬೇಕೆಂದು ಹಿಮವತ್ಪರ್ವತದ ಪಾರ್ಶ್ವಕ್ಕೆ ಹೋದನು.

೫. ರಾಕ್ಷಸಪುರೋಹಿತನಾದ ಆ ಭೃಗುಮಹರ್ಷಿಯು ದಾನವರಾಜನಿಗೆ ಯುದ್ಧದಲ್ಲಿ ಜಯವಾಗಬೇಕೆಂದು ಅಪೇಕ್ಷಿಸಿ ತಪಸ್ಸುಮಾಡುವುದಕ್ಕಾಗಿ ಹಿಮವತ್ಪರ್ವತಪಾರ್ಶ್ವಕ್ಕೆ ಹೋಗಿ, ಅಲ್ಲಿ ಸಂಜೀವಿನೀ ವಿದ್ಯಾಲಾಭಕ್ಕಾಗಿ ತಲೆ ಕೆಳಗಾಗಿ ನಿಂತು ಯಾವಾಗಲೂ ಧೂಮಪಾನವನ್ನಾಚರಿಸುತ್ತಾ ಘೋರ ತಪಸ್ಸನ್ನು ಮಾಡಿದನು.

೬. ಅತ್ತ ಭೃಗುಮಹರ್ಷಿಯು ತಪಸ್ಸಿಗಾಗಿ ಹಿಮವತ್ಪಾರ್ಶ್ವಕ್ಕೆ ಹೋದ ಮೇಲೆ, ಇತ್ತ ಶ್ರೀ ಹರಿಯು ಗರುಡಾರೂಢನಾಗಿ ಅಲ್ಲಿಗೆ ಬಂದು ಚಕ್ರದಿಂದ ದಾನವರನ್ನೆಲ್ಲಾ ಕತ್ತರಿಸಿ ಕತ್ತರಿಸಿ ಹಾಕಿದನು.

೭. ಈರೀತಿ ವಿಷ್ಣುವಿನಿಂದ ಎಲ್ಲಾ ಅಸುರಬಲವೂ ಸಂಹರಿಸಲ್ಪಟ್ಟಾಗ ಆ ದಾನವಶರೀರದಿಂದ ರಕ್ತವು ಹರಿದು ಒಂದು ರಕ್ತದ ಸಮುದ್ರದಂತಿರುವುದನ್ನು ಕಂಡು ಆ ಭೃಗುಪತ್ನಿಯಾದ ದಿವ್ಯೆಯು ಕಣ್ಣೀರು ಸುರಿಸಿ, ವಿಷ್ಣುವಿಗೆ ಶಾಪಕೊಡಲು ಉದ್ಯುಕ್ತಳಾದಳು.

ಯಾವನ್ನೋಚ್ಚರತೇ ವಾಚಂ ಚಕ್ರೇಣೋತ್ಕೃತ್ತಕಂಧರಂ ।
ತಾವನ್ನಿಪಾತಯಾಮಾಸ ಶಿರಸ್ತಸ್ಯಾಃ ಸಕುಂಡಲಂ ॥ ೮॥

ಪ್ರಾಪ್ಯ ಸಂಜೀವನೀಂ ವಿದ್ಯಾಂ ಯಾವದಾಯಾತ್ಯಸೌ ಮುನಿಃ ।
ತಾವತ್ಸ ದೈತ್ಯಾನ್ನಾಪಶ್ಯತ್ಪಶ್ಯತಿಸ್ಮ ನಿಪಾತಿತಂ ॥ ೯ ॥

ರೋಷಾಚ್ಛಶಾಪ ಚ ಹರಿಂ ಭ್ರುಕುಟೀಕುಟಿಲಾನನಃ ।
ಅವಶ್ಯಭಾವಭಾವಿತ್ವಾದ್ವಿಶ್ವಸ್ಯ ಹಿತಕಾರಣಾತ್ ॥ ೧೦ ॥

ಯಸ್ಮಾತ್ತ್ವಯಾ ಹತಾ ದೈತ್ಯಾ ಬ್ರಹ್ಮಣೋ ಮತ್ಪರಿಗ್ರಹಾಃ ।
ತಸ್ಮಾತ್ತ್ವಂ ಮಾನುಷೇ ಲೋಕೇ ದಶ ವಾರಾನ್ಗಮಿಷ್ಯಸಿ ॥ ೧೧ ॥

---

೮. ಆಗ ಶ್ರೀ ಮಹಾವಿಷ್ಣುವು ಅದನ್ನು ತಿಳಿದು ಅವಳ ಬಾಯಿನಿಂದ ಶಾಪವಚನವು ಹೊರಬೀಳುವುದರ ಒಳಗಾಗಿ ಚಕ್ರಾಯುಧದಿಂದ ಅವಳ ಕತ್ತನ್ನು ಕತ್ತರಿಸಿ ಕುಂಡಲಗಳಿಂದ ಅಲಂಕೃತವಾದ ಆಕೆಯ ಶಿರಸ್ಸನ್ನು ಭೂಮಿಯಲ್ಲಿ ಕೆಡವಿದನು.

೯. ಆ ಭೃಗುಮಹರ್ಷಿಯು ತನ್ನ ತಪೋಬಲದಿಂದ ಸಂಜೀವಿನೀವಿದ್ಯೆಯನ್ನು ಪಡೆದು ಹಿಂದಿರುಗಿ ಬಂದು ನೋಡಲಾಗಿ, ದೈತ್ಯರು ಯಾರನ್ನೂ ಕಾಣದೆ ಭೂಮಿಯಲ್ಲಿ ಅಸ್ತವ್ಯಸ್ತವಾಗಿ ಬಿದ್ದಿರುವ ಅವರ ಮೃತಕಳೇಬರವನ್ನು ಮಾತ್ರ ಕಂಡನು.

೧೦. ಆಗ ಆ ಋಷಿಯು ಕೋಪದಿಂದ ಹುಬ್ಬು ಗಂಟುಹಾಕಿದ ಮುಖವುಳ್ಳವನಾಗಿ " ಓ ಹರಿಯೇ ! ಅವಶ್ಯಕವಾಗಿ ನಡೆಯಬೇಕಾದ ಕಾರ್ಯವು ನಡೆದೇ ಬಿಡುವುದು. ಅದನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ. ಜಗತ್ತಿಗೆ ಹಿತವಾಗಬೇಕೆಂಬ ಉದ್ದೇಶದಿಂದ ಜಗತ್ಕಂಟಕರಾದ ಈ ದೈತ್ಯರನ್ನು ನೀನು ಸಂಹರಿಸಿದ್ದೀಯೆ.

೧೧. ಆದರೂ ಈ ದೈತ್ಯರು ಬ್ರಹ್ಮದೇವನಿಂದ ನನಗೆ ಒಪ್ಪಿಸಲ್ಪಟ್ಟವರು. ನನ್ನ ರಕ್ಷಣೆಗೆ ಒಳಗಾದ ಅಂತಹ ದೈತ್ಯರನ್ನು ನೀನು ಕೊಂದದ್ದರಿಂದ ಮನುಷ್ಯಲೋಕಕ್ಕೆ ಹೋಗಿ ಹತ್ತುಸಾರಿ ಜನ್ಮವೆತ್ತು '' ಎಂದು ಆಗ ಶ್ರೀಹರಿಗೆ ಶಾಪವಿತ್ತನು.

ಅತೋಽರ್ಥಂ ಮಾನುಷೇ ಲೋಕೇ ರಕ್ಷಾರ್ಥಂ ಚ ಮಹೀಕ್ಷಿತಾಂ ।
ಅವತಾರಂ ಚಕಾರಾಹಂ ಭೂಯೋಭೂಯಃ ಪೃಥಗ್ವಿಧಂ ॥ ೧೨ ॥

ಪೂರ್ವೋಕ್ತೈಃ ಕಾರಣೈಃ ಪಾರ್ಥ ಅವತೀರ್ಣಂ ಮಹೀತಲೇ ।
ಮಾಂ ನರಾ ಯೇಽರ್ಚಯಿಷ್ಯಂತಿ ತೇಷಾಂ ವಾಸಸ್ತ್ರಿವಿಷ್ಟಪೇ ॥ ೧೩ ॥

॥ ಯುಧಿಷ್ಠಿರ ಉವಾಚ ॥

ವ್ರತಂ ದಶಾವತಾರಾಖ್ಯಂ ಕೃಷ್ಣ ಬ್ರೂಹಿ ಸವಿಸ್ತರಂ ।
ಸಮಂತ್ರಂ ಸರಹಸ್ಯಂ ಚ ಸರ್ವಪಾಪಪ್ರಣಾಶನಂ ॥ ೧೪ ॥

॥ ಶ್ರೀ ಕೃಷ್ಣ ಉವಾಚ ॥

ಪ್ರೋಷ್ಠಪದೇ ಸಿತೇ ಪಕ್ಷೇ ದಶಮ್ಯಾಂ ನಿಯತಃ ಶುಚಿಃ ।
ಸ್ನಾತ್ವಾ ಜಲಾಶಯೇ ಸ್ವಚ್ಛೇ ಪಿತೃದೇವಾದಿತರ್ಪಣಂ ॥ ೧೫ ॥

---

೧೨. ಈ ಭೃಗು ಶಾಪದಿಂದಲೂ, ಮನುಷ್ಯಲೋಕದ ರಾಜರ ಸಂರಕ್ಷಣೆಗಾಗಿಯೂ, ಮನುಷ್ಯಲೋಕದಲ್ಲಿ ನಾನು ಪುನಃ ಪುನಃ ನಾನಾ ರೀತಿಯಾಗಿ ಅವತಾರಗಳನ್ನು ಮಾಡಿರುತ್ತೇನೆ.

೧೩. ಓ ಪಾರ್ಥ ಸಹೋದರನೇ ! ಈ ಹಿಂದೆ ಹೇಳಿದ ಕಾರಣಗಳಿಗಾಗಿ ಭೂಮಿಯಲ್ಲಿ ಅವತರಿಸಿದ ನನ್ನ ಅವತಾರಮೂರ್ತಿಯನ್ನು ಯಾವ ಪುರುಷರು ಅರ್ಚಿಸುವರೋ ಅಂಥವರಿಗೆ ಸ್ವರ್ಗಲೋಕವಾಸವು ಲಭಿಸುವುದು ಎಂದನು.

೧೪. ಯುಧಿಷ್ಠಿರನು ಹೇಳುತ್ತಾನೆ—ಓ ಕೃಷ್ಣನೇ ! ಸರ್ವಪಾಪವನ್ನೂ ನಾಶಮಾಡುವ ದಶಾವತಾರವೆಂಬ ನಾಮಧೇಯವುಳ್ಳ ವ್ರತವನ್ನು ಮಂತ್ರರಹಸ್ಯ ಸಹಿತ ವಿಸ್ತಾರವಾಗಿ ನನಗೆ ಹೇಳು ಎಂದನು.

೧೫. ಶ್ರೀ ಕೃಷ್ಣನು ಹೇಳುತ್ತಾನೆ—ಓ ಯುಧಿಷ್ಠಿರನೇ ! ಈ ವ್ರತಾನುಷ್ಠಾತೃವು ಭಾದ್ರಪದಮಾಸದ ಶುಕ್ಲಪಕ್ಷದ ದಶಮೀ ತಿಥಿಯಲ್ಲಿ ಸ್ವಚ್ಛವಾದ ಜಲವುಳ್ಳ ಜಲಾಶಯದಲ್ಲಿ ಸ್ನಾನಮಾಡಿ, ಶುಚಿಯಾಗಿ ನಿಯಮದಿಂದ ದೇವ ಪಿತೃ ತರ್ಪಣವನ್ನು ಮಾಡಬೇಕು.

ಕೃತ್ವಾ ಕುರುಕುಲಶ್ರೇಷ್ಠ ಗೃಹಮಾಗತ್ಯ ಮಾನವಃ ।
ಗೃಹ್ಣೀಯಾದ್ಧಾನ್ಯಚೂರ್ಣಸ್ಯ ದ್ವಿಹಸ್ತಪ್ರಸೃತಿತ್ರಯಂ　　॥ ೧೬ ॥

ಕ್ರಮೇಣ ಪಾವಯೇತ್ತಾಂ ತು ಪುಂಸಂಜ್ಞಂ ಘೃತಸಂಶ್ರಿತಂ ।
ವರ್ಷೇವರ್ಷೇ ದಿನೇ ತಸ್ಮಿನ್ಯಾವದ್ವರ್ಷಾಣಿ ವೈ ದಶ　　॥ ೧೭ ॥

ಪ್ರಥಮೇ ಪೂರಿಕಾನ್ವರ್ಷೇ ದ್ವಿತೀಯೇ ಘೃತಪೂರಕಾನ್ ।
ತೃತೀಯೇ ಶುಕ್ಲಕಾಂಸಾರಂ ಚತುರ್ಥೇ ಮೋದಕಾಞ್ಛುಭಾನ್ ॥೧೮॥

ಸೋಹಾಲಕಾನ್ಪಂಚಮೇಽಬ್ದೇ ಷಷ್ಠೇಽಬ್ದೇ ಖಂಡವೇಷ್ಟಕಾನ್ ।
ಸಪ್ತಮೇಽಬ್ದೇ ಕೋಕರಸಾನಪೂಪಾಂಶ್ಚ ತಥಾಷ್ಟಮೇ　　॥ ೧೯ ॥

---

೧೬. ಅಯ್ಯಾ ಕುರುಕುಲಶ್ರೇಷ್ಠನೇ ! ಅನಂತರ ಆ ಪುರುಷನು ಅಲ್ಲಿಂದ ಸ್ವಗೃಹಕ್ಕೆ ಬಂದು ಅಲ್ಲಿ ಎರಡು ಅಂಗೈಗಳನ್ನೂ ಅಂಜಲಿಯಾಗಿ ಜೋಡಿಸಿ ಮೂರು ಬೊಗಸೆ ಧಾನ್ಯಚೂರ್ಣವನ್ನು ತೆಗೆದುಕೊಳ್ಳಬೇಕು.

೧೭. ಪುಂಸಂಜ್ಞಕವಾದ ಆ ಮೂರು ಬೊಗಸೆ ಧಾನ್ಯದ ಹಿಟ್ಟನ್ನು ತುಪ್ಪ ಮಿಶ್ರಣಮಾಡಿ ಸಂಸ್ಕರಿಸಿ, ಕ್ರಮವಾಗಿ ಪಾಕಮಾಡಬೇಕು. ಹತ್ತು ಸಂವತ್ಸರಗಳು ಕಳೆಯುವತನಕ ಪ್ರತಿ ವರ್ಷದಲ್ಲೂ ಈರೀತಿ ಆಚರಿಸಬೇಕು.

೧೮. ಈ ವ್ರತವನ್ನಾಚರಿಸುವವನು ಆ ಧಾನ್ಯ ಚೂರ್ಣದಿಂದ ಮೊದಲ ಯ ವರ್ಷ ' ಪೂರಿ ' ಎಂಬ ಭಕ್ಷ್ಯವನ್ನು ತಯಾರಿಸಬೇಕು. ಎರಡನೆಯ ವರ್ಷ ಘೃತಪೂರಕಃ ವೆಂಬ ಭಕ್ಷ್ಯವನ್ನು ಮಾಡಬೇಕು. ಮೂರನೆಯ ವರ್ಷ ಶುಕ್ಲ ಕಾಂಸಾರವೆಂಬ ಭಕ್ಷ್ಯವನ್ನೂ ನಾಲ್ಕನೆಯ ವರ್ಷದಲ್ಲಿ ಶುಭಕರವಾದ ಮೋದಕ ಗಳೂ ಮಾಡಿಸಬೇಕು.

೧೯. ಐದನೆಯ ವರ್ಷ ಸೋಹಾಲಕವೆಂಬ ಭಕ್ಷ್ಯವನ್ನು ಮಾಡಿಸ ಬೇಕು. ಆರನೆಯ ವರ್ಷದಲ್ಲಿ ಕರಿಗಡುಬು ಎಂಬ ಭಕ್ಷ್ಯ ವಿಶೇಷವನ್ನೂ, ಏಳನೆಯ ವರ್ಷದಲ್ಲಿ ಕೋಕರಸ ಎಂಬ ಭಕ್ಷ್ಯವನ್ನೂ, ಎಂಟನೆಯ ಸಂವತ್ಸರ ದಲ್ಲಿ ಅಪೂಪವೆಂಬ ಭಕ್ಷ್ಯವನ್ನೂ ಮಾಡಿಸಬೇಕು.

ನವಮೇ ಕರ್ಣವೇಷ್ಟಾಂಸ್ತು ದಶಮೇ ಖಂಡಕಾಞ್ಶುಭಾನ್ ।
ದಶ ಧೇನೋರ್ದಶಹರೇಃ ದಶವಿಪ್ರಾಯ ದಾಪಯೇತ್ ॥ ೨೦ ॥

ಕ್ರಮೇಣ ಭಕ್ಷಯಿತ್ವಾ ಚ ಯಥೋಕ್ತಂ ಭರತರ್ಷಭ ।
ಅರ್ಧಾರ್ಧಂ ಪಿಷ್ಟಯೇದೇವಮರ್ಧಾರ್ಧಂ ವಾ ದ್ವಿಜಾತಯೇ ।
ಸ್ವತಏವಾರ್ಧಮಶ್ನೀಯಾದ್ಗತ್ವಾ ರಮ್ಯೇ ಜಲಾಶಯೇ ॥ ೨೧ ॥

ದಶಾವತಾರಾನಭ್ಯರ್ಚ್ಯ ಪುಷ್ಪಧೂಪವಿಲೇಪನೈಃ ।
ಮಂತ್ರೇಣಾನೇನ ಮೇಧಾವೀ ಹರಿಮಭ್ಯುಕ್ಷ್ಯ ವಾರಿಣಾ ॥ ೨೨ ॥

---

೨೦. ಒಂಭತ್ತನೆಯ ವರ್ಷದಲ್ಲಿ " ಕರ್ಣವೇಷ್ಟ '' ಎಂಬ ಭಕ್ಷ್ಯವನ್ನೂ ಹತ್ತನೆಯ ವರ್ಷದಲ್ಲಿ ಮನೋಹರವಾದ " ಖಂಡಕ '' ಎಂಬ ಭಕ್ಷ್ಯವನ್ನೂ ಮಾಡಿಸಬೇಕು. ಆ ಭಕ್ಷ್ಯಗಳಲ್ಲಿ ಹತ್ತನ್ನು ಗೋಗ್ರಾಸಕ್ಕಾಗಿ ಕೊಡಬೇಕು. ಹತ್ತು ಭಕ್ಷ್ಯಗಳನ್ನು ಶ್ರೀಹರಿಗಾಗಿ ಸಮರ್ಪಿಸಬೇಕು. ಹತ್ತು ಭಕ್ಷ್ಯಗಳನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು.

೨೧. ಓ ಭಾರತೋತ್ತಮನೇ! ಈ ಕ್ರಮದಿಂದ ಆ ಭಕ್ಷ್ಯಗಳನ್ನು ವಿನಿಯೋಗಿಸಿ ಬಳಿಕ ತಾನೂ ಭಕ್ಷಣ ಮಾಡಬೇಕು ಎಂಬುದು ಕೆಲವರ ಅಭಿಪ್ರಾಯ. ಇರುವ ಭಕ್ಷ್ಯಗಳನ್ನು ಎರಡು ಪಾಲುಮಾಡಿ ಅದರಲ್ಲಿ ಒಂದು ಭಾಗವನ್ನು ಪುನಃ ಎರಡಾಗಿ ವಿಭಾಗಿಸಿ ಆ ಒಂದಂಶವನ್ನು ಗೋವಿಗೆ ನಿವೇದನ ಮಾಡಿ, ಮಿಕ್ಕುಳಿದ ಕಾಲುಭಾಗವನ್ನು ಬ್ರಾಹ್ಮಣನಿಗೆ ಕೊಡಬೇಕು. ಸಮವಾದ ಅರ್ಧಾಂಶವನ್ನು ರಮ್ಯವಾದ ಜಲಾಶಯಕ್ಕೆ ತೆಗೆದುಕೊಂಡು ಹೋಗಿ ತಾನು ಭಕ್ಷಣೆ ಮಾಡಬೇಕು ಎಂಬುದು ಮತ್ತೊಂದು ಮತ.

೨೨. ವ್ರತವನ್ನಾಚರಿಸುವ ಪಂಡಿತನು ಆ ಜಲಾಶಯದ ಸಮೀಪದಲ್ಲಿ ಭಕ್ಷಣೆಗೆ ಮೊದಲು ಮುಂದೆ ಹೇಳುವ ಮಂತ್ರಪೂರ್ವಕವಾಗಿ ಶುದ್ಧೋದಕದಿಂದ ಶ್ರೀಹರಿಗೆ ಅಭಿಷೇಕಮಾಡಿ ಪುಷ್ಪ, ಧೂಪ, ವಿಲೇಪನಾದಿಗಳಿಂದ ಶ್ರೀಹರಿಯ ದಶಾವತಾರಗಳನ್ನು ಅರ್ಚಿಸಬೇಕು.

ಮತ್ಸ್ಯಂ ಕೂರ್ಮಂ ವರಾಹಂ ಚ ನಾರಸಿಂಹಂ ತ್ರಿವಿಕ್ರಮಂ ।
ಶ್ರೀರಾಮಂ ರಾಮಕೃಷ್ಣೌ ಚ ಬುದ್ಧಂ ಚೈವ ಸಕಲ್ಕಿನಂ ॥ ೨೩ ॥

ಗತೋಽಸ್ಮಿ ಶರಣಂ ದೇವಂ ಹರಿಂ ನಾರಾಯಣಂ ಪ್ರಭುಂ ।
ಪ್ರಣತೋಽಸ್ಮಿ ಜಗನ್ನಾಥಂ ಸ ಮೇ ವಿಷ್ಣುಃ ಪ್ರಸೀದತು ॥ ೨೪ ॥

ಛಿನತ್ತು ವೈಷ್ಣವೀಂ ಮಾಯಾಂ ಭಕ್ತ್ಯಾ ಜಾತೋ ಜನಾರ್ದನಃ ।
ಶ್ವೇತದ್ವೀಪಂ ನಯತ್ವಸ್ಮಾನ್ಸ್ವಮಾತ್ಮನಿ ನಿವೇದಯೇತ್ ॥ ೨೫ ॥

ಏವಂ ಯಃ ಕುರುತೇ ಪಾರ್ಥ ವಿಧಿನಾನೇನ ಸುವ್ರತ ।
ದಶಾವತಾರನಾಮಾಖ್ಯಂ ತಸ್ಯ ಪುಣ್ಯಫಲಂ ಶೃಣು ॥ ೨೬ ॥

---

೨೩. ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಶ್ರೀರಾಮ, ಬಲರಾಮ, ಶ್ರೀಕೃಷ್ಣ, ಬುದ್ಧ, ಕಲ್ಕಿ ಎಂಬ ಈ ಹತ್ತು ಶ್ರೀಹರಿಯ ದಶಾವತಾರಗಳು.

೨೪-೨೫. (ಭಕ್ತಜನ ದುರಿತಹಾರಿಯಾಗಿಯೂ ಜೀವರಿಗೆ ಅಂತರ್ಯಾಮಿ ಸ್ವರೂಪದಿಂದ ನಿಯಾಮಕನಾಗಿಯೂ, ತ್ರಿಲೋಕ ಸ್ವಾಮಿಯಾಗಿಯೂ ಇರುವ ಶ್ರೀ ಮಹಾವಿಷ್ಣುವಿಗೆ ಶರಣಾಗತನಾಗಿ ನಮಸ್ಕಾರಮಾಡಿರುತ್ತೇನೆ. ಅಂತಹ ಮಹಾವಿಷ್ಣುವು ನನಗೆ ಪ್ರಸನ್ನನಾಗಲಿ. ದಶಾವತಾರ ಮಾಡಿದ ಶ್ರೀ ಜನಾರ್ದನನು ನನ್ನ ಭಕ್ತಿಗೆ ಮೆಚ್ಚಿ ಸರ್ವವ್ಯಾಪಕವಾದ ತನ್ನ ವೈಷ್ಣವೀ ಮಾಯೆಯನ್ನು ನನಗೆ ಬಂಧಕವಾಗದಂತೆ ಕತ್ತರಿಸಲಿ. ಮತ್ತು ನಮ್ಮನ್ನು ತನ್ನ ಸ್ಥಾನವಾದ ಶ್ವೇತದ್ವೀಪಕ್ಕೆ ಕರೆದುಕೊಂಡು ಹೋಗಲಿ ಎಂಬುದು ಪೂಜಾಮಂತ್ರಾರ್ಥ). ಪೂಜಾಕಾಲದಲ್ಲಿ ಈರೀತಿ ಮನಸ್ಸಿನಲ್ಲಿ ಧ್ಯಾನಿಸಿ ಆತ್ಮನಿವೇದನ ಮಾಡಬೇಕು.

೨೬. ಓ ಪಾಂಡುಪುತ್ರನೇ! ದಶಾವತಾರವೆಂಬ ಹೆಸರುಳ್ಳ ಈ ವ್ರತವನ್ನು ನಿಯಮದಿಂದ ಯಾವ ಪುರುಷನು ಆಚರಿಸುತ್ತಾನೋ ಅಂಥವನಿಗೆ ಬರುವ ಪುಣ್ಯಫಲವನ್ನು ಶ್ರವಣಮಾಡು.

ಶ್ರೂಯಂತೇ ಯಾಸ್ತ್ವವಿದ್ಯಾಸ್ತು ಪುರುಷಾಣಾಂ ದಶಾ ದಶ |
ತಾಶ್ಛಿನತ್ತಿ ನ ಸಂದೇಹಃ ಶಕ್ರಪ್ರಹರಣೈರ್ಹರಿಃ || ೨೭ ||

ಸಂಸಾರಸಾಗರೇ ಘೋರೇ ಮಜ್ಜಂತಂ ತತ್ರ ತಂ ಹರಿಃ |
ಶ್ವೇತದ್ವೀಪಂ ನಯತ್ಯಾಶು ವ್ರತೇನಾನೇನ ತೋಷಿತಃ || ೨೮ ||

ಕಿಂ ತಸ್ಯ ನ ಭವೇಲ್ಲೋಕೇ ಯಸ್ಯ ತುಷ್ಟೋ ಜನಾರ್ದನಃ |
ಸೋಽಹಂ ಜನಾರ್ದನೋ ರಾಜನ್ಕಾಲರೂಪೀ ಧರಾಸುತಃ |
ಮರ್ತ್ಯಲೋಕೇ ಸ್ವಯಂ ಪಾರ್ಥ ಭೂಭಾರೋತ್ತಾರಕಾರಣಂ || ೨೯ ||

ಯಾ ಸ್ತ್ರೀವ್ರತಮಿದಂ ಪಾರ್ಥ ಚರಿಷ್ಯತಿ ಮಯೋದಿತಂ |
ಸಾ ಲಕ್ಷ್ಮ್ಯಾಽಚಲಯಾ ಯುಕ್ತಾ ಭರ್ತೃಪುತ್ರಸಮನ್ವಿತಾ || ೩೦ ||

---

೨೭. ಪುರುಷರಿಗೆ ಅವಿದ್ಯಾ ಮಾಯಾ ಅಜ್ಞಾನಾವಸ್ಥೆಗಳು ಶ್ರುತಿಗಳಲ್ಲಿ ಉಕ್ತವಾಗಿದೆ. ಅಂತಹ ಅವಸ್ಥೆಗಳನ್ನು ಛೇದಿಸುವದರಲ್ಲಿ ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಜ್ಞಾನವನ್ನು ಈ ವ್ರತಾನುಷ್ಠಾತೃವಿಗೆ ದಶಾವತಾರಿಯಾದ ಶ್ರೀ ಹರಿಯು ಅನುಗ್ರಹಿಸಿ ಅದರಿಂದ ಆ ಅವಸ್ಥೆಗಳನ್ನು ನಿಸ್ಸಂದೇಹವಾಗಿ ಪರಿಹರಿಸುವನು.

೨೮. ಈ ವ್ರತಾಚರಣೆಯಿಂದ ಸಂತುಷ್ಟನಾದ ಶ್ರೀಹರಿಯು ಘೋರವಾದ ಸಂಸಾರ ಸಾಗರದಲ್ಲಿ ಮುಳುಗುತ್ತಿರುವ ಪುರುಷನನ್ನು ತನ್ನ ಸ್ಥಾನವಾದ ಶೀಘ್ರವಾಗಿ ಶ್ವೇತದ್ವೀಪಕ್ಕೆ ಕರೆದೊಯ್ಯುತ್ತಾನೆ.

೨೯. ಓ ರಾಜನೇ ! ಯಾವನ ವಿಷಯದಲ್ಲಿ ಶ್ರೀ ಜನಾರ್ಧನನು ಸಂತುಷ್ಟನಾಗುವನೋ ಅಂತಹವನಿಗೆ ಲೋಕದಲ್ಲಿ ಯಾವುದು ತಾನೇ ದುರ್ಲಭ? ಎಲೈ ಕುಂತೀಪುತ್ರನೇ ! ಭೂಭಾರಹರಣಾರ್ಥವಾಗಿ ಮನುಷ್ಯಲೋಕದಲ್ಲಿ ಕಾಲರೂಪಿಯಾಗಿ ಧರಾಸುತನೆಂದೆನಿಸಿಕೊಂಡವನೂ ಜನಾರ್ದನನಾದ ನಾನೇ.

೩೦. ಓ ಕುಂತೀಪುತ್ರನೇ ! ನಾನು ನಿನಗೆ ಉಪದೇಶಿಸಿದ ಈ ವ್ರತವನ್ನು ಆಚರಿಸುವ ಹೆಂಗಸು ಸ್ಥಿರಸಂಪದ್ಯುಕ್ತಳಾಗಿ ಪತಿಪುತ್ರಾದಿಗಳಿಂದ ಸಮನ್ವಿತೆಯಾಗಿ ಸುಖಿಯಾಗುವಳು.

ಮರ್ತ್ಯಲೋಕೇ ಚಿರಂ ಸ್ಥಿತ್ವಾ ವಿಷ್ಣುಲೋಕೇ ಮಹೀಯತೆ ।
ವಿಷ್ಣುಲೋಕಾದ್ರುದ್ರಲೋಕಂ ತತೋ ಯಾತಿ ಪರಂ ಪದಂ ॥ ೩೧ ॥

ಯೇ ಪೂಜಯಂತಿ ಪುರುಷಾಃ ಪುರುಷೋತ್ತಮಸ್ಯ ।
ಮತ್ಸ್ಯಾದಿಕಾಂಸ್ತು ದಶಮೀಷು ದಶಾವತಾರಾನ್ ।
ಮರ್ತ್ಯ ದಶಸ್ವಪಿ ದಶಾಸು ಸುಖಂ ವಿಹೃತ್ಯ ।
ತೇ ಯಾಂತಿ ಯಾನಮಧಿರುಹ್ಯ ಸುರೇಶಲೋಕಾನ್ ॥ ೩೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರಸಂವಾದೇ ದಶಾವತಾರ ಚರಿತ್ರವ್ರತಂ
ನಾಮ ತ್ರಿಷಷ್ಟಿತಮೋಽಧ್ಯಾಯಃ.



---

೩೧. ಮತ್ತು ಅವಳು ಈ ಮನುಷ್ಯಲೋಕದಲ್ಲಿ ಬಹುಕಾಲ ಬಾಳಿ ಅನಂತರ ವಿಷ್ಣುಲೋಕಕ್ಕೆ ಹೋಗಿ ಅಲ್ಲಿ ಪೂಜಿತಳಾಗುವಳು. ಆ ಮೇಲೆ ಆ ವಿಷ್ಣುಲೋಕದಿಂದ ರುದ್ರಲೋಕಕ್ಕೆ ಹೋಗುವಳು. ಅನಂತರ ಪರಮ ಪದವನ್ನು ಪಡೆಯುವಳು.

೩೨. ಯಾವ ಪುರುಷರು ಪುರುಷೋತ್ತಮನ ಮತ್ಸ್ಯಾದಿ ದಶಾವತಾರಗಳ ಹತ್ತು ಮೂರ್ತಿಗಳನ್ನೂ ಹತ್ತು ದಶಮೀ ತಿಥಿಗಳಲ್ಲಿ ಪೂಜಿಸುವರೋ ಅಂತಹ ಪುರುಷರು ತಮ್ಮ ಹತ್ತು ಅವಸ್ಥೆಗಳಲ್ಲೂ ಸುಖವಾಗಿ ಈ ಲೋಕದಲ್ಲಿ ವಿಹರಿಸುತ್ತಿದ್ದು ಕೊನೆಗೆ ವಿಮಾನಾರೂಢರಾಗಿ ದೇವೇಂದ್ರನ ಸ್ವರ್ಗಲೋಕಕ್ಕೆ ಹೋಗುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ದಶಾವತಾರ
ಚರಿತ್ರ ವರ್ಣನೆಯೆಂಬ ಅರವತ್ತಮೂರನೆಯ
ಅಧ್ಯಾಯವು ಮುಗಿದುದು.



|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಚತುಷ್ಷಷ್ಟಿತಮೋಽಧ್ಯಾಯಃ

---

|| ಶ್ರೀ ಕೃಷ್ಣ ಉವಾಚ ||

ಪಾರ್ಥ ಪಾರ್ಥಿವವೃಂದಾನಾಂ ಮುಖಪಂಕಜಸದ್ರವೇ |
ಶೃಣುಷ್ವಾವಹಿತೋ ವಚ್ಮಿ ತವಾಶಾದಶಮೀವ್ರತಂ || ೧ ||

ನಲನಾಮಾಭವತ್ಪೂರ್ವಂ ನಿಷಧೇಷು ಮಹೀಪತಿಃ |
ಸ ಭ್ರಾತ್ರಾ ನಿರ್ಜಿತೋ ರಾಜ್ಯೇ ಪುಷ್ಕರೇಣೇತಿ ನ ಶ್ರುತಂ || ೨ ||

ಅಕ್ಷೈರ್ದ್ಯೂತೇನ ರಾಜೇಂದ್ರ ನಿರ್ಯಯೌ ಭಾರ್ಯಯಾ ಸಹ |
ವನಂ ಪ್ರತಿಭಯಂ ಶೂನ್ಯಂ ಝಿಲ್ಲೀಕಗಣನಾದಿತಂ || ೩ ||

---

## ಅರವತ್ತನಾಲ್ಕನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅರಸರ ಮುಖಕಮಲಗಳಿಗೆ ಸೂರ್ಯನಂತೆ ಉತ್ತಮ ವಿಕಾಸಕನಾದ ಓ ಧರ್ಮರಾಜನೇ! ಈಗ ನಿನಗೆ ಆಶಾದಶಮೀ ವ್ರತವನ್ನು ಹೇಳುತ್ತೇನೆ ಏಕಾಗ್ರತೆಯಿಂದ ಕೇಳು.

೨-೩. ಓ ರಾಜೇಂದ್ರನೇ! ಪೂರ್ವದಲ್ಲಿ ನಿಷಧದೇಶದಲ್ಲಿ ನಲನೆಂಬ ಚಕ್ರವರ್ತಿ ಇದ್ದನು. ಆ ನಲನು ರಾಜ್ಯವಾಳುತ್ತಿರುವಾಗ ಆ ತನ್ನ ಸಹೋದರನಾದ ಪುಷ್ಕರನ ಜತೆಯಲ್ಲಿ ಜೂಜಾಡಿ ರಾಜ್ಯವನ್ನೇ ಪಣವಾಗಿಟ್ಟು ಅವನಿಗೆ ಸೋತುಹೋಗಿ ತನ್ನ ಭಾರ್ಯೆಯಿಂದೊಡಗೂಡಿ ನಿರ್ಜನವಾಗಿಯೂ, ನಿಬಿಡವಾಗಿಯೂ, ಪ್ರತಿಸ್ಥಾನದಲ್ಲೂ ಕಾಡುನೊಣಗಳ ಧ್ವನಿಗಳಿಂದ ಮಹಾಭಯಜನಕವಾಗಿಯೂ ಇರುವ ಕಾಡಿಗೆ ಹೋದನು ಎಂದು ವೃದ್ಧರು ಹೇಳುವುದನ್ನು ನಾವು ಕೇಳಿದ್ದೇವೆ.

ಸ ಗತ್ವಾ ಪ್ರತ್ಯಹೋರಾತ್ರಂ ಜಲಮಾತ್ರೇಣ ವರ್ತಯನ್ ।
ದದರ್ಶ ವನಮಧ್ಯಸ್ಥಾಞ್ಛಕುನೀನ್ಕಾಂಚನಚ್ಛವೀನ್ ॥ ೪ ॥

ಗೃಹೀತುಮಿಚ್ಛಂಸ್ತಾನ್ರಾಜನ್ಸಮಾಚ್ಛಾದ್ಯ ಸ್ವವಾಸಸಾ ।
ಖಮಾಪೇತುಃ ಖಗಾಸ್ತೂರ್ಣಂ ಗೃಹೀತ್ವಾ ವಸನಂ ಶುಭಂ ॥ ೫ ॥
ಆಸಸಾದ ಸಮಾಃ ಕಾಶ್ಚಿದ್ಧೃತವಾಸಾಃ ಸುದುಃಖಿತಃ ।

ದಮಯಂತೀಂ ಸಮಾಪ್ರಾಪ್ಯ ನಿದ್ರಯಾಪಹೃತಾಂ ತದಾ ।
ದುಃಖಾದುತ್ಸೃಜ್ಯ ಗತವಾನ್ಭಾಗ್ಯತಃ ಪ್ರಾಗ್ಧನೇಶ್ವರಂ ॥ ೬ ॥

ಗತೇ ತು ನೈಷಧೇ ಭೈಮೀ ಪ್ರಬುದ್ಧ್ಯೈ ವಾಂಚಿತಾನನಾ ।
ಅಪಶ್ಯಂತೀ ನಲಂ ವೀರಂ ವೀರ ಭೀಮಸುತಾ ವನೇ ।
ಇತಶ್ಚೇತಶ್ಚ ಬಭ್ರಾಮ ಹಾಹೇತಿ ರುದತೀ ಮುಹುಃ ॥ ೭ ॥

---

೪. ಆ ನಲಚಕ್ರವರ್ತಿಯು ಹಾಗೆ ಪತ್ನೀಸಮೇತನಾಗಿ ಕಾಡಿಗೆ ಹೋಗಿ, ಅಲ್ಲಿ ಹಗಲೂ ರಾತ್ರಿ ಕೇವಲ ಜಲಪಾನ ಮಾಡಿಕೊಂಡೇ ಜೀವಿಸುತ್ತಾ ಇದ್ದು ಕದಾಚಿತ್ ಆ ಕಾಡಿನ ಮಧ್ಯಭಾಗದಲ್ಲಿ ಭಂಗಾರದಂತೆ ದೇಹಕಾಂತಿಯುಳ್ಳ ಪಕ್ಷಿಗಳನ್ನು ಕಂಡನು.

೫. ಓ ರಾಜನೇ! ಆಗ ಅವನು ಸುಂದರವಾದ ಆ ಹಕ್ಕಿಗಳನ್ನು ಹಿಡಿಯ ಬೇಕೆಂದೆಣಿಸಿ ತಾನು ಹೊದೆದಿದ್ದ ವಸ್ತ್ರವನ್ನು ಅವುಗಳ ಮೇಲೆ ಎಸೆದನು. ಹೀಗೆ ನಲನು ತಮ್ಮ ಮೇಲೆ ಎಸೆದ ಆ ಶುಭವಸ್ತ್ರವನ್ನು ಆ ಪಕ್ಷಿಗಳು ಎತ್ತಿ ಕೊಂಡು ಶೀಘ್ರವಾಗಿ ಅಂತರಿಕ್ಷಕ್ಕೆ ಹಾರಿಹೋದುವು.

೬. ಹೀಗೆ ಆ ಪಕ್ಷಿಗಳ ನಿಮಿತ್ತವಾಗಿ ವಸ್ತ್ರಗಳನ್ನು ಕಳೆದುಕೊಂಡ ನಲಚಕ್ರವರ್ತಿಯು ಬಹು ದುಃಖದಿಂದ ದಮಯಂತಿಯ ಸಮೀಪಕ್ಕೆ ಬಂದನು. ಅವಳು ನಿದ್ರಾಪರವಶಳಾಗಿರುವುದನ್ನು ಕಂಡು ಆ ದಮಯಂತಿಯು ನಿದ್ದೆ ಹೋಗುತ್ತಿರುವಾಗ ದುಃಖದಿಂದ ಅವಳನ್ನು ಅಲ್ಲೇ ಬಿಟ್ಟು ತಾನು ಹೊರಟು ಹೋದನು. ಬಳಿಕ ಕೆಲವು ವರ್ಷಗಳು ಕಳೆಯುತ್ತಲೆ ಭಾಗ್ಯವಶಾತ್ ಪ್ರಾಗ್ಧ ನೇಶ್ವರನೆಂಬ ಅರಸನ ಬಳಿಗೆ ಬಂದು ಸೇರಿದನು.

೭. ಓ ವೀರೇಂದ್ರನೇ ! ಸುಂದರಮುಖಿಯೂ, ಭೀಮರಾಜನ ಮಗಳೂ ಆದ ಆ ದಮಯಂತಿಯು ನಿಷಧೇಶ್ವರನಾದ ಆ ನಲನು ತನ್ನನ್ನು ಬಿಟ್ಟು

**ದುಃಖಶೋಕಸಮಾಕ್ರಾಂತಾ ನಲದರ್ಶನಲಾಲಸಾ ।**
**ಆಸಸಾದ ದಿನೈಃ ಕೈಶ್ಚಿತ್ಸಾ ಚೈದ್ಯಪುರಮಂಜಸಾ ॥ ೮ ॥**

**ಉನ್ಮತ್ತವತ್ಪರಿವೃತಾ ಶಿಶುಭಿಃ ಕೌತುಕಾಕುಲೈಃ ।**
**ಸಾ ದೃಷ್ಟಾ ಚೇದಿರಾಜಸ್ಯ ಜನನ್ಯಾ ಜನವೇಕ್ಷಿತಾ ॥ ೯ ॥**

**ಚಂದ್ರಲೇಖೇವ ಪತಿತಾ ಭೂಮೌ ಭಾಸಿತದಿಙ್ಮುಖಾ ।**
**ಆರೋಪ್ಯ ಸಾ ಸ್ವಭವನಂ ಪೃಷ್ಟಾ ಕಾ ತ್ವಂ ವರಾನನೇ ॥ ೧೦ ॥**

---

ಹೋದ ಮೇಲೆ ನಿದ್ರೆಯಿಂದ ಎಚ್ಚತ್ತವಳಾಗಿ ವೀರನಾದ ನಲಚಕ್ರವರ್ತಿಯನ್ನು ಕಾಣದೆ ಹಾ, ಹಾ ಎಂದು ಬಾರಿ ಬಾರಿಗೂ ಕೂಗಿ ಅಳುತ್ತಾ ಅಲ್ಲಲ್ಲಿ ಸುತ್ತುತ್ತಿದ್ದಳು.

೮. ಆ ದಮಯಂತಿಯು ದುಃಖ ಶೋಕಗಳಿಂದ ಆವೃತಳಾಗಿ ನಲ ಸಂದರ್ಶನದಲ್ಲಿ ಅತ್ಯಾಶೆಯಿಂದ ಕೂಡಿ ತಿರುಗಾಡುತ್ತಾ ಆ ಹಂಬಲದಲ್ಲಿ ಕೆಲವು ದಿನಗಳು ಕಳೆದು ಮಾರ್ಗವಶದಿಂದ ಚೈದ್ಯನಗರಿಗೆ ಬಂದು ಸೇರಿದಳು.

೯. ಆ ನಗರಿಯಲ್ಲಿ ಅವಳು ಸಂಚರಿಸುತ್ತಿರುವಾಗ ಅಲ್ಲಿರುವ ಬಾಲಕರು ಕುತೂಹಲದಿಂದ ಹುಚ್ಚರನ್ನು ಹಿಂಬಾಲಿಸಿದಂತೆ ಅವಳನ್ನು ಹಿಂಬಾಲಿಸುತ್ತಿದ್ದರು. ಕೌತುಕವಿಹ್ವಲರಾದ ಬಾಲಕರು ಇತರಜನರು ಇವರುಗಳಿಂದ ಸುತ್ತುವರಿಯಲ್ಪಟ್ಟಿರುವ ಆ ದಮಯಂತಿಯನ್ನು ಆಗ ಚೇದಿರಾಜನ ತಾಯಿಯು ಕಂಡಳು.

೧೦. ಭೂಮಿಗೆ ಬಂದು ಬಿದ್ದ ಚಂದ್ರನ ಕಲೆಯಂತೆ ತನ್ನ ದೇಹಕಾಂತಿಯಿಂದ ದಿಗಂತಗಳನ್ನು ಬೆಳಗುತ್ತಿರುವ ಆ ದಮಯಂತಿಯನ್ನು ಆ ಚೇದಿರಾಜನ ತಾಯಿಯು ವಾಹನದ ಮೇಲೆ ಕೂರಿಸಿಕೊಂಡು ತನ್ನ ಮನೆಗೆ ಕರೆದುಕೊಂಡು ಹೋಗಿ "ಓ ಸುಂದರಮುಖಿಯೇ! ನೀನು ಯಾರು?" ಎಂದು ಪ್ರಶ್ನೆ ಮಾಡಿದಳು.

**[illegible]ಚ ಭೈಮೀ ಸವ್ರೀಡಂ ಸೈರಂಧ್ರೀಂ ಮಾಂ ನಿಬೋಧತಾಂ ।**
**ನ [illegible]ಲಯೇಯಂ ಚರಣೌ ನೋಚ್ಛಿಷ್ಟಂ ಭಕ್ಷಯಾಮ್ಯಹಂ ॥ ೧೧ ॥**

**ಯದಿ ಪ್ರಾರ್ಥಯತೇ ಕಶ್ಚಿದ್ದಂಡ್ಯಸ್ತೇ ಸಾಂಪ್ರತಂ ಭವೇತ್ ।**
**ಪ್ರತಿಜ್ಞಾಯಾನಯಾ ದೇವಿ ತಿಷ್ಠೇಯಂ ತವ ವೇಶ್ಮನಿ ।**
**ಏವಮುಕ್ತ್ವಾನವದ್ಯಾಂಗಿ ರಾಜಮಾತಾಪ್ಯುವಾಚ ತಾಂ ॥ ೧೨ ॥**

**ಏವಂವಿಧಾ ತದ್ಭವನೇ ಕಂಚಿತ್ಕಾಲಮನಿಂದಿತಾ ।**
**ಉವಾಸ ವಸನಾರ್ಧೇನ ಪ್ರವೃತ್ತಾಂತೇ ಕಿಲ ದ್ವಿಜಃ ।**
**ಆನಯಾಮಾಸ ಮುದಿತೋ ದಮಯಂತೀಂ ಗೃಹಂ ಪಿತುಃ ॥ ೧೩ ॥**

---

೧೧. ಆಗ ಆ ದಮಯಂತಿಯು ಲಜ್ಜೆಯಿಂದ-ಕೂಡಿದವಳಾಗಿ "ನಾನು ಸ್ವತಂತ್ರಳಾಗಿ ಕಂಡವರ ಮನೆಯಲ್ಲಿದ್ದು ಹೆಂಗಸರಿಗೆ ಗಂಧಲೇಪನಾದ್ಯಲಂಕಾರಗಳನ್ನು ಮಾಡುವ ಚಾಕರಳು ಎಂದು ತಿಳಿಯಿರಿ. ಆದರೆ ಅವರ ಪಾದಪ್ರಕ್ಷಾಳನವನ್ನು ಮಾಡುವುದಿಲ್ಲ. ಮತ್ತು ಉಚ್ಛಿಷ್ಟ (ಎಂಜಲು) ವನ್ನು ತಿನ್ನುವುದಿಲ್ಲ.

೧೨. ಇಲ್ಲಿ ಯಾವನಾದರೂ ಕಾಮುಕನಾಗಿ ನನ್ನನ್ನು ಪ್ರಾರ್ಥನೆ ಮಾಡಿದರೆ ನೀನು ಅವನನ್ನು ಕ್ರೂರವಾಗಿ ಶಿಕ್ಷಿಸುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡಿ ನನಗೆ ಮಾತು ಕೊಡುವುದಾದರೆ ನಿನ್ನ ಮನೆಯಲ್ಲಿ ನಾನು ಈ ಹಿಂದೆ ಹೇಳಿದ ನಿಯಮಗಳಿಗನುಸಾರ ಚಾಕರಳಾಗಿ ಇರುವೆನು" ಎಂದು ಹೇಳಿದಳು. ಆ ರಾಜಮಾತೆಯು ದಮಯಂತಿಯ ಮಾತನ್ನು ಕೇಳಿ "ಓ ಸುಂದರಾಂಗಿ! ಹಾಗೆಯೇ ಆಗಲಿ!" ಎಂದು ಅಂಗೀಕಾರ ವಚನವನ್ನಿತ್ತಳು.

೧೩. ಈ ರೀತಿಯಾಗಿ ದಮಯಂತಿಯು ಆ ಚೇದಿರಾಜನ ಮಾತೆಯ ಮನೆಯಲ್ಲಿ ಕೆಲವುಕಾಲ ಯಾವತರಹದ ನಿಂದೆಗೂ ಒಳಗಾಗದೆ ನಿರ್ದೋಷಿಯಾಗಿ ತುಂಡು ಬಟ್ಟೆಯನ್ನೇ ಉಟ್ಟು ವಾಸಿಸುತ್ತಿದ್ದಳು. ಭೀಮರಾಜನ ಅಪ್ಪಣೆಯಂತೆ ದಮಯಂತಿಯನ್ನು ಹುಡುಕುತ್ತಿದ್ದ ಒಬ್ಬ ಬ್ರಾಹ್ಮಣನು ಈ ವೃತ್ತಾಂತವನ್ನು ತಿಳಿದು ಅವಳೇ ದಮಯಂತಿಯೆಂದು ಗುರ್ತಿಸಿ ಸಂತೋಷದಿಂದ ಆ ದಮಯಂತಿಯನ್ನು ಅವಳ ತಂದೆಯಾದ ಭೀಮರಾಜನ ಅರಮನೆಗೆ ಕರೆತಂದನು.

ಮಾತ್ರಾ ಪಿತ್ರಾ ಸಮಾಯುಕ್ತಾ ಸುತೈರ್ಭ್ರಾತೃಭಿರೇವ ಚ ।
ದಮಯಂತೀ ತಥಾಪ್ಯಾಸ್ತೇ ದುಃಖಂ ನೈಷಧವರ್ಜಿತಾ ॥ ೧೪ ॥

ಪ್ರೋವಾಚ ವಿಪ್ರಾನಾಹೂಯ ವ್ರತಂ ದಾನಮಥಾಪಿ ವಾ ।
ಕಥಯಧ್ವಂ ಯಥಾ ಮೇ ಸ್ಯಾದಿಷ್ಟೇನ ಸಹ ಸಂಗಮಃ ॥ ೧೫ ॥

ತತ್ರೇತಿಹಾಸಕುಶಲೋ ವಿಪ್ರಃ ಪ್ರೋವಾಚ ಬುದ್ಧಿಮಾನ್ ।
ಭದ್ರೇ ತ್ವಮಾಶಾದಶಮೀಂ ಕುರುಷ್ವೇಪ್ಸಿತಸಿದ್ಧಿದಾಂ ॥ ೧೬ ॥

ಚಕಾರ ಸರ್ವಂ ತನ್ವಂಗೀ ಯತ್ಪುರಾಣವಿದಾ ತದಾ ।
ಖ್ಯಾತಮಾಖ್ಯಾನವಿದುಷಾ ದಮನೇನ ಪುರೋಧಸಾ ॥ ೧೭ ॥

---

೧೪. ತಂದೆಯ ಅರಮನೆಯಲ್ಲಿ ದಮಯಂತಿಯು ತಂದೆ, ತಾಯಿ, ಮಕ್ಕಳು, ಸಹೋದರರು ಇವರ ಜೊತೆಯಲ್ಲಿ ವಾಸಿಸುತ್ತಿದ್ದರೂ ಗಂಡನಾದ ನಲಚಕ್ರವರ್ತಿಯ ವಿಯೋಗದಿಂದ ದುಃಖಿತೆಯಾಗಿಯೇ ಇದ್ದಳು.

೧೫. ಅನಂತರ ಆ ದಮಯಂತಿಯು ಬ್ರಾಹ್ಮಣರನ್ನು ಕರೆದು "ಓ ಬ್ರಾಹ್ಮಣೋತ್ತಮರೇ ! ನನಗೆ ಪ್ರಿಯನಾದ ಪತಿಯಸಮಾಗಮವು ಲಭಿಸುವಂತಹ ವ್ರತ ಅಥವಾ ದಾನ ಇವು ಯಾವುದಾದರೂ ಇದ್ದರೆ ಉಪದೇಶ ಮಾಡಿರಿ" ಎಂದು ಕೇಳಿದಳು.

೧೬. ಆಗ ಆ ಬ್ರಾಹ್ಮಣರೊಳಗೆ ಇತಿಹಾಸಜ್ಞಾನದಲ್ಲಿ ಪ್ರವೀಣನೂ ಬುದ್ಧಿಶಾಲಿಯೂ ಆದ ಒಬ್ಬ ಬ್ರಾಹ್ಮಣನು "ಎಲೌ ಮಂಗಳಕರಳೇ ! ಸಕಲ ಇಷ್ಟಾರ್ಥವನ್ನೂ ಕೊಡುವ ಆಶಾದಶಮಿ ವ್ರತವನ್ನು ನೀನು ಮಾಡು" ಎಂದು ನುಡಿದನು.

೧೭. ಆಗ ಕೃಶಾಂಗಿಯಾದ ಆ ದಮಯಂತಿಯು ಇತಿಹಾಸಪುರಾಣಗಳನ್ನರಿತವನಾಗಿಯೂ, ಪುರೋಹಿತನಾಗಿಯೂ ಇರುವ ದಮನನೆಂಬ ಆ ಬ್ರಾಹ್ಮಣನು ಹೇಳಿದಂತೆ ಆ ವ್ರತವನ್ನು ಆಚರಿಸಿದಳು.

ವ್ರತಸ್ಯಾಸ್ಯ ಪ್ರಭಾವೇಣ ದಮಯಂತ್ಯಾ ನರೋತ್ತಮ ।
ಸಂಜಾತಃ ಸುಖದೋಽತ್ಯರ್ಥಂ ಭರ್ತ್ರಾ ಸಹ ಸಮಾಗಮಃ ॥ ೧೮ ॥

॥ ಯುಧಿಷ್ಠಿರ ಉವಾಚ ॥
ಕಥಮಾಶಾದಶಮ್ಯೇಷಾ ಗೋವಿಂದ ಕ್ರಿಯತೇ ಕದಾ ।
ಸರ್ವಮೇತತ್ಸಮಾಚಕ್ಷ್ವ ಮಾಂ ಸರ್ವಜ್ಞೋಽಸಿ ಯಾದವ ॥ ೧೯ ॥

॥ ಶ್ರೀ ಕೃಷ್ಣ ಉವಾಚ ॥
ರಾಜ್ಯಾರ್ಥಂ ರಾಜಪುತ್ರಃ ಕೃಷ್ಯರ್ಥಂ ತು ಕೃಷೀವಲಃ ।
ಲಾಭಾರ್ಥಂ ತು ವಣಿಕ್ಪುತ್ರಃ ಪುತ್ರಾರ್ಥೇ ಗುರ್ವಿಣೀ ತಥಾ ॥ ೨೦ ॥

ಧರ್ಮಾರ್ಥಕಾಮಸಂಸಿದ್ಧ್ಯೈ ಲೋಕಕನ್ಯಾ ವರಾರ್ಥಿನೀ ।
ಯಷ್ಟುಕಾಮೋ ದ್ವಿಜವರೋ ರೋಗೀ ರೋಗಾಪನುತ್ತಯೇ ॥ ೨೧ ॥

---

೧೮. ಎಲೈ ರಾಜನೇ! ಈ ಆಶಾದಶಮಿ ವ್ರತಪ್ರಭಾವದಿಂದ ಆ ದಮಯಂತಿಗೆ ಅಧಿಕ ಸುಖದಾಯಕವಾದ ಪ್ರಿಯಪತಿಯ ಸಮಾಗಮವಾಯಿತು ಎಂದನು.

೧೯. ಯುಧಿಷ್ಠಿರನು ಹೇಳುತ್ತಾನೆ—ಎಲೈ ಗೋವಿಂದನೇ! ನೀನು ಎಲ್ಲವನ್ನೂ ಬಲ್ಲವನು. ಈ ಆಶಾದಶಮಿ ವ್ರತವನ್ನು ಹೇಗೆ ಆಚರಿಸಬೇಕು? ಮತ್ತು ಯಾವ ಕಾಲದಲ್ಲಿ ಇದನ್ನು ಆಚರಿಸತಕ್ಕದು? ಈ ಎಲ್ಲಾ ವಿಷಯವನ್ನೂ ನನಗೆ ಹೇಳು ಎಂದನು.

೨೦. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ! ಈ ಆಶಾದಶಮಿ ವ್ರತವನ್ನು ರಾಜಪುತ್ರರು ರಾಜ್ಯಪ್ರಾಪ್ತಿಗಾಗಿಯೂ, ವ್ಯವಸಾಯಗಾರನು ಕೃಷಿಫಲಪ್ರಾಪ್ತಿಗಾಗಿಯೂ, ವೈಶ್ಯಪುತ್ರನು ವ್ಯಾಪಾರದಿಂದ ಲಾಭ ಪಡೆಯುವುದಕ್ಕಾಗಿಯೂ, ಹಾಗೆಯೇ ಗರ್ಭಿಣಿಯು ಪುತ್ರಸಂತಾನಪ್ರಾಪ್ತಿಗಾಗಿಯೂ ಆಚರಿಸಬೇಕು.

೨೧. ವಿವೇಕೀ ಮಾನವನು ಧರ್ಮ ಅರ್ಥ ಕಾಮಗಳೆಂಬ ತ್ರಿವರ್ಗಪ್ರಾಪ್ತಿಗಾಗಿಯೂ, ಕನ್ಯೆಯು ಶುಭಕರನಾದ ವರನ ಪಾಣಿಗ್ರಹಣಕ್ಕೂ ಬ್ರಾಹ್ಮಣನು ನಿರ್ವಿಘ್ನವಾಗಿ ತನ್ನ ಯಾಗಸಮಾಪ್ತಿಯಾಗುವ ಉದ್ದೇಶದಿಂದಲೂ, ರೋಗಿಯಾದವನು ತನ್ನ ರೋಗನಿವಾರಣೆಗಾಗಿಯೂ ಈ ವ್ರತವನ್ನು ಆಚರಿಸಬಹುದು.

ಚಿರಪ್ರವಾಸಿತೇ ಕಾಂತೇ ಕಾಲೇನ ಧೃತಿಖಂಡಿತಾ ।
ಏತೇಷ್ವನ್ಯೇಷು ಕರ್ತವ್ಯಮಾಶಾವ್ರತಮಿದಂ ಸದಾ ॥ ೨೨ ॥

ಯದಾ ಯಸ್ಯ ಭವೇದಾರ್ತಿಃ ಕಾರ್ಯತೇ ಹಿ ತದಾ ವ್ರತಂ ।
ಶುಕ್ಲಪಕ್ಷೇ ದಶಮ್ಯಾಂ ತು ಸ್ನಾತ್ವಾ ಸಂಪೂಜ್ಯ ದೇವತಾಃ ॥ ೨೩ ॥

ನಕ್ತಂ ತದಾಶಾಃ ಸಂಪೂಜ್ಯಾಃ ಪುಷ್ಪಾಲಕ್ತಕಚಂದನೈಃ ।
ಗೃಹಾಂಗಣೇ ಲೇಖಯಿತ್ವಾ ಯವೈಃ ಪಿಷ್ಟಾತಕೇನ ವಾ ।
ದತ್ವಾ ಘೃತಾಕ್ತಂ ನೈವೇದ್ಯಂ ಪುನಃ ಕಾರ್ಯಂ ನಿವೇದಯೇತ್ ॥ ೨೪ ॥

ಆಶಾಶ್ಚಾಶಾಃ ಸದಾ ಸಂತು ಸಿದ್ಧ್ಯಂತಾಂ ಚ ಮನೋರಥಾಃ ।
ಭವತೀನಾಂ ಪ್ರಸಾದೇನ ಸದಾ ಕಲ್ಯಾಣಮಸ್ತ್ವಿತಿ ॥ ೨೫ ॥

---

೨೨. ಮತ್ತು ಬಹುಕಾಲ ತನ್ನ ಕಾಂತನಿಂದ ವಿಯೋಗವು ಪ್ರಾಪ್ತವಾದಾಗ ಸ್ತ್ರೀಯು ಧೈರ್ಯಗೆಡದೇ ಇರುತ್ತಾ ಆ ಪ್ರಿಯ ಸಮಾಗಮಕ್ಕಾಗಿ ಈ ವ್ರತವನ್ನು ಆಚರಿಸಬೇಕು. ಈ ಹಿಂದೆ ಹೇಳಿದ ನಿಮಿತ್ತಗಳಲ್ಲೂ ಮತ್ತು ಇಂತಹ ಇತರ ನಿಮಿತ್ತಗಳು ಬಂದೊದಗಿದಾಗ ಯಾವಾಗಲಾದರೂ ಆಚರಿಸಬೇಕು.

೨೩. ಮುಖ್ಯವಾಗಿ ಯಾವಾಗ ಯಾವನಿಗೆ ಯಾವ ಪೀಡೆಯು ಪ್ರಾಪ್ತವಾಗುವುದೋ ಆಗ ಅದರ ನಿವೃತ್ತ್ಯರ್ಥವಾಗಿ ಈ ವ್ರತವನ್ನು ಆಚರಿಸಬೇಕು. ಶುಕ್ಲಪಕ್ಷದ ದಶಮೀದಿನದಲ್ಲಿ ಸ್ನಾನಮಾಡಿ ಶುಚಿಯಾಗಿ ದೇವರ ಪೂಜೆಯನ್ನು ಆಚರಿಸಬೇಕು.

೨೪. ಅನಂತರ ಆ ದಿನದ ರಾತ್ರಿಯಲ್ಲಿ ಮನೆಯ ಅಂಗಳದಲ್ಲಿ ಯವ ಅಥವಾ ಹಿಟ್ಟು ಇವುಗಳಿಂದ ಆಶಾದೇವತಾಕೃತಿಗಳನ್ನು ಬರೆದು ಪುಷ್ಪ, ಅಲಕ್ತಕ, ಚಂದನ ಇತ್ಯಾದಿಗಳಿಂದ ಆ ದೇವತೆಗಳನ್ನು ಅರ್ಚಿಸಿ, ತುಪ್ಪದಲ್ಲಿ ಕರಿದ ವಿವಿಧ ಭಕ್ಷ್ಯಗಳನ್ನು ನೈವೇದ್ಯವಾಗಿ ಸಮರ್ಪಿಸಿ, ಅನಂತರ ಈ ಮುಂದೆ ಹೇಳುವಂತೆ ಸ್ವಾಭೀಷ್ಟ ಕಾರ್ಯವನ್ನು ಪ್ರಾರ್ಥಿಸಬೇಕು.

೨೫. ಎಲೈ ದಿಗಭಿಮಾನದೇವತೆ ಆಶಾದೇವತೆಗಳೇ! ನನ್ನ ಸಮಸ್ತ ಆಶೆಗಳೂ ಯಾವಾಗಲೂ ಸಫಲಗಳಾಗಲಿ, ನನ್ನ ಮನೋರಥಗಳು ನನಗೆ ಪ್ರಾಪ್ತವಾಗಲಿ. ನಿಮ್ಮ ಪ್ರಸಾದದಿಂದ ಯಾವಾಗಲೂ ನನಗೆ ಮಂಗಳವುಂಟಾಗಲಿ ಇದು ಈ ಪ್ರಾರ್ಥನಾಮಂತ್ರದ ಅರ್ಥ.

ಏವಂ ಸಂಪೂಜ್ಯ ಭುಂಜೀತ ದತ್ವಾ ವಿಪ್ರಾಯ ದಕ್ಷಿಣಾಂ ।
ಅನೇನ ಕ್ರಮಯೋಗೇನ ಮಾಸಿಮಾಸಿ ಸಮಾಚರೇತ್ ॥ ೨೬ ॥

ಯಾವನ್ಮನೋರಥಃ ಪೂರ್ಣಸ್ತತಃ ಪಶ್ಚಾತ್ಸಮುದ್ಯಮಾತ್ ।
ಮಾಸಿ ಪೂರ್ಣೇ ಚ ಷಣ್ಮಾಸೇ ವರ್ಷೇ ವರ್ಷದ್ವಯೇ ಗತೇ ॥ ೨೭ ॥

ಸೌವರ್ಣಾಃ ಕಾರಯೇದಾಶಾ ರೌಪ್ಯಪಿಷ್ಟಾತಕೇನ ವಾ ।
ಜ್ಞಾತಿಬಂಧುಜನೈಸ್ಸಾರ್ಧಂ ಸ್ನಾತಃ ಸಮ್ಯಗಲಂಕೃತಃ ॥ ೨೮ ॥

ಪೂಜಯೇನ್ಮಂತ್ರಸಂದರ್ಭೈರೇಭಿರ್ಧ್ಯಾತ್ವಾ ಗೃಹಾಂಗಣೇ ।
ತವ ಸಂನಿಹಿತಃ ಶಕ್ರಃ ಸುರಾಸುರನಮಸ್ಕೃತಃ ।
ಪೂರ್ವಾ ಚಂದ್ರೇಣ ಸಹಿತಾ ಐಂದ್ರೀ ದಿಗ್ದೇವತೇ ನಮಃ ॥ ೨೯ ॥

---

೨೬. ಈರೀತಿ ಆಶಾದೇವತೆಗಳನ್ನು ಪೂಜಿಸಿ ಬ್ರಾಹ್ಮಣನಿಗೆ ದಕ್ಷಿಣೆ ಕೊಟ್ಟು ತಾನು ಭೋಜನ ಮಾಡಬೇಕು. ಪ್ರತಿ ತಿಂಗಳಿನ ಶುಕ್ಲಪಕ್ಷದ ದಶಮಿಯಲ್ಲೂ ಈ ಕ್ರಮದಲ್ಲಿಯೇ ಆಚರಿಸಬೇಕು.

೨೭–೨೮. ಈ ವ್ರತಾಚರಣೆಯ ಪ್ರಭಾವದಿಂದ ತನ್ನ ಇಷ್ಟಾರ್ಥವು ಒಂದು ತಿಂಗಳಿನಲ್ಲೋ, ಆರು ತಿಂಗಳಲ್ಲೋ ಅಥವಾ ಒಂದು ವರ್ಷ, ಎರಡು ವರ್ಷ ಕಳೆಯುವುದರೊಳಗೋ ಪೂರ್ತ ಸಿದ್ಧಿಸಿದ ಮೇಲೆ ಭಂಗಾರದಿಂದ ಈ ಆಶಾದೇವತೆಗಳ ಪ್ರತಿಮೆಗಳನ್ನು ಮಾಡಿಸಬೇಕು. ಅಶಕ್ತರು ಬೆಳ್ಳಿಯಿಂದಾಗಲಿ ಹಿಟ್ಟಿನಿಂದಾಗಲಿ ಈ ದೇವತೆಗಳ ವಿಗ್ರಹಗಳನ್ನು ಮಾಡಿಸಬಹುದು. ಅನಂತರ ಜ್ಞಾತಿಗಳು ಬಂಧುಜನರು ಇವರುಗಳಿಂದ ಸಹಿತನಾಗಿ ಸ್ನಾನಮಾಡಿ ಶುಭ್ರ ವಸ್ತ್ರಾದಿಗಳಿಂದ ಅಲಂಕೃತನಾಗಬೇಕು.

೨೯. ಅನಂತರ ಮನೆಯ ಅಂಗಳದಲ್ಲಿ ಆ ಪ್ರತಿಮೆಗಳನ್ನಿಟ್ಟು ಅವುಗಳಲ್ಲಿ ಈ ಮುಂದೆ ಹೇಳುವ ಮಂತ್ರಗಳಿಂದ ಆಶಾದೇವತೆಗಳನ್ನು ಧ್ಯಾನಿಸಿ ಪೂಜಿಸಬೇಕು.

ಇದು ಪೂರ್ವದಿಕ್ಕಿನ ದೇವತೆಯ ಧ್ಯಾನಮಂತ್ರ—ಓ ಐಂದ್ರೀದಿಗ್ದೇವತೆಯೇ ! ನಿನ್ನ ಅಧಿಪತ್ಯವಾದ ಪೂರ್ವದಿಕ್ಕಿನಲ್ಲಿ ಸುರ ಮತ್ತು ಅಸುರರಿಂದ ವಂದಿತನಾದ ಇಂದ್ರನು ಯಾವಾಗಲೂ ಸನ್ನಿಹಿತನಾಗಿರುವನು. ಮತ್ತು ನಿನಗೆ ಚಂದ್ರೋದಯಕಾಲದಲ್ಲಿ ಚಂದ್ರಸಾನ್ನಿಧ್ಯವೂ ಇರುತ್ತದೆ. ಅಂತಹ ನಿನಗೆ ನಮಸ್ಕಾರ. ಎಂದು ಈ ಮಂತ್ರಾರ್ಥ.

ಅಗ್ನೇಃ ಪರಿಗ್ರಹಾದಾರ್ಯೇ ತ್ವಮಾಗ್ನೇಯೀತಿ ಪಠ್ಯಸೇ ।
ತೇಜೋಮಯೀ ಪರಾ ಶಕ್ತಿರಾಗ್ನೇಯೀ ವರದಾ ಭವ ॥ ೩೦ ॥

ದೇವರಾಜಂ ಸಮಾಸಾದ್ಯ ಲೋಕಂ ಸಂಯಮಯತ್ಯಸೌ ।
ತೇನ ಸಂಯಮನೀ ಯಾಸಿ ಯಾಮ್ಯೇ ಕಾಮಪ್ರದಾ ಭವ ॥ ೩೧ ॥

ಖಡ್ಗಂಸಹಾತಿವಿಕೃತಾ ನೈಋರ್ತಿಸ್ತ್ವಮುಪಾಭೃತಾ ।
ತೇನ ನೈಋತನಾಮ್ನೀ ತ್ವಂ ಕೃತವಾನ್ಮಘವಾ ಸದಾ ॥ ೩೨ ॥

ತ್ವಯ್ಯಾಸ್ತೇ ಭವನಾಧಾರವರುಣೋ ಯಾದಸಾಂ ಪತಿಃ ।
ಇಷ್ಟಕಾಮಾರ್ಥಸಿದ್ಧ್ಯರ್ಥಂ ವಾರುಣಿಪ್ರಭವಾ ಭವ ॥ ೩೩ ॥

---

೩೦. ಇದು ಆಗ್ನೇಯಾಶಾದೇವತಾ ಧ್ಯಾನಮಂತ್ರ—ಎಲೌ ಪೂಜ್ಯಳೇ ನೀನು ಅಗ್ನಿ ದೇವನಿಂದ ಪರಿಗೃಹೀತಳಾದ್ದರಿಂದ ಆಗ್ನೇಯೀ ಎಂದು ಕರೆಯಲ್ಪಡುವೆ, ತೇಜೋರೂಪಳಾಗಿಯೂ, ಪರಮಶಕ್ತಿ ಸ್ವರೂಪಳಾಗಿಯೂ ಇರುವ ನೀನು ನನಗೆ ವರಪ್ರದಳಾಗು ಎಂದು ಇದರ ಅರ್ಥ.

೩೧. ಇದು ದಕ್ಷಿಣ ದಿಗ್ದೇವತಾ ಪ್ರಾರ್ಥನಾಮಂತ್ರ—ಯಮನನ್ನೇ ಸ್ವಾಮಿಯಾಗಿ ಉಳ್ಳ ದಕ್ಷಿಣ ದಿಗ್ದೇವತೆಯೇ! ನಿನ್ನ ಸ್ವಾಮಿಯಾದ ಯಮ ಧರ್ಮರಾಜನು ದೇವರಾಜನಾದ ಇಂದ್ರನ ಆಶ್ರಯವನ್ನು ಪಡೆದು ಲೋಕ ಸಂಯಮನವನ್ನು ಮಾಡುವನು. ಅಂತಹ ಯಮನು ನಿನಗೆ ಸ್ವಾಮಿಯಾದುದರಿಂದ ನೀನು ಸಂಯಮನೀ ಎಂಬ ನಾಮಧೇಯವನ್ನು ಹೊಂದಿರುವೆ. ಅಂಥ ನೀನು ನನಗೆ ಇಷ್ಟಾರ್ಥಪ್ರದಳಾಗು ಎಂದು ಈ ಮಂತ್ರಾರ್ಥ.

೩೨. ಇದು ನೈಋತ್ಯದಿಗ್ದೇವತಾ ಪ್ರಾರ್ಥನಾ ಮಂತ್ರ—ಓ ನೈಋತ್ಯ ದಿಗ್ದೇವತೆಯೇ! ನೀನು ಖಡ್ಗಧಾರಿಣಿಯೂ, ಅತಿ ವಿಕೃತಾಕಾರವುಳ್ಳವಳೂ ಆಗಿ ಹಿಂಸಾತ್ಮಕ ಕಾರ್ಯವನ್ನು ನೀನು ಪೋಷಿಸಿದೆ. ಆದುದರಿಂದ ಇಂದ್ರನು ನಿನಗೆ ನೈಋರ್ತ ನಾಮಧೇಯವನ್ನು ವಿಧಿಸಿದನು ಎಂದು ಇದರ ಅರ್ಥ.

೩೩. ಇದು ವರುಣದಿಗ್ದೇವತೆಯ ಪ್ರಾರ್ಥನಾ ಮಂತ್ರ—ಓ ಪಶ್ಚಿಮ ದಿಗ್ದೇವತೆಯೇ! ಜಲಜಂತುಗಳಿಗೆ ಅಧಿಪತಿಯಾಗಿಯೂ, ಗ್ರಹಗಳಿಗೆ ಆಧಾರ

**ಅಧಿಶ್ರಿತಾಸಿ ಯಸ್ಮಾತ್ತ್ವಂ ವಾಯುನಾ ಜಗದಾಯುನಾ ।**
**ವಾಯವ್ಯೇ ತ್ವಮತಃ ಶಾಂತಿಂ ನಿತ್ಯಂ ಯಚ್ಛ ನಮೋನಮಃ ॥ ೩೪ ॥**

**ಕುಬೇರವಾಸತಃ ಸೌಮ್ಯಾ ಪ್ರಖ್ಯಾತಾ ತ್ವಮಥೋತ್ತರಾ ।**
**ಐಶಾನೀ ಜಗದೀಶೇನ ಶಂಭುನಾ ತ್ವಮಲಂಕೃತಾ ।**
**ಅತಸ್ತ್ವಂ ಶಿವಸಾನ್ನಿಧ್ಯಂ ದೇವಿ ದೇಹಿ ಶಿವೇ ನಮಃ ॥ ೩೫ ॥**

---

ನಾಗಿಯೂ ಇರುವ ವರುಣನು ಯಾವಾಗಲೂ ನಿನ್ನ ದಿಕ್ಕಿನಲ್ಲಿ ಸನ್ನಿಹಿತನಾಗಿರುವನು. ಅಂತಹ ವರುಣ ಸ್ವಾಮಿಕಳಾದ ನೀನು ನನಗೆ ಇಷ್ಟಕಾಮ್ಯಾರ್ಥ ದಾಯಕಳಾಗು ಎಂದು ಈ ಮಂತ್ರಾರ್ಥ.

೩೪. ಇದು ವಾಯವ್ಯದಿಗ್ದೇವತಾ ಧ್ಯಾನಮಂತ್ರ—ಎಲೌ ವಾಯವ್ಯಾಧಿಷ್ಠಿತ ದೇವತೆಯೇ! ನೀನು ಪ್ರಾಣಿ ಸಾಮಾನ್ಯಕ್ಕೂ ಆಯುಸ್ಸರೂಪವೆನಿಸಿ ಅಧ್ಯಾತ್ಮ ಪ್ರಾಣರೂಪವಾಗಿ ಸೇರಿಕೊಂಡಿರುವ ವಾಯು ಎಂಬ ಅಧಿದೈವ ಸ್ವರೂಪದಿಂದ ಅಶ್ರಿತಳಾಗಿರುವುದರಿಂದ ಅಂತಹ ನೀನು ನನಗೆ ಯಾವಾಗಲೂ ಮನಃಶ್ಶಾಂತಿಯನ್ನು ಕೊಡು, ನಿನಗೆ ಅನೇಕ ನಮಸ್ಕಾರಗಳು ಎಂದು ಇದರ ಅರ್ಥ.

೩೫. ಇದು ಉತ್ತರ ದಿಗ್ದೇವತಾ ಧ್ಯಾನಮಂತ್ರ—ಓ ಉತ್ತರ ದಿಗ್ದೇವತೆಯೇ! ನಿನ್ನಲ್ಲಿ ಕುಬೇರನು ವಾಸವಾಗಿರುವುದರಿಂದ ಲೋಕದಲ್ಲಿ ಸೌಮ್ಯ ಎಂಬ ಹೆಸರು ನಿನಗೆ ಪ್ರಸಿದ್ಧಿಗೆ ಬಂದಿದೆ. ಅಲ್ಲದೆ ನಿನಗೆ ಉತ್ತರಾ ಎಂಬ ನಾಮಧೇಯವೂ ರೂಢಿಯಲ್ಲಿದೆ. ಅಂಥ ನಿನಗೆ ನಮಸ್ಕಾರ ಎಂದು ಈ ಮಂತ್ರಾರ್ಥ.

ಇದು ಈಶಾನ್ಯ ದಿಗ್ದೇವತಾ ಪ್ರಾರ್ಥನಾ ಮಂತ್ರ—ಎಲೌ ಈಶಾನ್ಯ ದಿಗ್ದೇವತೆಯೇ! ನೀನು ಜಗದೀಶನಾದ ಪರಮೇಶ್ವರನಿಂದ ಅಲಂಕೃತಳಾಗಿರುವೆ. ಆದ್ದರಿಂದ ಎಲೌ ದೇವಿ! ನೀನು ನನಗೆ ಶ್ರೀ ಶಿವಸಾನ್ನಿಧ್ಯವನ್ನು ಅನುಗ್ರಹಿಸು. ಮಂಗಳಮೂರ್ತಿಯಾದ ನಿನಗೆ ವಂದನೆ. ಎಂದು ಈ ಮಂತ್ರಾರ್ಥ.

ಸರ್ಪಾಷ್ಟಕಕುಲೇನ ತ್ವಂ ಸೇವಿತಾಸಿ ತಥಾಪ್ಯಧಃ ।
ನಾಗಾಂಗನಾಭಿಃ ಸಹಿತಾ ಹಿತಾ ನಃ ಸರ್ವದಾ ಭವ ॥ ೩೬ ॥

ಸಪ್ತಲೋಕೈಃ ಪರಿಗತಾ ಸರ್ವದಾ ತ್ವಂ ಶಿವಾ ಯತಃ ।
ಸನಕಾದ್ಯೈಃ ಪರಿವೃತಾ ಬ್ರಾಹ್ಮೀ ಜಿಹ್ಮಾನಪಾಕುರು ॥ ೩೭ ॥

ನಕ್ಷತ್ರಾಣಿ ಚ ಸರ್ವಾಣಿ ಗ್ರಹಾಸ್ತಾರಾಗ್ರಹಾಸ್ತಥಾ ।
ನಕ್ಷತ್ರಮಾತರೋ ಯೇ ಚ ಭೂತಪ್ರೇತವಿನಾಯಕಾಃ ।
ಸರ್ವೇ ಮಮೇಷ್ಟಸಿದ್ಧ್ಯರ್ಥೇ ಭವಂತು ಪ್ರಣತಾಃ ಸದಾ ॥ ೩೮ ॥

---

೩೬. ಇದು ಅಧೋ ದಿಗ್ದೇವತೆಯ ಪ್ರಾರ್ಥನಾ ಮಂತ್ರ—ಓ ಅಧೋ ದಿಗ್ದೇವತೆಯೇ ! ನೀನು ಭೂಮಿಯ ಅಧೋ ಭಾಗವಾದ ಪಾತಾಳಲೋಕದಲ್ಲಿ ಎಂಟು ನಾಗಕುಲದಿಂದಲೂ ಸೇವಿಸಲ್ಪಟ್ಟಿರುವೆ. ಅಲ್ಲದೆ ನಾಗಾಂಗನೆಯರಿಂದ ಸಹಿತಳಾಗಿರುವೆ. ಅಂತಹ ನೀನು ಯಾವಾಗಲೂ ನನಗೆ ಹಿತಕಾರಿಣಿಯಾಗು ಎಂದು ಈ ಮಂತ್ರಾರ್ಥ.

೩೭. ಇದು ಊರ್ಧ್ವ ದಿಗ್ದೇವತೆಯ ಪ್ರಾರ್ಥನಾ ಮಂತ್ರ—ಓ ಊರ್ಧ್ವ ದಿಗ್ದೇವತೆಯೇ ! ನೀನು ಏಳು ಊರ್ಧ್ವಲೋಕಗಳಿಂದ ಪರಿವೃತಳಾಗಿರುತ್ತಾ ಯಾವಾಗಲೂ ಮಂಗಳಕರಳಾಗಿರುವೆ. ಮತ್ತು ಸನಕಾದಿ ಮಹರ್ಷಿಗಳಿಂದ ಪರಿವೃತಳೂ, ಬ್ರಹ್ಮಾಧಿಷ್ಠಿತಳೂ ಆಗಿರುವೆ. ಅಂತಹ ನೀನು ನನ್ನ ಪಾಪ ಗಳನ್ನು ದೂರಮಾಡು ಎಂದು ಈ ಮಂತ್ರದ ಅರ್ಥ.

೩೮. ಇದು ಇತರ ನಕ್ಷತ್ರಾದಿ ದೇವತೆಗಳ ಪ್ರಾರ್ಥನಾ ಮಂತ್ರ—ಎಲ್ಲಾ ನಕ್ಷತ್ರಗಳು, ನವಗ್ರಹಗಳು, ತಾರಾಗ್ರಹಗಳು, ಹಾಗೆಯೇ ನಕ್ಷತ್ರ ಮಾತೃ ಗಳು, ಮತ್ತು ಭೂತ, ಪ್ರೇತ, ವಿನಾಯಕಾದಿಗಳು ಇವರೆಲ್ಲರೂ ನನ್ನಿಂದ ನಮಸ್ಕೃತರಾಗಿ ಯಾವಾಗಲೂ ನನ್ನ ಇಷ್ಟಾರ್ಥಸಿದ್ಧಿಗೆ ಸಾಧಕರಾಗಲಿ ಎಂದು ಇದರ ಅರ್ಥ.

ಏಭಿರ್ಮಂತ್ರೈಸ್ಸಮಭ್ಯರ್ಚ್ಯ ಪುಷ್ಪಧೂಪಾದಿನಾ ತತಃ |
ವಾಸೋಭಿರಭಿಸಂಸ್ಥಾಪ್ಯ ಫಲಾನಿ ವಿನಿವೇದಯೇತ್ || ೩೯ ||

ತತ್ತೂರ್ಯಧ್ವನಿಘೋಷೇಣ ಗೀತಮಂಗಲನಿಸ್ಸ್ವನೈಃ |
ನೃತ್ಯಂತೀಭಿರ್ವರಸ್ತ್ರೀಭಿಸ್ತಾಂ ರಾತ್ರಿಮತಿವಾಹಯೇತ್ || ೪೦ ||

ಕುಂಕುಮಕ್ಷೋದತೀವ್ರೇಣ ದಾನಮಾನಾದಿಭಿಃ ಸುಖಂ |
ಪ್ರಭಾತೇ ವೇದವಿದುಷೇ ಸರ್ವಂ ತತ್ಪ್ರತಿಪಾದಯೇತ್ || ೪೧ ||

ಅನೇನ ವಿಧಿನಾ ಸರ್ವಂ ಕ್ಷಮಯನ್ಪ್ರಣಿಪತ್ಯ ಚ |
ಭುಂಜೀತ ಮಿತ್ರಸಹಿತಃ ಸುಹೃದ್ಬಂಧುಜನೈರಪಿ || ೪೨ ||

---

೩೯. ಈ ಹಿಂದೆ ಹೇಳಿದ ಮಂತ್ರಗಳಿಂದ ಧ್ಯಾನಮಾಡಿ, ಗಂಧಾಕ್ಷತಾದಿಗಳು, ಪುಷ್ಪ, ಧೂಪ ಇವುಗಳಿಂದ ಪೂಜಿಸಿ ವಸ್ತ್ರಗಳನ್ನು ಹೊದ್ದಿಸಿ ಫಲಗಳನ್ನು ನೇವೇದ್ಯಮಾಡಬೇಕು.

೪೦. ಅನಂತರ ಮಂಗಲ ವಾದ್ಯಘೋಷಗಳ ಸಂಗೀತ, ಕೀರ್ತನ, ಸ್ತುತಿ, ಸುಂದರ ಸ್ತ್ರೀಯರ ನರ್ತನ ಇತ್ಯಾದಿಗಳ್ನು ಏರ್ಪಡಿಸಿ ಆ ರಾತ್ರಿಯನ್ನು ಜಾಗರಣೆಯಿಂದ ಕಳೆಯಬೇಕು.

೪೧. ಆಗ ಅಲ್ಲಿ ಆಹ್ವಾನಿತರಾದ ಸುಮಂಗಲಿಯರಿಗೆ ಕುಂಕುಮ ಅರಸಿನ ಇತ್ಯಾದಿ ಮಂಗಳ ದ್ರವ್ಯಗಳನ್ನೂ ಇತರ ಬಾಗಿನವನ್ನೂ ಕೊಟ್ಟು ಮರ್ಯಾದೆ ಮಾಡಬೇಕು. ಈರೀತಿ ಸುಖಸಂತೋಷದಿಂದ ಆ ರಾತ್ರಿಯನ್ನು ಕಳೆದು ಬೆಳಗಾದ ಮೇಲೆ ಪೂಜಿತವಾದ ಆ ಸುವರ್ಣ ಪ್ರತಿಮಾದಿಗಳನ್ನು ವೇದಾಧ್ಯಯನ ಮಾಡಿದ ಶ್ರೋತ್ರಿಯರಿಗೆ ದಾನಮಾಡಬೇಕು.

೪೨. ಈ ಕ್ರಮದಲ್ಲಿ ಎಲ್ಲ ಕಾರ್ಯಗಳನ್ನೂ ಪೂರೈಸಿದ ಮೇಲೆ ಅಪರಾಧ ಕ್ಷಮೆಯನ್ನು ಬೇಡಿ ನಮಸ್ಕಾರಮಾಡಿ ಮಿತ್ರ ಬಂಧುಜನಸಹಿತನಾಗಿ ತಾನು ಭುಂಜಿಸಬೇಕು.

ಯ ಏವಂ ಕುರುತೇ ಪಾರ್ಥ ದಶಮೀವ್ರತಮಾದರಾತ್ ।
ಸ ಸರ್ವಕಾಮಮಾಪ್ನೋತಿ ಮನಸಾಭೀಪ್ಸಿತಂ ನರಃ ॥ ೪೩ ॥

ಸ್ತ್ರೀಭಿರ್ವಿಶೇಷತಃ ಕಾರ್ಯಂ ವ್ರತಮೇತದ್ಯುಧಿಷ್ಠಿರ ।
ಲಘುಚಿತ್ತಾ ಯತೋ ನಾರ್ಯಃ ಸದಾ ಕಾಮಪರಾಯಣಾಃ ॥ ೪೪ ॥

ಧನ್ಯಂ ಯಶಸ್ಯಮಾಯುಷ್ಯಂ ಸರ್ವಕಾಮಫಲಪ್ರದಂ ।
ಕಥಿತಂ ತೇ ಮಹಾರಾಜ ಮಯಾ ವ್ರತಮನುತ್ತಮಂ ॥ ೪೫ ॥

ಯೇ ಮಾನವಾ ಮನುಜಪುಂಗವಕಾಮಕಾಮಾಃ ।
ಸಂಪೂಜಯಂತಿ ದಶಮೀಷು ಸದಾ ದಶಾಶಾಃ ।

---

೪೩. ಎಲೈ ಕುಂತೀಪುತ್ರನೇ! ಈ ಕ್ರಮದಲ್ಲಿ ಅತ್ಯಾದರದಿಂದ ಈ ದಶಮೀ ವ್ರತವನ್ನು ಆಚರಿಸಿದವನು ಮನಸ್ಸಿನಲ್ಲಿ ಎಣಿಸಿದ ಸರ್ವ ಇಷ್ಟಾರ್ಥಗಳನ್ನೂ ಪಡೆಯುತ್ತಾನೆ.

೪೪. ಅಯ್ಯಾ ಯುಧಿಷ್ಠಿರನೇ! ಯಾವಾಗಲೂ ಸ್ತ್ರೀಯರು ಲಘುವಾದ ಮನಸ್ಸುಳ್ಳವರು, ಮತ್ತು ಯಾವಾಗಲೂ ಕಾಮಪರಾಯಣೆಯರು. ಆದುದರಿಂದ ಅಜ್ಞಾತದೋಷಪರಿಹಾರಕ್ಕಾಗಿ ಅವರು ಈ ವ್ರತವನ್ನು ವಿಶೇಷ ಪ್ರಯತ್ನದಿಂದಾದರೂ ಆಚರಿಸಬೇಕು.

೪೫. ಅಯ್ಯಾ ಮಹಾರಾಜನೇ! ಕೃತಾರ್ಥತೆಯನ್ನು ಕೊಡುವುದಾಗಿಯೂ, ಯಶಃಪ್ರದವಾಗಿಯೂ ಆಯುರಭಿವೃದ್ಧಿಕಾರಣವಾಗಿಯೂ, ಸರ್ವಕಾಮ ಫಲಪ್ರದವಾಗಿಯೂ ಇರುವ ಉತ್ತಮೋತ್ತಮವಾದ ಈ ವ್ರತವನ್ನು ನಾನು ನಿನಗೆ ಹೇಳಿರುತ್ತೇನೆ.

೪೬. ಶ್ರೇಷ್ಠವಾದ ಪುರುಷರು ಅಭಿಲಷಿಸುವ ಫಲಗಳಲ್ಲಿ ಆಶೆಯುಳ್ಳವರಾಗಿ, ಯಾವಾಗಲೂ ಪ್ರತಿ ಶುಕ್ಲಪಕ್ಷದ ದಶಮೀ ತಿಥಿಯಲ್ಲಿ ಈ ಹತ್ತು ದಿಗ್ದೇವತೆಗಳನ್ನೂ ಯಾವ ಪುರುಷರು ಭಕ್ತಿವಿನಯ ಸಹಿತರಾಗಿ ಚೆನ್ನಾಗಿ ಪೂಜಿಸುತ್ತಾರೋ

**ತೇಷಾಂ ವಿಶೇಷನಿಹಿತಾ ಹೃದಯೇ ಪ್ರಕಾಮ ।**
**ಮಾಶಾಃ ಫಲಂತ್ಯಲಮಲಂ ಬಹುನೋದಿತೇನ ॥ ೪೬ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಆಶಾದಶಮೀವ್ರತಂ ನಾಮ ಚತುಷ್ಷಷ್ಟಿತಮೋಽಧ್ಯಾಯಃ**



---

ಅಂತಹ ಪುರುಷರ ಹೃದಯದಲ್ಲಿ ಅಂಕುರಿಸಿದ ಆಶಾ ವಿಶೇಷಗಳು ಯಥೇಷ್ಟವಾಗಿ ಸಫಲಗಳಾಗುವುವು. ಈ ವಿಷಯದಲ್ಲಿ ಹೆಚ್ಚು ಹೇಳಬೇಕಾದುದೇ ಇಲ್ಲ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಆಶಾದಶಮೀ ವ್ರತವರ್ಣನೆ ಎಂಬ ಅರವತ್ತನಾಲ್ಕನೆಯ ಅಧ್ಯಾಯ ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಪಂಚಷಷ್ಟಿತಮೋಽಧ್ಯಾಯಃ

|| ಯುಧಿಷ್ಠಿರ ಉವಾಚ ||

ಅಹಂ ತ್ವಾಗಸ್ಕರಃ ಪಾಪಃ ಪೃಥಿವೀಕ್ಷಯಕಾರಕಃ ।
ಪರಿಪೃಚ್ಛಾಮಿ ಗೋವಿಂದ ತ್ವಾಂ ನಮಸ್ಕೃತ್ಯ ಪಾದಯೋಃ || ೧ ||

ಗುಹ್ಯಾದ್ಗುಹ್ಯತರಂ ಬ್ರೂಹಿ ವ್ರತಂ ಕಿಂಚಿದನುತ್ತಮಂ ।
ತರಾಮಿ ಯೇನ ಪಾಪೌಘಂ ಭೀಷ್ಮದ್ರೋಣವಧಾರ್ಣವಂ || ೨ ||

---

### ಅರವತ್ತೈದನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ಗೋವಿಂದನೇ ! ನಾನು ಅಪರಾಧಮಾಡಿದ ಪಾಪಿ, ಮತ್ತು ಭೂಲೋಕವನ್ನೇ ನಾಶಮಾಡಿದವನು. ಆದುದರಿಂದ ನಿನ್ನ ಪಾದಗಳಿಗೆ ನಮಸ್ಕರಿಸಿ ಪ್ರಶ್ನೆಮಾಡುತ್ತೇನೆ.

೨. ಭೀಷ್ಮರು ಮತ್ತು ದ್ರೋಣಾಚಾರ್ಯರನ್ನು ಕೊಲೆಮಾಡಿದ ಪಾಪಸಾಗರದಿಂದ ನಾನು ಉತ್ತೀರ್ಣನಾಗುವುದಕ್ಕೆ ಸಾಧನವಾಗಿಯೂ, ಉತ್ತಮೋತ್ತಮವಾಗಿಯೂ, ಅತಿಗೋಪ್ಯವಾಗಿಯೂ ಇರುವ ಒಂದು ವ್ರತವನ್ನು ನೀನು ನನಗೆ ಉಪದೇಶಮಾಡು ಎಂದನು.

॥ ಶ್ರೀ ಕೃಷ್ಣ ಉವಾಚ ॥

ಆಸೀತ್ಪುರೋತ್ತರೋ ನಾಮ್ನಾ ವಿದರ್ಭಾಯಾಂ ಕುಶಧ್ವಜಃ ।
ಸಾಂತಃಪುರಸುತೋ ಯಶ್ಚ ಚಕ್ರೇ ರಾಜ್ಯಮತಂದ್ರಿತಃ ॥ ೩ ॥

ಜಘಾನ ತಾಪಸಂ ಸೋಽಥ ಪ್ರಮಾದಾನ್ಮೃಗಯಾಂ ಗತಃ ।
ಮೃಗಂ ಮತ್ವಾ ಮಹಾರಣ್ಯೇ ಬ್ರಾಹ್ಮಣಂ ದೈವಮೋಹಿತಃ ॥ ೪ ॥

ತೇನ ಕರ್ಮವಿಪಾಕೇನ ದೇಹಾಂತೇ ನರಕಂ ಗತಃ ।
ತತ್ರಾಸೌ ಯಾತನಾ ಘೋರಾ ಅನುಭೂಯಾತಿಪೀಡಿತಃ ॥ ೫ ॥

ತಸ್ಮಾದಿಹಾಗತೋ ಮರ್ತ್ಯೇ ರೌದ್ರೋ ವಿಷಧರೋಽಭವತ್ ।
ಅದಶತ್ಸೋಽಪಿ ರಾಜೇಂದ್ರ ಬ್ರಾಹ್ಮಣಂ ಚರಣೇ ರುಷಾ ॥ ೬ ॥

---

೩. ಅಯ್ಯಾ ಯುಧಿಷ್ಠಿರನೇ ! ಪೂರ್ವದಲ್ಲಿ ಉತ್ತರದೇಶದ ವಿದರ್ಭ ಎಂಬಲ್ಲಿ ಕುಶಧ್ವಜನೆಂಬ ರಾಜನಿದ್ದನು. ಅವನು ಅಂತಃಪುರ ಸ್ತ್ರೀಜನರು ಪುತ್ರರು ಇವರಿಂದ ಸಮೇತನಾಗಿ ನಿರುಪದ್ರವವಾಗಿ ರಾಜ್ಯವಾಳುತ್ತಿದ್ದನು.

೪. ಒಂದಾನೊಂದುದಿನ ಆ ರಾಜನು ಮೃಗಬೇಟೆಗಾಗಿ ಘೋರಾರಣ್ಯಕ್ಕೆ ಹೋದವನು ಮರದೃಷ್ಟದಿಂದ ವಂಚಿತನಾಗಿ ಆ ಕಾಡಿನಲ್ಲಿರುವ ಒಬ್ಬ ತಾಪಸ ಬ್ರಾಹ್ಮಣನನ್ನು ಮೃಗವೆಂದು ತಪ್ಪಾಗಿ ತಿಳಿದುಕೊಂಡು ಪ್ರಮಾದದಿಂದ ಆ ಬ್ರಾಹ್ಮಣನನ್ನು ಹೊಡೆದು ಕೊಂದನು.

೫. ಅದರಿಂದ ಬ್ರಹ್ಮಹತ್ಯಾ ಪಾಪವು ಪ್ರಾಪ್ತವಾದುದರಿಂದ ದೇಹಾಂತ್ಯದಲ್ಲಿ ಆ ರಾಜನು ನರಕಕ್ಕೆ ಹೋಗಿ ಅಲ್ಲಿ ಯಮಭಟರಿಂದ ಅತಿಪೀಡಿತನಾಗಿ ಘೋರವಾದ ಯಾತನೆಗಳನ್ನು ಅನುಭವಿಸಿದನು.

೬. ಅಯ್ಯಾ ರಾಜೇಂದ್ರನೇ ! ಆ ನರಕಯಾತನೆಗಳನ್ನು ಅನುಭವಿಸಿದ ಮೇಲೆ ಅಲ್ಲಿಂದ ಈ ಮನುಷ್ಯಲೋಕಕ್ಕೆ ಬಂದು, ಭಯಂಕರವಾದ ವಿಷಸರ್ಪವಾಗಿ ಜನಿಸಿದನು. ಆ ಸರ್ಪಜನ್ಮದಲ್ಲೂ ಕೋಪದಿಂದ ಒಬ್ಬ ಬ್ರಾಹ್ಮಣನ ಕಾಲನ್ನು ಕಚ್ಚಿದುದಾಯಿತು.

ಲಬ್ಧ್ವಾ ಸಹ ಚ ಪಂಚತ್ವಂ ಜಗಾಮ ದ್ವಿಜಸಂಯುತಃ ।
ವಿಪನ್ನಸ್ತು ತತಃ ಸಿಂಹೋ ದ್ವಿತೀಯೋಽಭೂತ್ಸುದಾರುಣಃ ॥ ೭ ॥

ವಿದಾರಿತಮುಖೋ ಹಿಂಸ್ರೋ ನಾನಾಸತ್ವಭಯಂಕರಃ ।
ಜಘಾನಾಸೌ ಪುನಃ ಶ್ರೇಷ್ಠಂ ರಾಜನ್ಯಂ ಮೃಗಯಾ ಗತಂ ॥ ೮ ॥

ತತೋಽಪಿ ಬಹುಭಿಃ ಶಸ್ತ್ರೈಃ ರಾಜಲೋಕೈರ್ನಿಪಾತಿತಃ ।
ಪುನರ್ವ್ಯಾಘ್ರೋ ಬಭೂವಾಸೌ ತೃತೀಯೋಽಪಿ ಭವಾಂತರೇ ॥ ೯ ॥

ತೀಕ್ಷ್ಣಪಾದನಖಾಘಾತವ್ಯಾಪಾದಿತಮೃಗಾನ್ವಯಃ ।
ತೇನಾಪಿ ವೈಶ್ಯೋ ನಿಧನಂ ನೀತಃ ಕಿಂಚಿದ್ವನಾಂತರೇ ॥ ೧೦ ॥

---

೭. ಸರ್ಪ ಕಚ್ಚಿದುದರಿಂದ ಆ ಬ್ರಾಹ್ಮಣನು ಮೃತನಾದನು. ಸರ್ಪವೂ ಮರಣಹೊಂದಿತು. ಅನಂತರ ಎರಡನೆಯ ಜನ್ಮದಲ್ಲಿ ಭಯಂಕರವಾದ ಸಿಂಹದ ಜನ್ಮ ಬಂತು.

೮. ಆ ಸಿಂಹವು ವಿಸ್ತಾರವಾದ ಮುಖವುಳ್ಳದ್ದಾಗಿಯೂ ಅನೇಕ ಪ್ರಾಣಿಗಳನ್ನು ಘಾತಿಸುವುದಾಗಿಯೂ, ನಾನಾ ಪ್ರಾಣಿಗಳಿಗೆ ಭಯಜನಕವಾಗಿಯೂ ಇದ್ದಿತು. ಆ ಕಾಡಿಗೆ ಮೃಗಬೇಟೆಗಾಗಿ ಹೋಗಿದ್ದ ಶ್ರೇಷ್ಠನಾದ ಒಬ್ಬ ಕ್ಷತ್ರಿಯನನ್ನು ಈ ಸಿಂಹವು ಸಂಹರಿಸಿತು.

೯. ಅನಂತರ ಅನೇಕ ರಾಜರು ಸೇರಿ ಬಹುವಿಧವಾದ ಶಸ್ತ್ರಗಳಿಂದ ಹೊಡೆದು ಆ ಸಿಂಹವನ್ನು ಕೊಂದರು. ಹೀಗೆ ಆ ಜನ್ಮ ಕಳೆಯಲು ಬಳಿಕ ಆತನಿಗೆ ಹುಲಿಯ ಜನ್ಮ ಬಂದಿತು.

೧೦. ಹಾಗೆ ವ್ಯಾಘ್ರರೂಪಿಯಾಗಿ ಜನಿಸಿದಾಗ ತನ್ನ ತೀಕ್ಷ್ಣರಾದ ಕಾಲುಗುರುಗಳ ಹೊಡೆತದಿಂದ ಮೃಗಸಮುದಾಯವನ್ನು ಸಂಹರಿಸುತ್ತಿದ್ದಿತು. ಹೀಗಿರಲು ಒಂದುದಿನ ಕಾಡಿನ ಮಧ್ಯದಲ್ಲಿ ಹೋಗುತ್ತಿದ್ದ ಒಬ್ಬ ವೈಶ್ಯನನ್ನು ಕೊಂದಿತು.

ಸ ನೀತಃ ಕೃಮಿರಾಶಿತ್ವಂ ಲೋಕೈಃ ಖಾತನಿಪಾತನಾತ್ ।
ಸಂಜಾತಸ್ತು ಮಹಾನೃಕ್ಷೋ ನಖರಾಹತಜಂತುರುಕ್ ॥ ೧೧ ॥

ಜಘಾನ ಬಾಲಂ ಚಂಡಾಲಾದಸೌ ಮೃತ್ಯುಮವಾಪ್ನುಯಾತ್ ।
ಪಂಚಮೋ ಮಕರೋ ಜಾತಃ ಸಮುದ್ರೇಽತಿಭಯಂಕರಃ ॥ ೧೨ ॥

ಸ್ತ್ರಿಯಂ ಜಘಾನ ತರುಣೀಂ ಸ್ನಾತುಕಾಮಾಮುಪಾಗತಾಂ ।
ಪ್ರಭಾತೇ ಶಂಕರಸ್ಯಾಗ್ರೇ ಶಶಾಂಕಗ್ರಹಣೇ ನಿಶಿ ॥ ೧೩ ॥

ತತ್ರಾಪಿ ಬಡಿಶಂ ದತ್ವಾ ಜನ್ಯೈಃ ಪ್ರಾಣೈರ್ವಿಯೋಜಿತಃ ।
ಪುನಃ ಷಷ್ಠೇ ಭವೇ ಜಾತಃ ಪಿಶಾಚಃ ಪಿಶಿತಾಶನಃ ॥ ೧೪ ॥

---

೧೧. ಅನಂತರ ಜನರೆಲ್ಲಾ ಸೇರಿ ಒಂದು ದೊಡ್ಡ ಗುಣಿಯನ್ನು ಅಗೆದು ಈ ವ್ಯಾಘ್ರವನ್ನು ಅಲ್ಲಿಗೆ ಉಪಾಯದಿಂದ ಸೆಳೆದುಕೊಂಡು ಹೋಗಿ ಅದರೊಳಗೆ ಬೀಳಿಸಿ, ಸಾಯಿಸಿ, ಆ ವ್ಯಾಘ್ರಶರೀರದಲ್ಲಿ ಕ್ರಿಮಿರಾಶಿಗಳು ಉತ್ಪನ್ನವಾಗುವ ಹಾಗೆ ಮಾಡಿದರು. ಅನಂತರ ನಾಲ್ಕನೆಯ ಜನ್ಮದಲ್ಲಿ ಆ ಕುಪಥ್ವಜನು ಉಗುರುಗಳಿಂದ ಪರಚಿ ಪ್ರಾಣಿಗಳಿಗೆ ವ್ಯಥೆಯನ್ನು ಕೊಡುವ ದೊಡ್ಡ ಕರಡಿಯಾಗಿ ಜನಿಸಿದನು.

೧೨. ಆಗಲೂ ಒಬ್ಬ ಬಾಲಕನನ್ನು ಕೊಲ್ಲಲಾಗಿ ಅದನ್ನು ಚಂಡಾಲ ಜಾತಿಯವರು ಹೊಡೆದುದರಿಂದ ಮರಣ ಸಂಭವಿಸಿತು. ಐದನೆಯ ಜನ್ಮದಲ್ಲಿ ಸಮುದ್ರದಲ್ಲಿ ಸಂಚರಿಸುವ ಭಯಂಕರವಾದ ಒಂದು ಮೊಸಳೆಯಾಗಿ ಜನಿಸಿದನು.

೧೩. ಆ ಜನ್ಮದಲ್ಲೂ ಒಂದು ಚಂದ್ರಗ್ರಹಣದ ದಿನದ ರಾತ್ರಿಯಲ್ಲಿ ಒಬ್ಬ ಯುವತಿಯು ಸಮುದ್ರತೀರದಲ್ಲಿ ವಾಲುಕೇಶ್ವರನ ಪೂಜೆಮಾಡಿ ಆ ಈಶ್ವರನ ಎದುರಾಗಿ ಸಮುದ್ರದಲ್ಲಿ ಸ್ನಾನಮಾಡಬೇಕೆಂಬ ಆಶೆಯಿಂದ ಇಳಿಯುತ್ತಿರಲು ಮೊಸಳೆಯು ಆ ಸ್ತ್ರೀಯನ್ನು ಹಿಡಿದು ಕೊಂದಿತು.

೧೪. ಆಗ ಜನರು ಬಲೆ, ಗಾಳ ಮುಂತಾದುವನ್ನು ಹಾಕಿ ಆ ಮೊಸಳೆ
ನಃ ಆರನೆಯ ಜನ್ಮದಲ್ಲಿ ಅವನು ಮಾಂಸಾಹಾರಿ
ು.

**ಕ್ರೂರಶ್ಛಿದ್ರ ಪರಃ ಕ್ಷುದ್ರೋ ನರಪ್ರಾಣವಿಯೋಜಕಃ ।**
**ಸೋऽವತೀರ್ಣೋ ನರಸ್ಯಾಂಗಂ ಕರ್ಷಯಾಮಾಸ ಕಸ್ಯಚಿತ್ ॥೧೫॥**

**ಮಂತ್ರೇಣಾಹೂಯ ಸಿದ್ಧೇನ ವಾತಿಕೇನ ವ್ಯಸುಃ ಕೃತಃ ।**
**ಸಪ್ತಮೇ ಸ ಪುನರ್ಜಾತೋ ದುರ್ನಿರೀಕ್ಷ್ಯವಪುರ್ಭೃಶಂ ॥ ೧೬ ॥**

**ಕ್ರೂರದಂಷ್ಟ್ರಃ ಕರಾಲಾಸ್ಯೋ ಮಾಂಸಶೋಣಿತಭೋಜನಃ ।**
**ದ್ವಿಗ್ವಾಸಾ ಮರುಭೂಮೀಷು ವಾಶಿಷ್ಠೋ ಬ್ರಹ್ಮರಾಕ್ಷಸಃ ॥ ೧೭ ॥**

**ಸ ರಾಷ್ಟ್ರಂ ಜರ್ಜರಂ ಶೂನ್ಯಂ ಸರ್ವಂ ಚಕ್ರೇ ವಿಷಾದಿಷು ।**
**ಆಕ್ರಮ್ಯ ಭೀಮದಾಸೇನ ರಾಜ್ಞಾ ರಾಕ್ಷಸಶತ್ರುಣಾ ॥ ೧೮ ॥**

---

೧೫. ಆ ಪೈಶಾಚಜನ್ಮದಲ್ಲಿ ಕ್ರೂರ ಸ್ವಭಾವದವನೂ ಪರರಂಧ್ರಾನ್ವೇಷಣ ಪರನೂ ಅತಿನೀಚನೂ ಮನುಷ್ಯರ ಪ್ರಾಣಾಪಹಾರಕನೂ ಆಗಿದ್ದನು. ಕದಾಚಿತ್ ಆ ಪಿಶಾಚಿಯು ಯಾವನೋ ಒಬ್ಬನ ಶರೀರದ ಒಳಗೆ ಹೊಕ್ಕು ಅವನ ಅಂಗ ವನ್ನು ಸೆಳೆಯಿತು.

೧೬. ಸಿದ್ಧಪುರುಷನಾದ ಒಬ್ಬ ಮಂತ್ರವಾದಿಯು ಆಗ ಅಭಿಮಂತ್ರಿಸಿ ಅದನ್ನು ಆ ಶರೀರದಿಂದ ಹೊರಗೆ ಎಳೆದು ನಿರ್ಜೀವನನ್ನಾಗಿ ಮಾಡಿದನು. ಅನಂತರ ಅವನು ಏಳನೆಯ ಜನ್ಮದಲ್ಲಿ ನೋಡುವುದಕ್ಕೆ ಅತ್ಯಂತ ಅಸಾಧ್ಯವಾದ ಶರೀರವುಳ್ಳವನೂ,

೧೭. ಕ್ರೂರವಾದ ಕೋರೆದಾಡೆಗಳುಳ್ಳವನೂ, ಭಯಂಕರವಾದ ಮುಖ ವುಳ್ಳವನೂ, ಮಾಂಸ ರಕ್ತ ಇವುಗಳನ್ನೇ ಆಹಾರವಾಗಿ ಸೇವಿಸುವವನೂ; ದಿಗಂಬರನೂ, ಮರುಭೂಮಿಯಲ್ಲಿ ಸಂಚರಿಸುವವನೂ, ಆಗಿ ವಸಿಷ್ಠಗೋತ್ರಜ ನಾದ ಒಬ್ಬ ಬ್ರಹ್ಮರಾಕ್ಷಸನಾದನು.

೧೮. ಆ ಬ್ರಹ್ಮರಾಕ್ಷಸನು ಎಲ್ಲಾ ರಾಷ್ಟ್ರವನ್ನೂ ಜರ್ಝರಿತವನ್ನಾಗಿಯೂ ಶೂನ್ಯವನ್ನಾಗಿಯೂ ಮಾಡಿದನು. ಆಗ ರಾಕ್ಷಸರಿಗೆ ವೈರಿಯಾದ ಭೀಮದಾಸ ನೆಂಬ ರಾಜನು ಧನುಸ್ಸಿನಲ್ಲಿ ಬ್ರಹ್ಮಾಸ್ತ್ರವನ್ನು ಹೂಡಿ,

ಸಮಾರೋಪ್ಯ ಧನುಃ ಸಂಖ್ಯೇ ಬ್ರಹ್ಮಾಸ್ತ್ರೇಣ ನಿಷಾತಿತಃ ।
ಭೂಯೋಽಭವದ್ವ್ಯಾಘ್ರಸಮಃ ಸ್ವಜನ್ಮನ್ಯಷ್ಟಮೇ ಭುವಿ ॥ ೧೯ ॥

ವನೇಚರಾಣಾಂ ಕ್ರುದ್ಧಾಂಗೋ ಬ್ರಾಹ್ಮಣಾನ್ನಿಧನಂ ಗತಃ ।
ತತೋ ಹಸ್ತೀ ಚ ಭಲ್ಲೂಕೋ ಮಾತಂಗೇನ ಧನುಷ್ಮತಾ ॥ ೨೦ ॥

ಏಕಾದಶೇಽಪಿ ಚಂಡಾಲೋ ಭವಮುಖ್ಯೇಽತಿಭೀಷಣಃ ।
ಊರ್ಧ್ವಕೇಶೋಽತಿರಕ್ತಾಕ್ಷೋ ಜಾತೋ ಹ್ರಸ್ವತನುರ್ದೃಢಃ ॥ ೨೧ ॥

ಪಾಪೋ ಧರ್ಮಧ್ವಜೋ ರಕ್ಷೋ ದೇವತೋಜ್ಝಿತಮಾಲ್ಯಧೃಕ್ ।
ಸ ದಂಡಪಾಶಿಕೇನೈವ ವೃಕ್ಷಾಗ್ರೇ ಹ್ಯವಲಂಬಿತಃ ॥ ೨೨ ॥

---

೧೯. ಆ ಬ್ರಹ್ಮಾಸ್ತ್ರ ಪ್ರಯೋಗದಿಂದ ಯುದ್ಧದಲ್ಲಿ ಈ ಬ್ರಹ್ಮರಾಕ್ಷಸನನ್ನು ಕೊಂದನು. ಅವನು ತನ್ನ ಎಂಟನೆಯ ಜನ್ಮದಲ್ಲೂ ಪುನಃ ವ್ಯಾಘ್ರ ರೂಪಿನಿಂದ ಭೂಮಿಯಲ್ಲಿ ಜನಿಸಿದನು.

೨೦. ಆ ವ್ಯಾಘ್ರಜನ್ಮದಲ್ಲಿ ಅತಿ ಕೋಪಸೂಚಕವಾದ ಮುಖವುಳ್ಳವನಾಗಿ ಕಾಡಿನಲ್ಲಿ ಸಂಚರಿಸುವ ಸರ್ವಪ್ರಾಣಿಗಳಿಗೂ ಹಿಂಸಕನಾಗಿರುತ್ತಾ ಕೊನೆಗೆ ಒಬ್ಬ ಬ್ರಾಹ್ಮಣನಿಂದ ಮರಣಹೊಂದಿದನು. ಅನಂತರ ಒಂಭತ್ತನೆಯ ಜನ್ಮದಲ್ಲಿ ಆನೆಯಾಗಿ ಹುಟ್ಟಿದನು. ಆಮೇಲೆ ಹತ್ತನೆಯ ಜನ್ಮದಲ್ಲಿ ಕರಡಿಯಾಗಿ ಜನಿಸಿ ಧನುರ್ಧಾರಿಯಾದ ಮಾತಂಗನೆಂಬವನಿಂದ ಸಂಹರಿಸಲ್ಪಟ್ಟನು.

೨೧. ಅನಂತರ ಹನ್ನೊಂದನೆಯ ಜನ್ಮದಲ್ಲಿ ಅತಿ ಚಂಡಾಲನಾಗಿ ಜನಿಸಿ ಮೇಲ್ಮುಖಗಳಾದ ಕೂದಲುಗಳುಳ್ಳವನೂ ಅತಿಕೆಂಪೇರಿದ ಕಣ್ಣುಗಳುಳ್ಳವನೂ, ಗುಜ್ಜಾದ ಶರೀರವುಳ್ಳವನೂ ಆಗಿಭಯಂಕರನಾದನು.

೨೨. ಅವನು ದೃಢಕಾಯನೂ, ಪಾಪಕೃತ್ಯಾಚರಣದಿಂದ ಅತಿ ಪಾಪಿಯೂ, ಧರ್ಮವನ್ನಾಚರಿಸಿ ಅದನ್ನು ಲೋಕದಲ್ಲಿ ಪ್ರಸಿದ್ಧಿಪಡಿಸುವ ಧರ್ಮಧ್ವಜಿಯೂ, ರಾಕ್ಷಸಪ್ರಕೃತಿಯೂ, ದೇವತಾ ನಿರ್ಮಾಲ್ಯಧಾರಿಯೂ ಆಗಿದ್ದನು. ಆ ಚಂಡಾಲನು ಕೊನೆಗೆ ಪಾಶದಿಂದ ಬಂಧಿತನಾಗಿ ವೃಕ್ಷದ ತುದಿಯಲ್ಲಿ ನೇಣು ಹಾಕಲ್ಪಟ್ಟು ಮೃತನಾದನು.

ದ್ವಾದಶೇ ಸ ಪುನರ್ಜಾತಃ ಪುಷ್ಕಲಕ್ಲೇಶಭಾಜನಃ ।
ಭಕ್ಷ್ಯಲೋಭಾದ್ಬಿಲಗತೋ ವ್ಯಾಧೇನ ವಿನಿಪಾತಿತಃ ॥ ೨೩ ॥

ತೇನ ಚಾಸೀತ್ಕೃತಂ ಪೂರ್ವಂ ತಾರಕದ್ವಾದಶೀವ್ರತಂ ।
ತಸ್ಯ ಪ್ರಭಾವಾಜ್ಜಾತೋऽಪಿ ದುಷ್ಟಯೋನೌ ಪುನಃಪುನಃ ॥ ೨೪ ॥

ಅವಾಪ ಶೀಘ್ರಂ ಪಂಚತ್ವಂ ಸಂಸಾರಭವಸಾಗರೇ ।
ಪುನರೇವಾಭವದ್ರಾಜಾ ವಿದರ್ಭಾಯಾಂ ಸುಧಾರ್ಮಿಕಃ ॥ ೨೫ ॥

ಭೂಯಶ್ಚೋಪೋಷಿತಾ ತೇನ ತಾರಕದ್ವಾದಶೀ ಶುಭಾ ।
ದೃಶ್ಯತಾಂ ವ್ರತಮಾಹಾತ್ಮ್ಯಂ ಜಾತೋಽಜಾತಃ ಪುನಃಪುನಃ ॥ ೨೬ ॥

---

೨೩. ಅವನು ಪುನಃ ಹನ್ನೆರಡನೆಯ ಜನ್ಮದಲ್ಲಿ ಪರಿಪೂರ್ಣಕ್ಲೇಶಕ್ಕೆ ಪಾತ್ರವಾದ ಸರ್ಪವಾಗಿ ಜನಿಸಿ ತಿಂಡಿಯ ಆಶೆಯಿಂದ ಬಿಲವಲ್ಲಿ ಪ್ರವೇಶಮಾಡಿದಾಗ ಒಬ್ಬ ವ್ಯಾಧನಿಂದ ಸಂಹೃತನಾದನು.

೨೪. ಆ ಕುಶಧ್ವಜನು ಪೂರ್ವದಲ್ಲಿ ತಾರಕದ್ವಾದಶೀ ವ್ರತವನ್ನು ಆಚರಿಸಿದ್ದನು. ಈ ಸಂಸಾರಸಾಗರದಲ್ಲಿ ಅವನು ಸ್ವಕರ್ಮವಶದಿಂದ ದುಷ್ಟಯೋನಿಗಳಲ್ಲಿ ಪುನಃ ಪುನಃ ಜನಿಸಿದರೂ,

೨೫. ಆ ಜನ್ಮಗಳೆಲ್ಲದರಲ್ಲೂ ಬೇಗಬೇಗನೆ ಮರಣಹೊಂದಿ ಆ ವ್ರತಾನುಷ್ಠಾನ ಪ್ರಭಾವದಿಂದ ಕೊನೆಗೆ ಅವನು ಪುನಃ ಆ ವಿದರ್ಭದೇಶದಲ್ಲಿ ಒಳ್ಳೆಯ ಧಾರ್ಮಿಕನಾದ ರಾಜನಾಗಿ ಜನಿಸಿದನು.

೨೬. ಆಗ ಶುಭಕರವಾದ ಈ ತಾರಕದ್ವಾದಶೀ ದಿನದಲ್ಲಿ ಪುನಃ ಉಪವಾಸಮಾಡಿ ಈ ವ್ರತವನ್ನಾಚರಿಸಿದನು. ಅಯ್ಯಾ ರಾಜನೇ! ಈ ವ್ರತಮಹಾತ್ಮೆಯನ್ನು ನೋಡು. ಭೂಮಂಡಲದಲ್ಲಿ ಇವನು ಪುನಃ ಪುನಃ ಹೀನಜನ್ಮವನ್ನೆತ್ತುತ್ತಿದ್ದರೂ,

ವ್ರತಪ್ರಭಾವಾದ್ಭುವನೇ ಭುಕ್ತ್ವಾ ರಾಜ್ಯಮಕಂಟಕಂ ।
ಪ್ರಾಪ ವಿಷ್ಣುಪುರೇ ಸ್ಥಾನಂ ಯಾವದಾಭೂತಸಂಪ್ಲವಂ　　॥ ೨೭ ॥

॥ ಯುಧಿಷ್ಠಿರ ಉವಾಚ ॥

ಕಥಮೇತದ್ವ್ರತಂ ಕೃಷ್ಣ ಕರ್ತವ್ಯಂ ಪುರುಷೋತ್ತಮೈಃ ।
ಸ್ತ್ರೀಭಿರ್ವಾ ಭರ್ತೃವಾಕ್ಯೇನ ಸ್ನಾನದಾನಜಪಾದಿಕಂ　　॥ ೨೮ ॥

॥ ಶ್ರೀ ಕೃಷ್ಣ ಉವಾಚ ॥

ಮಾರ್ಗಶೀರ್ಷೇ ಸಿತೇ ಪಕ್ಷೇ ಗೃಹೀತ್ವಾ ದ್ವಾದಶೀವ್ರತಂ ।
ಅಕೃತ್ರಿಮೇ ಜಲೇ ಸ್ನಾನಮಪರಾಹ್ಣೇ ಸಮಾಚರೇತ್　　॥ ೨೯ ॥

ಪ್ರಣಮ್ಯ ಭಾಸ್ಕರಾಯಾಥ ಕೃತ್ವಾ ದೇವಾರ್ಚನಂ ತಥಾ ।
ಹೋಮಂಚ ತಾವತ್ಸಂಧತ್ತೇ ಯಾವದಸ್ತಮಿತೋ ರವಿಃ　　॥ ೩೦ ॥

---

೨೭. ಈ ದ್ವಾದಶೀ ವ್ರತಪ್ರಭಾವದಿಂದ ಅವೆಲ್ಲವನ್ನೂ ಶೀಘ್ರವಾಗಿ ದಾಟಿ, ಕೊನೆಗೆ ಉತ್ತಮ ಜನ್ಮವನ್ನು ಪಡೆದು, ನಿಷ್ಕಂಟಕವಾದ ರಾಜ್ಯವನ್ನನು ಭವಿಸಿ, ಮರಣಾನಂತರದಲ್ಲಿ ವಿಷ್ಣುಲೋಕಕ್ಕೆ ಹೋಗಿ ಅಲ್ಲಿ ಪ್ರಳಯಪರ್ಯಂತರ ಸ್ಥಾಯಿಯಾದ ಒಂದು ಸ್ಥಾನವನ್ನು ಹೊಂದಿದನು.

೨೮. ಯುಧಿಷ್ಠಿರನು ಹೇಳುತ್ತಾನೆ—ಓ ಕೃಷ್ಣನೇ ! ಈ ತಾರಕದ್ವಾದಶೀ ವ್ರತವನ್ನು ಪುರುಷರು ಹೇಗೆ ಆಚರಿಸಬೇಕು ? ತಮ್ಮ ಪತಿಯ ಅನುಜ್ಞೆಯನ್ನು ಪಡೆದ ಹೆಂಗಸರು ಯಾವ ಕ್ರಮದಿಂದ ಆಚರಿಸಬೇಕು ? ಈ ದ್ವಾದಶಿಯಲ್ಲಿ ಸ್ನಾನ, ದಾನ, ಮಂತ್ರ, ಜಪಾದ್ಯಾಚರಣದ ನಿಯಮಗಳನ್ನೂ ಹೇಳು.

೨೯. ಶ್ರೀ ಕೃಷ್ಣನು ಹೇಳುತ್ತಾನೆ—ಮಾರ್ಗಶೀರ್ಷಮಾಸದ ಶುಕ್ಲಪಕ್ಷದಲ್ಲಿ ದ್ವಾದಶೀ ವ್ರತವನ್ನು ಪರಿಗ್ರಹಿಸಿ, ಆ ದ್ವಾದಶಿಯ ಅಪರಾಹ್ಣ ವೇಳೆಯಲ್ಲಿ ಅಕೃತ್ರಿಮವಾದ ನದ್ಯಾದಿ ಜಲದಲ್ಲಿ ಸ್ನಾನವನ್ನು ಆಚರಿಸಬೇಕು.

೩೦. ಅನಂತರ ಸೂರ್ಯನಮಸ್ಕಾರಮಾಡಿ ಹಾಗೆಯೇ ದೇವತಾರ್ಚನೆಯನ್ನು ಪೂರೈಸಿ, ಹೋಮವನ್ನು ಮಾಡಿ ಸೂರ್ಯಾಸ್ತಮಯವಾಗುವವರೆಗೆ ನಿರೀಕ್ಷಿಸುತ್ತಿರಬೇಕು.

ತತೋ ಭುಕ್ತ್ವಾ ಫಲೈಃ ಪುಷ್ಪೈರ್ಗಂಧಧೂಪವಿಲೇಪನೈಃ ।
ಸಜಲಂ ಸಾಕ್ಷತಂ ಕೃತ್ವಾ ಸಹಿರಣ್ಯಂ ಶುಭೈಃ ಫಲೈಃ ॥ ೩೦ ॥

ರಮ್ಯೇ ತಾಮ್ರಮಯೇ ಪಾತ್ರೇ ಜಾನುಭ್ಯಾಂ ಧರಣೀಂ ಗತಃ ।
ಪೂರ್ವಾಮುಖಃ ಪ್ರದೋಷಾಗ್ರೇ ಮೂರ್ಧ್ನಿ ಕೃತ್ವಾರ್ಘ್ಯಭಾಜನಂ ॥

ಭೂಮೌ ತು ಮಂಡಲಂ ಕೃತ್ವಾ ಗೋಮಯೇನ ಸತಾರಕಂ ।
ಚಂದನೇನ ಸಮಾಲಿಖ್ಯ ಧ್ರುವಂ ಹಿ ಗಗನೋನ್ಮುಖಃ ॥ ೩೩ ॥

ಸಹಸ್ರಶೀರ್ಷಾಮಂತ್ರೇಣ ಭೂಮೌ ಶಕ್ತ್ಯಾ ಶನೈಃ ಸ್ವಯಂ ।
ತಾರಕಾಣಾಂ ಕುರುಶ್ರೇಷ್ಠ ದದ್ಯಾದರ್ಘ್ಯಮತಂದ್ರಿತಃ ॥ ೩೪ ॥

ಪರ್ಯುಕ್ಷ್ಯ ಧೂಮಮುತ್ಕ್ಷಿಪ್ಯ ದದ್ಯಾದ್ವಿಪ್ರಾಯ ದಕ್ಷಿಣಾಂ ।
ಕಮೇಣ ಸರ್ವಂ ನಿರ್ವರ್ತ್ಯ ಭೋಜ್ಯಂಭೋಜ್ಯಂ ನಿಶಾಗಮೆ ॥ ೩೫ ॥

---

೩೧–೩೨. ಆದಿನ ರಾತ್ರಿಯಲ್ಲಿ ಭೋಜನ ಮಾಡಬೇಕು. ಭೋಜನಕ್ಕೆ ಮುಂಚೆ ಫಲ, ಪುಷ್ಪ, ಗಂಧ, ಧೂಪ, ವಿಲೇಪನ ಇತ್ಯಾದಿಗಳಿಂದ ತಾರಕೆಗಳಿಗೆ ಪೂಜೆ ಮಾಡಬೇಕು. ಮತ್ತು ಸುಂದರವಾದ ತಾಮ್ರಪಾತ್ರೆಯಲ್ಲಿ ನೀರು, ಅಕ್ಷತೆ, ಹಿರಣ್ಯ, ಶುಭಫಲ ಇವುಗಳನ್ನಿಟ್ಟು ಆ ಪ್ರದೋಷಕಾಲದಲ್ಲಿ ಪೂರ್ವದಿಕ್ಕಿಗೆ ಇದಿರಾಗಿ ಮೊಣಕಾಲುಗಳನ್ನು ನೆಲದ ಮೇಲೆ ಊರಿನಿಂತು ಆ ತಾಮ್ರದ ಅರ್ಘ್ಯ ಪಾತ್ರೆಯನ್ನು ಶಿರಸ್ಸಿನಲ್ಲಿ ಇರಿಸಿಕೊಳ್ಳಬೇಕು.

೩೩. ಈ ಮುಂಚೆ ಭೂಮಿಯನ್ನು ಗೋಮಯದಿಂದ ಸಾರಿಸಿ ಮಂಡಲ ಮಾಡಿ ಆ ಶುದ್ಧವಾದ ಸ್ಥಳದಲ್ಲಿ ಚಂದನದಿಂದ ತಾರಕೆಗಳನ್ನು ಧ್ರುವನಕ್ಷತ್ರ ಸಹಿತವಾಗಿ ಬರೆದು ಅಂತರಿಕ್ಷಕ್ಕೆ ಉನ್ಮುಖನಾಗಿ ನೋಡುತ್ತಿರಬೇಕು.

೩೪. ಅಯ್ಯಾ ಕುರುಶ್ರೇಷ್ಠನೇ! ಅನಂತರ ಆ ಅರ್ಘ್ಯ ಪಾತ್ರೆಯನ್ನು ಮೆಲ್ಲನೆ ಭೂಮಿಯಮೇಲಿಟ್ಟು ಆಲಸ್ಯಾದಿ ದೋಷರಹಿತನಾಗಿ ಪುರುಷಸೂಕ್ತದ ಸಹಸ್ರ ಶೀರ್ಷಾ ಇತ್ಯಾದಿ ಮಂತ್ರದಿಂದ ನಕ್ಷತ್ರ ದೇವತೆಗಳಿಗೆ ಅರ್ಘ್ಯಪ್ರದಾನ ಮಾಡಬೇಕು.

೩೫. ಅನಂತರ ಜಲದಿಂದ ಪರ್ಯುಕ್ಷಣಮಾಡಿ, ಧೂಪದೀಪಾದಿಗಳಿಂದ ಅರ್ಚಿಸಿ, ಬ್ರಾಹ್ಮಣರಿಗೆ ದಕ್ಷಿಣೆ ಕೊಡಬೇಕು. ಈ ಕ್ರಮದಲ್ಲಿ ಎಲ್ಲವನ್ನೂ ಮಾಡಿದ ಮೇಲೆ ರಾತ್ರಿ ಭೋಜನ ಮಾಡಬೇಕು.

ಮಾರ್ಗಶೀರ್ಷೇ ಖಂಡಖಾದ್ಯಂ ಪೌಷೇ ಸೋಹಾಲಕಂ ತಥಾ ।
ತಿಲತಂಡುಲಕಂ ಮಾಘೇ ಗುಡಾಪೂಪಂ ಚ ಫಾಲ್ಗುನೇ ॥ ೩೬ ॥

ಮೋದಕಾಂಶ್ಚೈತ್ರಮಾಸೇ ತು ವೈಶಾಖೇ ಖಂಡವೇಷ್ಟಕಂ ।
ಜ್ಯೇಷ್ಠೇ ಸಕ್ತುಭೃತೈಃ ಪಾತ್ರೈರಾಷಾಢೇ ಗುಡಪೂರಿಕೈಃ ॥ ೩೭ ॥

ಶ್ರಾವಣೇ ಮಧುಶೀರ್ಷೇಣ ನಭಸ್ಯೇ ಪಾಯಸೇನ ಚ ।
ಘೃತಪರ್ಣೈರಶ್ವಯುಜೇ ಕಾಂಸಾರೈಃ ಕಾರ್ತಿಕೇ ಕ್ರಮಾತ್॥ ೩೮ ॥

ಏಭಿರ್ದ್ವಾದಶಭಿರ್ವರ್ಷೈರ್ಭೋಜಯಿತ್ವಾ ದ್ವಿಜಾನ್ಸ್ವಯಂ ।
ಭುಂಜೀತ ಭಕ್ತ್ಯಾ ರಾಜೇಂದ್ರ ಪಶ್ಚಾದ್ದೇವಂ ಕ್ಷಮಾಪಯೇತ್॥೩೯॥

---

೩೬. ಮಾರ್ಗಶೀರ್ಷಮಾಸದಲ್ಲಿ ಖಂಡಖಾದ್ಯವೆಂಬ ಭಕ್ಷ್ಯವನ್ನೂ ಪುಷ್ಯ ಮಾಸದಲ್ಲಿ ಸೋಹಾಲಕವೆಂಬ ಭಕ್ಷ್ಯವನ್ನೂ, ಮಾಘಮಾಸದಲ್ಲಿ ತಿಲತಂಡುಲಕ ವೆಂಬ ಭಕ್ಷ್ಯವನ್ನೂ, ಫಾಲ್ಗುನಮಾಸದಲ್ಲಿ ಗುಡದಿಂದ ಮಾಡಿದ ಅಪೂಪ ಭಕ್ಷ್ಯವನ್ನೂ, ಮಾಡಿಸಬೇಕು.

೩೭. ಚೈತ್ರಮಾಸದಲ್ಲಿ ಮೋದಕಗಳನ್ನೂ, ವೈಶಾಖಮಾಸದಲ್ಲಿ ಕರಿಗಡುಬನ್ನೂ, ಜ್ಯೇಷ್ಠಮಾಸದಲ್ಲಿ ಹಿಟ್ಟಿನಿಂದ ಗಾರಿಗೆ ಎಂಬ ಭಕ್ಷ್ಯ ವಿಶೇಷ ವನ್ನೂ, ಮಾಡಿ ಪಾತ್ರೆಯಲ್ಲಿ ತುಂಬಿಸಬೇಕು. ಆಷಾಢ ಮಾಸದಲ್ಲಿ ಬೆಲ್ಲದಿಂದ ಮಿಶ್ರಿತವಾದ ಪೂರಿಯನ್ನು ಮಾಡಿಸಬೇಕು.

೩೮. ಶ್ರಾವಣಮಾಸದಲ್ಲಿ ಮಧುಶೀರ್ಷವೆಂಬ ಭಕ್ಷ್ಯವನ್ನೂ, ಭಾದ್ರಪದ ಮಾಸದಲ್ಲಿ ಪಾಯಸವನ್ನೂ, ಆಶ್ವಯುಜ ಮಾಸದಲ್ಲಿ ಘೃತಪರ್ಣವೆಂಬ ಭಕ್ಷ್ಯ ವಿಶೇಷವನ್ನೂ, ಕಾರ್ತೀಕಮಾಸದಲ್ಲಿ ಕಾಂಸಾರವೆಂಬ ಭಕ್ಷ್ಯವನ್ನೂ, ಈರೀತಿ ಪ್ರತಿಮಾಸದಲ್ಲೂ ಕ್ರಮವಾಗಿ ಹಿಂದೆ ಹೇಳಿದ ಭಕ್ಷ್ಯಗಳನ್ನು ಮಾಡಿಸಬೇಕು.

೩೯. ಅಯ್ಯಾ ರಾಜೇಂದ್ರನೇ ! ಮಾರ್ಗಶೀರ್ಷದಿಂದ ಆರಂಭಿಸಿ ಕ್ರಮ ವಾಗಿ ಒಂದು ವರ್ಷದವರೆಗೆ ಆಯಾ ತಿಂಗಳಿನಲ್ಲಿ ಈ ಹಿಂದೆ ಹೇಳಿದ ಕ್ರಮದಲ್ಲಿ ತಿಂಗಳಿಗೆ ಒಂದೊಂದು ಬಗೆಯಂತೆ ಭಕ್ಷ್ಯಗಳನ್ನು ಮಾಡಿಸಿ, ಅವುಗಳಿಂದಲೇ ಬ್ರಾಹ್ಮಣರಿಗೆ ಭೋಜನವನ್ನೂ ಮಾಡಿಸಿ, ಅನಂತರ ತಾನೂ ಭೋಜನ ಮಾಡ ಬೇಕು. ಆ ಮೇಲೆ ದೇವರಲ್ಲಿ ಕ್ಷಮಾಪ್ರಾರ್ಥನೆಯನ್ನು ಮಾಡಬೇಕು.

ಸಮಾಪ್ತೇ ತು ವ್ರತೇ ಕೃತ್ವಾ ರಾಜತಂ ತಾರಕಾಗಣಂ ।
ದೃಷ್ಟ್ವಾ ವಾ ಪೂರ್ವವಿಧಿನಾ ಪೂಜಯಿತ್ವಾ ಕ್ಷಮಾಪಯೇತ್ ॥ ೪೦ ॥

ಕುಂಭಾ ದ್ವಾದಶ ದಾತವ್ಯಾಃ ಸೋದಕಾ ಮೋದಕಾಶ್ರಿತಾಃ ।
ಬ್ರಾಹ್ಮಣ್ಯಾಂ ಪರಿಧಾನಂ ಚ ಪದ್ಮರಾಗಃ ಸಕಂಚುಕಃ ॥ ೪೧ ॥

ಬ್ರಾಹ್ಮಣೇ ವಲ್ಗುಲಲ್ಲಾಟಂ ಲಕ್ಷಪುಷ್ಪೋಪಶೋಭಿತಂ ।
ರಾಜತೇನೋಪವೀತಂ ಚ ಪುಷ್ಪಂ ದತ್ವಾ ಕ್ಷಮಾಪಯೇತ್ ॥ ೪೨ ॥

ಅನೇನ ವಿಧಿನಾ ರಾಜನ್‌ಯಃ ಕರೋತಿ ವ್ರತಂ ನರಃ ।
ನಾರೀವಾ ಭರತಶ್ರೇಷ್ಠ ಭಕ್ತಿಭಾವಪುರಸ್ಸರಾ ॥ ೪೩ ॥

ನಕ್ಷತ್ರಲೋಕಂ ವ್ರಜತಿ ವಿಮಾನೇನಾರ್ಕವರ್ಚಸಾ ।
ಅಪ್ಸರೋಗಣಗಂಧರ್ವಯಕ್ಷವಿದ್ಯಾಧರಾಮರೈಃ ॥ ೪೪ ॥

---

೪೦. ಈ ರೀತಿ ಒಂದು ವರ್ಷಕಾಲ ಆಚರಿಸುತ್ತಾ ಈ ವ್ರತ ಸಮಾಪ್ತಿ ಕಾಲದಲ್ಲಿ ಬೆಳ್ಳಿಯಿಂದ ನಕ್ಷತ್ರಗಣಗಳನ್ನು ಮಾಡಿಸಬೇಕು. ಅಥವಾ ಪ್ರತ್ಯಕ್ಷ ವಾದ ನಕ್ಷತ್ರ ಸಮೂಹಗಳನ್ನು ದರ್ಶನಮಾಡಿ ಪೂರ್ವೋಕ್ತಕ್ರಮದಲ್ಲಿಯೇ ಪೂಜೆಮಾಡಿ ದೇವತಾ ಪ್ರಾರ್ಥನೆಯನ್ನು ಮಾಡಬೇಕು.

೪೧. ನೀರು ತುಂಬಿದ ಹನ್ನೆರಡು ಉದಕುಂಭಗಳನ್ನು ಮೋದಕ ಭಕ್ಷ್ಯಸಹಿತವಾಗಿ ದಾನಮಾಡಬೇಕು. ಬ್ರಾಹ್ಮಣರ ಸುವಾಸಿನಿಯರಿಗೆ ಸೀರೆ, ಕುಪ್ಪಸ, ಪದ್ಮರಾಗ ಇವುಗಳನ್ನೂ ಕೊಟ್ಟು ಪೂಜಿಸಬೇಕು.

೪೨. ಬ್ರಾಹ್ಮಣರಿಗೆ ಗಂಧ ಪುಷ್ಪಾದಿಗಳನ್ನು ಕೊಟ್ಟು ಪೂಜೆಮಾಡಿ ಪುಷ್ಪಗಳಿಂದ ಅಲಂಕೃತವಾದ ಆ ತಾರಕೆಗಳ ಪ್ರತಿಮೆಗಳನ್ನೂ ಬೆಳ್ಳಿಯ ಉಪವೀತವನ್ನೂ ಬಳಿಕ ಅವರಿಗೆ ದಾನಮಾಡಬೇಕು.

೪೩–೪೪. ಅಯ್ಯಾ ರಾಜನೇ ! ಈ ಕ್ರಮವಾಗಿ ಯಾವ ಪುರುಷನು ಈ ವ್ರತವನ್ನು ಆಚರಿಸುವನೋ, ಅಥವಾ ಭಕ್ತಿಯುತವಾದ ಮನಸ್ಸುಳ್ಳವಳಾಗಿ ಯಾವ ಹೆಂಗಸು ಇದನ್ನಾಚರಿಸುವಳೋ ಅವರೆಲ್ಲರೂ ಸೂರ್ಯನಂತೆ ಪ್ರಕಾಶಮಾನ ವಾದ ಉತ್ತಮ ವಿಮಾನಾರೂಢರಾಗಿ ಅಪ್ಸರಸರು, ಗಂಧರ್ವರು, ಯಕ್ಷರು ವಿದ್ಯಾ ಧರರು, ದೇವತೆಗಳು ಇವರಿಂದ ಸೇವಿತರಾಗಿ ನಕ್ಷತ್ರಲೋಕಕ್ಕೆ ಹೋಗುವರು.

ಸಹಸ್ವಭರ್ತ್ರಾ ಸ್ವರ್ಲೋಕೇ ಪೂಜ್ಯಮಾನಾ ದಿವಾಕರ್ರೈಃ ।
ವಸೇತ್ಕಲ್ಪಾಯುತಂ ಯಾವತ್ಪನರ್ವಿಷ್ಣುಪುರಂ ವ್ರಜೇತ್ || ೪೫ ||

ಏತದ್ವ್ರತಂ ಪುರಾ ಚೀರ್ಣಂ ಶಚ್ಯಾ ರಾಜ್ಞ್ಯಾ ಶ್ರಿಯೋಮಯಾ ।
ಸೀತಯಾ ದಮಯಂತ್ಯಾ ಚ ರುಕ್ಮಿಣ್ಯಾ ಸತ್ಯಭಾಮಯಾ || ೪೬ ||

ಮೇನಯಾ ರಂಭಯಾ ಸ್ವರ್ಗೇ ಉರ್ವಶ್ಯಾ ದೇವದತ್ತಯಾ ।
ಅನ್ಯಾಭಿರಪಿ ನಾರೀಭಿಃ ಪುರುಷೈಶ್ಚ ಪೃಥಗ್ವಿಧೈಃ || ೪೭ ||

ಚೀರ್ಣಮೇತದ್ವ್ರತಂ ಪಾರ್ಥ ಸರ್ವಪಾಪಭಯಾಪಹಂ || ೪೮ ||

ಜನ್ಮಾಂತರೇಷ್ವಪಿ ಕೃತಾನಿ ಚರತ್ಯಘಾನಿ ।
ಯಾ ಸಂದಹತ್ಯಹರಹಃ ಸುಕೃತೋಪಯೋಗಾತ್ ।

---

೪೫. ಮತ್ತು ಈ ವ್ರತವನ್ನಾಚರಿಸಿದ ಹೆಂಗಸು ತನ್ನ ಪತಿಸಮೇತಳಾಗಿ ಸ್ವರ್ಗಕ್ಕೆ ಹೋಗಿ ದೇವತೆಗಳಿಂದ ಪೂಜಿಸಲ್ಪಡುವವಳಾಗಿ ಹತ್ತುಸಾವಿರ ಕಲ್ಪಗಳ ವರೆಗೆ ಅಲ್ಲಿ ವಾಸಮಾಡಿ ಅಲ್ಲಿಂದ ವಿಷ್ಣುಲೋಕಕ್ಕೆ ಹೋಗುವಳು.

೪೬. ಪೂರ್ವದಲ್ಲಿ ಈ ತಾರಕದ್ವಾದಶೀ ವ್ರತವನ್ನು ಇಂದ್ರನ ರಾಣಿಯಾದ ಶಚೀದೇವಿಯೂ, ಶ್ರೀ ಲಕ್ಷ್ಮೀದೇವಿಯೂ, ಪಾರ್ವತಿಯೂ, ಸೀತಾದೇವಿಯೂ, ದಮಯಂತಿಯೂ, ರುಕ್ಮಿಣಿಯೂ, ಸತ್ಯಭಾಮೆಯೂ ಸಹ ಆಚರಿಸಿರುತ್ತಾರೆ.

೪೭. ಮತ್ತು ಸ್ವರ್ಗಲೋಕವಾಸಿಗಳಾದ ಮೇನಕೆ, ರಂಭೆ, ಊರ್ವಶಿ, ದೇವದತ್ತೆ ಮೊದಲಾದ ಇತರ ಸ್ತ್ರೀಯರೂ ಇನ್ನೂ ಅನೇಕ ಪುರುಷರೂ ಇದನ್ನು ಆಚರಿಸಿರುತ್ತಾರೆ.

೪೮. ಅಯ್ಯಾ ಧರ್ಮಜನೇ ! ಎಲ್ಲಾ ತರಹವಾದ ಪಾಪಭೀತಿಯನ್ನೂ ನಿವೃತ್ತಿಮಾಡುವ ಈ ತಾರಕದ್ವಾದಶೀ ವ್ರತವನ್ನು ಈ ರೀತಿ ಗಂಡಸರೂ ಹೆಂಗಸರೂ ಸಹ ಆಚರಿಸಿರುತ್ತಾರೆ.

೪೯. ಲೋಕದಲ್ಲಿ ತಾರಕವೆಂಬ ನಾಮಧೇಯದಿಂದ ಪ್ರಸಿದ್ಧಿಗೆ ಬಂದಿರುವ ಈ ತಾರಕದ್ವಾದಶೀ ವ್ರತವು ಪುರುಷನ ಜನ್ಮಾಂತರ ಕೃತಪಾಪ

ಸಾ ದ್ವಾದಶೀ ಜಗತಿ ತಾರಕನಾಮಧೇಯಾ ।
ತನ್ನಾಸ್ತಿ ಯನ್ನ ವಿದಧಾತಿ ಕೃತಾ ಮನುಷ್ಯೈಃ ॥ ೪೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರಸಂವಾದೇ ತಾರಕದ್ವಾದಶೀವ್ರತಂ
ನಾಮ ಪಂಚಷಷ್ಟಿತಮೋಽಧ್ಯಾಯಃ.



---

ಪಾಪಗಳನ್ನು ನಾಶಮಾಡುವುದು. ಈ ಜನ್ಮದಲ್ಲಿ ಪ್ರತಿದಿನವೂ ಗಳಿಸುವ ಪಾಪಗಳನ್ನೂ ಭಸ್ಮಮಾಡುತ್ತದೆ. ಮತ್ತು ಈ ವ್ರತಾನುಷ್ಠಾತೃವಿಗೆ ಸುಕೃತವನ್ನು ಹೆಚ್ಚಿಸುವುದು. ಒಟ್ಟಿನಲ್ಲಿ ಈ ವ್ರತವನ್ನಾಚರಿಸಿದ ಪುರುಷರಿಗೆ ಇದರಿಂದ ಲಭಿಸದೆ ಇರುವ ಫಲಗಳೇ ಇಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ತಾರಕದ್ವಾದಶೀ ವ್ರತವರ್ಣನೆ ಎಂಬ ಅರವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಷಟ್‌ಷಷ್ಟಿತಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಭಗವನ್ಬ್ರೂಹಿ ಮೇ ಸಮ್ಯಗರಣ್ಯದ್ವಾದಶೀವ್ರತಂ ।
ಸಪ್ರಾಶನಂ ಸೋಪವಾಸಂ ಸರಹಸ್ಯಂ ಸಮಂತ್ರಕಂ ॥ ೧ ॥

॥ ಶ್ರೀ ಕೃಷ್ಣ ಉವಾಚ ॥

ಕೌಂತೇಯ ಯತ್ಪುರಾ ಚೀರ್ಣಂ ಸೀತಯಾ ವನಸಂಸ್ಥಯಾ ।
ವ್ರತಂ ರಾಘವವಾಕ್ಯೇನ ಪ್ರಶಸ್ತಂ ದೋಷವರ್ಜಿತಂ

ಲೋಪಾಮುದ್ರಾಲಯೇ ಸಾಧ್ವ್ಯೋ ಮುನಿಪತ್ನ್ಯೋ ಬಹುಪ್ರ
ಭೋಜಿತಾಸ್ತರ್ಪಿತಾಃ ಸರ್ವೈರಾಹಾರೈಃ ಸರ್ವಕಾಮಿಕೈಃ

---

### ಅರವತ್ತಾರನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—“ ಎಲೈ ಭಗವಂತನೇ ! ಪ್ರಾಶ
ಉಪವಾಸಕ್ರಮ, ರಹಸ್ಯಮಂತ್ರ ಇವುಗಳ ಸಹಿತವಾಗಿ ಅರಣ್ಯದ್ವಾದಶಿ
ವನ್ನು ವಿವರವಾಗಿ ನನಗೆ ಉಪದೇಶಿಸು ” ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಕುಂತೀಪುತ್ರನೇ ! 
ದಲ್ಲಿ ಸೀತಾದೇವಿಯು ಕಾಡಿನಲ್ಲಿ ವಾಸಿಸುತ್ತಿದ್ದಾಗ ದೋಷವರ್ಜಿತವಾಗಿ
ಪ್ರಶಸ್ತವಾಗಿಯೂ ಇರುವ ಈ ವ್ರತವನ್ನು ಗಂಡನಾದ ಶ್ರೀ ರಾಮನ ಮಾ
ಆಚರಿಸಿದಳು.

೩. ಆ ಸೀತಾದೇವಿಯು ಪತಿವ್ರತೆಯರಾಗಿಯೂ, ಬಹು ಸಂತತಿಯ
ರಾಗಿಯೂ ಇರುವ ಋಷಿಪತ್ನಿಯರಿಗೆ ಅಗಸ್ತ್ಯ ಪತ್ನಿಯಾದ ಲೋಪಾಮು

ಪದ್ಮಿನೀಪತ್ರವಿಸ್ತೀರ್ಣೇ ಸೋಪದಂಶೈರ್ಯಥಾ ನವೈಃ ।
ಭಕ್ಷ್ಯೈರ್ಭೋಜ್ಯೈಸ್ತಥಾ ಲೇಹ್ಯೈಶ್ಚೋಷ್ಯೈಶ್ಚಾಪಿ ಯದೃಚ್ಛಯಾ ॥

ತಾಮಿಹೈಕಮನಾಃ ಪಾರ್ಥ ಶೃಣುಷ್ವಾರಣ್ಯದ್ವಾದಶೀಂ ।
ಮಾರ್ಗಶೀರ್ಷೇ ಸಿತೇ ಪಕ್ಷೇ ಏಕಾದಶ್ಯಾಂ ದಿನೋದಯೇ ॥ ೫ ॥

ಸ್ನಾತ್ವಾ ನರಃ ಸೋಪವಾಸಃ ಕೃತ್ವಾ ಪೂಜಾಂ ಜನಾರ್ದನೇ ।
ಗಂಧಪುಷ್ಪಾಕ್ಷತೈರ್ಧೂಪೈರ್ದೀಪೈರ್ಜಾಗರಣೈರ್ನಿಶಾಂ ॥ ೬ ॥

ನೀತ್ವಾ ಪ್ರಭಾತೇ ಗತ್ವಾ ಚ ವನೇ ವೇದಾಂಗಪಾರಗಾನ್ ।
ಭೋಜಯಿತ್ವಾ ಫಲಪ್ರಾಯಂ ಸ್ವಯಂ ಭುಂಜೀತ ವಾಗ್ಯತಃ ॥ ೭ ॥

---

ಮನೆಯಲ್ಲಿ ಸರ್ವಾಭಿಲಷಿತವಾದ ಎಲ್ಲಾ ತರಹದ ತಿಂಡಿಯ ಪದಾರ್ಥಗಳನ್ನೂ ಮಾಡಿಸಿ ಬಡಿಸಿ ಭೋಜನಮಾಡಿಸಿ ಸಂತೋಷಪಡಿಸಿದಳು.

೪. ಆಗ ಭೋಜನಾರ್ಥವಾಗಿ ವಿಶಾಲವಾದ ಕಮಲಪತ್ರಗಳನ್ನು ಹಾಸಿ ಅವರಲ್ಲಿ ಚಟ್ನಿ, ಉಪ್ಪಿನಕಾಯಿ ಮೊದಲಾದ ವ್ಯಂಜನಗಳನ್ನೂ ಭಕ್ಷ್ಯ, ಭೋಜ್ಯ, ಲೇಹ್ಯ (ಅದರ ರಸಾಸ್ವಾದನೆಮಾಡಿ ನುಂಗಬೇಕಾದ ದ್ರವೀಭೂತವಾದ ಹಣ್ಣಿನ ರಸಾಯನ ಮೊದಲಾದದ್ದು). ಚೋಷ್ಯ (ಹಲ್ಲುಗಳಿಂದ ಅಗಿದು ರಸವನ್ನು ನುಂಗಿ ಶಿಪ್ಪೆ ಉಗುಳುವ ಕಬ್ಬಿನ ತುಂಡು) ಇವೇ ಮೊದಲಾದ ನಾಲ್ಕುವಿಧ ಆಹಾರವಸ್ತುಗಳನ್ನೂ ಹೊಸದಾಗಿ ತಯಾರಿಸಿ ಬಡಿಸಿ ಆ ಋಷಿಪತ್ನಿಯರನ್ನು ತೃಪ್ತಿಪಡಿಸಿದಳು.

೫-೭. ಅಯ್ಯಾ ಧರ್ಮಜನೇ ! ಪೂರ್ವದಲ್ಲಿ ಸೀತೆಯು ಆಚರಿಸಿದ ಅಂತಹ ಅರಣ್ಯದ್ವಾದಶೀ ವ್ರತವನ್ನು ಚಿತ್ತೈಕಾಗ್ರತೆಯಿಂದ ಶ್ರವಣಮಾಡು. ಮಾರ್ಗಶೀರ್ಷಮಾಸದ ಶುದ್ಧ ಏಕಾದಶೀದಿನ ಸೂರ್ಯೋದಯವಾದ ಮೇಲೆ ಪುರುಷನು ಸ್ನಾನಮಾಡಿ ಉಪವಾಸವ್ರತವನ್ನು ಪರಿಗ್ರಹಿಸಿ ಗಂಧ, ಪುಷ್ಪ, ಅಕ್ಷತೆ, ಧೂಪ, ದೀಪ, ಇತ್ಯಾದಿಗಳಿಂದ ಶ್ರೀ ಜನಾರ್ದನನ್ನು ಪೂಜೆಮಾಡಿ ಆ ದಿನದ ರಾತ್ರಿಯನ್ನು ಜಾಗರಣದಿಂದ ಕಳೆದು ಮರುದಿನ ಬೆಳಗಾದ ಮೇಲೆ ಅರಣ್ಯಕ್ಕೆ ಹೋಗಿ ಅಲ್ಲಿ ವೇದವೇದಾಂಗಪಾರಂಗತರಾದ ಬ್ರಾಹ್ಮಣರಿಗೆ ಫಲಗಳನ್ನು ಹೆಚ್ಚಾಗಿ ಬಡಿಸಿ ಭೋಜನಮಾಡಿಸಿ ಅನಂತರ ತಾನೂ ಮೌನವಾಗಿ ಭುಂಜಿಸಬೇಕು.

**ಪಂಚಗವ್ಯಂ ಪ್ರಾಶಯಿತ್ವಾ ಪೂರ್ವಮೇವಾಥ ತದ್ದಿನೇ ।**
**ವರ್ಷಮೇಕಂ ಶುಭಂ ಪೂರ್ಣಂ ಪಾರಯಿತ್ವಾ ಯುಧಿಷ್ಠಿರ ॥ ೮ ॥**

**ಶ್ರಾವಣೇ ಕಾರ್ತಿಕೇ ಮಾಘೇ ಚೈತ್ರೇ ವಾಥ ಸಮರ್ಚಿತೇ ।**
**ಸೋಪದಂಶೈಃ ಪತ್ರಶಾಕೈಸ್ತಿಲಶಷ್ಕುಲಿಕಾದಿಭಿಃ ॥ ೯ ॥**

**ಅಪೂಪೈಃ ಖಂಡವೇಷ್ಟೈಶ್ಚ ಮರೀಚೈಃ ಸಿಂಹಕೇಸರೈಃ ।**
**ಧೂಲೀಮುಖೈರಮೃತಫಲೈಃ ಸ್ವಾದುಕೋಕರಸೈಃ ಶುಭೈಃ ॥ ೧೦ ॥**

**ಶೀತಲೈಸ್ತರ್ಪಯೇದ್ವಿದ್ವಾನರ್ಕಪುಷ್ಪೈಃ ಸುಮಾಲಕೈಃ ।**
**ದಧಿಕ್ಷೀರಾಜ್ಯಪಾಣಿಜ್ಯೈಶ್ಚಾತುರ್ಜಾತಕರಂಜಿತೈಃ ॥ ೧೧ ॥**

**ಕರ್ಪೂರರಸಖವಿದ್ಧೈಶ್ಚ ಮಧುರೈಃ ಪನಸೋತ್ತಮೈಃ ।**
**ಬಹುವೃಕ್ಷಂ ವನಂ ಗತ್ವಾ ಸುಸ್ವಾದುಸಲಿಲಂ ಶಿವಂ ॥ ೧೨ ॥**

---

೮. ಅಯ್ಯಾ ಯುಧಿಷ್ಠಿರನೇ ! ಆ ದ್ವಾದಶೀದಿನ, ಮೊದಲು ಪಂಚಗವ್ಯ ಪ್ರಾಶನೆಮಾಡಬೇಕು. ಈರೀತಿ ಒಂದುವರ್ಷ ಪೂರ್ತಿ ಈ ಶುಭ ವ್ರತವನ್ನು ಆಚರಿಸಿ ದ್ವಾದಶೀದಿನ ಬ್ರಾಹ್ಮಣರಿಗೆ ಪಾರಣೆಮಾಡಿಸಿ ವ್ರತಸಮಾಪ್ತಿ ಮಾಡಬೇಕು.

೯. ಶ್ರಾವಣ, ಕಾರ್ತಿಕ, ಮಾಘ, ಚೈತ್ರ ಈ ತಿಂಗಳುಗಳಲ್ಲಿ ಶ್ರೀ ಜನಾರ್ದನಪೂಜಾದಿಗಳನ್ನು ಮಾಡಿ ಈ ವ್ರತವನ್ನು ಆಚರಿಸಬಹುದು. ವ್ಯಂಜನ ಮೊದಲಾದುವನ್ನೂ, ಶಾಕಭೋಜ್ಯಗಳನ್ನೂ, ಕುಸುರಿ ಎಳ್ಳನ್ನು, ಚಕ್ಕುಲಿ, ಇತ್ಯಾದಿ ಭಕ್ಷ್ಯಗಳನ್ನೂ ಭೋಜನಕ್ಕೆ ಸಿದ್ಧಮಾಡಬೇಕು.

೧೦-೧೨. ಅಪೂಪ, ಕರಿಗಡುಬು, ಮೆಣಸಿನಸಾರು, ಸೇವಿಗೆ ಇತ್ಯಾದಿ ಗಳಿಂದಲೂ, ಶೀತಲವೂ ರುಚಿಕರವೂ ಆಗಿರುವ ಫಲಗಳು, ಮೊಸರು, ಹಾಲು, ತುಪ್ಪ ಇತ್ಯಾದಿಗಳಿಂದಲೂ, ಪಚ್ಚೆಕರ್ಪೂರಾದಿಗಳನ್ನು ಸೇರಿಸಿ ಸುವಾಸನಾ ಯುಕ್ತವಾಗಿಯೂ, ಮಧುರವಾಗಿಯೂ ಇರುವ ಹಲಸಿನಹಣ್ಣು ಇತ್ಯಾದಿ ಗಳಿಂದಲೂ ಬ್ರಾಹ್ಮಣರನ್ನು ತೃಪ್ತಿಪಡಿಸಬೇಕು. ಬಹುವೃಕ್ಷಯುಕ್ತವಾಗಿಯೂ ಸಿಹಿಯಾದ ಸ್ವಚ್ಛ ಜಲಸರಸ್ಸುಳ್ಳದ್ದಾಗಿಯೂ ಇರುವ ವನಕ್ಕೆ ಹೋಗಿ ಅಲ್ಲಿ ಈ ಬ್ರಾಹ್ಮಣಭೋಜನವನ್ನು ಮಾಡಿಸಬೇಕು.

ಸುಖಾಸನೋಪವಿಷ್ಟಾಂಶ್ಚ ಪ್ರಾಗುದಙ್ಮುಖವಚ್ಛುಚೀನ್ ।
ಭೋಜಯೇದ್ದಶ ಚ ದ್ವೌ ವಾ ಮುನೀನಾರಣ್ಯವಾಸಿನಃ ॥ ೧೩ ॥

ಏಕದಂಡೀಂಸ್ತ್ರಿದಂಡೀಂಶ್ಚ ಗೃಹಸ್ಥಾಂಶ್ಚಾಪಿ ಸುವ್ರತಾನ್ ।
ಬ್ರಾಹ್ಮಣೀರ್ವಿವಿಧಾಃ ಸಪ್ತ ಏಕಪತ್ನೀಃ ಪತಿವ್ರತಾಃ ॥ ೧೪ ॥

ಚಾರ್ವಂಗ್ಯಶ್ಚಾರ್ಚಿತಾಃ ಸ್ನಾತಾಃ ಸರ್ವಾವಯವಶೋಭನಾಃ ।
ಸುವಸ್ತ್ರಾಃ ಕುಂಕುಮಾಕ್ತಾಂಗಾಃ ಸುಗಂಧಕುಸುಮಾಂಚಿತಾಃ ॥ ೧೫ ॥

ಅಂಗೈರ್ವಾ ಭೋಜನೀಯಾಸ್ತಾಸ್ತಾಶ್ಚಾದಿತ್ಯಸ್ಯ ದೇವತಾಃ ।
ವಾಸುದೇವಜನಾರ್ದನದಾಮೋದರಮಧುಸೂದನಾಃ ॥ ೧೬ ॥

---

೧೩. ಆ ಅರಣ್ಯವಾಸಿಗಳಾದ ಮುನಿಜನಗಳು ಭೋಕ್ತೃಗಳಾಗಿರಬೇಕು. ಅಂತಹ ತಪೋನಿರತರು ದೊರೆತರೆ ಹತ್ತುಮಂದಿ, ಅಭಾವ ಪಕ್ಷದಲ್ಲಿ ಎರಡು ಮಂದಿ ಬ್ರಾಹ್ಮಣರನ್ನು ಪೂರ್ವಾಭಿಮುಖವಾಗಿಯೋ, ಉತ್ತರಾಭಿಮುಖ ವಾಗಿಯೋ ಸುಖಾಸನದಲ್ಲಿ ಕೂರಿಸಿ ಭೋಜನ ಮಾಡಿಸಬೇಕು.

೧೪. ಈ ವ್ರತದಲ್ಲಿ ಏಕದಂಡಿ ಸನ್ಯಾಸಿಗಳು, ತ್ರಿದಂಡಿ ಸನ್ಯಾಸಿಗಳು, ಸದಾಚಾರ ಸಂಪನ್ನರಾದ ಗೃಹಸ್ಥರು ಇಂಥವರಿಗೂ ಭೋಜನ ಮಾಡಿಸಬೇಕು. ಏಕಪತ್ನೀ ವ್ರತಸ್ಥರಾಗಿ ಇರುವ ಏಳು ಮಂದಿ ವಿಪ್ರರಿಗೂ ಪತಿವ್ರತೆಯರಾದ ಬ್ರಾಹ್ಮಣ ಸ್ತ್ರೀಯರಿಗೂ ಭೋಜನ ಮಾಡಿಸಬೇಕು.

೧೫. ಆ ಸ್ತ್ರೀಯರು ಅಂಗಹೀನರಾಗದೆ ಮನೋಹರವಾದ ಶರೀರ ವುಳ್ಳವರೂ, ಸರ್ವಾಂಗಸುಂದರಿಯರೂ, ಸ್ನಾನಮಾಡಿ ಅಂದವಾಗಿ ವಸ್ತ್ರಾಭರಣ ವನ್ನು ಧರಿಸಿದವರೂ, ಕುಂಕುಮಲಿಪ್ತ ಅವಯವಗಳುಳ್ಳವರೂ ಆಗಿರಬೇಕು. ಅವರನ್ನು ಕರೆದು ಸುಗಂಧ, ಒಳ್ಳೆಯ ಪುಷ್ಪಾದಿಗಳು ಇವುಗಳಿಂದ ಅಲಂಕರಿಸಿ ಪೂಜಿಸಬೇಕು.

೧೬-೧೮. ವಿಪ್ರರಿಗೆ ಪೂಜೆ ಮಾಡುವಾಗ ಪ್ರತಿಯೊಬ್ಬರಿಗೂ ಗಂಧ, ಚಂದನ, ಪುಷ್ಪ, ಧೂಪ, ದೀಪಗಳಿಂದ ಬೇರೆಬೇರೆ ಸತ್ಕರಿಸಿ ವಾಸುದೇವ, ಜನಾರ್ದನ, ದಾಮೋದರ, ಮಧುಸೂದನ, ಪದ್ಮನಾಭ, ಕೃಷ್ಣ, ವಿಷ್ಣು, ತ್ರಿವಿಕ್ರಮ, ಶ್ರೀಧರ, ಹೃಷೀಕೇಶ. ಪುಂಡರೀಕಾಕ್ಷ, ಆದಿವರಾಹ ಎಂಬ ಈ

ಪದ್ಮನಾಭಕೃಷ್ಣ ವಿಷ್ಣುಗೋವರ್ಧನತ್ರಿವಿಕ್ರಮಾಃ ।
ಶ್ರೀಧರಶ್ಚ ಹೃಷೀಕೇಶಃ ಪುಂಡರೀಕಾಕ್ಷ ಆದಿವಾರಾಹಾ ॥ ೧೭ ॥

ಏಭಿರ್ದ್ವಾದಶಭಿರ್ಮಂತ್ರೈಃ ನಮಸ್ಕಾರಾಂತಯೋಜಿತೈಃ ।
ಗಂಧಚಂದನಸಂವಸ್ತ್ರಂ ಧೂಪಂ ದತ್ವಾ ಪೃಥಕ್ಪೃಥಕ್ ॥ ೧೮ ॥

ಭೋಜಯಿತ್ವಾ ಶುಭಾನ್ನಾನಿ ದದ್ಯಾತ್ತಾಭ್ಯಃ ಸುದಕ್ಷಿಣಾಂ ।
ಪ್ರಣಮ್ಯ ಪ್ರಾರ್ಥಯೇದ್ಭಕ್ತ್ಯಾ ವಿಷ್ಣುರ್ಮೇ ಪ್ರೀಯತಾಮಿತಿ॥ ೧೯ ॥

ತತೋ ಭುಂಜೀತ ಸಹಿತೋ ಭೃತ್ಯೈಃ ಪ್ರೇಷ್ಯಜನೇನ ಚ ।
ಆಗತಾಭ್ಯಾಗತೈರ್ಲೋಕೈಃ ಸುಹೃತ್ಸಂಬಂಧಿಬಂದುಭಿಃ ॥ ೨೦ ॥

ಏವಂ ಕೌಂತೇಯ ಕುರುತೇ ಯೋಽರಣ್ಯದ್ವಾದಶೀಂ ನರಃ ।
ಸ ದೇಹಾಂತೇ ವಿಮಾನಸ್ಥೋ ದಿವ್ಯಕನ್ಯಾಸಮಾವೃತಃ ।
ಯಾತಿ ಜ್ಞಾತಿಸಮಾಯುಕ್ತಃ ಶ್ವೇತದ್ವೀಪಂ ಪರೇಃ ಪುರಂ ॥ ೨೧ ॥

---

ಹನ್ನೆರಡು ವಿಷ್ಣುನಾಮುಗಳನ್ನು ಪ್ರತಿಯೊಂದುನಾಮದ ಕೊನೆಯಲ್ಲೂ ' ನಮಃ ' ಪದವನ್ನು ಸೇರಿಸಿ ಪೂಜಿಸಬೇಕು. ಅಂದರೆ ಓಂ ವಾಸುದೇವಾಯ ನಮಃ ಈ ರೀತಿ ಹೇಳಿ ಅರ್ಚಿಸಬೇಕು.

೧೯. ಹಿಂದೆ ಹೇಳಿದ ಪ್ರಕಾರ ಸುವಾಸಿನಿಯರಿಗೆ ಭೋಜನ ಮಾಡಿಸಿದ ಮೇಲೆ ಅವರಿಗೆ ಸಮೃದ್ಧವಾದ ದಕ್ಷಿಣೆಯನ್ನು ಕೊಡಬೇಕು. ಅನಂತರ ಭಕ್ತಿಯಿಂದ ನಮಸ್ಕಾರಮಾಡಿ "ವಿಷ್ಣುರ್ಮೇ ಪ್ರೀಯತಾಂ" ಎಂದು ಹೇಳಿ ಪ್ರಾರ್ಥಿಸಬೇಕು.

೨೦. ಆ ಮೇಲೆ ಭೃತ್ಯರು, ಚಾರರು, ಆಹೂತರು, ಅನಾಹೂತರಾದ ಅತಿಥಿಗಳು, ಮಿತ್ರರು, ಸಂಬಂಧಿಗಳು, ಬಂಧುಗಳು ಇವರೊಡನೆ ತಾನೂ ಭೋಜನ ಮಾಡಬೇಕು.

೨೧. ಅಯ್ಯಾ ಕುಂತೀಪುತ್ರನೇ! ಈ ಕ್ರಮದಿಂದ ಅರಣ್ಯದ್ವಾದಶೀ ವ್ರತವನ್ನು ಯಾವ ಪುರುಷನು ಆಚರಿಸುವನೋ ಅವನು ತನ್ನ ದೇಹಾವಸಾನಾನಂತರ ಜ್ಞಾತಿಸಮೇತನಾಗಿ ವಿಮಾನವನ್ನೇರಿ ದೇವಕನ್ಯಾಪರಿವೃತನೂ ಶ್ರೀ ಮಹಾವಿಷ್ಣುವಿನ ಶ್ವೇತದ್ವೀಪಕ್ಕೆ ಹೋಗುತ್ತಾನೆ.

ಯತ್ರ ಲೋಕಾಃ ಪೀತವಸ್ತ್ರಾಃ ಶ್ಯಾಮದೇಹಾಶ್ಚತುರ್ಭುಜಾಃ ।
ಶಂಖಚಕ್ರಗದಾಪದ್ಮಚಾರುಹಸ್ತಾಃ ಸಕೌಸ್ತುಭಾಃ ॥ ೨೨ ॥

ಗರುಡಾಸನಾಃ ಸಾಭರಣಾ ಮುಕುಟೋತ್ಕಟಕುಂಡಲಾಃ ।
ನೀಲೋತ್ಪಲೋದ್ದಾಮಪದ್ಮಮಾಲಯಾಲಂಕೃತೋರಸಃ ॥ ೨೩ ॥

ಲಕ್ಷ್ಮೀಧರಾ ಮೇಘವರ್ಣಾಃ ಕರ್ಪೂರಾಂಗದಭೂಷಣಾಃ ।
ತಿಷ್ಠಂತಿ ವಿಷ್ಣುಸಾಮ್ಯೇ ಯಾವದಾಭೂತಸಂಪ್ಲವಂ ॥ ೨೪ ॥

ತಸ್ಮಾದೇತ್ಯ ಮಹಾತೇಜಾಃ ಪೃಥಿವ್ಯಾಂ ನೃಪಪೂಜಿತಾಃ ।
ಮರ್ತ್ಯಲೋಕೇ ಕೀರ್ತಿಮಂತಃ ಸಂಭವಂತಿ ನರೋತ್ತಮಾಃ ॥ ೨೫ ॥

---

೨೨. ಆ ಶ್ವೇತದ್ವೀಪ ನಿವಾಸಿಗಳಾದ ಪುರುಷರು ಪೀತಾಂಬರವನ್ನುಟ್ಟವರೂ, ಮೇಘದಂತೆ ಕಪ್ಪಾದ ಮೈಬಣ್ಣವುಳ್ಳವರೂ, ಚತುರ್ಭುಜರೂ, ಆ ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಗದಾ ಪದ್ಮಗಳನ್ನು ಧರಿಸಿದವರೂ, ಕೌಸ್ತುಭ ಮಣಿಸಹಿತರೂ ಆಗಿರುತ್ತಾರೆ.

೨೩. ಮತ್ತು ಅವರು ಗರುಡವಾಹನರೂ, ಕಿರೀಟ, ಕುಂಡಲ ಇತ್ಯಾದ್ಯಾಭರಣಸಹಿತರೂ, ಕನ್ನೈದಿಲೆ, ಪದ್ಮ ಇವುಗಳ ಮಾಲೆಯಿಂದ ಅಲಂಕೃತವಾದ ವಕ್ಷಸ್ಥಲವುಳ್ಳವರೂ ಆಗಿರುತ್ತಾರೆ.

೨೪. ಅಲ್ಲದೆ ಅವರು ಲಕ್ಷ್ಮೀಧರರೂ, ಮೇಘವರ್ಣವುಳ್ಳವರೂ, ಪಚ್ಚಕರ್ಪೂರ ಲಿಪ್ತಾವಯವಗಳುಳ್ಳವರೂ, ಅಂಗದವೆಂಬ ಆಭರಣ ಧರಿಸಿದವರೂ ಆಗಿ ವಿಷ್ಣು ಸದೃಶರೆನಿಸಿ ಮಹಾ ಪ್ರಳಯದವರೆಗೂ ಅಲ್ಲಿ ವಾಸಿಸುವರು.

೨೫. ಆ ಮೇಲೆ ಪುನಃ ಈ ಮನುಷ್ಯಲೋಕಕ್ಕೆ ಬಂದು ಮಹಾತೇಜಸ್ವಿಗಳೂ, ರಾಜಪೂಜಿತರೂ ಆದ ಉತ್ತಮೋತ್ತಮ ಪುರುಷರೆನ್ನಿಸಿಕೊಂಡು ಲೋಕವಿಖ್ಯಾತವಾದ ಕೀರ್ತಿಯುಳ್ಳವರಾಗುತ್ತಾರೆ.

**ತತೋ ಯಾಂತಿ ಪರಂ ಸ್ಥಾನಂ ಮೋಕ್ಷಮಾರ್ಗಂ ಶಿವಂ ಶುಭಂ ।**
**ಯತ್ರ ಗತ್ವಾ ನ ಶೋಚಂತಿ ನ ಸಂಸಾರೇ ಭ್ರಮಂತಿ ಚ ॥ ೨೬ ॥**

**ಯೇ ದ್ವಾದಶೀಮುಪವಸಂತಿ ಸಿತಾಮರಣ್ಯ ।**
**ನಾಮ್ನೀಂವನೇ ದ್ವಿಜವರಾನಥ ಭೋಜಯಂತಿ ।**
**ಸಾಧ್ವ್ಯಃ ಸ್ತ್ರಿಯಃ ಸುಚರಿತಾಭರಣಾಶ್ಚ ತಾಸಾಂ ।**
**ವಿಷ್ಣುಃ ಪ್ರಸಾದಮುಪಯಾತಿ ದದಾತಿ ಮೋಕ್ಷಂ ॥ ೨೭ ॥**

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ
ಶ್ರೀ ಕೃಷ್ಣಯುಧಿಷ್ಠಿರಸಂವಾದೇ ಅರಣ್ಯದ್ವಾದಶೀ
ವ್ರತಂ ನಾಮ ಷಟ್ ಷಷ್ಟಿತಮೋಽಧ್ಯಾಯಃ.



---

೨೬. ಅನಂತರ ಮೋಕ್ಷಮಾರ್ಗಾವಲಂಬಿಗಳಾಗಿ ಮಂಗಳಕರವೂ, ನಿರುಪದ್ರವವೂ ಆದ ಪರಮಪದವಿಯನ್ನು ಪಡೆಯುತ್ತಾರೆ. ಆ ಪದವಿಯನ್ನು ಪಡೆದವರು ಶೋಕರಹಿತರಾಗುತ್ತಾರೆ. ಜನನ ಮರಣ ರೂಪವಾದ ಈ ಸಂಸಾರ ಮಾರ್ಗದ ಪುನಃ ಸಂಚರಿಸುವುದಿಲ್ಲ. ಈ ವಿಷಯದಲ್ಲಿ "ತತ್ರ ಕೋಮೋಹಃ ಕಃ ಶೋಕಃ ಯದ್ಗತ್ವಾ ನ ನಿವರ್ತಂತೇ" ಇತ್ಯಾದಿ ಶ್ರುತಿ ಸ್ಮೃತಿ ವಚನಗಳು ಪ್ರಮಾಣಗಳಾಗಿವೆ

೨೭. ಯಾರು ಈ ಶುಕ್ಲಪಕ್ಷದ ದ್ವಾದಶಿಯಲ್ಲಿ ಉಪವಾಸಪೂರ್ವಕ ವಾಗಿ ಈ ಅರಣ್ಯದ್ವಾದಶೀ ವ್ರತವನ್ನು ಆಚರಿಸಿ ವನದಲ್ಲಿ ಬ್ರಾಹ್ಮಣೋತ್ತಮ ರಿಗೆ ಭೋಜನ ಮಾಡಿಸುವರೋ ಮತ್ತು ಪತಿವ್ರತೆಯರೂ, ಸದಾಚಾರ ಸಂಪನ್ನೆ ಯರೂ ಆಗಿರುವ ಸುವಾಸಿನಿಯರಿಗೆ ವಸ್ತ್ರಾಭರಣಾದಿಗಳನ್ನು ಕೊಟ್ಟು ಪೂಜಿಸಿ ಭೋಜನ ಮಾಡಿಸುವರೋ ಅಂತಹವರಿಗೆ ಭಕ್ತಪರಾಧೀನನಾದ ಶ್ರೀ ಮಹಾ ವಿಷ್ಣುವು ಪ್ರಸನ್ನನಾಗಿ ವ್ರತಾನುಷ್ಠಾತೃವಿಗೆ ಮೋಕ್ಷವನ್ನು ಕೊಡುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಅರಣ್ಯದ್ವಾದಶೀ
ವ್ರತ ವರ್ಣನೆಯೆಂಬ ಅರವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಸಪ್ತಷಷ್ಟಿತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಘನಾವೃತೇಽಂಬರೇ ದೇವ ವರ್ಷಾಕಾಲೇ ಹ್ಯುಪಸ್ಥಿತೇ ।
ಮಯೂರಕೇಕಾಕುಲಿತೇ ದರ್ದುರಾರಾವಪೂರಿತೇ ॥ ೧ ॥

ಕುಲಸ್ತ್ರಿಯಃ ಪ್ರಯಚ್ಛಂತಿ ಕಸ್ಯಾನ್ನಂ ಕಾಽತ್ರ ದೇವತಾ ।
ಕಿಂ ವ್ರತಂ ಕೃಷ್ಣ ವಿಖ್ಯಾತಮನ್ನಂ ಕಸ್ಯಾಂ ತಿಥೌ ಭವೇತ್ ॥ ೨ ॥

॥ ಶ್ರೀ ಕೃಷ್ಣ ಉವಾಚ ॥

ಪ್ರವೃತ್ತೇ ಶ್ರಾವಣೇ ಮಾಸಿ ಕೃಷ್ಣಪಕ್ಷೇ ಹ್ಯುಪಸ್ಥಿತೇ ।
ಏಕಾದಶ್ಯಾಂ ಶುಚಿರ್ಭೂತ್ವಾ ಸರ್ವೌಷಧಿಜಲೈಃ ಶುಭೈಃ ॥ ೩ ॥

---

## ಅರವತ್ತೇಳನೆಯ ಅಧ್ಯಾಯ

೧-೨. ಯುಧಿಷ್ಠಿರನು ಹೇಳುತ್ತಾನೆ—ಎಲೈ ಶ್ರೀ ಕೃಷ್ಣ ಪರಮಾತ್ಮನೇ! ನವಿಲುಗಳ ಕೇಕಾಧ್ವನಿಗಳಿಂದ ಕೂಡಿದುದೂ, ಕಪ್ಪೆಗಳ ಕೂಗಿನಿಂದ ಪರಿಪೂರ್ಣವೂ ಆಗಿ ಮೇಘಾಚ್ಛಾದಿತವಾದ ನಭಸ್ಥಲವುಳ್ಳ ವರ್ಷಾಕಾಲವು ಬಂದಾಗ, ಕುಲಸ್ತ್ರೀಯರು ಎಂಥವನಿಗೆ ಅನ್ನದಾನ ಮಾಡಬೇಕು? ಈ ಅನ್ನದಾನಕ್ಕೆ ಉದ್ದಿಷ್ಟವಾದ ದೇವತೆಯು ಯಾವುದು? ಆ ವ್ರತವು ಯಾವ ನಾಮಧೇಯದಿಂದ ವಿಖ್ಯಾತವಾಗಿದೆ? ಆ ವ್ರತವನ್ನು ಯಾವ ತಿಥಿಯಲ್ಲಿ ಮಾಡಬೇಕು? ಎಂಬೀ ವಿಷಯವನ್ನು ಹೇಳು ಎಂದನು.

೩. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ! ಶ್ರಾವಣ ಮಾಸದ ಕೃಷ್ಣಪಕ್ಷದ ಏಕಾದಶಿಯಲ್ಲಿ ಸರ್ವೌಷಧಿ ಮಿಶ್ರಿತವಾದ ಶುಭಜಲದಿಂದ ಸ್ನಾನಮಾಡಿ ಶುಚಿಯಾಗಬೇಕು.

ಮಾಷಚೂರ್ಣೇನ ರಾಜೇಂದ್ರ ಕುರ್ಯಾದಿಂದುರಿಕಾಶನಂ ।
ಮೋದಕಾಂಶ್ಚ ತಥಾ ಪಂಚ ಘೃತಪಕ್ವಾನ್ಸುನಿರ್ಮಲಾನ್ ॥ ೪ ॥

ನರಮೇಕೈಕಮುದ್ದಿಶ್ಯ ತತೋ ಗತ್ವಾ ಜಲಾಶಯಂ ।
ದುಷ್ಟಯಾದೋವಿರಹಿತಂ ಸತೋಯಂ ಜಲಜೈರ್ಯುತಂ ॥ ೫ ॥

ತಸ್ಯೈವ ಪುಲಿನೇ ರಮ್ಯೇ ಜುಷ್ಟಾನ್ನೇ ಗೋಮಯಾದಿನಾ ।
ಕೃತ್ವಾ ಮಂಡಲಕಂ ವೃತ್ತಂ ಪಿಷ್ಟಕಾದಿಭಿರರ್ಚಿತಂ ॥ ೬ ॥

ಚರ್ಚಿತಂ ಗಂಧಕುಸುಮೈರ್ಧೂಪದೀಪಾಕ್ಷತೋಜ್ವಲಂ ।
ತತ್ರ ಚಂದ್ರಂ ಲಿಖೇದೇವ ರೋಹಿಣ್ಯಾಸಹಿತಂ ವಿಭುಂ ।
ಅರ್ಚಯೇಚ್ಚ ಸಭಾರ್ಯೋ ವೈ ಮಂತ್ರೇಣಾನೇನ ಭಾವಿತಃ ॥ ೭ ॥

---

೪. ಅಯ್ಯಾ ರಾಜೇಂದ್ರನೇ ! ಅನಂತರ ಉದ್ದಿನ ಹಿಟ್ಟಿನಿಂದ ಇಂದುರಿಕಾಶನ ಎಂಬ ಭಕ್ಷ್ಯವಿಶೇಷವನ್ನೂ, ಮತ್ತು ಘೃತಪಕ್ವಮಾಡಲ್ಪಟ್ಟದೂ ನಿರ್ಮಲವೂ, ರುಚಿಕರವೂ ಆಗಿರುವ ಐದು ಮೋದಕಗಳನ್ನೂ ಸಿದ್ಧ ಮಾಡಬೇಕು.

೫. ಅನಂತರ ಒಬ್ಬ ಬ್ರಾಹ್ಮಣನನ್ನು ಆಹ್ವಾನಿಸಿ, ದುಷ್ಟಜಲಚರಪ್ರಾಣಿ ರಹಿತವೂ, ಶುದ್ಧಜಲಯುಕ್ತವೂ, ಕಮಲಗಳುಳ್ಳದೂ ಆಗಿರುವ ಜಲಾಶಯದ ಸಮೀಪಕ್ಕೆ ಆತನನ್ನು ಕರೆದುಕೊಂಡು ಹೋಗಬೇಕು.

೬-೭. ಆ ಜಲಾಶಯದಲ್ಲಿ ಸುಂದರವೂ ಭೋಜನಕ್ಕೆ ಯೋಗ್ಯವೂ ಆಗಿರುವ ಮರಳು ದಿಣ್ಣೆಯ ಮೇಲೆ ಗೋಮಯದಿಂದ ದುಂಡಾದ ಮಂಡಲವನ್ನು ರಚಿಸಿ, ಅದರಲ್ಲಿ ಹಿಟ್ಟಿನಿಂದ ರೋಹಿಣೀ ಸಹಿತನಾದ ಚಂದ್ರಮಂಡಲವನ್ನು ಬರೆದು, ನಿಶ್ಚಲಚಿತ್ತತೆಯಿಂದ ಧ್ಯಾನಿಸಿ ಈ ಮುಂದೆ ಹೇಳುವ ಮಂತ್ರದಿಂದ ರೋಹಿಣೀ ಚಂದ್ರರಿಗೆ ಗಂಧ, ಅಕ್ಷತೆ, ಪುಷ್ಪ, ಧೂಪ, ದೀಪ ಇವುಗಳಿಂದ ಅರ್ಚನೆ ಮಾಡಬೇಕು.

ಸೋಮರಾಜ ನಮಸ್ತುಭ್ಯಂ ರೋಹಿಣ್ಯೈ ತೇ ನಮೋನಮಃ ।
ಮಹಾಸತಿ ಮಹಾದೇವಿ ಸಂಪಾದಯ ಮಮೇಪ್ಸಿತಂ ॥ ೮ ॥

ಏವಂ ಸಂಪೂಜ್ಯ ತಸ್ಯಾಗ್ರೇ ನೈವೇದ್ಯಂ ದೇಯಮರ್ಚಿತಂ ।
ತತ್ರೈವ ಬ್ರಾಹ್ಮಣೇ ದದ್ಯಾತ್ಸೋಮೋ ಮೇ ಪ್ರೀಯತಾಮಿತಿ ।
ಪ್ರೀಯತಾದಿತಿ ಮೇ ದೇವೀ ರೋಹಿಣೀ ಸಹಿತಪ್ರಿಯಾ ॥ ೯ ॥

ಏವಮುಚ್ಚಾರ್ಯ ದತ್ವಾ ಚ ತತೋಽಂತರ್ಜಲಮಾವಿಶೇತ್ ।
ಕಂಠಾಂತಂ ಕಟಿಮಾತ್ರಂ ವಾ ಗುಲ್ಫಾಂತಂ ವಾ ಜಲಾಶಯೇ ॥ ೧೦ ॥

ಧ್ಯಾಯೇಚ್ಚ ಮನಸಾ ಸೋಮಂ ರೋಹಿಣೀಸಹಿತಂ ತದಾ ।
ಯಾವತ್ಸಮಸ್ತಂ ತದ್ಭಕ್ತಂ ಭುಕ್ತ್ವಾ ಚಾಂತಸ್ತಟೇ ಸ್ಥಿತಃ ॥ ೧೧ ॥

---

೮. ಬಳಿಕ್ಕ ಈ ಮಂತ್ರದಿಂದ ಪ್ರಾರ್ಥಿಸಬೇಕು. ಓ ಸೋಮರಾಜನಾದ ಚಂದ್ರನೇ ! ನಿನಗೆ ವಂದನೆ, ಓ ರೋಹಿಣಿಯೇ ! ನಿನಗೂ ನಮಸ್ಕಾರಗಳು. ಓ ಮಹಾಪತಿವ್ರತೆಯಾದ ಮಹಾದೇವಿ ರೋಹಿಣಿಯೇ ! ನನ್ನ ಇಷ್ಟಾರ್ಥಗಳು ಸಿದ್ಧಿಸುವಂತೆ ಮಾಡು ಎಂದು ಮಂತ್ರಾರ್ಥ.

೯. ಈ ಪ್ರಕಾರ ಅರ್ಚಿಸಿ ಸಿದ್ಧಮಾಡಿದ ನೈವೇದ್ಯವನ್ನು ದೇವರ ಮುಂಭಾಗದಲ್ಲಿ ಸಮರ್ಪಿಸಬೇಕು. ಹೀಗೆ ಜಲಾಶಯದ ಮರಳುದಿಣ್ಣೆಯಲ್ಲಿ ಸಮರ್ಪಿಸಿದ್ದ ಆ ನೈವೇದ್ಯವನ್ನೇ " ಮೇ ಸೋಮಃ ಪ್ರಿಯತಾಂ " ಎಂದೂ ಮತ್ತು ಆ ಚಂದ್ರಪ್ರಿಯಳಾದ ರೋಹಿಣಿಯ ಪ್ರೀತ್ಯರ್ಥವಾಗಿ "ದೇವೀ ರೋಹಿಣೀ ಮೇ ಪ್ರೀಯತಾಂ " ಎಂದೂ ಹೇಳಿ ಬ್ರಾಹ್ಮಣನಿಗೆ ದಾನ ಮಾಡಬೇಕು. ಈ ರೀತಿ ಉಚ್ಚರಿಸಿ ದಾನಮಾಡಿದ ಮೇಲೆ ಆ ಜಲಾಶಯದ ನೀರಿನೊಳಗೆ ಪ್ರವೇಶಿಸಿ ಕಂಠಪ್ರಮಾಣ ನೀರಿನಲ್ಲೋ, ಸೊಂಟ ಮಟ್ಟದ ನೀರಿನಲ್ಲೋ, ಅಥವಾ ಪಾದಗಳ ಹರಡುಗಳ ವರೆಗೆ ಬರುವ ನೀರಿನಲ್ಲೋ ನಿಂತಿರಬೇಕು.

೧೧. ಹಾಗೆ ನಿಂತು ರೋಹಿಣೀ ಸಹಿತನಾದ ಶ್ರೀ ಚಂದ್ರನನ್ನು ಮನಸ್ಸಿನಲ್ಲಿ ಧ್ಯಾನಮಾಡಬೇಕು. ಅನಂತರ ಆ ಜಲಾಶಯದ ತೀರಕ್ಕೆ ಬಂದು ಆ ತೀರದಲ್ಲಿರುವ ಇತರರಿಗೂ, ಮತ್ತು ತಾನು ಆಹ್ವಾನಿಸಿ ಕರೆದುಕೊಂಡು ಹೋದ ಆ ಬ್ರಾಹ್ಮಣನಿಗೂ, ನಿಯಮಪೂರ್ವಕವಾಗಿ ಭೋಜನಮಾಡಿಸಬೇಕು.

ನಿಯಮ್ಯ ವಸತಾಂ ಕಾನ್ಯೇ ತತೋ ವಿಪ್ರಾಯ ಭೋಜನಂ ।
ದಕ್ಷಿಣಾಸಹಿತಂ ದೇಯಂ ನಿಶ್ಚಯಂ ವಾಚಿ ಕಲ್ಪಯೇತ್ ।
ಭಕ್ತ್ಯಾ ಶಕ್ತ್ಯಾ ಯಥಾಚಿತ್ತಂ ಯಥಾಚಿತ್ತಂ ತಥಾ ತಥಾ ॥ ೧೨ ॥

ಯಃ ಕರೋತಿ ನರೋ ರಾಜನ್ನಾರೀ ವಾಥ ಕುಮಾರಿಕಾ ।
ವರ್ಷೇವರ್ಷೇ ವಿಧಾನೇನ ಪಾರ್ಥೇದಂ ರೋಹಿಣೀವ್ರತಂ ॥ ೧೩ ॥

ಇಹ ಲೋಕೇ ಚಿರಂ ಸ್ಥಿತ್ವಾ ಧನಧಾನ್ಯಸಮಾಕುಲೇ ।
ಗೃಹಾಶ್ರಮೇ ಶುಭಾಂ ಲಬ್ಧ್ವಾ ಪುತ್ರಪೌತ್ರಾದಿಸಂತತಿಂ ॥ ೧೪ ॥

ತತಃ ಸುತೀರ್ಥೇ ಮರಣಂ ತತೋ ಬ್ರಹ್ಮಪುರಂ ವ್ರಜೇತ್ ।
ತಸ್ಮಾದ್ವಿಷ್ಣುಪುರಂ ಪಾರ್ಥ ತತೋ ರುದ್ರಪುರಂ ಶುಭಂ ॥ ೧೫ ॥

---

೧೨. ಮತ್ತು ತನ್ನ ಶಕ್ತ್ಯನುಸಾರವೂ, ಮನಸ್ಸಿನ ಧಾರಾಳತೆ ಮತ್ತು ತನ್ನ ಧನಸಂಪತ್ತಿಗೆ ಯೋಗ್ಯವೂ ಆಗುವಂತೆ, ವಾಕ್ಕಿನಿಂದ ಸತ್ಯಪ್ರತಿಜ್ಞೆಯನ್ನು ಮಾಡಿ, ಭಕ್ತಿಪೂರ್ವಕವಾಗಿ ಆ ಬ್ರಾಹ್ಮಣನಿಗೆ ದಕ್ಷಿಣೆ ಕೊಡಬೇಕು. ಅನಂತರ ಆ ಉಳಿದ ಇಂದುರಿಕಾಶನ ಮೊದಲಾದ ಅನ್ನವನ್ನು ಆ ಜಲಾಶಯದ ತೀರದಲ್ಲೇ ತಾನೂ ಭುಂಜಿಸಬೇಕು.

೧೩. ಅಯ್ಯಾ ರಾಜನೇ ! ಗಂಡಸು, ಹೆಂಗಸು, ಅವಿವಾಹಿತಳಾದ ಕನ್ಯೆ, ಇವರುಗಳು ಈ ರೋಹಿಣೀ ವ್ರತವನ್ನು ಶಾಸ್ತ್ರೋಕ್ತಪ್ರಕಾರವಾಗಿ ಪ್ರತಿವರ್ಷದಲ್ಲೂ ಆಚರಿಸಬಹುದು.

೧೪. ಹೀಗೆ ಆಚರಿಸಿದರೆ ಅವರು ಈ ಮರ್ತ್ಯಲೋಕದಲ್ಲಿ ಬಹುಕಾಲ ಬಾಳಿ, ಧನಧಾನ್ಯ ಸಮೃದ್ಧಿಯುಕ್ತವಾದ ಗೃಹಸ್ಥಾಶ್ರಮದಲ್ಲೂ, ಶುಭಕರವಾದ ಪುತ್ರಪೌತ್ರಾದಿ ಸಂತಾನವನ್ನು ಪಡೆಯುತ್ತಾರೆ.

೧೫. ಅಯ್ಯಾ ಕುಂತೀಪುತ್ರನೇ ! ಕೇಳು ಕೊನೆಗಾಲದಲ್ಲಿ ಪುಣ್ಯತೀರ್ಥ ಕ್ಷೇತ್ರದಲ್ಲಿ ಅವರಿಗೆ ಮರಣವು ಲಭಿಸಿ, ಅಲ್ಲಿಂದ ಬ್ರಹ್ಮಲೋಕ ಪ್ರಾಪ್ತಿಯಾಗುವುದು. ಆ ಬ್ರಹ್ಮಲೋಕವಾಸವು ಮುಗಿದ ಮೇಲೆ ವಿಷ್ಣುಲೋಕಕ್ಕೆ ಹೋಗಿ ಹಾಗೆಯೇ ಕ್ರಮೇಣ ಶುಭಕರವಾದ ರುದ್ರಲೋಕಕ್ಕೂ ಹೋಗಿ ವಾಸಿಸುತ್ತಾರೆ.

ಖೇ ರೋಹಿಣೀ ಶಶಧರಾಭಿಮತಾ ಹಿತಾ ಚ ।
ಕಿಂ ಕಾರಣಂ ಶೃಣು ನರೇಂದ್ರ ನಿವೇದಯಾಮಿ ।
ಸಂಪಿಷ್ಟಮಾಷರಚಿತೇಂದುರಿಕಾಶಿತುಂ ಯತ್ ।
ಭಕ್ತಂ ಜಲೇ ಗುಡಘೃತೇನ ಫಲಂ ತದೇತತ್ ॥ ೧೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರಸಂವಾದೇ ರೋಹಿಣೀಚಂದ್ರವ್ರತಂ ನಾಮ ಸಪ್ತಷಷ್ಟಿತಮೋಽಧ್ಯಾಯಃ.



---

೧೬. ರೋಹಿಣೀದೇವಿಯು ಚಂದ್ರನಿಗೆ ಪ್ರೇಮಪಾತ್ರಳಾಗಿ ಅಂತರಿಕ್ಷದಲ್ಲಿ ಇರುವಳು. ಅಯ್ಯಾ ರಾಜೇಂದ್ರನೇ ! ಅವಳು ಹಾಗಾಗಲು ಏನು ಕಾರಣ ? ಎಂಬ ವಿಷಯವನ್ನು ಹೇಳುತ್ತೇನೆ ಶ್ರವಣಮಾಡು. ಆ ರೋಹಿಣಿಯು ಪೂರ್ವ ಜನ್ಮದಲ್ಲಿ ಉದ್ದಿನಹಿಟ್ಟಿನಿಂದ ಇಂದುರಿಕಾಶನವನ್ನೂ ಮತ್ತು ಬೆಲ್ಲ, ತುಪ್ಪ ಇವುಗಳನ್ನು ಸೇರಿಸಿ ಮಾಡಿದ ಮೋದಕಗಳನ್ನೂ ಜಲಾಶಯದಲ್ಲಿ ಭುಂಜಿಸಿದಳು. ಅದರ ಫಲವಾಗಿ ಈರೀತಿ ಪತಿಗೆ ಪ್ರೇಮಪಾತ್ರಳಾದಳು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ರೋಹಿಣೀಚಂದ್ರ ವ್ರತವರ್ಣನೆ ಎಂಬ ಅರವತ್ತೇಳನೆಯ ಅಧ್ಯಾಯವು ಮುಗಿದುದು.

|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಅಷ್ಟಷಷ್ಟಿತಮೋಽಧ್ಯಾಯಃ

|| ಯುಧಿಷ್ಠಿರ ಉವಾಚ ||

ಅವಿಯೋಗವ್ರತಂ ಬ್ರೂಹಿ ಮಮ ಯಾದವನಂದನ ।
ವಿಧಾನಂ ತಸ್ಯ ಕೀದೃಕ್ಚ ಕಿಂ ಪುಣ್ಯಂ ಕಾಽತ್ರ ದೇವತಾ || ೧ ||

|| ಶ್ರೀ ಕೃಷ್ಣ ಉವಾಚ ||

ಶೃಣು ಪಾಂಡವ ಯತ್ನೇನ ಕಥ್ಯಮಾನಂ ಯಥಾಖಿಲಂ ।
ಅವಿಯೋಗವ್ರತಂ ನಾಮ ವ್ರತಾನಾಮುತ್ತಮೋತ್ತಮಂ || ೨ ||

---

### ಅರವತ್ತೆಂಟನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಅಯ್ಯಾ ಯಾದವಪುತ್ರನೇ ! ಈಗ ನನಗೆ ಅವಿಯೋಗವ್ರತವನ್ನು ಹೇಳು. ಆ ವ್ರತದ ಅನುಷ್ಠಾನ ಕ್ರಮವೇನು ? ಅದರಿಂದ ಬರುವ ಫಲವೇನು ? ಆ ವ್ರತಕ್ಕೆ ಉದ್ದಿಷ್ಟದೇವತೆ ಯಾರು ? ಎಂದು ಕೇಳಿದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಪಾಂಡುಪುತ್ರನೇ ! ಎಲ್ಲಾ ವ್ರತಗಳಲ್ಲೂ ಉತ್ತಮೋತ್ತಮವೆನಿಸಿಕೊಂಡ ಈ ಅವಿಯೋಗ ವ್ರತವನ್ನು ಹೇಳುವೆನು. ನೀನು ಪ್ರಯತ್ನಪೂರ್ವಕವಾಗಿ ಚಿತ್ತೈಕಾಗ್ರತೆಯಿಂದ ಸಂಪೂರ್ಣವಾಗಿ ಶ್ರವಣಮಾಡು.

ಪ್ರೌಷ್ಠಪದೇ ಶುಕ್ಲಪಕ್ಷೇ ದ್ವಾದಶ್ಯಾಂ ಪ್ರಾತರುತ್ಥಿತಃ ।
ಯಸ್ತು ಶುಕ್ಲಾಂಬರಧರಃ ಸ್ನಾತ್ವಾ ಪೂರ್ವಂ ಜಲಾಶಯೇ ॥ ೩ ॥

ಹೃದ್ಯೇ ರಮ್ಯೇ ಸೌಧತಟೇ ಹರಿಂ ಲಿಖ್ಯೇತ ಮಂಡಲೇ ।
ಗೋಧೂಮಚೂರ್ಣಪಿಷ್ಟೇನ ಲಕ್ಷ್ಮೀಂ ತತ್ಪಾರ್ಶ್ವವರ್ತಿನೀಂ ॥ ೪ ॥

ತತ್ರೈವ ಚ ಹರಂ ಗೌರೀಂ ಸಾವಿತ್ರೀಂ ಬ್ರಹ್ಮಣಾ ಸಹ ।
ರಾಜ್ಞೀಸಹಿತಂ ಚ ರವಿಂ ತ್ರೈಲೋಕ್ಯೋದ್ಯೋತಕಾರಕಂ ॥ ೫ ॥

ಗಂಧೈಃ ಪುಷ್ಪೈಶ್ಚ ಧೂಪೈರ್ನೈವೇದ್ಯೈರರ್ಚಯೇದ್ಯಥಾ ಶಕ್ತ್ಯಾ ।
ಅವಿಯೋಗವ್ರತಚಾರೀ ಮಂತ್ರೇಣಾನೇನ ರಾಜೇಂದ್ರ ॥ ೬ ॥

---

೩. ಭಾದ್ರಪದ ಶುದ್ಧ ದ್ವಾದಶಿಯದಿನ ಬೆಳಿಗ್ಗೆ ಎದ್ದು ಮೊದಲು ಜಲಾಶಯದಲ್ಲಿ ಸ್ನಾನಮಾಡಿ ಶುಭವಾದ ಮಡಿಬಟ್ಟೆಯನ್ನು ಧರಿಸಬೇಕು.

೪. ಅನಂತರ ಮನೋಹರವಾಗಿಯೂ ಹೃದಯಂಗಮವಾಗಿಯೂ ಇರುವ ಸೌಧದ ಮೇಲ್ಭಾಗದಲ್ಲಿ ಮಂಡಲಮಾಡಿ ಅದರಲ್ಲಿ ಗೋಧಿಹಿಟ್ಟಿನಿಂದ ಶ್ರೀ ಹರಿಯ ಆಕಾರವನ್ನೂ ಆ ಹರಿಯ ಪಾರ್ಶ್ವದಲ್ಲಿ ಅವನ ಪ್ರಿಯಳಾದ ಶ್ರೀ ಮಹಾಲಕ್ಷ್ಮಿಯ ಆಕೃತಿಯನ್ನೂ ಬರೆಯಬೇಕು.

೫. ಮತ್ತು ಅದೇ ಮಂಡಲದಲ್ಲೇ ಶ್ರೀ ಗೌರೀಸಹಿತನಾದ ಪರಮೇಶ್ವರನ ಆಕೃತಿ, ಸಾವಿತ್ರೀಸಹಿತ ಶ್ರೀ ಬ್ರಹ್ಮದೇವನ ಪ್ರತಿಕೃತಿ, ರಾಜ್ಞೀ ಎಂಬ ಪ್ರಿಯ ಪತ್ನೀಸಹಿತನೂ, ತ್ರಿಲೋಕಪ್ರಕಾಶಕನೂ ಆದ ಆದಿತ್ಯನ ಆಕಾರ ಇವನ್ನು ರಚಿಸಬೇಕು.

೬. ಅಯ್ಯಾ ರಾಜೇಂದ್ರನೇ ! ಈ ಅವಿಯೋಗ ವ್ರತವನ್ನು ಆಚರಿಸುವವನು ಅನಂತರ ಆ ಆಕೃತಿಗಳಲ್ಲಿ ಆ ದೇವತೆಗಳಿಗೆ ಈ ಮುಂದೆ ಹೇಳುವ ಮಂತ್ರವನ್ನು ಹೇಳಿ ಯಥಾಶಕ್ತಿ ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ ಇತ್ಯಾದಿಗಳಿಂದ ಪೂಜಿಸಬೇಕು.

ನಾರೀ ವಾ ಪುರುಷೋ ವಾ ।
ಅವಿಯೋಗಮತಿಂ ದೃಢಂ ಕೃತ್ವಾ ।
ಭಕ್ತ್ಯಾ ಧ್ಯಾನೀ ಮೌನೀ ।
ದಾಂಪತ್ಯಂ ಪೂಜಯೇದ್ದೇವಂ || ೭ ||

ಸಹಸ್ರಮೂರ್ಧಾ ಪುರುಷಃ ಪದ್ಮನಾಭೋ ಜನಾರ್ದನಃ ।
ವ್ಯಾಸೋಽಪಿ ಕಪಿಲಾಚಾರ್ಯೋ ಭಗವಾನ್ಪುರುಷೋತ್ತಮಃ || ೮ ||

ನಾರಾಯಣೋ ಮಧುಲಿಹೋ ವಿಷ್ಣುರ್ದಾಮೋದರೋ ಹರಿಃ ।
ಮಹಾವರಾಹೋ ಗೋವಿಂದಃ ಕೇಶವೋ ಗರುಡಧ್ವಜಃ || ೯ ||

---

೭. ಈ ವ್ರತವನ್ನಾಚರಿಸುವ ಹೆಂಗಸು ಅಥವಾ ಗಂಡಸು ಈ ಅವಿಯೋಗ ವ್ರತಾಚರಣೆಯಲ್ಲೇ ದೃಢಮತಿಯನ್ನಿಟ್ಟು ಈ ಹಿಂದೆ ಹೇಳಿದಂತೆ ಲಕ್ಷ್ಮೀ ನಾರಾಯಣ, ಉಮಾಮಹೇಶ್ವರ, ಸಾವಿತ್ರಿಬ್ರಹ್ಮ, ರಾಜ್ಞೀರವಿ, ಎಂಬ ದೇವತಾ ದಂಪತಿಗಳನ್ನು ಪೂಜಿಸಬೇಕು. ಆಗ ಇತರ ವಿಚಾರವಾಗಿ ಮಾತನಾಡದೆ ಮೌನವಾಗಿ ಧ್ಯಾನಮಾಡುತ್ತಾ ಭಕ್ತಿಯಿಂದ ಪೂಜಿಸಿ, ಬಳಿಕ

೮. ಸ್ವಾಮಿ ! ನೀನು ಸಹಸ್ರ ಶಿರಸ್ಸುಗಳನ್ನುಳ್ಳವನೂ, ಸುಷುಪ್ತಿಕಾಲದಲ್ಲಿ ಪುರೀತನ್ನಾಡಿಯದ್ವಾರಾ ಹೋಗಿ ಹೃದಯವಲ್ಲಿ ಶಯನಮಾಡುವವನೂ, ಪದ್ಮನಾಭನೂ, ಉದ್ದೇಶಿಸಿ ಪುರುಷಾರ್ಥಗಳಿಗಾಗಿ ಜನಗಳಿಂದ ಪ್ರಾರ್ಥಿಸಲ್ಪಡುವವನೂ, ವ್ಯಾಸ ಕಪಿಲರೆಂಬ ಆಚಾರ್ಯಸ್ವರೂಪದಿಂದ ಅವತರಿಸಿದವನೂ, ಷಡ್ಗುಣೈಶ್ವರ್ಯಭರಿತನೂ, ಕ್ಷರಾಕ್ಷರ ಪುರುಷರಿಂದ ಭಿನ್ನನಾಗಿ ಅವರಿಗಿಂತ ಉತ್ತಮನೂ ಆಗಿರುವೆ ಎಂದೂ.

೯. ಮತ್ತು ಜೀವರಿಗೆ ಅಂತರ್ಯಾಮಿ ಸ್ವರೂಪದಿಂದ ನಿಯಾಮಕನೂ, ಮಧುದೈತ್ಯ ಸಂಹರ್ತೃವೂ, ವ್ಯಾಪಕನೂ, ಯಶೋದೆಯ ಕೈಯ ಹಗ್ಗದಿಂದ ಉದರದಲ್ಲಿ ಬಂಧಿಸಲ್ಪಟ್ಟವನೂ, ಭಕ್ತಜನ ದುರಿತಾಪರಿಹಾರಕನೂ ಮಹಾ ವರಾಹಾವತಾರವನ್ನು ಮಾಡಿದವನೂ, ಅಧಿಷ್ಠಾನಸ್ವರೂಪದಿಂದ ಇಂದ್ರಿಯಗಳ ಸಂಬಂಧವುಳ್ಳವ (ಗೋವಿಂದ) ನೂ ಗರುಡಧ್ವಜನೂ ಆದ ಕೇಶವನಾಗಿ ಇರುವೆ. ಎಂಬುದಾಗಿಯೂ.

ಶ್ರೀಧರಃ ಪುಂಡರೀಕಾಕ್ಷೋ ವಿಶ್ವರೂಪಸ್ತ್ರಿವಿಕ್ರಮಃ ।
ಉಪೇಂದ್ರೋ ವಾಮನೋ ರಾಮೋ ವೈಕುಂಠೋ ಮಾಧವೋ ಧ್ರುವಃ

ವಾಸುದೇವೋ ಹೃಷೀಕೇಶಃ ಕೃಷ್ಣಃ ಸಂಕರ್ಷಣೋಽಚ್ಯುತಃ ।
ಅನಿರುದ್ಧೋ ಮಹಾಯೋಗೀ ಪ್ರದ್ಯುಮ್ನೋ ನಂದ ಏವ ಚ ॥ ೧೧ ॥

ನಿತ್ಯಂ ಸ ಮೇ ಶುಭಃ ಪ್ರೀತಃ ಸಶ್ರೀಕಃ ಕೇಶಿಸೂದನಃ ।
ಉಮಾಪತಿರ್ನೀಲಕಂಠಃ ಸ್ಥಾಣು ಶ್ಯಂಭುರ್ಭಗಾಕ್ಷಿಹಾ ॥ ೧೨ ॥

ಈಶಾನೋ ಭೈರವಃ ಶೂಲೀ ತ್ರ್ಯಂಬಕಸ್ತ್ರಿಪುರಾಂತಕಃ ।
ಕಪರ್ದೀಶೋ ಮಹಾಲಿಂಗೀ ಮಹಾಕಾಲೋ ವೃಷಧ್ವಜಃ ॥ ೧೩ ॥

---

೧೦. ಮತ್ತು ನೀನು ಲಕ್ಷ್ಮೀಧರನೂ, ಕಮಲದಂತೆ ನಯನವುಳ್ಳವನೂ, ವಿಶ್ವರೂಪಧಾರಿಯೂ, ವಾಮನಾವತಾರದಲ್ಲಿ ಮೂರುಹೆಜ್ಜೆಯಿಂದ ಲೋಕಗಳನ್ನೆಲ್ಲಾ ಆಕ್ರಮಿಸಿಕೊಂಡವನೂ, ಇಂದ್ರನ ಅನುಜನೂ, ವಾಮನಸ್ವರೂಪಿಯೂ, ಯೋಗಿಗಳ ಹೃದಯದಲ್ಲಿ ಸಾಕ್ಷಾತ್ಕಾರನಾಗಿ ಅವರಿಗೆ ಸಂತೋಷದಾಯಕನೂ, ರಾಮನೆಂಬ ನಾಮಧೇಯವನ್ನು ಪಡೆದವನೂ, ವೈಕುಂಠವಾಸಿಯೂ, ಲಕ್ಷ್ಮೀಪತಿಯೂ, ಅಚಲನೂ ಆಗಿರುವೆ ಎಂದೂ.

೧೧-೧೨. ದೇವಾಧಿದೇವನಾದ ನೀನು ವಸುದೇವನಿಗೆ ಪುತ್ರನೂ, ಇಂದ್ರಿಯಗಳಿಗೆ ಪ್ರೇರಕನೂ, ಭಕ್ತಜನದುಃಖಾಕರ್ಷಕನೂ, ಸಂಕರ್ಷಣ, ಅಚ್ಯುತ, ಅನಿರುದ್ಧ, ಪ್ರದ್ಯುಮ್ನ ಇತ್ಯಾದಿ ಅಂಶವನ್ನು ಹೊಂದಿ ಆ ಹೆಸರಿನಿಂದ ಹೊಗಳಲ್ಪಡುವವನೂ, ಮಹಾಯೋಗಿಯೂ, ನಂದನಿಗೆ ಆನಂದದಾಯಕನೂ, ಕೇಶೀ ಎಂಬ ಅಶ್ವಾಕೃತಿಯ ಅಸುರನನ್ನು ಸಂಹಾರಮಾಡಿದವನೂ, ಮಂಗಳಕರನೂ ಆಗಿರುವೆ. ಶ್ರೀ ಲಕ್ಷ್ಮೀಸಮೇತ ಮಹಾವಿಷ್ಣುವೆನಿಸಿದ ನೀನು ನನಗೆ ಯಾವಾಗಲೂ ಸುಪ್ರೀತನಾಗು ಎಂದೂ ಪ್ರಾರ್ಥಿಸಬೇಕು.

೧೩. ಪಾರ್ವತೀಪತಿಯೂ, ವಿಷಪಾನದಿಂದ ಕಪ್ಪಾದ ಕತ್ತುಳ್ಳವನೂ, ಸ್ಥಾಣುವಿನ ಹಾಗೆ ನಿರ್ವಿಕಾರನೂ, ಸುಖಕರನೂ, ದಕ್ಷಯಜ್ಞದಲ್ಲಿ ಭಗನ ಕಣ್ಣನ್ನು ಕಿತ್ತವನೂ, ಲೋಕನಿಯಾಮಕನೂ, ಭೈರವಾಕಾರಿಯೂ, ತ್ರಿಶೂಲಧಾರಿಯೂ, ತ್ರಿಲೋಚನನೂ, ತ್ರಿಪುರಸಂಹಾರಕನೂ ಆಗಿರುವ ನಿನಗೆ ನಮಸ್ಕಾರಗಳು.

ಶಿವಃ ಶರ್ವೋ ಮಹಾದೇವೋ ರುದ್ರೋ ಭೂತಮಹೇಶ್ವರಃ ।
ಮಮಾಸ್ತು ಸಹ ಪಾರ್ವತ್ಯಾ ಶಂಕರಃ ಶಂಕರಶ್ಚಿರಂ　　॥ ೧೪ ॥

ಬ್ರಹ್ಮಾ ಶಂಭುಃ ಪ್ರಭುಃ ಸ್ರಷ್ಟಾ ಪುಷ್ಕರೀ ಪ್ರಪಿತಾಮಹಃ ।
ಹಿರಣ್ಯಗರ್ಭೋ ವೇದಜ್ಞಃ ಪರಮೇಷ್ಠೀ ಪ್ರಜಾಪತಿಃ　　॥ ೧೫ ॥

ಚತುರ್ಮುಖಃ ಸೃಷ್ಟಿಕರ್ತಾ ಸ್ವಯಂಭೂಃ ಕಮಲಾಸನಃ ।
ವಿರಂಚಿಃ ಪದ್ಮಯೋನಿಶ್ಚ ಮಮಾಸ್ತು ವರದಃ ಸದಾ　　॥ ೧೬ ॥

ಆದಿತ್ಯೋ ಭಾಸ್ಕರೋ ಭಾನುಃ ಸೂರ್ಯೋಽರ್ಕಃ ಸವಿತಾ ರವಿಃ ।
ಮಾರ್ತಂಡೋ ಮಂಡಲಜ್ಯೋತಿರಗ್ನಿರಶ್ಮಿರ್ಜನೇಶ್ವರಃ　　॥ ೧೭ ॥

---

೧೪. ಕಪರ್ದವೆಂಬ ಜಟಾಜೂಟವುಳ್ಳವನೂ, ಭೂತಭವ್ಯ ವಸ್ತುಗಳಿಗೆ ಈಶ್ವರನೂ, ಮಹಾಲಿಂಗಸ್ವರೂಪಿಯೂ, ಮಹಾಕಾಲಸ್ವರೂಪಿಯೂ, ವೃಷಭಧ್ವಜನೂ, ಮಂಗಳಸ್ವರೂಪನೂ, ಮಹಾದೇವಸ್ವರೂಪಿಯೂ, ವೇದವಾಕ್ಯಗಳಿಂದ ಪ್ರತಿಪಾದಿಸಲ್ಪಡುವವನೂ, ಸರ್ವಪ್ರಾಣಿಗಳಿಗೂ ಈಶನೂ ಆಗಿರುವ ಶ್ರೀ ಪರಮೇಶ್ವರನು ಪಾರ್ವತೀ ಸಹಿತನಾಗಿ ನನಗೆ ಬಹುಕಾಲದವರೆಗೆ ಸುಖದಾಯಕನಾಗಿರಲಿ ಎಂದು ಪ್ರಾರ್ಥಿಸಬೇಕು.

೧೫. ಬ್ರಹ್ಮನ ಪೂಜಾವೇಳೆಯಲ್ಲಿ ಅಪರಿಚ್ಛಿನ್ನನೂ, ಮಂಗಳಕರನೂ, ಸ್ವಾಮಿಯೂ, ಸೃಷ್ಟಿಕರ್ತೃವೂ, ಪ್ರಪಿತಾಮಹನೂ, ವೇದಗಳನ್ನು ತಿಳಿದವನೂ, ಪರಮಪದವಿಯಲ್ಲಿ ಇರುವವನೂ, ಪ್ರಜಾಪತಿಯೂ ಆದ ನೀನು ನನಗೆ ಸ್ವಸ್ತಿಯನ್ನು ಮಾಡು ಎಂದೂ.

೧೬. ನಾಲ್ಕು ಮುಖಗಳುಳ್ಳವನೂ, ಸೃಷ್ಟಿಗೆ ಕಾರಣನೂ, ಕಾರಣಾಂತರರಹಿತನೂ, ಕಮಲಾಸನನೂ, ಪದ್ಮೋದ್ಭವನೂ ಆಗಿರುವ ಶ್ರೀ ಬ್ರಹ್ಮನು ಯಾವಾಗಲೂ ನನಗೆ ಇಷ್ಟಾರ್ಥಗಳನ್ನು ಕೊಡಲಿ ಎಂದೂ ಪ್ರಾರ್ಥಿಸಬೇಕು.

೧೭. ನೀನು ಅದಿತ್ಯನೂ, ಪ್ರಕಾಶಜನಕನೂ, ಮಂಡಲಕಾರವಾದ ತೇಜಸ್ಸುಳ್ಳವನೂ, ಅಗ್ನಿಸ್ವರೂಪನೂ, ಜನೇಶ್ವರನೂ ಆಗಿರುವೆ ಎಂದೂ.

ಪ್ರಭಾಕರಃ ಸಪ್ತಸಪ್ತಿಸ್ತರಣಿರ್ಧರಣಿಃ ಖಗಃ ।
ದಿವಾಕರೋ ದಿನಕರಃ ಸಹಸ್ರಾಂಶುರ್ಮರೀಚಿಮಾನ್ ॥ ೧೮ ॥

ಪದ್ಮಪ್ರಬೋಧನಃ ಪೂಷಾ ಕಿರಣೀ ಮೇರುಭೂಷಣಃ ।
ನಿಕುಂಭೋಃ ವರ್ಣಭೋ ದೇವಃ ಸುಪ್ರೀತೋಽಸ್ತು ಸದಾ ಮಮ ॥

ಲಕ್ಷ್ಮೀಃ ಶ್ರೀಃ ಸಂಪದಾ ಪದ್ಮಾ ಮಾ ವಿಭೂತಿರ್ಹರಿಪ್ರಿಯಾ ।
ಪಾರ್ವತೀ ಲಲಿತಾ ಗೌರೀ ಉಮಾ ಶಂಕರವಲ್ಲಭಾ ॥ ೨೦ ॥

---

೧೮. ನೀನು ಪ್ರಕಾಶಕರ್ತೃವೂ, ಏಳು ಕುದುರೆಗಳುಳ್ಳವನೂ, ಆಕಾಶಕ್ಕೆ ರತ್ನದಂತಿರುವವನೂ, ಪಕ್ಷಿಯಂತೆ ಅಂತರಿಕ್ಷಸಂಚಾರಿಯೂ, ಹಗಲನ್ನುಂಟು ಮಾಡುವನೂ, ದಿನಕಾರಕನೂ, ಸಹಸ್ರಕಿರಣಗಳುಳ್ಳವನೂ ಆಗಿರುವೆ ಎಂದೂ.

೧೯. ಮತ್ತು ಕಮಲಗಳ ವಿಕಾಸಕಾರಕನೂ, ತೇಜಸ್ವಿಯೂ, ಕಿರಣ ಗಳುಳ್ಳವನೂ, ಮೇರುಪರ್ವತಕ್ಕೆ ಭೂಷಣಪ್ರಾಯನೂ ಇವೇ ಮೊದಲಾದ ಗುಣ ನಾಮಧೇಯಗಳುಳ್ಳ ಶ್ರೀ ಸೂರ್ಯನೇ ನೀನು ನನ್ನ ವಿಷಯದಲ್ಲಿ ಯಾವಾ ಗಲೂ ಸುಪ್ರೀತನಾಗು ಎಂದೂ. ಮೇಲೆ ಹೇಳಿದ ಮೂರು ಮಂತ್ರಗಳನ್ನು ಸೂರ್ಯಾರ್ಚನೆಯ ಕಾಲದಲ್ಲಿ ಹೇಳತಕ್ಕದ್ದು.

೨೦. ಇದು ಲಕ್ಷ್ಮೀ ಪ್ರಾರ್ಥನಾ ಮಂತ್ರ. ಸಂಪದ್ಧಾತ್ರಿಯೂ, ಪದ್ಮಪ್ರಿಯಳೂ, ಐಶ್ವರ್ಯಸ್ವರೂಪಳೂ, ಶ್ರೀಹರಿಯ ಪ್ರೇಮಪಾತ್ರಳೂ ಆದ ಶ್ರೀ ಮಹಾಲಕ್ಷ್ಮಿಯು ಪ್ರಸನ್ನಳಾಗಲಿ ಎಂದು ಇದರ ಭಾವವು.

ಇದು ಪಾರ್ವತೀ ಪ್ರಾರ್ಥನೆಗೆ ಉಪಯುಕ್ತವಾದ ಮಂತ್ರ. ಪರ್ವತ ರಾಜನ ಮಗಳೂ, ಸುಂದರಿಯೂ, ಶುಭ್ರಳೂ, ತಾಯಿಯಿಂದ ತಪಸ್ಸಿಗೆ ನಿಷೇಧಿ ಸಲ್ಪಟ್ಟು ಉಮೆಯೆಂಬ ನಾಮಧೇಯವನ್ನು ಪಡೆದವಳೂ, ಶ್ರೀ ಶಂಕರನ ಪ್ರೇಮಪತ್ನಿಯೂ ಆದ ಪಾರ್ವತಿಯು ಸುಪ್ರೀತಳಾಗಲಿ ಎಂದು ಇದರ ಭಾವವು.

ಗಾಯತ್ರೀ ಪ್ರಕೃತಿಃ ಸೃಷ್ಟಿಃ ಸಾವಿತ್ರೀ ವೇಧಸೋ ಮತಾ ।
ರಾಜ್ಞೀ ಭಾನುಮತೀ ಸಂಜ್ಞಾ ನಿತ್ಯಭಾ ಭಾಸ್ಕರಪ್ರಿಯಾ ॥ ೨೦ ॥

ಇತಿ ಪದ್ಮನಾಭಶಂಕರ ।
ಬ್ರಹ್ಮಾರ್ಕಾದೀನ್ಸಪ್ರಿಯಾನ್ಸೂಜ್ಯ ।
ದತ್ವಾ ದತ್ವಾ ದಾನಂ ।
ಭುಕ್ತ್ವಾ ಚಾಂತೇ ವ್ರಜೇದ್ವೇಶ್ಮ ॥ ೨೨ ॥

ದ್ವಾದಶ್ಯಾಂ ಚರತಿ ನರೋ ।
ವ್ರತಮೇತದ್ಭಕ್ತಿಭಾವಿತೋ ಲೋಕೇ ।
ಭವತಿ ಯಶೋಧನಭಾಗೀ ।
ಸಂತತಿಮಾನ್ವಿಗತಸಂತಾಪಃ ॥ ೨೩ ॥

---

೨೧. "ಗಾಯತ್ರೀ ಪ್ರಕೃತಿಃ ಸೃಷ್ಟಿಃ ಸಾವಿತ್ರೀ ವೇಧಸೋಮತಾ'' ಇದು ಬ್ರಹ್ಮಪತ್ನಿ ಸಾವಿತ್ರಿಯ ಪ್ರಾರ್ಥನಾಮಂತ್ರ. ಗಾಯತ್ರೀ ಎಂಬ ನಾಮಾಂತರದಿಂದ ವ್ಯವಹರಿಸಲ್ಪಡುವವಳೂ, ಸಮಸ್ತಕ್ಕೂ ಉಪಾದಾನಕಾರಣಳೂ, ಸೃಷ್ಟಿಕಾರಣಳೂ, ಬ್ರಹ್ಮನ ಪ್ರೇಮಪಾತ್ರಳೂ ಆದ ಸಾವಿತ್ರಿಯು ನನ್ನಲ್ಲಿ ಸೌಮನಸ್ಯವುಳ್ಳವಳಾಗಲಿ ಎಂದು ಇದರ ಭಾವವು.

"ರಾಜ್ಞೀಃ ಭಾನುಮತೀ ಸಂಜ್ಞಾ ನಿತ್ಯಭಾ ಭಾಸ್ಕರಪ್ರಿಯಾ'' ಇದು ಸೂರ್ಯಪತ್ನಿಯಾದ ರಾಜ್ಞೀ ಪ್ರಾರ್ಥನಾಮಂತ್ರ. ಪ್ರಕಾಶಸಹಿತಳೂ ನಿತ್ಯತೇಜಸ್ವಿನಿಯೂ, ಸೂರ್ಯನಿಗೆ ಪ್ರೀತಿಪಾತ್ರಳೂ ಆದ ರಾಜ್ಞೀದೇವಿಯು ನನಗೆ ಸುಪ್ರೀತಳಾಗಲಿ ಎಂದು ಇದರ ತಾತ್ಪರ್ಯ.

೨೨. ಈರೀತಿ ಶ್ರೀ ಮಹಾವಿಷ್ಣು, ಶಂಕರ, ಬ್ರಹ್ಮ, ಸೂರ್ಯ ಇವರುಗಳನ್ನು ಅವರವರ ಪತ್ನೀಸಹಿತ ಪೂಜಿಸಿ ತತ್ತದ್ದೇವತಾ ಪ್ರೀತ್ಯರ್ಥವಾಗಿ ದಾನಗಳನ್ನು ಕೊಟ್ಟು ಕೊನೆಯಲ್ಲಿ ಭೋಜನಮಾಡಿ ಸ್ವಗೃಹಕ್ಕೆ ಹೋಗಬೇಕು.

೨೩. ಈ ಕಾಲದಲ್ಲಿ ದ್ವಾದಶೀ ತಿಥಿಯಲ್ಲಿ ಪುರುಷನು ಭಕ್ತಿಯುತನಾಗಿ ಈ ವ್ರತವನ್ನು ಆಚರಿಸಿದರೆ ಅವನಿಗೆ ಕೀರ್ತಿಲಾಭ, ಧನಲಾಭ, ಸತ್ಸಂತಾನ ಲಾಭ ಇವುಗಳು ಉಂಟಾಗುವುದಲ್ಲದೆ ಅವನು ಸರ್ವದುಃಖವಿನಿರ್ಮುಕ್ತನಾಗುತ್ತಾನೆ.

ಹರಿಹರಹಿರಣ್ಯಗರ್ಭ ।
ಪ್ರಭಾಕರಾಣಾಂ ಕ್ರಮೇಣ ಲೋಕೇಷು ।
ಭುಕ್ತ್ವಾ ಭೋಗಾನ್ವಿಪುಲಾ ।
ನಥ ಯೋಗೀ ನಿರ್ವೃತೋ ಭವತಿ ॥ ೨೪ ॥

ಸ್ತ್ರೀಪುಂಸೋರ್ಯದಿ ಯುಗ್ಮಂ ।
ಪುರುಷೋ ವಾ ಯದಿ ಸಮಾಚರತಿ ಕಶ್ಚಿತ್ ।
ನಾರೀ ವಾ ವ್ರತಮೇತ ।
ಚ್ಚೀತ್ವಾರ್ಗ ಯಾತ್ಯಾಲಯಂ ವಿಷ್ಣೋಃ ॥ ೨೫ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಹರಿಹರಹಿರಣ್ಯಗರ್ಭ ಪ್ರಭಾಕರಾಣಾ ಮಪಿಯೋಗವ್ರತಂ ನಾಮಾಷ್ಟಷಷ್ಟಿತಮೋಽಧ್ಯಾಯಃ.



---

೨೪. ಅಲ್ಲದೆ ಅವನು ದೇಹಾಂತದಲ್ಲಿ ಹರಿ, ಹರ, ಹಿರಣ್ಯಗರ್ಭ, (ಬ್ರಹ್ಮ) ಆದಿತ್ಯ ಇವರುಗಳ ಲೋಕಕ್ಕೆ ಹೋಗಿ ಕ್ರಮವಾಗಿ ಪ್ರತಿಲೋಕದಲ್ಲೂ ಬಹು ಭೋಗಗಳನ್ನನುಭವಿಸಿ, ಅನಂತರ ವಿರಕ್ತನಾದ ಯೋಗಿಯಾಗಿ ಮುಕ್ತ ನಾಗುವನು.

೨೫. ಈ ವ್ರತವನ್ನು ಗಂಡಹೆಂಡಿರು ಇಬ್ಬರೂ ಜೊತೆಯಲ್ಲಿ ಆಚರಿಸಿದರೂ, ಅಥವಾ ಗಂಡನು ಮಾತ್ರವೇ ಅಥವಾ ಹೆಂಡತಿ ಮಾತ್ರವೇ ಆಚರಿಸಿದರೂ, ಅವರುಗಳ ಈ ವ್ರತಾಚರಣೆಯ ಫಲದಿಂದ ಶ್ರೀ ಮಹಾವಿಷ್ಣುವಿನ ವಾಸಸ್ಥಾನ ವಾದ ವೈಕುಂಠಕ್ಕೆ ಹೋಗುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಹರಿ ಹರ ಹಿರಣ್ಯಗರ್ಭ ಪ್ರಭಾಕರರ ಅವಿಯೋಗ ವ್ರತವರ್ಣನೆಯೆಂಬ ಅರವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಏಕೋನಸಪ್ತತಿತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಅಕ್ಷೋಹಿಣ್ಯೋ ದಶಾಷ್ಟೌ ಚ ಮದ್ರಾಜ್ಯಾರ್ಥೇ ಕ್ಷಯಂ ಗತಾಃ ।
ತೇನ ಪಾಪೇನ ಮೇ ಚಿತ್ತೇ ಜುಗುಪ್ಸಾತೀವ ವರ್ತತೇ ॥ ೧ ॥

ತತ್ರ ಬ್ರಾಹ್ಮಣರಾಜನ್ಯವೈಶ್ಯಶೂದ್ರಾದಯೋ ಹತಾಃ ।
ಭೀಷ್ಮದ್ರೋಣಕಲಿಂಗಾದಿಕರ್ಣಶಲ್ಯಸುಯೋಧನಾಃ ॥ ೨ ॥

ತೇಷಾಂ ವಧೇನ ಯತ್ಪಾಪಂ ತನ್ಮೇ ಮರ್ಮಾಣಿ ಕೃಂತತಿ ।
ಪಾಪಪ್ರಕ್ಷಾಲನಂ ಕಂಚಿದ್ಧರ್ಮಂ ಬ್ರೂಹಿ ಜಗತ್ಪತೇ ॥ ೩ ॥

---

## ಅರವತ್ತೊಂಭತ್ತನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ಶ್ರೀ ಕೃಷ್ಣನೇ! ನನ್ನ ರಾಜ್ಯ ಪ್ರಾಪ್ತಿಗಾಗಿ ಹದಿನೆಂಟು ಅಕ್ಷೌಹಿಣೀ ಸೈನ್ಯವು ನಾಶವಾಯಿತು. ಅಷ್ಟುಜನರ ವಿನಾಶದ ಪಾಪದಿಂದ ನನ್ನ ಮನಸ್ಸಿಗೆ ಅತಿ ಜುಗುಪ್ಸೆಯುಂಟಾಗಿದೆ.

೨. ನನಗೆ ರಾಜ್ಯ ಲಾಭವಾಗುವ ಉದ್ದೇಶದಿಂದ ನಡೆಸಿದ ಯುದ್ಧದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರಾದಿ ಎಲ್ಲಾ ವರ್ಣದವರೂ ಮೃತಿಹೊಂದಿದರು. ಭೀಷ್ಮ, ದ್ರೋಣ, ಮುಂತಾದ ಆಚಾರ್ಯರೂ, ಕಲಿಂಗಾಧಿಪತಿ, ಕರ್ಣ, ಶಲ್ಯ, ಸುಯೋಧನ ಇತ್ಯಾದಿ ಮಹಾವೀರರೂ ಹತರಾದರು.

೩. ಓ ಜಗತ್ಪತಿಯೇ! ಅವರನ್ನು ವಧೆಮಾಡಿಸಿದ್ದರಿಂದ ಉತ್ಪನ್ನವಾದ ಪಾಪವು ನನಗೆ ಮರ್ಮವೇದನೆಯನ್ನು ಹುಟ್ಟಿಸುತ್ತಿದೆ. ಆದುದರಿಂದ ಈ ಪಾಪವನ್ನು ಹೋಗಲಾಡಿಸಿಕೊಳ್ಳಲು ಸಾಧನವಾದ ಒಂದು ಧರ್ಮವನ್ನು ಉಪದೇಶಿಸು ಎಂದನು.

॥ ಶ್ರೀ ಕೃಷ್ಣ ಉವಾಚ ॥

ಸುಮಹತ್ಪುಣ್ಯಜನನಂ ಗೋವತ್ಸದ್ವಾದಶೀವ್ರತಂ ।
ಅಸ್ತಿ ಪಾರ್ಥ ಮಹಾಬಾಹೋ ಪಾಂಡವಾನಾಂ ಧುರಂಧರ ॥ ೪ ॥

॥ ಯುಧಿಷ್ಠಿರ ಉವಾಚ ॥

ಕೇಯಂ ಗೋದ್ವಾದಶೀ ನಾಮ ವಿಧಾನಂ ತತ್ರ ಕೀದೃಶಂ ।
ಕಥಮೇಷಾ ಸಮುತ್ಪನ್ನಾ ಕಸ್ಮಿನ್ಕಾಲೇ ಜನಾರ್ದನ ॥ ೫ ॥

ಏತತ್ಸರ್ವಂ ಹರೇ ಬ್ರೂಹಿ ಪಾಹಿ ಮಾಂ ನರಕಾರ್ಣವಾತ್ ॥ ೬ ॥

॥ ಶ್ರೀ ಕೃಷ್ಣ ಉವಾಚ ॥

ಪುರಾ ಕೃತಯುಗೇ ಪಾರ್ಥ ಮುನಿಕೋಟಿಃ ಸಮಾಗತಾ ।
ತಪಶ್ಚಚಾರ ವಿಪುಲಂ ನಾಮವ್ರತಧರಾ ಗಿರೌ ॥ ೭ ॥

---

೪. ಶ್ರೀ ಕೃಷ್ಣನು ಹೇಳುತ್ತಾನೆ—ಪಾಂಡವಧುರಂಧರನಾಗಿಯೂ, ಮಹಾಬಾಹುಶಾಲಿಯಾಗಿಯೂ ಇರುವ ಧರ್ಮಜನೇ ! ಕೇಳು. ಗೋವತ್ಸದ್ವಾದಶೀ ಎಂಬ ಮಹಾಪುಣ್ಯಜನಕವಾದ ಒಂದು ವ್ರತವಿದೆ ಎಂದನು.

೫. ಯುಧಿಷ್ಠಿರನು ಹೇಳುತ್ತಾನೆ–ಅಯ್ಯಾ ಜನಾರ್ದನನೇ ! ಗೋವತ್ಸದ್ವಾದಶೀ ವ್ರತವೆಂದರೇನು ? ಆ ವ್ರತದ ಆಚರಣೆಯ ವಿಧಾನವೇನು ? ಈ ವ್ರತವು ಹೇಗೆ ಹುಟ್ಟಿ ಪ್ರಸಿದ್ಧಿಗೆ ಬಂದಿತು ? ಅದನ್ನು ಯಾವ ಕಾಲದಲ್ಲಿ ಆಚರಿಸಬೇಕು ?

೬. ಅಯ್ಯಾ ಶ್ರೀ ಹರಿಯೇ ! ಈ ಎಲ್ಲ ವಿಷಯಗಳನ್ನೂ ನನಗೆ ಹೇಳಿ, ನರಕವೆಂಬ ಸಾಗರದಿಂದ ನನ್ನನ್ನು ಉದ್ಧರಿಸು ಎಂದನು.

೭. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಕುಂತೀಪುತ್ರನೇ ! ಪೂರ್ವದಲ್ಲಿ ಕೃತಯುಗದಲ್ಲಿ ವ್ರತನಿಯಮಪರರಾಗಿ ಸಹಸ್ರಾರು ಋಷಿಗಳು ಶ್ರೀ ಪರಮೇಶ್ವರನ ಸಂದರ್ಶನಾಭಿಲಾಷೆಯಿಂದ ಮಹಾಸಂತೋಷಭರಿತರಾಗಿ ಪರ್ವತ ಸಮೀಪಕ್ಕೆ ಬಂದರು.

[illegible] ಮಹತಾವಿಷ್ಟಾ ದೈವದರ್ಶನಕಾಂಕ್ಷಯಾ ।
ಜಂಬೂಮಾರ್ಗೇ ಮಹಾಪುಣ್ಯೇ ನಾಮತೀರ್ಥವಿಭೂಷಿತೇ ॥ ೮ ॥

ಪಾರಿಯಾತ್ರೇ ಸಿದ್ಧಪಾತ್ರೇ ರಮ್ಯೇ ತಂದುಲಿಕಾಶ್ರಮೇ ।
ಟಂಟಾವಿರಿತಿ ವಿಖ್ಯಾತೇ ಉತ್ತಮೇ ಶಿಖರೇ ನೃಪ ॥ ೯ ॥

ತಾಪಸಾರಣ್ಯಮತುಲಂ ದಿವ್ಯಕಾನನಮಂಡಿತಂ ।
ವಸಿಷ್ಠಶುಕ್ರಾಂಗಿರಸಕ್ರತುದಕ್ಷಾದಿಭಿರ್ವೃತಂ ॥ ೧೦ ॥

ವಲ್ಕಲಾಜಿನಸಂವೀತೈರ್ಭೃಗೋರಾಶ್ರಮಮಂಡಲಂ ।
ನಾನಾಮೃಗಗಣೈರ್ಜುಷ್ಟಂ ಶಾಖಾಮೃಗಗಣೈರ್ಯುತಂ ॥ ೧೧ ॥

---

೮. ಜಂಬೂಮಾರ್ಗವೆಂಬ ಹೆಸರಿನ ಮಹಾಪುಣ್ಯ ಕ್ಷೇತ್ರವಾಗಿಯೂ, ಪುಣ್ಯತೀರ್ಥದಿಂದ ಅಲಂಕೃತವಾಗಿಯೂ ಇರುವ ಆ ಸ್ಥಲದಲ್ಲಿ ಕೆಲವರು ಮಹಾ ತಪಸ್ಸನ್ನಾಚರಿಸತೊಡಗಿದರು.

೯. ಅಲ್ಲೇ ಪಾರಿಯಾತ್ರವೆಂಬ ಪ್ರದೇಶದಲ್ಲಿ ಕೆಲವರು, ಸಿದ್ಧಪಾತ್ರದಲ್ಲಿ ಇನ್ನು ಕೆಲವರು, ರಮ್ಯವಾದ ತಂದುಲಿತಾಶ್ರಮ, ಟಂಟಾವಿ ಎಂದು ಪ್ರಖ್ಯಾತವಾದ ಉತ್ತಮಗಿರಿಶಿಖರ ಇವುಗಳಲ್ಲಿ ಹಲವರು ತಪಸ್ಸನ್ನು ಮಾಡಲು ಉಪಕ್ರಮಿಸಿದರು.

೧೦. ಆ ತಪೋವನವು ದಿವ್ಯವೃಕ್ಷಗಳಿಂದ ಅಲಂಕೃತವೂ, ವಸಿಷ್ಠ, ಶುಕ, ಆಂಗೀರಸ, ಕ್ರತು, ದಕ್ಷ ಇತ್ಯಾದಿ ಋಷಿಗಳಿಂದ ಪರಿವೃತವೂ ಆಗಿ, ಅಸದೃಶವಾಗಿತ್ತು.

೧೧. ಪರ್ವತದ ತಪ್ಪಲಿನಲ್ಲಿರುವ ಆ ಆಶ್ರಮಪ್ರದೇಶದಲ್ಲಿ ನಾರುಬಟ್ಟೆ, ಕೃಷ್ಣಾಜಿನ ಇವುಗಳನ್ನು ಹರವಿದ್ದರು. ಅದು ನಾನಾವಿಧವಾದ ಮೃಗಸಮೂಹಗಳಿಗೆ ಆಶ್ರಯಸ್ಥಾನವೂ ಕಪಿಗಳ ಸಮೂಹಸಹಿತವೂ ಆಗಿದ್ದಿತು.

ಪ್ರಶಾಂತಸಿಂಹಹರಿಣಂ ಸರ್ವವಸ್ತುಗತದ್ರುಮಂ ।
ಗಹನಂ ನಿರ್ಝರಂ ರಮ್ಯಂ ಲತಾಸಂತಾನಸಂಕುಲಂ ॥ ೧೨ ॥

ಸಿಂಹವ್ಯಾಘ್ರಗಜೈರ್ಭಿನ್ನಂ ಹರಿಣೈಃ ಶಬರೈಃ ಶಶೈಃ ।
ವರಾಹೈರುರುಭಿಶ್ಚಿತ್ರೈಃ ಸಮಂತಾದುಪಶೋಭಿತಂ ॥ ೧೩ ॥

ತಪಸ್ಯತಾಂ ತತ್ರ ತೇಷಾಂ ಮುನೀನಾಂ ದರ್ಶನಾರ್ಥಿನಾಂ ।
ವ್ಯಾಜಂ ಚಕ್ರೇ ಮಹೀನಾಥ ದ್ವಾದಶಾರ್ಧಾರ್ಧಲೋಚನಃ ॥ ೧೪ ॥

ಬಭೂವ ಬ್ರಾಹ್ಮಣೋ ವೃದ್ಧೋ ಜರಾಪಾಂಡುರಮೂರ್ಧಜಃ ।
ಶ್ಲಥಚ್ಚರ್ಮತನುಃ ಕುಬ್ಜೋ ಯಷ್ಟಿಪಾಣಿಃ ಸವೇಪಥುಃ ।
ಉಮಾಪಿ ಚಕ್ರೇ ಗೋರೂಪಂ ಶೃಣು ತತ್ಪಾರ್ಥ ಯಾದೃಶಂ ॥ ೧೫ ॥

---

೧೨. ಮತ್ತು ಆ ಆಶ್ರಮಪರಿಸರದಲ್ಲಿ ಜಿಂಕೆ, ಸಿಂಹ ಇವೆರಡು ಪ್ರಾಣಿಗಳೂ ತಮ್ಮ ದ್ವೇಷವನ್ನು ತ್ಯಜಿಸಿ ಶಾಂತವಾಗಿದ್ದುವು. ಅಪೇಕ್ಷಿತವಾದ ಸರ್ವವಸ್ತುಗಳೂ ವೃಕ್ಷಗಳ ಮೂಲಕ ದೊರಕುತ್ತಿತ್ತು. ಘೋರಾರಣ್ಯವಾದರೂ ಪರಿವೃತವಾದ ಲತೆಗಳ ಸಮೂಹದಿಂದ ಸುಂದರವಾಗಿತ್ತು.

೧೩. ಅಲ್ಲದೆ ಆ ಆಶ್ರಮ ಪ್ರದೇಶದ ಸುತ್ತಲೂ ಸಿಂಹ, ಹುಲಿ, ಆನೆ, ಜಿಂಕೆ, ಮೊಲ, ಹಂದಿ, ಕೃಷ್ಣಮೃಗ ಇವುಗಳೂ, ವ್ಯಾಧರೂ ಓಡಾಡಿಕೊಂಡಿರುವುದರಿಂದ ಅದೂ ಒಂದು ರೀತಿ ಶೋಭಾಯಮಾನವಾಗಿರುತ್ತಿತ್ತು.

೧೪. ಅಯ್ಯಾ ಭೂಪತಿಯೇ! ಈಶ್ವರನನ್ನು ಕಾಣಬೇಕೆಂಬಾಶೆಯಿಂದ ಆ ಆಶ್ರಮದಲ್ಲಿ ತಪಸ್ಸನ್ನು ಆಚರಿಸುತ್ತಿರುವ ಆ ಮುನಿಗಳನ್ನು ಪರೀಕ್ಷಿಸುವುದಕ್ಕೋಸ್ಕರವಾಗಿ ತ್ರಿಲೋಚನನಾದ ಶ್ರೀ ಪರಮೇಶ್ವರನು ಒಂದು ಕಪಟವನ್ನು ಹೂಡಿದನು.

೧೫. ಅದೇನೆಂದರೆ :—ಆ ಪರಮೇಶ್ವರನು ಮುಪ್ಪಿನಿಂದ ನರೆತುಹೋದ ಕೂದಲುಗಳುಳ್ಳವನೂ, ಸುಕ್ಕುಗಟ್ಟಿದ ಚರ್ಮವುಳ್ಳವನೂ, ಕುಬ್ಜಾಕಾರವುಳ್ಳವನೂ, ಕೈಯಲ್ಲಿ ಊರುಗೋಲು ಹಿಡಿದವನೂ, ನಡುಗುವ ದೇಹವುಳ್ಳವನೂ, ಆಗಿರುವ ವೃದ್ಧಬ್ರಾಹ್ಮಣನ ವೇಷವನ್ನು ಧರಿಸಿದನು. ಅವನ ಪತ್ನಿಯಾದ ಪಾರ್ವತಿಯು ಗೋರೂಪವನ್ನು ಧರಿಸಿದಳು. ಆ ಗೋಸ್ವರೂಪವು ಹೇಗಿತ್ತೆಂಬುದನ್ನು ವರ್ಣಿಸುವೆನು ಕೇಳು.

ಕ್ಷೀರೋದತೋಯಸಂಭೂತಾ ಯಾಃ ಪುರಾಮೃತಮಂಥನೇ ।
ಪಂಚ ಗಾವಃ ಶುಭಾಃ ಪಾರ್ಥ ಪಂಚಲೋಕಸ್ಯ ಮಾತರಃ ॥ ೧೬ ॥

ನಂದಾ ಸುಭದ್ರಾ ಸುರಭೀ ಸುಶೀಲಾ ಬಹುಲಾ ಇತಿ ।
ಏತಾ ಲೋಕೋಪಕಾರಾಯ ದೇವಾನಾಂ ತರ್ಪಣಾಯ ಚ ॥ ೧೭ ॥

ಜಮದಗ್ನಿ ಭರದ್ವಾಜವಸಿಷ್ಠಾಸಿತಗೌತಮಾಃ ।
ಜಗೃಹುಃ ಕಾಮದಾಃ ಪಂಚ ಗಾವೋ ದತ್ತಾಃ ಸುರೈಸ್ತತಃ ॥ ೧೮ ॥

ಗೋಮಯಂ ರೋಚನಾ ಮೂತ್ರಂ ಕ್ಷೀರಂ ದಧಿ ಘೃತಂ ಗವಾಂ ।
ಷಡಂಗಾನಿ ಪವಿತ್ರಾಣಿ ಸಂಶುದ್ಧಿಕರಣಾನಿ ಚ ॥ ೧೯ ॥

---

೧೬. ಅಯ್ಯಾ ಕುಂತೀಪುತ್ರನೇ! ಪೂರ್ವದಲ್ಲಿ ಅಮೃತಕ್ಕಾಗಿ ಸಮುದ್ರ ಮಥನಮಾಡಿದ ಕಾಲದಲ್ಲಿ, ಆ ಕ್ಷೀರಸಾಗರದದಿಂದ ಲೋಕಗಳಿಗೆ ಮಾತೃ ಸ್ವರೂಪವಾಗಿಯೂ, ಮಂಗಳ ಪ್ರದವಾಗಿಯೂ ಇರುವ ಐದು ಗೋವುಗಳು ಹುಟ್ಟಿದುವು.

೧೭. ಅವುಗಳಿಗೆ ನಂದಾ, ಸುಭದ್ರಾ, ಸುರಭಿ, ಸುಶೀಲಾ, ಬಹುಲಾ ಎಂಬ ಹೆಸರು. ಅವು ಲೋಕೋಪಕಾರ ಮಾಡುವುದಕ್ಕಾಗಿಯೂ, ದಧಿ, ಕ್ಷೀರ, ಘೃತಾದಿ ಹವಿಸ್ಸನ್ನು ಕೊಟ್ಟು ದೇವತೆಗಳನ್ನು ತೃಪ್ತಿಪಡಿಸುವುದಕ್ಕಾಗಿಯೂ ಅವಿರ್ಭವಿಸಿದುವು.

೧೮. ಅನಂತರ ಸಕಲ ಇಷ್ಟಾರ್ಥಗಳನ್ನೂ ಪೂರೈಸಿಕೊಡುವ ಆ ಐದು ಹಸುಗಳನ್ನು; ಜಮದಗ್ನಿ, ಭಾರದ್ವಾಜ, ವಸಿಷ್ಠ, ಅಸಿತ, ಗೌತಮ ಎಂಬ ಐದು ಮಂದಿ ಮಹರ್ಷಿಗಳು ದೇವತೆಗಳಿಂದ ಪ್ರತಿಗ್ರಹಮಾಡಿದರು.

೧೯. ಗೋಮಯ, ಗೋರೋಚನ, ಗೋಮೂತ್ರ, ಗೋಕ್ಷೀರ, ಗೋದಧಿ, ಗೋಘೃತಗಳೆಂಬದಾಗಿ ಗೋಶರೀರದಿಂದ ಲಬ್ಧವಾಗುವ ಈ ಆರು ಪದಾರ್ಥಗಳು ಪರಮಪವಿತ್ರವಾದುವು. ಇವು ಅಪವಿತ್ರವಾದ ವಸ್ತುಗಳನ್ನು ಶುದ್ಧಿ ಮಾಡುವುದಕ್ಕೆ ಸಾಧನಗಳಾಗಿವೆ.

ಗೋಮಯಾದುತ್ಥಿತಃ ಶ್ರೀಮಾನ್ಬಿಲ್ವವೃಕ್ಷಃ ಶಿವಪ್ರಿಯಃ ।
ತತ್ರಾಸ್ತೇ ಪದ್ಮಹಸ್ತಾ ಶ್ರೀಃ ಶ್ರೀವೃಕ್ಷಸ್ತೇನ ಸ ಸ್ಮೃತಃ ।
ಬೀಜಾನ್ಯುತ್ಪಲಪದ್ಮಾನಾಂ ಪುನರ್ಜಾತಾನಿ ಗೋಮಯಾತ್ ॥ ೨೦ ॥

ಗೋರೋಚನಾ ಚ ಮಾಂಗಲ್ಯಾ ಪವಿತ್ರಾ ಸರ್ವಸಾಧಿಕಾ ।
ಗೋಮೂತ್ರಾದ್ಗುಗ್ಗುಲುರ್ಜಾತಃ ಸುಗಂಧಿಃ ಪ್ರಿಯದರ್ಶನಃ ।
ಆಘ್ರೇಯಃ ಸರ್ವದೇಹಾನಾಂ ಶಿವಸ್ಯ ಚ ವಿಶೇಷತಃ ॥ ೨೧ ॥

ಯದ್ಬೀಜಂ ಜಗತಃ ಕಿಂಚಿತ್ತಜ್ಜ್ಞೇಯಂ ಕ್ಷೀರಸಂಭವಂ ।
ದಧ್ನಃ ಸರ್ವಾಣಿ ಜಾತಾನಿ ಮಂಗಲಾನ್ಯರ್ಥಸಿದ್ಧಯೇ ।
ಘೃತಾದಮೃತಮುತ್ಪನ್ನಂ ದೇವಾನಾಂ ತೃಪ್ತಿಕಾರಣಂ ॥ ೨೨ ॥

---

೨೦. ಗೋವಿನ ಅಂಗಸಂಭೂತವಾದ ಆ ಗೋಮಯದಿಂದ ಶ್ರೀ ಶಿವನಿಗೆ ಪ್ರೀತಿಪಾತ್ರವಾದ ಶ್ರೀ ಬಿಲ್ವವೃಕ್ಷವು ಹುಟ್ಟಿತು. ಆ ಬಿಲ್ವವೃಕ್ಷದಲ್ಲಿ ಪದ್ಮಹಸ್ತೆಯಾದ ಶ್ರೀ ಮಹಾಲಕ್ಷ್ಮಿಯು ವಾಸವಾಗಿದ್ದಾಳೆ. ಅದರಿಂದ ಆ ವೃಕ್ಷವು ಶ್ರೀ ವೃಕ್ಷವೆಂದು ಮಹರ್ಷಿಗಳಿಂದ ವರ್ಣಿತವಾಗಿದೆ. ಮತ್ತು ನೈದಿಲೆ, ಕಮಲ ಇವುಗಳ ಬೀಜಗಳೂ ಗೋಮಯದಿಂದಲೇ ಹುಟ್ಟಿದುವು.

೨೧. ಎರಡನೆಯದಾದ ಗೋರೋಚನವು ಮಂಗಳವಸ್ತುವೂ, ಪರಮ ಪವಿತ್ರವೂ, ಸರ್ವಾರ್ಥಸಾಧಕವೂ ಆಗಿದೆ. ಇನ್ನು ಗೋಮೂತ್ರದಿಂದ ಸುಂದರವೂ, ಸುಗಂಧವುಳ್ಳದ್ದೂ ಆದ ಗುಗ್ಗುಲು ಧೂಪವು ಜನಿಸಿತು. ಆ ಗುಗ್ಗುಲವು ಸರ್ವದೇವತೆಗಳಿಗೂ ಆಘ್ರಾಣಿಸುವುದಕ್ಕೆ ಯೋಗ್ಯವಾಗಿದೆ. ಶ್ರೀ ಶಿವನಿಗೆ ವಿಶೇಷತಃ ಅದು ಪ್ರೀತಿಪಾತ್ರವಾಗಿದೆ.

೨೨. ಜಗತ್ತಿಗೆ ಯಾವುದು ಪ್ರಾಣಾಧಾರ (ಬೀಜ) ವಾಗಿದೆಯೋ ಅದು ಗೋಕ್ಷೀರದಿಂದ ಹುಟ್ಟಿತೆಂದು ತಿಳಿಯಬೇಕು. ಹೀಗೆ ಗೋವಿನಿಂದ ಜನಿಸಿದ ಎಲ್ಲ ವಸ್ತುಗಳು ಮಂಗಲಕರಗಳು. ಗೋಘೃತದಿಂದ ದೇವತೆಗಳ ತೃಪ್ತಿಗೆ ಕಾರಣವಾದ ಅಮೃತವು ಜನಿಸಿತು.

**ಬ್ರಾಹ್ಮಣಾಶ್ಚೈವ ಗಾವಶ್ಚ ಕುಲಮೇಕಂ ದ್ವಿಧಾ ಕೃತಂ ।**
**ಏಕತ್ರ ಮಂತ್ರಾಸ್ತಿಷ್ಠಂತಿ ಹವಿರನ್ಯತ್ರ ತಿಷ್ಠತಿ ॥ ೨೩ ॥**

**ಗೋಷು ಯಜ್ಞಾಃ ಪ್ರವರ್ತಂತೇ ಗೋಷು ದೇವಾಃ ಪ್ರತಿಷ್ಠಿತಾಃ ।**
**ಗೋಷು ವೇದಾಃ ಸಮುತ್ಕೀರ್ಣಾಃ ಷಡಂಗಸಪದಕ್ರಮಾಃ ॥ ೨೪ ॥**

**ಶೃಂಗಮೂಲೇ ಗವಾಂ ನಿತ್ಯಂ ಬ್ರಹ್ಮಾ ವಿಷ್ಣುಶ್ಚ ಸಂಸ್ಥಿತೌ ।**
**ಶೃಂಗಾಗ್ರೇ ಸರ್ವತೀರ್ಥಾನಿ ಸ್ಥಾವರಾಣಿ ಚರಾಣಿ ಚ ॥ ೨೫ ॥**

**ಶಿರೋ ಮಧ್ಯೇ ಮಹಾದೇವಃ ಸರ್ವಕಾರಣಕಾರಣಂ ।**
**ಲಲಾಟೇ ಸಂಸ್ಥಿತಾ ಗೌರೀ ನಾಸಾವಂಶೇ ಚ ಷಣ್ಮುಖಃ ॥ ೨೬ ॥**

---

೨೩. ಪೂರ್ವದಲ್ಲಿ ಒಂದು ಕುಲವನ್ನು ಬ್ರಾಹ್ಮಣ, ಗೋ, ಎಂಬದಾಗಿ ಎರಡಾಗಿ ವಿಭಾಗಮಾಡಿದರು. ಆ ಪೈಕಿ ಒಂದು ಭಾಗವಾದ ಬ್ರಾಹ್ಮಣರಲ್ಲಿ ಕರ್ಮೋಪಯುಕ್ತ ಮಂತ್ರಗಳೆಲ್ಲಾ ನೆಲೆಯಾಗಿವೆ. ಇನ್ನೊಂದು ಭಾಗವಾದ ಗೋವಿನಲ್ಲಿ ಕರ್ಮಸಾಧನವಾದ ಘೃತಾದಿ ಹವಿಸ್ಸು ಪ್ರತಿಷ್ಠಿತವಾಗಿದೆ.

೨೪. ಗೋವುಗಳಿದ್ದರೇ ಯಜ್ಞಗಳು ನಡೆಯುವುವು. ಗೋವುಗಳಲ್ಲಿಯೇ ಎಲ್ಲ ದೇವತೆಗಳೂ ಪ್ರತಿಷ್ಠಿತರಾಗಿದ್ದಾರೆ. ಗೋವುಗಳಲ್ಲಿಯೇ ಎಲ್ಲಾ ವೇದಗಳೂ ಅಡಕವಾಗಿವೆ. ಶಿಕ್ಷಾ, ಕಲ್ಪ, ವ್ಯಾಕರಣ, ಛಂದಸ್ಸು, ನಿರುಕ್ತ ಜ್ಯೋತಿಷಗಳೆಂಬ ಷಡಂಗಗಳೂ; ಪದಪಾಠ, ಕ್ರಮಪಾಠ ಇತ್ಯಾದಿ ವೇದಭಾಗಗಳೂ ಗೋವುಗಳಲ್ಲೇ ನೆಲೆಯಾಗಿವೆ.

೨೫. ಗೋವುಗಳ ಎರಡು ಕೊಂಬುಗಳ ಮೂಲದಲ್ಲಿ ಯಾವಾಗಲೂ ಬ್ರಹ್ಮ, ವಿಷ್ಣು, ಇವರು ವಾಸವಾಗಿರುತ್ತಾರೆ. ಆ ಕೊಂಬುಗಳ ತುದಿಯಲ್ಲಿ ಸರ್ವತೀರ್ಥಗಳೂ ಚರಾಚರಪ್ರಾಣಿಗಳೂ ಇರುವುವು.

೨೬. ಸರ್ವಪ್ರಪಂಚಕ್ಕೂ ಜನಕನು ಚತುರ್ಮುಖಬ್ರಹ್ಮನು. ಆವನ ಸ್ಥಿತಿಗೆ ಕಾರಣನೂ ಮಹಾದೇವನೂ ಆದ ಈಶ್ವರನು, ಈ ಗೋವಿನ ಶಿರೋಮಧ್ಯದಲ್ಲಿರುವನು. ಲಲಾಟಸ್ಥಾನದಲ್ಲಿ ಪಾರ್ವತಿಯು ವಾಸವಾಗಿರುವಳು. ನಾಸಿಕೆಯ ದಂಡದಲ್ಲಿ ಷಣ್ಮುಖನು ವಾಸವಾಗಿದ್ದಾನೆ.

ಕಂಬಲಾಶ್ವತರೌ ನಾಗೌ ನಾಸಾಪುಟಸಮಾಶ್ರಿತೌ ।
ಕರ್ಣಯೋರಶ್ವಿನೌ ದೇವೌ ಚಕ್ಷುಭ್ಯಾಂ ಶಶಿಭಾಸ್ಕರೌ ॥ ೨೭ ॥

ದಂತೇಷು ವಸವಃ ಸರ್ವೇ ಜಿಹ್ವಾಯಾಂ ವರುಣಃ ಸ್ಥಿತಃ ।
ಸರಸ್ವತೀ ಚ ಕುಹರೇ ಯಮಯಕ್ಷೌ ಚ ಗಂಡಯೋಃ ॥ ೨೮ ॥

ಸಂಧ್ಯಾದ್ವಯಂ ತಥೋಷ್ಠಾಭ್ಯಾಂ ಗ್ರೀವಾಯಾಂ ಚ ಪುರಂದರಃ ।
ರಕ್ಷಾಂಸಿ ಕಕುದೇ ದ್ಯೌಶ್ಚ ಪಾರ್ಶ್ವಕಾಯೋ ವ್ಯವಸ್ಥಿತಾ ॥ ೨೯ ॥

ಚತುಷ್ಪಾತ್ಸಕಲೋ ಧರ್ಮೋ ನಿತ್ಯಂ ಜಂಘಾಸು ತಿಷ್ಠತಿ ।
ಖುರಮಧ್ಯೇಷು ಗಂಧರ್ವಾಃ ಖುರಾಗ್ರೇಷು ಚ ಪನ್ನಗಾಃ ॥ ೩೦ ॥

ಖುರಾಣಾಂ ಪಶ್ಚಿಮೋ ಭಾಗೇ ರಕ್ಷಸಾಃ ಸಂಪ್ರತಿಷ್ಠಿತಾಃ ।
ರುದ್ರಾ ಏಕಾದಶ ಪೃಷ್ಠೇ ವರುಣಃ ಸರ್ವಸಂಧಿಷು ॥ ೩೧ ॥

---

೨೭. ಕಂಬಲ, ಅಶ್ವತರ ಎಂಬ ಎರಡು ಸರ್ಪಗಳು ಆ ಗೋವಿನ ನಾಸಿಕದ ರಂಧ್ರಗಳಲ್ಲಿರುವುವು. ಎರಡು ಕಿವಿಗಳಲ್ಲಿ ಅಶ್ವಿನೀ ದೇವತೆಗಳೂ, ಕಣ್ಣುಗಳಲ್ಲಿ ಸೂರ್ಯ ಚಂದ್ರರೂ ವಾಸಸುತ್ತಿದ್ದಾರೆ.

೨೮. ಆ ಗೋವಿನ ದಂತಗಳಲ್ಲಿ ಅಷ್ಟವಸುಗಳೂ, ನಾಲಗೆಯಲ್ಲಿ ವರುಣನೂ, ವದನಕುಹರದಲ್ಲಿ ಸರಸ್ವತಿಯೂ, ಗಂಡಸ್ಥಲಗಳಲ್ಲಿ ಯಮ ಮತ್ತು ಕುಬೇರ ಇವರೂ ವಾಸವಾಗಿದ್ದಾರೆ.

೨೯. ಆ ಗೋವುಗಳ ತುಟಿಗಳಲ್ಲಿ ಎರಡು ಸಂಧ್ಯಾದೇವತೆಗಳೂ, ಕತ್ತಿನಲ್ಲಿ ಇಂದ್ರನೂ, ಭುಜದಲ್ಲಿ ರಾಕ್ಷಸರೂ, ಎರಡು ಪಕ್ಕೆಗಳಲ್ಲಿ ದ್ಯುಲೋಕವೂ ನೆಲಸಿವೆ.

೩೦. ನಾಲ್ಕು ಪಾದಯುಕ್ತವಾದ ಸಕಲಧರ್ಮವು ಯಾವಾಗಲೂ ಆ ಗೋವಿನ ನಾಲ್ಕು ಜಂಘಾ ಪ್ರದೇಶಗಳನ್ನು ಆಶ್ರಯಿಸಿದೆ. ಗೊರಸುಗಳ ಮಧ್ಯದಲ್ಲಿ ಗಂಧರ್ವರು ವಾಸವಾಗಿದ್ದಾರೆ. ಗೊರಸುಗಳ ತುದಿಯಲ್ಲಿ ಸರ್ಪಗಳು ವಾಸಿಸುತ್ತವೆ.

೩೧. ಮತ್ತು ಗೋವಿನ ಗೊರಸುಗಳ ಹಿಂಭಾಗದಲ್ಲಿ ರಾಕ್ಷಸರು ಪ್ರತಿಷ್ಠಿತರಾಗಿದ್ದಾರೆ. ಏಕಾದಶ ರುದ್ರರು ಗೋಪೃಷ್ಠಭಾಗದಲ್ಲಿರುವರು. ವರುಣನು ಸರ್ವಾಂಗ ಸಂಧಿಗಳಲ್ಲೂ ಇರುತ್ತಾನೆ.

**[illegible]ೇಶಟಸ್ಥಾಃ ಪಿತರಃ ಕಪೋಲೇಷು ಚ ಮಾನವಾಃ |**
**ಶ್ರೀರಪಾನೇ ಗವಾಂ ನಿತ್ಯಂ ಸ್ವಾಹಾಲಂಕಾರಮಾಶ್ರಿತಾಃ ॥ ೩೨ ॥**

**ಆದಿತ್ಯ ರಶ್ಮಯೋ ವಾಲಾಃ ಪಿಂಡೀಭೂತಾ ವ್ಯವಸ್ಥಿತಾಃ |**
**ಸಾಕ್ಷಾದ್ಗಂಗಾ ಚ ಗೋಮೂತ್ರೇ ಗೋಮಯೇ ಯಮುನಾ ಸ್ಥಿತಾ ॥**

**ತ್ರಯಸ್ತ್ರಿಂಶದ್ದೇವಕೋಟ್ಯೋ ರೋಮಕೂಪೇ ವ್ಯವಸ್ಥಿತಾಃ |**
**ಉದರೇ ಪೃಥಿವೀ ಸರ್ವಾ ಸಶೈಲವನಕಾನನಾ ॥ ೩೪ ॥**

**ಚತ್ವಾರಃ ಸಾಗರಾಃ ಪ್ರೋಕ್ತಾ ಗವಾಂ ಯೇ ತು ಪಯೋಧರಾಃ |**
**ಪರ್ಜನ್ಯಃ ಕ್ಷೀರಧಾರಾಸು ಮೇಘಾ ಬಿಂದುವ್ಯವಸ್ಥಿತಾಃ ॥ ೩೫ ॥**

---

೩೨. ಪಿತೃದೇವತೆಗಳು ಆ ಗೋವಿನ ರುಂಡಿಗಳಲ್ಲಿ ವಾಸವಾಗಿರುವರು. ಕಪೋಲಗಳಲ್ಲಿ ಮನುಷ್ಯರು ವಾಸವಾಗಿದ್ದಾರೆ. ಗೋವುಗಳ ಅಪಾನವಾಯು ಸಂಚಾರಸ್ಥಾನದಲ್ಲಿ ಶ್ರೀ ಮಹಾಲಕ್ಷ್ಮಿಯು ಯಾವಾಗಲೂ ಇರುವಳು. ಸ್ವಾಹಾ ದೇವಿಯು ಗೋ ಅಲಂಕಾರವನ್ನು ಆಶ್ರಯಿಸಿರುತ್ತಾಳೆ.

೩೩. ಆದಿತ್ಯರಶ್ಮಿಗಳು ಪಿಂಡಾಕಾರವಾಗಿ ಒಟ್ಟಿಗೆ ಸೇರಿ, ಗೋವಿನ ಬಾಲವನ್ನು ಆಶ್ರಯಿಸಿರುವುವು. ಗಂಗೆಯು ಗೋಮೂತ್ರದಲ್ಲಿ ಸಾಕ್ಷಾತ್ತಾಗಿ ಸನ್ನಿಹಿತಳಾಗಿರುವಳು. ಗೋಮಯದಲ್ಲಿ ಯಮುನೆಯು ಇದ್ದಾಳೆ.

೩೪. ಮೂವತ್ತುಮೂರುಕೋಟಿ ದೇವತೆಗಳು ಗೋವಿನ ರೋಮಕೂಪಗಳಲ್ಲಿ ವಾಸವಾಗಿದ್ದಾರೆ. ಬೆಟ್ಟ, ಗುಡ್ಡ, ಕಾಡು. ಘೋರಾರಣ್ಯ ಇವುಗಳ ಸಮೇತವಾದ ಈ ಪೃಥಿವಿಯು ಗೋವಿನ ಹೊಟ್ಟೆಯಲ್ಲಿ ನೆಲಸಿದೆ.

೩೫. ಹಸುವಿನ ನಾಲ್ಕು ಮೊಲೆಗಳಲ್ಲಿ ನಾಲ್ಕು ಸಮುದ್ರಗಳು ಇವೆಯೆಂದು ಉಕ್ತವಾಗಿದೆ. ಹಸುವಿನ ಹಾಲಿನ ಧಾರೆಗಳಲ್ಲಿ ಪರ್ಜನ್ಯದೇವತೆಯೂ ಕ್ಷೀರಬಿಂದುಗಳಲ್ಲಿ ವೃಷ್ಟ್ಯಭಿಮಾನ ದೇವತೆಯೂ ವಾಸವಾಗಿದ್ದಾರೆ.

ಜಠರೇ ಗಾರ್ಹಪತ್ಯೋಽಗ್ನಿರ್ದಕ್ಷಿಣಾಗ್ನಿರ್ಹೃದಿ ಸ್ಥಿತಃ ।
ಕಂಠೇ ಆಹವನೀಯೋಽಗ್ನಿಃ ಸಭ್ಯೋಽಗ್ನಿಸ್ತಾಲುನಿ ಸ್ಥಿತಃ ॥ ೩೬ ॥

ಅಸ್ಥಿವ್ಯವಸ್ಥಿತಾಃ ಶೈಲಾ ಮಜ್ಜಾಸು ಕ್ರತವಃ ಸ್ಥಿತಾಃ ।
ಋಗ್ವೇದೋಽಥರ್ವವೇದಶ್ಚ ಸಾಮವೇದೋ ಯಜುಸ್ತಥಾ ॥ ೩೭ ॥

ಸುರಕ್ತಪೀತಕೃಷ್ಣಾದೌ ಗವಾಂ ವರ್ಣೇ ವ್ಯವಸ್ಥಿತಾಃ ।
ತಾಸಾಂ ರೂಪಮುಮಾ ಸ್ಮೃತ್ವಾ ಸುರಭೀಣಾಂ ಯುಧಿಷ್ಠಿರ ॥ ೩೮ ॥

ಸಂಸ್ಮೃತ್ಯ ತತ್ಕ್ಷಣಾದ್ಗೌರೀ ಇಯೇಷ ಸದೃಶೀಂ ತನುಂ ।
ಆತ್ಮಾನಂ ವಿದಧೇ ದೇವೀ ಧರ್ಮರಾಜ ಶೃಣುಷ್ವ ತಾಮ್ ॥ ೩೯ ॥

---

೩೬. ಗೋವಿನ ಉದರದಲ್ಲಿ ಗಾರ್ಹಪತ್ಯಾಗ್ನಿ, ಹೃದಯದಲ್ಲಿ ದಕ್ಷಿಣಾಗ್ನಿ, ಕಂಠದಲ್ಲಿ ಆಹವನೀಯಾಗ್ನಿ, ತಾಲುವಿನಲ್ಲಿ ಸಭ್ಯಾಗ್ನಿ, ಇವು ನೆಲಸಿವೆ.

೩೭. ಗವಾಸ್ಥಿಯಲ್ಲಿ ಪರ್ವತಗಳು ವ್ಯವಸ್ಥಿತವಾಗಿದೆ. ಮಜ್ಜ (ಬೊಜ್ಜು) ವೆಂಬ ಧಾತುವಿನಲ್ಲಿ ಎಲ್ಲಾ ಯಾಗಗಳೂ ವಾಸವಾಗಿವೆ. ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣವೇದಗಳೆಂಬ ಈ ನಾಲ್ಕು ವೇದಗಳು.

೩೮. ಗೋ ದೇಹದ ರಕ್ತ, ಪೀತ, ಕೃಷ್ಣ, ಕಪಿಲ ಇತ್ಯಾದಿ ವರ್ಣಗಳನ್ನು ತಾಳಿ, ಗೋವನ್ನು ಆಶ್ರಯಿಸಿವೆ. ಅಯ್ಯಾ ಯುಧಿಷ್ಠಿರನೇ! ಗೋವುಗಳಿಗೆ ಈ ಸ್ವರೂಪವಿದೆಯೆಂದು ತಿಳಿದಿದ್ದ ಪಾರ್ವತಿಯು ಆ ರೂಪಧರಿಸಬೇಕೆಂದು ಸ್ಮೃತಿಗೆ ತಂದುಕೊಂಡಳು.

೩೯. ಅವಳು ಗೋವಿನ ಈ ಮಹಾಮಹಿಮಸ್ವರೂಪವನ್ನು ಸ್ಮೃತಿಪಥಕ್ಕೆ ತಂದುಕೊಂಡ ಮೇಲೆ ತಾನು ಈ ಗೋಸ್ವರೂಪಧಾರಣೆ ಮಾಡುವುದು ತನ್ನ ಯೋಗ್ಯತೆಗೆ ಅನುರೂಪವಾದುದೆಂದು ಎಣಿಸಿ, ತತ್ಕ್ಷಣವಲ್ಲಿ ತನ್ನನ್ನು ಗೋರೂಪಾಗಿ ಮಾರ್ಪಡಿಸಿಕೊಂಡಳು. ಅಯ್ಯಾ ಧರ್ಮರಾಜನೇ! ಆ ಪಾರ್ವತೀ ದೇವಿಯು ಧರಿಸಿದ ಗೋಸ್ವರೂಪವನ್ನು ವರ್ಣಿಸುತ್ತೇನೆ ಶ್ರವಣಮಾಡು.

**ಷಡುಚ್ಛ್ರಿತಾಂ ಪಂಚನಿಮ್ನಾಂ ಮಂಡೂಕಾಕ್ಷೀಂ ಸುವಾಲಧಿಂ ।**
**ತಾಮ್ರಸ್ತನೀಂ ರೌಪ್ಯಕಟಿಂ ಸುಖುರೀಂ ಸುಮುಖೀಂ ಸಿತಾಂ ॥ ೪೦ ॥**

**ಸುಶೀಲಾಂ ಚ ಸುತಸ್ನೇಹಾಂ ಸುಕ್ಷೀರಾಂ ಸುಪಯೋಧರಾಂ ।**
**ಗೋರೂಪಿಣೀಮುಮಾಂ ಸ್ಪೃಷ್ಟ್ವಾ ಸ್ವಾಮಿನೀಂ ತಾಂ ಸವತ್ಸಿಕಾಂ ॥**

**ಚರ್ಯಯಾ ಪ್ರತರನ್ಹೃಷ್ಟೋ ಮಹಾದೇವ ಸ್ವಚೇತಸಿಃ ।**
**ಶನೈಃಶನೈರ್ಯಯೌ ಪಾರ್ಥ ವಿಪ್ರರೂಪೀ ಮಹಾಶ್ರಮಂ ॥ ೪೨ ॥**

**ದತ್ವಾ ಕುಲಪತೇಃ ಪಾರ್ಶ್ವಂ ಭೃಗೋಸ್ತಾಂ ಗಾಂ ನ್ಯವೇದಯತ್ ।**
**ತಪಸ್ವಿನಾಂ ಮಹಾತೇಜಾಸ್ತಾಂ ಚ ಸರ್ವೇಷು ಪಾಂಡವ ॥ ೪೩ ॥**

---

೪೦. ಆ ಪಾರ್ವತಿಯು ಧರಿಸಿದ ಗೋಶರೀರವು ಆರು ಅಂಗಗಳಲ್ಲಿ ಎತ್ತರವಾಗಿಯೂ, ಐದು ಅವಯುವಗಳಲ್ಲಿ ತಗ್ಗಾಗಿಯೂ, ಕಪ್ಪೆಯಂತೆ ಕಣ್ಣುಳ್ಳ ದಾಗಿಯೂ, ಕೆಂಪಾದ ಸ್ತನಗಳುಳ್ಳದಾಗಿಯೂ, ಸುಂದರವಾದ ಬಾಲವುಳ್ಳ ದ್ದಾಗಿಯೂ, ಬೆಳ್ಳಿಯಂತೆ ಬಿಳಿಯ ಸೊಂಟವುಳ್ಳದ್ದಾಗಿಯೂ, ಸುಂದರವಾದ ಗೊರಸುಳ್ಳದ್ದಾಗಿಯೂ, ಅಂದವಾದ ಮುಖವುಳ್ಳದ್ದಾಗಿಯೂ, ಶುಭ್ರವಾದ ಬಣ್ಣ ವುಳ್ಳದ್ದಾಗಿಯೂ ಇದ್ದಿತು.

೪೧. ಮತ್ತು ಆ ಹಸುವು ಕರುವಿನಿಂದ ಕೂಡಿದ್ದಾಗಿ ಒಳ್ಳೆಯ ಸ್ವಭಾವ ವುಳ್ಳದ್ದೂ, ಕರುವಿನ ಮೇಲೆ ಆಶೆಯುಳ್ಳದ್ದೂ, ಬಹು ರುಚಿಯಾದ ಹಾಲು ಳ್ಳದ್ದೂ, ಲಕ್ಷಣವಾದ ಸ್ತನಗಳುಳ್ಳದ್ದೂ ಆಗಿದ್ದಿತು.

೪೨. ಅಯ್ಯಾ ಕುಂತೀಪುತ್ರನೇ ! ಈ ರೀತಿಯಾದ ಗೋರೂಪವನ್ನು ಧರಿಸಿದ ಪಾರ್ವತಿಯನ್ನು ನೋಡಿ ವೃದ್ಧ ಬ್ರಾಹ್ಮಣ ವೇಷಧಾರಿಯಾದ ಆ ಮಹಾ ದೇವನು ತನ್ನ ಮನಸ್ಸಿನಲ್ಲೇ ಸಂತೋಷಪಟ್ಟು ಅದರ ಮೈದಡವಿ ಆ ಕರು ಸಹಿತವಾದ ಹಸುವನ್ನು ಮೆಲ್ಲಮೆಲ್ಲನೆ ಹೊಡೆದುಕೊಂಡು ಆ ಮುನಿಗಳ ಆಶ್ರಮಕ್ಕೆ ಬಂದನು.

೪೩. ಅಯ್ಯಾ ಪಾಂಡುಪುತ್ರನೇ ! ಮಹಾತೇಜಸ್ವಿಯೂ, ವೃದ್ಧ ಬ್ರಾಹ್ಮಣ ವೇಷಧಾರಿಯೂ ಆದ ಆ ಈಶ್ವರನು ಆ ಎಲ್ಲಾ ತಪಸ್ವಿಗಳ ಕುಲಪತಿ ಯಾದ ಭೃಗುಮಹರ್ಷಿಯ ಸಮೀಪಕ್ಕೆ ಹೋಗಿ ಆ ಗೋವನ್ನು ಆ ಋಷಿಗೆ ಸಮರ್ಪಿಸಿದನು.

ನ್ಯಾಸರೂಪಾಂ ದದೌ ಧೇನುಂ ರಕ್ಷಿತ್ವಾ ತಾಂ ದಿನದ್ವಯಂ ।
ಯಾವತ್ಸ್ನಾತ್ವಾ ಇತಸ್ತೀರ್ತ್ವಾ ಜಂಬೂಮಾರ್ಗಂ ನಯಾಮ್ಯಹಂ ॥

ರಕ್ಷಿಷ್ಯಾಮಃ ಪ್ರತಿಜ್ಞಾತೇ ಮುನಿಭಿಃ ಸುರಭೀಮಿಮಾಂ ।
ಅಂತರ್ಧಿಗಮುಗಮದ್ದೇವಃ ಪುನರ್ವ್ಯಾಘ್ರೋ ಬಭೂವ ಹ ॥ ೪೫ ॥

ವಜ್ರಚಕ್ರನಖೋ ದರ್ಪೀ ಜ್ವಲತ್ಪಿಂಗಲಲೋಚನಃ ।
ಜಿಹ್ವಾಕರಾಲವದನೋ ಜಿಹ್ವಾಲಾಂಗೂಲದಾರುಣಃ ॥ ೪೬ ॥

ಸಂಪ್ರಾಪ್ಯಾಶ್ರಮಪದಂ ತಾಂ ಚ ಧೇನುಂ ಸವತ್ಸಿಕಾಂ ।
ತ್ರಾಸಯಾಮಾಸ ತಾಂ ದೇವ ಮುನೀನಾಂ ದಿಕ್ಷ್ವವಸ್ಥಿತಃ ॥ ೪೭ ॥

---

೪೪. ಆ ವೃದ್ಧಬ್ರಾಹ್ಮಣನು "ಎಲೈ ಮುನಿಗಳೇ! ಈ ಧೇನುವನ್ನು ನೀವು ನ್ಯಾಸರೂಪವಾದ (ರಕ್ಷಣೆಗಾಗಿ ಇಟ್ಟ) ವಸ್ತುವೆಂದು ಭಾವಿಸಿ ಎರಡು ದಿನಗಳವರೆಗೆ ರಕ್ಷಿಸಬೇಕು. ನಾನು ಅಷ್ಟರಲ್ಲಿ ಈ ಪುಣ್ಯತೀರ್ಥಗಳಲ್ಲಿ ಸ್ನಾನ ಮಾಡಿಕೊಂಡು ಬರುತ್ತೇನೆ. ಅನಂತರ ಇಲ್ಲಿಂದ ಇದನ್ನು ಜಂಬೂಮಾರ್ಗಕ್ಕೆ ತೆಗೆದುಕೊಂಡು ಹೋಗುತ್ತೇನೆ ಎಂದು ನುಡಿದನು.

೪೫. ಆ ಮುನಿಗಳು ವೃದ್ಧಬ್ರಾಹ್ಮಣನ ಈ ವಚನವನ್ನು ಕೇಳಿ, ಅದರಂತೆಯೇ "ಅಲ್ಲಿಯವರೆಗೆ ನಾವು ಈ ಗೋವನ್ನು ರಕ್ಷಿಸುತ್ತೇವೆ" ಎಂದು ಪ್ರತಿಜ್ಞೆಮಾಡಿದೊಡನೆಯೇ ಆ ದೇವನು ಅಂತರ್ಧಾನನಾಗಿ ಒಂದು ಹುಲಿಯ ರೂಪವನ್ನು ತಾಳಿದನು.

೪೬. ಆ ಹುಲಿಯು ವಜ್ರದಂತೆ ಕಠಿಣವೂ ಚಕ್ರಾಕಾರವೂ ಆದ ಉಗುರುಗಳುಳ್ಳದ್ದೂ, ಕೆಂಡದಂತೆ ಪಿಂಗಳವರ್ಣದಕಣ್ಣುಗಳುಳ್ಳದ್ದೂ, ನೀಡಿದ ನಾಲಿಗೆಯಿಂದ ಭಯಂಕರವಾದ ಮುಖವುಳ್ಳದ್ದೂ, ದೀರ್ಘವಾದ ದೇಹ, ಬಾಲ ಇವುಗಳಿಂದ ಕೂಡಿದುದೂ ಆಗಿ ಭಯಂಕರವಾಗಿದ್ದಿತು.

೪೭. ಅಯ್ಯಾ ರಾಜನೇ! ಆ ಹುಲಿಯು ಆ ಆಶ್ರಮದೊಳಗೆ ಬಂದು ಎಲ್ಲೆಲ್ಲೂ ಸಂಚರಿಸುತ್ತಾ ವೃದ್ಧಬ್ರಾಹ್ಮಣನಿಂದ ನ್ಯಾಸವಾಗಿಟ್ಟ ಕರುಸಹಿತವಾದ ಆ ಹಸುವಿಗೂ ಮತ್ತು ಆಶ್ರಮವಾಸಿಗಳಾದ ಋಷಿಗಳಿಗೂ ಭಯವನ್ನು ಹುಟ್ಟಿಸಿತು.

ಮುನಯೋಽಪಿ ಸಭಯಾಕ್ರಾಂತಾ ಆರ್ತನಾದಂ ಪ್ರಚಕ್ರಿರೇ ।
ಹಾಹೇತ್ಯುಚ್ಚೈಃ ಕೇಚಿದೂಚುರ್ಹುಂಹುಂಕಾರೈಸ್ತಥಾಪರೇ ॥ ೪೮ ॥

ತಾಲಾಸ್ಫೋಟಾನ್ವದುಃ ಕೇಚಿದ್ವ್ಯಾಘ್ರಂ ದೃಷ್ಟ್ವಾತಿಭೈರವಂ ।
ಸಾಪಿ ಹಂಭಾರವಾಂಶ್ಚಕ್ರೇ ಗೌರುತ್ಪ್ಲುತ್ಯ ಸವತ್ಸಿಕಾ ॥ ೪೯ ॥

ತಸ್ಯಾ ವ್ಯಾಘ್ರಭಯಾರ್ತಾಯಾಃ ಕಪಿಲಾಯಾ ಯುಧಿಷ್ಠಿರ ।
ಪಲಾಯಂತ್ಯಾ ಶಿಲಾಮಧ್ಯೇ ಕ್ಷಣಂ ಖುರಚತುಷ್ಟಯಂ ॥ ೫೦ ॥

ವ್ಯಾಘ್ರವತ್ಸಕಯೋಸ್ತತ್ರ ವಂದಿತಂ ಸುರಕಿನ್ನರೈಃ ।
ದೃಶ್ಯತೇಽತೀವ ಸುವ್ಯಕ್ತಂ ತದದ್ಯಾಪಿ ಚತುಷ್ಟಯಂ ॥ ೫೧ ॥

ಸಜಲಂ ಶಿವಲಿಂಗಂ ಚ ಶಂಭೋಸ್ತೀರ್ಥಂ ತದುತ್ತಮಂ ।
ಯಸ್ಸಂಸ್ಪೃಶತಿ ರಾಜೇಂದ್ರ ಸ ಗೋವಧ್ಯಾಂ ವ್ಯಪೋಹತಿ ॥ ೫೨ ॥

---

೪೮. ಆಗ ಆ ಮುನಿಗಳು ಭಯಾಕ್ರಾಂತರಾಗಿ ಅರ್ತನಾದ ಮಾಡಿದರು. ಕೆಲವು ಋಷಿಗಳು ಉಚ್ಚಸ್ವರದಿಂದ ಹಾ ಹಾ ! ಎಂದು ಕೂಗಿದರು. ಹಾಗೆಯೇ ಮತ್ತೆ ಕೆಲವರು ಹುಂ ಹುಂ ಎಂದು ಕೂಗಿದರು.

೪೯. ಇನ್ನೂ ಕೆಲವರು ಅತಿಭಯಂಕರವಾದ ಆ ವ್ಯಾಘ್ರವನ್ನು ನೋಡಿ ಕೈಚಪ್ಪಾಳೆ ಹೊಡೆದು ಶಬ್ದಮಾಡಿದರು. ಕರುಸಹಿತವಾದ ಆ ಹಸುವು ಆ ವ್ಯಾಘ್ರವನ್ನು ನೋಡಿ ಮೇಲಕ್ಕೆ ಹಾರಿ ಹಂ ಭೋ ! ಎಂದು ಕೂಗಿತು.

೫೦. ಅಯ್ಯಾ ಯುಧಿಷ್ಠಿರನೇ ! ಹುಲಿಯ ಭಯದಿಂದ ಪೀಡಿತವಾಗಿ ಆ ಹಸುವು ಕ್ಷಣಮಾತ್ರದಲ್ಲಿ ಪಲಾಯನಮಾಡುವಾಗ ಅದರ ನಾಲ್ಕು ಗೊರಸುಗಳ ಚಿಹ್ನೆಯು ಆ ಶಿಲೆಯ ಮಧ್ಯದಲ್ಲಿ ಸ್ಪಷ್ಟವಾಗಿ ಬಿದ್ದಿತು.

೫೧. ಹಾಗೆಯೇ ಆ ಹುಲಿ ಮತ್ತು ಕರು ಇವುಗಳ ಗೊರಸುಗಳ ನಾಲ್ಕು ನಾಲ್ಕು ಚಿಹ್ನೆಗಳು ಬಹುಸ್ಪಷ್ಟವಾಗಿ ಈಗಲೂ ಕಾಣಿಸುತ್ತವೆ. ಆ ಖುರಚಿಹ್ನೆಗಳನ್ನು ದೇವತೆಗಳೂ ಕಿನ್ನರೂ ಆದಿಯಾಗಿ ಎಲ್ಲರೂ ವಂದಿಸುತ್ತಾರೆ.

೫೨. ಅಯ್ಯಾ ರಾಜೇಂದ್ರನೇ ! ಅಲ್ಲಿರುವ ಜಲಸಹಿತವಾದ ಶಿವಲಿಂಗವನ್ನು ದರ್ಶನಮಾಡಿ ಯಾವನು ಆ ಉತ್ತಮವಾದ ಶಂಭುತೀರ್ಥದಲ್ಲಿ ಸ್ನಾನ ಮಾಡುವನೋ ಅವನಿಗೆ ಗೋಹತ್ಯಾಪಾಪವು ನಿವೃತ್ತಿಯಾಗುತ್ತದೆ.

ತತ್ರ ಸ್ನಾತ್ವಾ ಮಹಾತೀರ್ಥೇ ಜಂಬೂಮಾರ್ಗೇ ನರಾಧಿಪ ।
ಬ್ರಹ್ಮಹತ್ಯಾದಿಭಿಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ ॥ ೫೩ ॥

ತತಸ್ತೇ ಮುನಯಃ ಕ್ರುದ್ಧಾ ಬ್ರಹ್ಮದತ್ತಾಂ ಮಹಾಸ್ವನಾಂ ।
ಜಘ್ನುರ್ಘಂಟಾಂ ಸುರೈರ್ದತ್ತಾಂ ಗಿರಿಕಂದರಪೂರಣೀಂ ॥ ೫೪ ॥

ಶಬ್ದೇನ ತೇನ ವ್ಯಾಘ್ರೋಽಪಿ ಮುಕ್ತ್ವಾ ಗಾವಂ ಸವತ್ಸಿಕಾಂ ।
ವಿಪ್ರೈಸ್ತತ್ರ ಕೃತಂ ನಾಮ ಢುಂಡಾಗಿರಿರಿತಿ ಶ್ರುತಿಃ ॥ ೫೫ ॥

ತಂ ಪ್ರಪಶ್ಯಂತಿ ಯೇ ಪಾರ್ಥ ತೇ ರುದ್ರಾ ನಾತ್ರ ಸಂಶಯಃ ।
ಅಥ ಪ್ರತ್ಯಕ್ಷತಾಂ ಶ್ರೇಷ್ಠಸ್ತೇಷಾಂ ದೇವೋ ಮಹೇಶ್ವರಃ ।
ಶೂಲಪಾಣಿಸ್ತ್ರಿಪುರಹಾ ಕಾಮಘ್ನೋ ವೃಷಭೇ ಸ್ಥಿತಃ ॥ ೫೬ ॥

---

೫೩. ಅಯ್ಯಾ ಪ್ರಜೇಶ್ವರನೇ ! ಆ ಮಹಾತೀರ್ಥವಾದ ಜಂಬೂಮಾರ್ಗದಲ್ಲಿ ಸ್ನಾನಮಾಡಿದವನಿಗೆ ಬ್ರಹ್ಮಹತ್ಯಾದಿ ಮಹಾಪಾಪವು ನಿಸ್ಸಂಶಯವಾಗಿ ನಾಶವಾಗುತ್ತದೆ.

೫೪. ಆ ಹುಲಿಯು ಈ ಗೋವನ್ನು ಭಯಪಡಿಸಿದನಂತರ ಆ ಋಷಿಗಳು ಕೋಪಗೊಂಡು ಪೂರ್ವದಲ್ಲಿ ತಮಗೆ ಬ್ರಹ್ಮನು ಕೊಟ್ಟಿರುವ ಮಹಾನಾದವುಳ್ಳುದೂ, ತನ್ನ ಧ್ವನಿಯಿಂದ ಮಹಾಗಿರಿ ಗುಹಾಪ್ರಾಂತವನ್ನೇ ಮೊಳಗುವಂತೆ ಮಾಡುವುದೂ ಆಗಿರುವ, ಘಂಟೆಯನ್ನು ಬಾರಿಸಿ ಧ್ವನಿಮಾಡಿದರು.

೫೫. ಆ ಘಂಟೆಯ ಶಬ್ದವನ್ನು ಕೇಳಿ, ಆ ಹುಲಿಯು ಕರುಸಮೇತವಾದ ಆ ಗೋವನ್ನು ತ್ಯಜಿಸಿ ಅದೃಶ್ಯವಾಯಿತು. ಅಯ್ಯಾ ಧರ್ಮಸೂನುವೇ ! ಅನಂತರ ಆ ಸ್ಥಳಕ್ಕೆ ಆ ಮುನಿಗಳು ಡುಂಡಾಗಿರಿ ಎಂಬ ನಾಮಧೇಯವನ್ನಿಟ್ಟರು. ಆ ಡುಂಡಾಗಿರಿಯನ್ನು ಯಾರು ಸಂದರ್ಶನ ಮಾಡುವರೋ ಅವರು ಸಾಕ್ಷಾತ್ ರುದ್ರಸಮಾನರೆಂಬುದರಲ್ಲಿ ಸಂದೇಹವಿಲ್ಲ.

೫೬. ಅನಂತರ ತ್ರಿಪುರಾಂತಕನೂ ಕಾಮದಹನಮಾಡಿದವನೂ ಆದ ಆ ಪರಮೇಶ್ವರನು, ತ್ರಿಶೂಲಪಾಣಿಯೂ ವೃಷಭಾರೂಢನೂ ಆಗಿ, ಆ ಮುನಿಗಳಿಗೆ ಪ್ರತ್ಯಕ್ಷವಾಗಿ ಕಾಣಿಸಿಕೊಂಡನು.

ಉಮಾಸಹಾಯೋ ವರದೋ ಸಸ್ವಾಮೀ ಸವಿನಾಯಕಃ ।
ಸನಂದಿಃ ಸಮಹಾಕಾಲಃ ಸಶೃಂಗೀ ಸಮನೋಹರಃ ॥ ೫೭ ॥

ವೀರಭದ್ರಾ ಚ ಚಾಮುಂಡಾ ಘಂಟಾಕರ್ಣಾದಿಭಿರ್ವೃತಾ ।
ಮಾತೃಭಿರ್ಭೂತಸಂಘಾತೈರ್ಯಕ್ಷರಾಕ್ಷಸಗುಹ್ಯಕೈಃ ।
ದೇವದಾನವಗಂಧರ್ವಮುನಿವಿದ್ಯಾಧರೋರಗೈಃ ॥ ೫೮ ॥

ಪ್ರಣಮ್ಯ ದೇವದೇವಾಯ ಪತ್ನೀಭಿಃ ಸಹಿತೈರುಮಾ ।
ಗೋರೂಪಿಣೀ ಸವತ್ಸಾ ಚ ಪೂಜಿತಾ ಬ್ರಹ್ಮಚಾರಿಭಿಃ ॥ ೫೯ ॥

ಕಾರ್ತಿಕೇ ಶುಕ್ಲಪಕ್ಷೇ ತು ದ್ವಾದಶ್ಯಾಂ ನಂದಿನೀವ್ರತಂ ।
ತತಃ ಪ್ರಭೃತಿ ರಾಜೇಂದ್ರ ಅವತೀರ್ಣಂ ಮಹೀತಲೇ ॥ ೬೦ ॥

---

೫೭. ಮತ್ತು ಆಗ ಆ ಈಶ್ವರನು ಪಾರ್ವತೀಸಮೇತನೂ ಕುಮಾರಸ್ವಾಮಿ, ವಿನಾಯಕ, ನಂದಿ, ಮಹಾಕಾಲ, ಭೃಂಗಿ ಇವರುಗಳಿಂದ ಕೂಡಿದವನೂ ಪ್ರಸನ್ನನೂ ಸುಂದರನೂ ಆಗಿ ಕಾಣಿಸಿಕೊಂಡನು.

೫೮. ಮತ್ತು ಆಗ ವೀರಭದ್ರ, ಚಾಮುಂಡಾ ಇವರು ಘಂಟಾಕರ್ಣಾದಿಗಳಿಂದ ಸಹಿತರೂ, ಸಪ್ತಮಾತೃಕೆಯರು, ಭೂತಸಮೂಹಗಳು, ಯಕ್ಷ, ರಾಕ್ಷಸ, ಗುಹ್ಯಕ, ದೇವ, ದಾನವ, ಗಂಧರ್ವ, ಮುನಿ, ವಿದ್ಯಾಧರ, ಪನ್ನಗ ಇವರುಗಳಿಂದ ಸಮೇತರೂ ಆಗಿ ಅಲ್ಲಿ ಸನ್ನಿಹಿತರಾಗಿದ್ದರು.

೫೯. ಇವರನ್ನು ಕಂಡು ಆ ತಪಸ್ವಿಗಳು ತಮ್ಮ ಪತ್ನೀಸಮೇತರಾಗಿ ಮೊದಲು ದೇವತೆಗಳಿಗೆಲ್ಲಾ ದೇವನಾದ ಶ್ರೀ ಪರಮೇಶ್ವರನಿಗೆ ನಮಸ್ಕಾರ ಕರುಸಹಿತವಾಗಿ ಗೋರೂಪಧಾರಿಣಿಯಾದ ಶ್ರೀ ಉಮಾದೇವಿಯನ್ನೂ ಪೂಜೆ ಮಾಡಿದರು.

೬೦. ಅಯ್ಯಾ ರಾಜೇಂದ್ರನೇ ! ಅದು ಮೊದಲ್ಗೊಂಡು ಭೂಲೋಕದಲ್ಲಿ ಕಾರ್ತೀಕ ಶುಕ್ಲಪಕ್ಷದ ದ್ವಾದಶಿಯಲ್ಲಿ ಈ ನಂದಿನೀವ್ರತವು ಆಚರಣೀಯವಾಗಿ ಪ್ರಸಿದ್ಧಿಗೆ ಬಂದಿತು.

ಉತ್ತಾನಪಾದೇನ ತಥಾ ವ್ರತಂ ಚೀರ್ಣಮಿದಂ ಶೃಣು ।
ಉತ್ತಾನಪಾದನಾಮಾಸೀತ್ಕ್ಷತ್ರಿಯಃ ಪೃಥಿವೀಪತಿಃ ॥ ೬೧ ॥

ತಸ್ಯ ಭಾರ್ಯಾ ದ್ವಯಂ ಚಾಸೀದ್ರುಚಿಶುಘ್ನಿರಿತಿ ವಿಶ್ರುತಂ ।
ಶುಘ್ನೀಜಾತೋ ಧ್ರುವಃ ಪುತ್ರೋ ವಾಮಪಾದಧರೋಽಲಸಃ ॥ ೬೨ ॥

ರುಚ್ಯಾಃ ಸಮರ್ಪಿತಃ ಶುಘ್ನ್ಯಾ ಧ್ರುವೋಽಯಂ ರಕ್ಷ್ಯತಾಂ ಸಖಿ ।
ಅಹಂ ಕರಿಷ್ಯೇ ಶುಶ್ರೂಷಾಂ ಭರ್ತುಸ್ತ್ವಾವತ್ಸದಾ ಸ್ವಯಂ ॥ ೬೩ ॥

ರುಚೀ ರಸವತೀಂ ನಿತ್ಯಂ ಪ್ರತ್ಯಹಂ ಕುರುತೇ ಗೃಹೇ ।
ಅಕರೋದ್ಭರ್ತೃಶುಶ್ರೂಷಾಂ ಶುಘ್ನೀ ನಿತ್ಯಂ ಪತಿವ್ರತಾ ॥ ೬೪ ॥

---

೬೧. ಅಯ್ಯಾ ಭೂಪತಿಯೇ ! ಈ ಗೋವತ್ಸದ್ವಾದಶೀ ವ್ರತವನ್ನು ಉತ್ತಾನಪಾದನೆಂಬ ರಾಜನು ಆಚರಿಸಿರುತ್ತಾನೆ. ಆ ವಿಷಯವನ್ನು ಹೇಳುತ್ತೇನೆ ಶ್ರವಣಮಾಡು. ಪೂರ್ವದಲ್ಲಿ ಉತ್ತಾನಪಾದನೆಂಬ ಕ್ಷತ್ರಿಯನಿದ್ದನು.

೬೨. ಆ ಕ್ಷತ್ರಿಯನಿಗೆ ರುಚಿ, ಶುಘ್ನಿ, ಎಂಬ ನಾಮಧೇಯವುಳ್ಳ ಪ್ರಸಿದ್ಧರಾದ ಇಬ್ಬರು ಹೆಂಡತಿಯರು ಇದ್ದರು. ಅವರಲ್ಲಿ ಶುಘ್ನಿಯಲ್ಲಿ ವಾಮಪಾದ ಮಾತ್ರದಿಂದ ಕೂಡಿ, ಸರ್ವಕರ್ಮಗಳಲ್ಲೂ ಅಲಸನಾದ ಧ್ರುವನೆಂಬ ಒಬ್ಬ ಮಗನು ಜನಿಸಿದನು.

೬೩. ಆಗ ಶುಘ್ನಿಯು ಓ ಸಖೀ ! ಈ ಧ್ರುವನನ್ನು ನೀನು ರಕ್ಷಿಸುತ್ತಿರು. ನಾನು ಗಂಡನಾದ ಉತ್ತಾನಪಾದನ ಶುಶ್ರೂಷೆಯನ್ನು ಯಾವಾಗಲೂ ಮಾಡುತ್ತೇನೆ ಎಂದು ಹೇಳಿ ಆ ಧ್ರುವನನ ರಕ್ಷಣೆಯನ್ನು ರುಚಿಗೆ ವಹಿಸಿದಳು.

೬೪. ರುಚಿಯು ಮನೆಯಲ್ಲಿ ಪ್ರತಿನಿತ್ಯವೂ ಅಡಿಗೆಯನ್ನು ಮಾಡುತ್ತಿದ್ದಳು. ಪತಿವ್ರತೆಯಾದ ಶುಘ್ನಿಯು ನಿತ್ಯವೂ ಪತಿಶುಶ್ರೂಷೆಯನ್ನು ಮಾಡುತ್ತಿದ್ದಳು.

ಕದಾಚಿತ್ಕ್ರೋಧಮಾತ್ಸರ್ಯಾತ್ಸಾಪತ್ನ್ಯಂ ದರ್ಶಿತಂ ತಯಾ ।
ಸ್ವಯಂ ರುಚ್ಯಾ ನಿಹತ್ಯಾಸೌ ಶಿಶುಃ ಖಂಡಲಶಃ ಕೃತಃ ॥ ೬೫ ॥

ತಾಪಿಕಾಯಾಂ ತಥಾ ಸ್ಥಾಲ್ಯಾಂ ಪಕ್ವಸಿದ್ಧಃ ಸುಸಂಸ್ಕೃತಃ ।
ಅನ್ನಭೋಜನವೇಲಾಯಾಂ ದದಾತಿ ನೃಪಭಾಜನೇ ॥ ೬೬ ॥

ತಂ ವೈ ಭಕ್ಷಯಿತುಂ ದುಷ್ಟಾ ಸಾಮಿಷಂ ಭೋಜನಂ ಕಿಲ ।
ಅಥ ಭೋಜನವೇಲಾಯಾಂ ವವ್ರೇ ಜೀವಿತಮಾಪ್ತವಾನ್ ॥ ೬೭ ॥

ತಥೈವ ಪ್ರಹಸನ್ಬಾಲೋ ಮಾತುರುತ್ಸಂಗಜೋಽಭವತ್ ।
ತಂ ದೃಷ್ಟ್ವಾ ಮಹದಾಶ್ಚರ್ಯಂ ರುಚೀ ಪ್ರಪಚ್ಛ ವಿಸ್ಮಿತಾ ॥ ೬೮ ॥

---

೬೫. ಕದಾಚಿತ್ ಆ ರುಚಿಯು ಕೋಪ ಮತ್ತು ಅಸೂಯೆಯಿಂದ ಕೂಡಿದವಳಾಗಿ ಸವತಿದ್ವೇಷವನ್ನು ತೋರಿಸಿದಳು. ಆ ದ್ವೇಷದಿಂದ ಅವಳು ಬಾಲಕನಾದ ಈ ಧ್ರುವನನ್ನು ತನ್ನ ಹಸ್ತದಿಂದ ಕತ್ತರಿಸಿ ತುಂಡುತುಂಡಾಗಿ ಮಾಡಿದಳು.

೬೬. ಅನಂತರ ತುಂಡುತುಂಡಾಗಿ ಕತ್ತರಿಸಿದ ಆ ಬಾಲಕನನ್ನು ಚೆನ್ನಾಗಿ ಕಾಯ್ದು ಬಿಸಿಯಾದ ಪಾತ್ರೆಯಲ್ಲಿ ಹಾಕಿ ಪಾಕಮಾಡಿ, ಆ ಸುಸಂಸ್ಕೃತ ಪಾಕವನ್ನು ಭೋಜನ ಕಾಲದಲ್ಲಿ ರಾಜನ ಭೋಜನಪಾತ್ರೆಯಲ್ಲಿ ಬಡಿಸಿದ್ದಳು.

೬೭. ಆ ದುಷ್ಟಳಾದ ರುಚಿಯು ಆ ಬಾಲಕನ ಮಾಂಸಸಹಿತವಾದ ಪಕ್ವಾನ್ನವನ್ನು ರಾಜನಾದ ಪತಿಗೆ ಭುಂಜಿಸುವುದಕ್ಕಾಗಿ ಬಡಿಸಿದಾಗ ಆ ಬಾಲಕನ ಮಾತೃವಾದ ಶುಕ್ಲಿಯು ಭೋಜನ ವೇಳೆಯಲ್ಲಿ ಬಾಲಕನು ಎಲ್ಲಿ? ಅವನು ಬರಲಿ! ಎಂದು ಪ್ರಾರ್ಥಿಸಿದ ಕಾರಣ, ಅವಳ ಪಾತಿವ್ರತ್ಯದ ಮಹಿಮೆಯಿಂದ ಆ ಬಾಲಕನು ಪುನಃ ಬದುಕಿದನು.

೬೮. ಹೀಗೆ ಆ ಹುಡುಗನು ಮತ್ತೆ ಜೀವಂತನಾಗಿ ಮೊದಲಿನಂತೆಯೇ ಹಸನ್ಮುಖನಾಗಿ ತಾಯಿಯ ತೊಡೆಯನ್ನೇರಿ ಕುಳಿತುಕೊಂಡನು.

ಕಿಮೇತದ್ಬ್ರೂಹಿ ವೃತ್ತಾಂತಂ ಕಸ್ಯೇಯಂ ವ್ಯುಷ್ಟಿರುತ್ತಮಾ ।
ಕಿಂ ತ್ವಯಾ ಚರಿತಂ ಕಿಂಚಿದ್ವ್ರತಂ ದತ್ತಂ ಹುತಂ ತಥಾ ॥ ೬೯ ॥

ಸತ್ಯಂಸತ್ಯಂ ಪುನಃ ಸತ್ಯಂ ಯೇನ ಜೀವತಿ ತೇ ಸುತಃ ।
ಮಯಾಯಂ ಸಪ್ತ ವಾರಾಂಸ್ತು ವಿಶಲ್ಯ ಶಕಲೀಕೃತಃ ॥ ೭೦ ॥

ಪಕ್ವಃ ಸ್ವಯಂ ಕೃತಃ ಸ್ಥಾಲ್ಯಾಂ ವ್ಯಂಜನೈಃ ಸಹ ಭೋಜನೈಃ ।
ಪರಿವಿಷ್ಯಮಾಣಃ ಸ ಪುನಃ ಕಥಂ ಜೀವಿತಮಾಪ್ತವಾನ್ ॥ ೭೧ ॥

ಕಿಂ ತೇ ಸಿದ್ಧಾ ಮಹಾವಿದ್ಯಾ ಮೃತಸಂಜೀವನೀ ಶುಭಾ ।
ರತ್ನಂ ಮಣಿರ್ಮಹಾರತ್ನಂ ಯೋಗಾಂಜನಮಹೌಷಧಂ ॥ ೭೨ ॥

---

೬೯. ಓ ಮಹಾಭಾಗ್ಯಶಾಲಿನಿಯಾದ ತಂಗಿಯೇ ! ಇದೇನು ವಿಚಾರ ? ಉತ್ತಮವಾದ ಯಾವ ಕರ್ಮದ ಪುಣ್ಯವು ನಿನಗೆ ಫಲೋನ್ಮುಖವಾಗಿದೆ ? ಹೇಳು ನೀನು ಯಾವ ವ್ರತವನ್ನು ಆಚರಿಸಿರುತ್ತೀಯೆ ? ಯಾವ ದಾನ ಮಾಡಿರುವೆ ? ಯಾವ ಹೋಮಾದಿಗಳನ್ನು ನಡೆಯಿಸಿರುವೆ ?

೭೦. ಸತ್ಯವನ್ನು ಹೇಳು, ಏತಕ್ಕೆಂದರೆ ಈ ನಿನ್ನ ಮಗನನ್ನು ನಾನು ಏಳುಸಲ ಕತ್ತರಿಸಿ ತುಂಡು ತುಂಡಾಗಿ ಮಾಡಿ ಅನಂತರ ಪಾತ್ರೆಯಲ್ಲಿ ಹಾಕಿ ನಾನೇ ಬೇಯಿಸಿ ಪಾಕಮಾಡಿದ್ದೇನೆ.

೭೧. ಅದನ್ನು ಭೋಜನಾರ್ಥವಾಗಿ ಬಡಿಸಿದ ಅನ್ನದ ಜೊತೆಯಲ್ಲಿ ಊಟಮಾಡುವುದಕ್ಕೆ ಉಪಯುಕ್ತವಾದ ಹುಳಿ, ಚಟ್ನಿ ಈ ರೂಪವಾಗಿ ಬಡಿಸಿದರೂ ಅವನು ಪುನಃ ಜೀವವನ್ನು ಪಡೆದು ಬದುಕಿಬರುವನು.

೭೨. ಆದುದರಿಂದ ನಿನಗೆ ಮೃತಸಂಜೀವಿನೀ ಎಂಬ ಮಹಾಮಂತ್ರ ವಿದ್ಯೆಯು ಸಿದ್ಧಿ ಇದೆಯೇ ? ಅಥವಾ ರತ್ನಮಣಿ; ಮಹಾರತ್ನ, ಯೋಗಾಂಜನ ಈ ಮಹೌಷಧಗಳಲ್ಲಿ ಯಾವುದಾದರೂ ನಿನ್ನಲ್ಲಿ ಸಿದ್ಧವಾಗಿವೆಯೇ ?

ಕಥಯಸ್ವ ಮಹಾಭಾಗೇ ಸತ್ಯಂಸತ್ಯಂ ಭಗಿನ್ಯಸಿ ।
ಏವಮುಕ್ತೇ ರುಚಿಸ್ತಸ್ಯೈ ವ್ಯಾಚಖ್ಯೌ ವತ್ಸಗೋವ್ರತಂ || ೭೩ ||

ಕಾರ್ತಿಕೇ ಚೈವ ದ್ವಾದಶ್ಯಾಂ ಯಥಾ ಚಾನುಷ್ಠಿತಂ ಪುರಾ ।
ವ್ರತಸ್ಯಾಸ್ಯ ಪ್ರಭಾವೇಣ ಪುನರ್ಜೀವತಿ ಮೇ ಸುತಃ || ೭೪ ||

ವತ್ಸೋ ಮೇ ವತ್ಸವೇಲಾಯಾಂ ಮೃತೋಽರ್ಥಂ ಲಭತೇ ಪುನಃ ।
ಸಮಾಗಮಶ್ಚ ಭವತಿ ಪುತ್ರೈಃ ಪ್ರವಸಿತೈರಪಿ || ೭೫ ||

ಯಥಾರ್ಥಮೇತದ್ವ್ಯಾಖ್ಯಾತಂ ತೇ ಚ ಗೋದ್ವಾದಶೀವ್ರತಂ ।
ತವಾಪಿ ರುಚಿ ತತ್ಸರ್ವಂ ಭವಿಷ್ಯತಿ ಶುಭಂ ಪ್ರಿಯಂ || ೭೬ ||

---

೭೩. "ಎಲೌ ಮಹಾಭಾಗ್ಯವಂತಳೇ ! ಸತ್ಯವನ್ನು ಹೇಳು. ನೀನು ನನ್ನ ಭಗಿನಿಯಾಗಿರುವೆ. ಆದುದರಿಂದ ನನ್ನಲ್ಲಿ ಅನೃತವನ್ನು ಹೇಳದೆ ಸತ್ಯವನ್ನು ನುಡಿ" ಎಂಬದಾಗಿ ರುಚಿಯು ಹೇಳುತ್ತಿರಲು ಶುಷ್ಮಿಯು ಅವಳಿಗೆ ಈ ಗೋವತ್ಸ ದ್ವಾದಶೀ ವ್ರತವನ್ನು ವಿವರಿಸಿ ಹೇಳಿದಳು.

೭೪. "ಓ ರುಚೀ ! ಕೇಳು; ಪೂರ್ವದಲ್ಲಿ ನಾನು ಕಾರ್ತೀಕ ಶುಕ್ಲ ದ್ವಾದಶಿಯಲ್ಲಿ ಈ ಗೋವತ್ಸದ್ವಾದಶೀ ವ್ರತವನ್ನು ಆಚರಿಸಿರುತ್ತೇನೆ. ಈ ವ್ರತ ಪ್ರಭಾವದಿಂದ ಪುತ್ರರು ಮೃತರಾದರೂ ಪುನಃ ಪುನಃ ಬದುಕುವರು.

೭೫. ಆದುದರಿಂದ ನನ್ನ ಮಗನು ಬಾಲಕನಾಗಿರುವಾಗ ಮೃತನಾದರೂ ಪುನಃ ಜೀವಿಸುವನು. ಪ್ರವಾಸ ನಿಮಿತ್ತವಾಗಿ ಅವನ ವಿಯೋಗ ಒದಗಿದರೂ ಈ ವ್ರತಪ್ರಭಾವದಿಂದ ಅವನ ಸಮಾಗಮವು ಪುನಃ ನನಗಾಗುವುದು.

೭೬. ಎಲೌ ರುಚಿಯೇ ! ಈ ಗೋವತ್ಸದ್ವಾದಶೀ ವ್ರತದ ಯಥಾರ್ಥ ವಾದ ಪ್ರಭಾವವನ್ನು ನಿನಗೆ ಸ್ಪಷ್ಟವಾಗಿ ಹೇಳಿರುತ್ತೇನೆ. ನಿನಗೂ ಈ ವ್ರತಾ ಚರಣೆಯಿಂದ ಶುಭಕರವಾದ ಈ ಎಲ್ಲಾ ಫಲವೂ ಲಭಿಸುವುದು" ಎಂದಳು.

ಏವಮುಕ್ತಂ ವ್ರತಂ ಚೀರ್ಣಂ ರುಚ್ಯಾ ಪುತ್ರಾಃ ಸುಖಂ ಧನಂ ।
ಸಂಪ್ರಾಪ್ತಾ ಜೀವಿತಾಂತೇ ಚ ಧ್ರುವಸ್ಥಾನೇ ನಿವೇಶಿತಾ ॥ ೭೭ ॥

ಬ್ರಹ್ಮಣಾ ಸೃಷ್ಟಿಕಾರೇಣ ರುಚಿರ್ಭರ್ತ್ರಾ ಸಹಾಸಿತಾ ।
ದಶನಕ್ಷತ್ರಸಂಯುಕ್ತೋ ಧ್ರುವಃ ಸೋದ್ಯಾಪಿ ದೃಶ್ಯತೆ ।
ಧ್ರುವರ್ಕ್ಷೇ ಚ ಯದಾ ದೃಷ್ಟೇ ಲೋಕಃ ಪಾಪೈಃ ಪ್ರಮುಚ್ಯತೆ ॥೭೮॥

॥ ಯುಧಿಷ್ಠಿರ ಉವಾಚ ॥

ಕೀದೃಶಂ ತದ್ವಿಧಾನಂ ಚ ತನ್ಮೇ ಬ್ರೂಹಿ ಜನಾರ್ದನ ।
ಯತ್ಕೃತಂ ಶುಷ್ಮಿವಚನಾದ್ರುಚ್ಯಾ ಯದುಕುಲೋದ್ಭವ ॥ ೭೯ ॥

॥ ಶ್ರೀ ಕೃಷ್ಣ ಉವಾಚ ॥

ಸಂಪ್ರಾಪ್ತೇ ಕಾರ್ತಿಕೇ ಮಾಸಿ ಶುಕ್ಲಪಕ್ಷೇ ಕುರೂತ್ತಮ ।
ದ್ವಾದಶ್ಯಾಂ ಕೃತಸಂಕಲ್ಪಃ ಸ್ನಾತ್ವಾ ಪುಣ್ಯೇ ಜಲಾಶಯೇ ॥ ೮೦ ॥

---

೭೭. ಈ ರೀತಿಯಾಗಿ ಶುಷ್ಮಿಯು ಹೇಳಿದ ಆ ವ್ರತವನ್ನು ರುಚಿಯೂ ಆಚರಿಸಿ, ಅದರಿಂದ ಪುತ್ರ, ಧನ, ಸುಖ ಇವುಗಳನ್ನು ಪಡೆದುದಲ್ಲದೆ, ದೇಹಾವಸಾನಾನಂತರ ಧ್ರುವಮಂಡಲದಲ್ಲಿ ಒಂದು ಸ್ಥಾನವನ್ನೂ ಪಡೆದಳು.

೭೮. ಸೃಷ್ಟಿಕರ್ತನಾದ ಬ್ರಹ್ಮನು ಪತಿಸಮೇತಳಾದ ರುಚಿಯನ್ನು ಧ್ರುವಸ್ಥಾನದಲ್ಲಿ ಇರಿಸಿದನು. ಆದುದರಿಂದ ಧ್ರುವನಕ್ಷತ್ರದ ಜೊತೆಯಲ್ಲಿ ಈಗಲೂ ಹತ್ತು ಬೇರೆ ಬೇರೆ ನಕ್ಷತ್ರಗಳು ಕಾಣಿಸುತ್ತವೆ. ಅವುಗಳು ರುಚಿ, ಶುಷ್ಮಿ, ಅವರ ಪತಿ ಮತ್ತು ರುಚಿಪುತ್ರರು ಇತ್ಯಾದಿಗಳೆಂದು ತಿಳಿಯಬೇಕು. ಧ್ರುವನಕ್ಷತ್ರವನ್ನು ದರ್ಶನಮಾಡಿದ ಪುರುಷನು ಪಾಪಗಳಿಂದ ನಿರ್ಮುಕ್ತನಾಗುವನು.

೭೯. ಧರ್ಮರಾಜನು ಹೇಳುತ್ತಾನೆ—ಅಯ್ಯಾ ಯದುವಂಶೋದ್ಭವನಾದ ಜನಾರ್ದನನೇ! ಈರೀತಿ ಶುಷ್ಮಿಯ ಮಾತಿನ ಪ್ರಕಾರವಾಗಿ ರುಚಿಯು ಯಾವ ವ್ರತವನ್ನು ಆಚರಿಸಿದಳೋ ಆ ವ್ರತದ ಸ್ವರೂಪವನ್ನು ಮತ್ತು ಅನುಷ್ಠಾನ ಕ್ರಮವನ್ನೂ ನನಗೆ ಹೇಳು ಎಂದನು.

೮೦. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಕುರುಕುಲೋತ್ತಮನೇ! ಕಾರ್ತೀಕಮಾಸದ ಶುಕ್ಲಪಕ್ಷದ ದ್ವಾದಶಿಯದಿನ ಸ್ತ್ರೀಯಾಗಲಿ ಪುರುಷನಾಗಲಿ

ತತೋ ಮಧ್ಯಾಹ್ನಸಮಯೇ ದೃಷ್ಟ್ವಾ ಧೇನುಂ ಸವತ್ಸಿಕಾಂ ।
ಸುಶೀಲಾಂ ವತ್ಸಲಾಂ ಶ್ವೇತಾಂ ಕಪಿಲಾಂ ರಕ್ತರೂಪಿಣೀಂ ॥ ೮೧ ॥

ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಸ್ತ್ರೀಜನೇಶ್ವರ ।
ಯಥಾಕ್ರಮೇಣ ಪೂಜ್ಯೈನಾಂ ಗಂಧಪುಷ್ಪಜಲಾಕ್ಷತೈಃ ॥ ೮೨ ॥

ಕುಂಕುಮಾಲಕ್ತಕೈರ್ದೀಪೈರ್ಮಾಷಾನ್ನವಟಕೈಃ ಶುಭೈಃ ।
ಕುಸುಮೈರ್ವತ್ಸಕಂ ಚಾಪಿ ಮಂತ್ರೇಣಾನೇನ ಪಾಂಡವ ॥ ೮೩ ॥

ಓಂ ಮಾತಾ ರುದ್ರಾಣಾಂ ದುಹಿತಾ ವಸೂನಾಂ ।
ಸ್ವಸಾದಿತ್ಯಾನಾಮಮೃತಸ್ಯನಾಭಿಃ ।

---

ಸಂಕಲ್ಪಪೂರ್ವಕವಾಗಿ ಪುಣ್ಯಜಲಾಶಯದಲ್ಲಿ ಸ್ನಾನಮಾಡಿ ಆ ದಿನ ಏಕಭುಕ್ತ ಮಾಡುತ್ತೇನೆ ಎಂದು ಸಂಕಲ್ಪಿಸಬೇಕು.

೮೧. ಅಯ್ಯಾ ಪ್ರಜೇಶ್ವರನೇ! ಅನಂತರ ಮಧ್ಯಾಹ್ನಸಮಯದಲ್ಲಿ ಕರುಸಹಿತವಾಗಿಯೂ, ಒಳ್ಳೆಯ ಸ್ವಭಾವದ್ದಾಗಿಯೂ ಇರುತ್ತಾ ದರ್ಶನಮಾತ್ರ ದಿಂದ ಪ್ರೀತಿಯುತ್ಪನ್ನವಾಗುವಂತೆ ಮಾಡುವಂಥ ಗೋವನ್ನು ಜಲ, ಗಂಧ, ಅಕ್ಷತೆ, ಪುಷ್ಪ ಇವುಗಳಿಂದ ಪೂಜಿಸಬೇಕು.

೮೨. ಅದರಲ್ಲೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಜಾತಿಯ ಸ್ತ್ರೀಯರು ಕ್ರಮವಾಗಿ ಬಿಳುಪು, ಕಪಿಲ, ಕೆಂಪು ಈ ಬಣ್ಣದ ಗೋವನ್ನು ಪೂಜಿಸಬೇಕು. ಶೂದ್ರ ಸ್ತ್ರೀಯು ಕಪ್ಪು ಬಣ್ಣದ ಹಸುವನ್ನು ಅರ್ಚಿಸಬೇಕು.

೮೩. ಅಯ್ಯಾ ಪಾಂಡುಪುತ್ರನೇ! ಆ ಧೇನುವನ್ನು ಈ ಮುಂದೆ ಹೇಳುವ ಮಂತ್ರಪೂರ್ವಕವಾಗಿ ಕುಂಕುಮ, ಅಲಕ್ತಕ, ಕುಸುಮ, ಧೂಪ, ದೀಪಗಳಿಂದಲೂ ಶುಭಕರಗಳಾದ ಮಾಷಾನ್ನ ವಡೆ ಇವನ್ನು ನಿವೇದನ ಮಾಡಿಯೂ ಪೂಜಿಸಬೇಕು. ಅದರ ಕರುವನ್ನೂ ಹಾಗೆಯೇ ಪೂಜಿಸಬೇಕು.

೮೪. ಇದು ಗೋಪೂಜಾ ಮಂತ್ರ. ಎಲೌ ಗೋಮಾತೆಯೇ! ನೀನು ಏಕಾದಶ ರುದ್ರರಿಗೆ ಮಾತೃಸ್ವರೂಪಳು, ಅಷ್ಟವಸುಗಳ ಪುತ್ರಿಯು, ದ್ವಾದಶಾ

ಪ್ರನುವೋಚಂ ಚಿಕಿತುಷೇ ಜನಾಯ |
ಮಾ ಗಾಮನಾಗಾಮದಿತಿಂ ವಧಿಷ್ಟ | ನಮೋ ನಮಃ ಸ್ವಾಹಾ |
ಇತ್ಥಂ ಸಂಪೂಜ್ಯ ಗಾಂ ಸ್ಪೃಷ್ಟ್ವಾ ಪಶ್ಚಾತ್ತಾಂ ಚ ಕ್ಷಮಾಪಯೇತ್ ||

ಓಂ ಸರ್ವದೇವಮಯೇ ದೇವೀ ಲೋಕಾನಾಂ ಶುಭನಂದಿನಿ |
ಮಾತರ್ಮಮಾಭಿಲಷಿತಂ ಸಫಲಂ ಕುರು ನಂದಿನಿ || ೮೫ ||

ಏವಮಭ್ಯರ್ಚಯೇದೇಕಾಂ ಗಾಮೇತದ್ಧಿ ಗವಾಹ್ನಿಕಂ |
ಪರ್ಯುಕ್ಷ್ಯ ವಾರಿಣಾ ಭಕ್ತ್ಯಾ ಪ್ರಣಮ್ಯ ಸುರಭೀಂ ತತಃ || ೮೬ ||

ತದ್ದಿನೇ ತಾಪಿಕಾಪಕ್ವಂ ಸ್ಥಾಲೀಪಾಕಂ ಚ ವರ್ಜಯೇತ್ |
ಭೂಮೌ ಸ್ವಯಂ ಬ್ರಹ್ಮಚಾರೀ ಶಯೀತ ಫಲಮಾಪ್ನುಯಾತ್|| ೮೭ ||

---

ದಿತ್ಯರ ತಂಗಿಯು. ದೇವತೆಗಳಿಗೆ ಅಮೃತಪ್ರಾಪ್ತಿಗೆ ಕಾರಣಳು ಆಗಿದ್ದೀ. ಅಂತಹ ನಿನ್ನನ್ನು ನಾನು ಉತ್ಕೃಷ್ಟವಾಗಿ ಹೊಗಳಿದ್ದೇನೆ. ನಿನ್ನನ್ನು ಪೂಜಿಸಿದ ಈ ಯಜಮಾನನಿಗೆ ಸುಪ್ರೀತಳಾಗು. ಮತ್ತು ನಿರಪರಾಧಿಗಳಾದ ಇವನ ಸಂತತಿ ಮೊದಲಾದುದನ್ನು ಹಿಂಸಿಸಬೇಡ. ಎಂಬುದು ಇದರ ತಾತ್ಪರ್ಯ.

೮೫. ಈರೀತಿ ಗೋವನ್ನು ಪೂಜಿಸಿ ಅದನ್ನು ಸ್ಪರ್ಶಮಾಡಿ ಅನಂತರ ಈ ಮುಂದೆ ಹೇಳುವಂತೆ ಕ್ಷಮಾ ಪ್ರಾರ್ಥನೆ ಮಾಡಬೇಕು.

ಇದು ಪ್ರಾರ್ಥನಾ ಮಂತ್ರ. ಓ ಸರ್ವದೇವತಾ ಸ್ವರೂಪಿಣಿಯಾದ ಗೋದೇವಿಯೇ ! ನೀನು ಲೋಕಕ್ಕೆ ಶುಭದಾಯಕಳಾಗಿರುವೆ. ಅಂತಹ ಓ ಮಾತೆಯೇ ! ನೀನು ನನ್ನ ಸರ್ವಾಭಿಲಷಿತವನ್ನೂ ಸಫಲವನ್ನಾಗಿ ಮಾಡು. ಇದು ಈ ಮಂತ್ರಾರ್ಥ.

೮೬. ಈ ಕ್ರಮದಿಂದ ಒಂದು ಗೋವನ್ನು ಅರ್ಚಿಸಬೇಕು. ಇದು ಒಂದು ಗವಾಹ್ನಿಕವೆಂದು ಹೇಳಿಸಿಕೊಳ್ಳುವುದು. ಹಾಗೆಯೇ ಶುದ್ಧಜಲದಿಂದ ಆ ಗೋವಿಗೆ ಪ್ರೋಕ್ಷಣೆಮಾಡಿ ಭಕ್ತಿಪೂರ್ವಕವಾಗಿ ಅದನ್ನು ನಮಸ್ಕರಿಸಬೇಕು.

೮೭. ಅನಂತರ ಸ್ಥಾಲಿಯಲ್ಲಿ ಪಕ್ವಮಾಡಿದ ಬಿಸಿಯಾದ ಪದಾರ್ಥವನ್ನು ಆ ದಿನ ತಿನ್ನಬಾರದು. ಮತ್ತು ಆ ದಿನ ರಾತ್ರಿಯಲ್ಲಿ ಬ್ರಹ್ಮಚರ್ಯವನ್ನು ಪರಿಪಾಲಿಸಿ ಭೂಶಯನ ಮಾಡಬೇಕು.

ಯಾವಂತಿ ಗಾತ್ರೇ ರೋಮಾಣಿ ಗವಾಂ ಕೌರವನಂದನ ।
ತಾವತ್ಕಾಲಂ ಸ ವಸತಿ ಗೋಲೋಕೇ ನಾತ್ರ ಸಂಶಯಃ ॥ ೮೮ ॥

ಮೇರೋಃ ಪರ್ಯಷ್ಟಕಂ ರಮ್ಯಮಿಂದ್ರಾಗ್ನಿಯಮರಕ್ಷಸಾಂ ।
ವರುಣಾನಿಲ ಯಕ್ಷಾಣಾಂ ರುದ್ರಸ್ಯ ಚ ಯುಧಿಷ್ಠಿರ ।
ತಾಸಾಮುಪರಿ ಗೋಲೋಕಸ್ತತ್ರ ಯಾತಿ ಸ ಗೋವ್ರತೀ ॥ ೮೯ ॥

ಊರ್ಜೇ ಸಿತೇ ದ್ವಿದಶಮೇಽಹನಿ ಗಾಂ ಸವತ್ಸಾಂ ।
ಯಾಃ ಪೂಜಯಂತಿ ಕುಸುಮೈರ್ವಟಕೈಶ್ಚ ಹೃದ್ಯೈಃ ।
ತಾಃ ಸರ್ವಕಾಮಸುಖಭೋಗವಿಭೂತಿಭಾಜೋ ।
ಮರ್ತ್ಯೇ ವಸಂತಿ ಸುಚಿರಂ ಬಹುಜೀವವತ್ಸಾಃ ॥ ೯೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಗೋವತ್ಸದ್ವಾದಶೀವ್ರತಂ
ನಾಮೈಕೋನಸಪ್ತತಿತಮೋಽಧ್ಯಾಯಃ.

---

೮೮. ಅಯ್ಯಾ ಕುರುಕುಲೋತ್ಪನ್ನನೇ! ಈ ವ್ರತವನ್ನು ಆಚರಿಸಿದವನು ಗೋವುಗಳ ಶರೀರದಲ್ಲಿ ಎಷ್ಟು ರೋಮಗಳಿರುವುವೋ ಅಷ್ಟು ಸಂವತ್ಸರಕಾಲ ಗೋಲೋಕದಲ್ಲಿ ವಾಸಿಸಿರುವನು. ಈ ವಿಷಯದಲ್ಲಿ ಸಂದೇಹವಿಲ್ಲ.

೮೯. ಅಯ್ಯಾ ಯುಧಿಷ್ಠಿರನೇ! ಮೇರುಪರ್ವತದ ಮೇಲೆ ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರ, ಈಶಾನ್ಯ ಇವರುಗಳ ರಾಜಧಾನಿಗಳಾಗಿರುವ ಎಂಟು ನಗರಗಳಿವೆ. ಆ ಎಂಟು ನಗರಿಗಳಿಗೂ ಮೇಲ್ಭಾಗದಲ್ಲಿ ಗೋಲೋಕವಿದೆ. ಈ ಗೋವತ್ಸದ್ವಾದಶೀ ವ್ರತವನ್ನು ಆಚರಿಸಿದವನು ಆ ಗೋಲೋಕಕ್ಕೆ ಹೋಗುತ್ತಾನೆ.

೯೦. ಕಾರ್ತೀಕಮಾಸದ ಶುಕ್ಲಪಕ್ಷದ ದ್ವಾದಶಿಯ ದಿನ ಕರುಸಹಿತವಾದ ಗೋವನ್ನು ಪುಷ್ಪಗಳಿಂದ ಅರ್ಚಿಸಿ ಹೃದ್ಯಗಳಾದ ವಡೆಗಳನ್ನು ಸಮರ್ಪಣೆ ಮಾಡಿ ಈ ವ್ರತವನ್ನು ಯಾವ ಸ್ತ್ರೀಯರು ಆಚರಿಸುವರೋ ಅವರು ಈ ಮನುಷ್ಯ ಲೋಕದಲ್ಲಿ ಸರ್ವಾಭಿಲಷಿತವನ್ನೂ ಸರ್ವಸುಖವನ್ನೂ ಸಮಸ್ತಭೋಗವನ್ನೂ ಮತ್ತು ಸಕಲಸಂಪತ್ತನ್ನೂ ಪಡೆದು, ಬಹುಕಾಲ ಸೌಮಂಗಲ್ಯಯುತರಾಗಿ ಬಾಳುವವರೂ, ಜೀವಂತರಾದ ಬಹುಪುತ್ರರುಳ್ಳವರೂ ಆಗುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಗೋವತ್ಸದ್ವಾದಶೀ
ವ್ರತವರ್ಣನೆಯೆಂಬ ಅರವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಸಪ್ತತಿತಮೋಽಧ್ಯಾಯಃ

|| ಶ್ರೀ ಕೃಷ್ಣ ಉವಾಚ ||

ಶೃಣು ಪಾರ್ಥ ಪ್ರವಕ್ಷ್ಯಾಮಿ ಗೋವಿಂದಶಯನಂ ವ್ರತಂ ।
ಕಟಿದಾನಂ ಸಮುತ್ಥಾನಂ ಚಾತುರ್ಮಾಸ್ಯವ್ರತಕ್ರಮಂ || ೧ ||

|| ಯುಧಿಷ್ಠಿರ ಉವಾಚ ||

ಕಿಂ ದೇವಶಯನಂ ನಾಮ ದೇವಸ್ಸ್ವಪಿತಿ ಚಾಪ್ಯಸೌ ।
ದೇವಃ ಕಿಮರ್ಥಂ ಸ್ವಪಿತಿ ಕಿಂವಿಧಾನಂ ಕದಾ ವದ || ೨ ||

---

## ಎಪ್ಪತ್ತನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಪಾರ್ಥಸಹೋದರನೇ! ಮಳೆಗಾಲದ ನಾಲ್ಕು ತಿಂಗಳುಗಳಲ್ಲಿ ಆಚರಿಸತಕ್ಕುದೂ, ಶಯ್ಯಾದಾನಯುತವೂ, ದೇವತೋತ್ಥಾಪನ ಕಾರ್ಯಸಹಿತವೂ ಆಗಿರುವ ಶ್ರೀ ಗೋವಿಂದ ಶಯನವ್ರತವನ್ನು ಹೇಳುತ್ತೇನೆ ಶ್ರವಣಮಾಡು.

೨. ಯುಧಿಷ್ಠಿರನು ಕೇಳುತ್ತಾನೆ—ಎಲೈ ಕೃಷ್ಣನೇ! ದೇವಶಯನ ವ್ರತವೆಂದರೇನು? ಈ ದೇವನು ಶಯನಮಾಡುವನೇ? ಹಾಗಾದರೆ ಅವನು ಏತಕ್ಕೆ ಶಯನಮಾಡುವನು? ಆ ಶಯನ ಕಾಲವು ಯಾವುದು? ಆ ವ್ರತದ ಕ್ರಮವೇನು?

[illegible] ಮಂತ್ರಾಃ ಕೇ ಚ ನಿಯಮಾ ವ್ರತಾನ್ಯಥ ಕ್ರಿಯಾ ಚ ಕಾ ।
[illegible] ತ್ಯಾಜ್ಯಂ ಕಿ ಚ ಭೋಕ್ತವ್ಯಂ ಸುಪ್ತೇ ದೇವೇ ಜನಾರ್ದನೇ ॥ ೩ ॥

॥ ಶ್ರೀ ಕೃಷ್ಣ ಉವಾಚ ॥
ಮಿಥುನಸ್ಥೇ ಸಹಸ್ರಾಂಶೌ ಸ್ಥಾಪಯೇನ್ಮಧುಸೂದನಂ ।
ತುಲಾರಾಶಿಗತೇ ತಸ್ಮಿನ್ಪುನರುತ್ಥಾಪಯೇದ್ವ್ರತಂ ॥ ೪ ॥

ಅಧಿಮಾಸೇ ಚ ಪತಿತೇ ಏಷಏವ ವಿಧಿಕ್ರಮಃ ।
ನಾನ್ಯಥಾ ಸ್ಥಾಪಯೇದ್ದೇವಂ ನ ಚೈವೋತ್ಥಾಪಯೇದ್ಧರಿಂ ॥ ೫ ॥

ಅಷಾಢಸ್ಯ ಸಿತೇ ಪಕ್ಷೇ ಏಕಾದಶ್ಯಾಮುಪೋಷಿತಃ ।
ಸ್ಥಾಪಯೇದ್ಭಕ್ತಿಮಾನ್ವಿಷ್ಣುಂ ಶಂಖಚಕ್ರಗದಾಧರಂ ॥ ೬ ॥

---

೩. ಮತ್ತು ಈ ವ್ರತಾಚರಣೆಗೆ ಯಾವ ಮಂತ್ರಗಳು ಉಕ್ತವಾಗಿವೆ? ಅದರ ನಿಯಮಗಳೇನು? ಅದರ ಕಾರ್ಯಕಲಾಪಗಳು ಹೇಗೆ ಇರಬೇಕು? ಶ್ರೀ ಜನಾರ್ದನನು ಶಯನಮಾಡಿದ ಸಮಯದಲ್ಲಿ ಯಾವ ವಸ್ತುವು ತ್ಯಾಜ್ಯ? ಆಗ ಭೋಜ್ಯ ವಸ್ತುವು ಯಾವುದು? ಎಂದು ಕೇಳಿದನು.

೪. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಧರ್ಮರಾಜನೇ! ಸೂರ್ಯನು ಮಿಥುನರಾಶಿಗೆ ಬಂದಾಗ ಶ್ರೀ ಮಧುಸೂದನನ್ನು ಪ್ರತಿಷ್ಠಿಸಿ ವಿಷ್ಣುಶಯನೋತ್ಸವವನ್ನು ಆಚರಿಸಬೇಕು. ಅನಂತರ ಸೂರ್ಯನು ತುಲಾರಾಶಿಗೆ ಬಂದಾಗ ಪುನಃ ಆ ಶ್ರೀ ಮಹಾವಿಷ್ಣುವಿಗೆ ಉತ್ಥಾಪನ ವ್ರತವನ್ನು ಆಚರಿಸಬೇಕು.

೫. ಚಾಂದ್ರಮಾನದ ಅಧಿಕಮಾಸವು ಬಂದರೂ ಈ ವ್ರತಾಚರಣ ಕ್ರಮವು ಸೂರ್ಯನು ಮಿಥುನ ತುಲಾರಾಶಿಯಲ್ಲಿರುವಾಗಲೇ ನಡೆಯಬೇಕು. ಈ ಕ್ರಮವನ್ನು ಬಿಟ್ಟು ಬೇರೆ ರೀತಿಯಾಗಿ ಶ್ರೀ ಹರಿಯ ಶಯನ ಮತ್ತು ಉತ್ಥಾನ ಈ ಎರಡನ್ನೂ ಆಚರಿಸಬಾರದು.

೬. ಅಯ್ಯಾ ಯುಧಿಷ್ಠಿರನೇ! ಆಷಾಢಮಾಸದ ಶುಕ್ಲಪಕ್ಷದ ಏಕಾದಶಿಯ ದಿನದಲ್ಲಿ ಉಪವಾಸವನ್ನಾಚರಿಸಿ, ಮನೋಹರವಾದ ಮಂಚದಲ್ಲಿ ಹಾಸಿಗೆಯನ್ನು (ಆಸ್ತರಣಮಾಡಿ) ಹಾಸಿ, ಅದರ ಮೇಲೆ ಬಿಳಿಯ ವಸ್ತ್ರವನ್ನು ಹಾಸಬೇಕು.

ಪೀತಾಂಬರಧರಂ ಸೌಮ್ಯಂ ಪರ್ಯಂಕೇ ಸ್ವಾಸ್ತೃತೇ ಶುಭೇ ।
ಶುಕ್ಲವಸ್ತ್ರಸಮಾಚ್ಛನ್ನೇ ಸೋಪಧಾನೇ ಯುಧಿಷ್ಠಿರ ॥ ೭ ॥

ಇತಿಹಾಸಪುರಾಣಜ್ಞೋ ವಿಷ್ಣುಭಕ್ತೋಽಪಿ ಯಃ ಪುಮಾನ್ ।
ಸ್ನಾಪಯಿತ್ವಾ ದಧಿಕ್ಷೀರಘೃತಕ್ಷೌದ್ರಜಲೈಸ್ತಥಾ ॥ ೮ ॥

ಸಮಾಲಭ್ಯ ಶುಭೈರ್ಗಂಧೈರ್ಧೂಪೈರ್ವಸ್ತ್ರೈರಲಂಕೃತಂ ।
ಪೂಜಯಿತ್ವಾ ಕುಂಕುಮಾದ್ಯೈರ್ಮಂತ್ರೇಣಾನೇನ ಪಾಂಡವ ॥ ೯ ॥

ಸುಪ್ತೇ ತ್ವಯಿ ಜಗನ್ನಾಥ ಜಗತ್ಸುಪ್ತಂ ಭವೇದಿದಂ ।
ವಿಬುದ್ಧೇ ತ್ವಯಿ ಬುದ್ಧ್ಯೇತ ಜಗತ್ಸರ್ವಂ ಚರಾಚರಂ ॥ ೧೦ ॥

---

೭. ಅದರ ಮೇಲೆ ದಿಂಬನ್ನಿಟ್ಟು ಆ ಹಾಸಿಗೆಯಲ್ಲಿ ಶಂಖ, ಚಕ್ರ, ಗದಾಧಾರಿಯೂ, ಪೀತಾಂಬರಧರನೂ, ಸೌಮ್ಯಾಕೃತಿಯುಳ್ಳವನೂ ಆದ, ಶ್ರೀ ಮಹಾವಿಷ್ಣುವನ್ನು ಭಕ್ತಿಪೂರ್ವಕವಾಗಿ ಸ್ಥಾಪಿಸಬೇಕು.

೮. ಇತಿಹಾಸ ಪುರಾಣಗಳನ್ನು ತಿಳಿದಿರುವ ವಿಷ್ಣುಭಕ್ತನೆನಿಸಿ ಈ ವ್ರತವನ್ನಾಚರಿಸುವ ಪುರುಷನು ಈ ಮೊದಲು ಶ್ರೀ ಹರಿಗೆ ಹಾಲು, ಮೊಸರು, ತುಪ್ಪ ಜೇನುತುಪ್ಪ, ಶುದ್ಧೋದಕ ಈ ಪಂಚಾಮೃತಗಳಿಂದ ಅಭಿಷೇಕ ಮಾಡಬೇಕು.

೯. ಅಯ್ಯಾ ಪಾಂಡವನೇ ! ಅನಂತರ ಆ ದೇವನಿಗೆ ಶುಭ ಗಂಧ ಲೇಪನ ಮಾಡಿ ವಸ್ತ್ರಗಳಿಂದ ಅಲಂಕರಿಸಿ ಧೂಪವನ್ನು ಹತ್ತಿಸಿ ಈ ಮುಂದೆ ಹೇಳುವ ಮಂತ್ರಪೂರ್ವಕವಾಗಿ ಕುಂಕುಮಾದಿಗಳಿಂದ ಅರ್ಚಿಸಿ ಶಯನಮಾಡಿಸಬೇಕು.

೧೦. ಇದು ಶ್ರೀಹರಿಯನ್ನು ಶಯನಮಾಡಿಸುವ ಮಂತ್ರ. ಓ ಜಗದೀಶನೇ ! ನಿನ್ನ ಶಯನಕಾಲದಲ್ಲಿ ಈ ಪ್ರಪಂಚವೇ ಸ್ವಪಿಸಿ ನಿಷ್ಕ್ರಿಯವಾಗುವುದು. ನೀನು ಎಚ್ಚರಗೊಂಡಾಗ ಚರಾಚರಾತ್ಮಕವಾದ ಈ ಪ್ರಪಂಚವು ಚೈತನ್ಯವನ್ನು ಹೊಂದಿ ಜಾಗ್ರದವಸ್ಥೆಯನ್ನು ಅನುಭವಿಸುವುದು ಎಂದು ಈ ಮಂತ್ರಾರ್ಥ.

ಏವಂ ತಾಂ ಪ್ರತಿಮಾಂ ವಿಷ್ಣೋಃ ಸ್ಥಾಪಯಿತ್ವಾ ಯುಧಿಷ್ಠಿರ ।
ತಸ್ಯೈವಾಗ್ರೇ ಸ್ವಯಂ ವಾಚಂ ಗೃಹ್ಣೀಯಾನ್ನಿಯಮಾಂಸ್ತತಃ ॥ ೧೧ ॥

ಚತುರೋ ವಾರ್ಷಿಕಾನ್ಮಾಸಾನ್ದೇವಸ್ಯೋತ್ಥಾಪನಾವಧಿ ।
ಸ್ತ್ರೀ ವಾ ನರೋ ವಾ ಮದ್ಭಕ್ತೋ ಧರ್ಮಾರ್ಥಂ ಸುದೃಢವ್ರತಃ ॥ ೧೨ ॥

ಗೃಹ್ಣೀಯಾನ್ನಿಯಮಾನೇತಾನ್ದಂತಧಾವನಪೂರ್ವಕಂ ।
ತೇಷಾಂ ಫಲಾನಿ ವಕ್ಷ್ಯಾಮಿ ತತ್ಕರ್ತ್ರ್ಯಾಣಾಂ ಪೃಥಕ್ಪೃಥಕ್ ॥ ೧೩ ॥

ಮಧುರಸ್ವರೋ ಭವೇದ್ರಾಜಾ ಪುರುಷೋ ಗುಡವರ್ಜನಾತ್ ।
ತೈಲಸ್ಯ ವರ್ಜನಾತ್ಪಾರ್ಥ ಸುಂದರಾಂಗಃ ಪ್ರಜಾಯತೆ ॥ ೧೪ ॥

---

೧೧. ಅಯ್ಯಾ ಯುಧಿಷ್ಠಿರನೇ ! ಈ ಮಂತ್ರವನ್ನು ಹೇಳಿ ಆ ಶ್ರೀವಿಷ್ಣುವಿನ ಪ್ರತಿಮೆಯನ್ನು ಹಾಸಿಗೆಯಲ್ಲಿ ಸ್ಥಾಪಿಸಿ ಅನಂತರ ಆ ದೇವನ ಇದಿರಿನಲ್ಲಿ ವಾಙ್ನಿಯಮವನ್ನು ಅವಲಂಬಿಸುವುದಲ್ಲದೆ, ಮುಂದೆ ಹೇಳುವ ಕೆಲವು ನಿಯಮಗಳನ್ನೂ ಪರಿಗ್ರಹಿಸಬೇಕು.

೧೨. ನನ್ನಲ್ಲಿ ಭಕ್ತಿಯುಳ್ಳ ಗಂಡಸು ಅಥವಾ ಹೆಂಗಸು, ಪುಣ್ಯಪ್ರಾಪ್ತಿಗಾಗಿ ವರ್ಷಾಕಾಲದ (ಚತುರ್ಮಾಸ) ನಾಲ್ಕು ತಿಂಗಳುಗಳಲ್ಲಿ ದೇವನ ಶಯನ ದಿನ ಮೊದಲ್ಗೊಂಡು ಉತ್ಥಾಪನೋತ್ಸವದವರೆಗೆ ದೃಢವಾದ ವ್ರತವನ್ನು ಪರಿಗ್ರಹಿಸಬೇಕು.

೧೩. ಆ ಶಯನದ ದಿನ ದಂತಧಾವನ ಸ್ನಾನಾಹ್ನಿಕಾದಿ ನಿತ್ಯಕರ್ಮಗಳನ್ನು ಮಾಡಿ ಶುಚಿಯಾದ ಮೇಲೆ, ಈ ಮುಂದೆ ಹೇಳುವ ನಿಯಮಗಳನ್ನು ಪರಿಗ್ರಹಿಸತಕ್ಕದ್ದು. ಈ ನಿಯಮವನ್ನಾಚರಿಸಿದವರಿಗೆ ಅದರಿಂದ ಬೇರೆಬೇರೆಯಾಗಿ ಪ್ರಾಪ್ತವಾಗುವ ಫಲಗಳನ್ನು ಹೇಳುತ್ತೇನೆ.

೧೪. ಅಯ್ಯಾ ಧರ್ಮಜನೇ ! ರಾಜಪುರುಷನು ಈ ಚಾತುರ್ಮಾಸ್ಯದಲ್ಲಿ ಬೆಲ್ಲವನ್ನು ವರ್ಜ್ಯ ಮಾಡುವುದರಿಂದ ಅವನಿಗೆ ಮಧುರವಾದ ಕಂಠಧ್ವನಿ ಲಭಿಸುವುದು. ತೈಲವರ್ಜನೆ ಮಾಡಿದವನು ಸುಂದರಾಂಗನಾಗುವನು.

ಕಟುತ್ತೈಲಪರಿತ್ಯಾಗಾಚ್ಛತ್ರುಕ್ಷಯಮವಾಪ್ನುಯಾತ್ ।
ಮಧೂಕತ್ತೈಲತ್ಯಾಗೇನ ಸೌಭಾಗ್ಯಮತುಲಂ ಭವೇತ್ ॥ ೧೫ ॥

ಪುಷ್ಪಾದಿಭೋಗತ್ಯಾಗೇನ ಸ್ವರ್ಗೇ ವಿದ್ಯಾಧರೋ ಭವೇತ್ ।
ಯೋಗಾಭ್ಯಾಸೀ ಭವೇದ್ಯಸ್ತು ಸ ಬ್ರಹ್ಮಪದಮಾಪ್ನುಯಾತ್ ॥ ೧೬ ॥

ಕಟುಕಾಮ್ಲತಿಕ್ತಮಧುರ ಕ್ಷಾರ ಕಾಷಾಯಮೇವ ಚ ।
ಯೋ ವರ್ಜಯೇತ್ಸ ವೈರೂಪ್ಯಂ ದೌರ್ಗತ್ಯಂ ನಾಪ್ನುಯಾತ್ಕ್ವಚಿತ್ ॥

ತಾಂಬೂಲವರ್ಜನಾದ್ಭೋಗೀ ರಕ್ತಕಂಠಶ್ಚ ಜಾಯತೆ ।
ಘೃತತ್ಯಾಗಾತ್ಸುಲಾವಣ್ಯಂ ಸರ್ವಸಿದ್ಧಿಃ ಪುನರ್ಭವೇತ್ ॥ ೧೮ ॥

---

೧೫. ಕಾರ, ಎಣ್ಣೆ ಇವೆರಡನ್ನೂ ಪರಿತ್ಯಾಗಮಾಡಿದರೆ ರಾಜರಿಗೆ ಶತ್ರುಕ್ಷಯವಾಗುವುದು. ಜೇನು, ಎಣ್ಣೆ ಇವೆರಡನ್ನೂ ವರ್ಜಿಸಿದರೆ, ಅಸದೃಶವಾದ ಸೌಭಾಗ್ಯಪ್ರಾಪ್ತಿಯಾಗುವುದು.

೧೬. ಈ ನಾಲ್ಕು ತಿಂಗಳುಗಳಲ್ಲಿ ಪುಷ್ಪಾದಿ ಭೋಗ್ಯವಸ್ತುಗಳನ್ನು ಪರಿತ್ಯಾಗಮಾಡಿದರೆ, ಸ್ವರ್ಗದಲ್ಲಿ ವಿದ್ಯಾಧರನಾಗಿ ಜನಿಸುವನು. ಯಾವನು ಆಚಾತುರ್ಮಾಶದಲ್ಲಿ ಯೋಗಾಭ್ಯಾಸಿಯಾಗಿರುವನೋ ಅಂತಹವನು ಬ್ರಹ್ಮಪದವಿಯನ್ನೇ ಪಡೆಯುತ್ತಾನೆ.

೧೭. ಕಾರ, ಹುಳಿ, ಕಹಿ, ಸಿಹಿ, ಒಗರು, ಉಪ್ಪು ಎಂಬ ಷಡ್ರಸಗಳನ್ನೂ ಯಾವನು ವರ್ಜಿಸುವನೋ, ಅಂತಹವನು ದೇಹವೈರೂಪ್ಯವನ್ನೂ, ದಾರಿದ್ರ್ಯವನ್ನೂ ಎಂದೂ ಪಡೆಯುವುದಿಲ್ಲ.

೧೮. ಈ ನಾಲ್ಕು ತಿಂಗಳುಗಳಲ್ಲಿ ತಾಂಬೂಲವರ್ಜ್ಯ ಮಾಡುವನು ಸದಾ ಭೋಗಿಯೂ, ಮಧುರ ಕಂಠವುಳ್ಳವನೂ ಆಗಿ ಜೀವಿಸುವನು. ಘೃತ ಪರಿತ್ಯಾಗ ಮಾಡಿದವನು ದೇಹದ ಲಾವಣ್ಯವನ್ನೂ ಮತ್ತು ಸರ್ವಾರ್ಥಸಿದ್ಧಿಯನ್ನೂ ಹೊಂದುತ್ತಾನೆ.

ಫಲತ್ಯಾಗಾಚ್ಚ ಮತಿಮಾನ್ಬಹುಪುತ್ರಶ್ಚ ಜಾಯತೇ ।
ಶಾಕಪತ್ರಾಶನಾದ್ರೋಗೀ ಅಪಕ್ವಾದೋಽಮಲೋ ಭವೇತ್ ॥ ೧೯ ॥

ಪಾದಾಭ್ಯಂಗಪರಿತ್ಯಾಗಾಚ್ಛಿರೋಽಭ್ಯಂಗಾಚ್ಚ ಪಾರ್ಥಿವ ।
ದೀಪ್ತಿಮಾರ್ ದೀಪ್ತಕರಣೋ ಯಕ್ಷೋ ದ್ರವ್ಯಪತಿರ್ಭವೇತ್ ॥ ೨೦ ॥

ದಧಿದುಗ್ಧತಕ್ರನಿಯಮಾದ್ಗೋಲೋಕಂ ಲಭತೇ ನರಃ ।
ಇಂದ್ರಾತಿಥಿತ್ವಮಾಪ್ನೋತಿ ಸ್ಥಾಲೀಪಾಕವಿವರ್ಜಿತಾತ್ ॥ ೨೧ ॥

ಲಭೇತ ಸಂತತಿಂ ದೀರ್ಘಾಂ ತಾಪಪಕ್ವಸ್ಯ ಭಕ್ಷಣಾತ್ ।
ಭೂಮಾವಸ್ತರಶಾಯೀ ಚ ವಿಷ್ಣೋರನುಚರೋ ಭವೇತ್ ॥ ೨೨ ॥

---

೧೯. ಹಣ್ಣುಗಳನ್ನು ತ್ಯಾಗಮಾಡಿದವನು ಬಹು 'ಬುದ್ಧಿಶಾಲಿಯೂ, ಬಹು ಪುತ್ರವಂತನೂ ಆಗುತ್ತಾನೆ. ಈ ಕಾಲದಲ್ಲಿ ಶಾಕ, ಪತ್ರ ಇವುಗಳನ್ನು ತಿಂದವನು ರೋಗಿಯಾಗುತ್ತಾನೆ. ಅಪಕ್ವವಾಗಿ ಹಸಿಯಾಗಿರುವ ಪದಾರ್ಥಗಳನ್ನು ತಿಂದವನು ನೀರೋಗಿಯಾಗಿರುತ್ತಾನೆ.

೨೦. ಅಯ್ಯಾ ರಾಜನೇ ! ಈ ನಾಲ್ಕು ತಿಂಗಳುಗಳಲ್ಲಿ ಪಾದಗಳಿಗೆ ತೈಲ ಹಚ್ಚಿ ಅಭ್ಯಂಗನಮಾಡದೆ ಶಿರೋಽಭ್ಯಂಗನವನ್ನು ಮಾತ್ರ ಮಾಡಿದವನು ಬಹಳ ಕಾಂತಿವಂತನೂ, ಪಟುವಾದ ಇಂದ್ರಿಯಗಳುಳ್ಳವನೂ, ಧನಾಧೀಶನಾದ ಕುಬೇರನ ಸಮಾನನೂ ಆಗುತ್ತಾನೆ.

೨೧. ಈ ವ್ರತಕಾಲದಲ್ಲಿ ಹಾಲು, ಮೊಸರು, ಮಜ್ಜಿಗೆ ಇವುಗಳನ್ನು ವರ್ಜಿಸಿದವನು ಗೋಲೋಕವನ್ನು ಪಡೆಯುತ್ತಾನೆ. ಸ್ಥಾಲಿಯಲ್ಲಿ ಪಾಕ ಮಾಡಿದ ವಸ್ತುವನ್ನು ವರ್ಜಿಸಿದವನು ಸ್ವರ್ಗಲೋಕದಲ್ಲಿ ಇಂದ್ರನ ಅತಿಥಿಯಾಗುತ್ತಾನೆ.

೨೨. ಸೆಕೆ (ಬೆಂಕಿ) ಯಿಂದ ಪಕ್ವವಾದ ಫಲಾದಿಗಳನ್ನು ತಿಂದು ಜೀವಿಸಿದವನು, ದೀರ್ಘಸಂತಾನವನ್ನು ಪಡೆಯುತ್ತಾನೆ. ಈ ಚಾತುರ್ಮಾಸ್ಯದಲ್ಲಿ ಆಸ್ತರಣವಿಲ್ಲದೇ ಭೂಶಯನ ಮಾಡಿದವನು ಶ್ರೀ ಮಹಾವಿಷ್ಣುವಿನ ಅನುಚರನಾಗುವನು.

ಸದಾ ಮುನಿಃ ಸದಾ ಯೋಗೀ ಮಧುಮಾಂಸಸ್ಯ ವರ್ಜನಾತ್ ।
ನಿರ್ವ್ಯಾಧಿರ್ನೀರುಜಶ್ಚೌಜಸ್ವೀ ಸುರಾಮದ್ಯವಿವರ್ಜನಾತ್ ॥ ೨೩ ॥

ಏವಮಾದಿಪರಿತ್ಯಾಗಾದ್ಧರ್ಮಃ ಸ್ಯಾದ್ಧರ್ಮನಂದನ ।
ಏಕಾಂತತೋಪವಾಸೇನ ಬ್ರಹ್ಮಲೋಕೇ ಮಹೀಯತೇ ॥ ೨೪ ॥

ಧಾರಣಂ ನಖರೋಮಾಣಾಂ ಗಂಗಾಸ್ನಾನಂ ದಿನೇದಿನೇ ।
ಮೌನವ್ರತೀ ಭವೇದ್ಯಸ್ತು ತಸ್ಯಾಜ್ಞಾತ್ಯಸ್ಖಲಿತಾ ಭವೇತ್ ॥ ೨೫ ॥

ಭೂಮೌ ಭುಂಕ್ತೇ ಸದಾ ಯಸ್ತು ಸ ಪೃಥಿವ್ಯಾಃ ಪತಿರ್ಭವೇತ್ ।
ನಮೋ ನಾರಾಯಣಾಯೇತಿ ಜಪತೋಽನಶನಂ ಫಲಂ ॥ ೨೬ ॥

---

೨೩. ಈ ಕಾಲದಲ್ಲಿ ಮಧು ಮಾಂಸಾದಿಗಳನ್ನು ವರ್ಜ್ಯ ಮಾಡಿದವನು, ಸದಾ ಮನನಶೀಲನೂ ಸದಾ ಯೋಗಾಭ್ಯಾಸನಿರತನಾದ ಯೋಗಿಯೂ, ಆಗುತ್ತಾನೆ. ಸುರೆ, ಮದ್ಯ ಇವುಗಳನ್ನು ಪರಿತ್ಯಾಗ ಮಾಡಿದವನು, ವ್ಯಾಧಿರಹಿತನೂ ಪೀಡಾರಹಿತನೂ ತೇಜಸ್ವಿಯೂ ಆಗುತ್ತಾನೆ.

೨೪. ಅಯ್ಯಾ ಧರ್ಮಪುತ್ರನೇ ! ಈರೀತಿ ಆಯಾಯಾ ವರ್ಜ್ಯಪದಾರ್ಥಗಳನ್ನು ಪರಿತ್ಯಾಗ ಮಾಡಿದುದರಿಂದ ಪುಣ್ಯಲಾಭವಾಗುತ್ತದೆ. ಈ ಕಾಲವಲ್ಲಿ ಸಂಪೂರ್ಣವಾಗಿ ಉಪವಾಸವನ್ನಾಚರಿಸಿದವನು ಬ್ರಹ್ಮ ಲೋಕದಲ್ಲಿ ಪೂಜಿಸಲ್ಪಡುತ್ತಾನೆ.

೨೫. ಯಾವನು ಈ ಚಾತುರ್ಮಾಸ್ಯದಲ್ಲಿ ಕ್ಷೌರಕರ್ಮವನ್ನು ಮಾಡಿಸದೆ ನಖರೋಮಾದಿಗಳನ್ನು ಬೆಳೆಸಿಕೊಂಡು ದಿನೇ ದಿನೇ ಗಂಗಾ ಸ್ನಾನವನ್ನು ಆಚರಿಸಿ ಮೌನವ್ರತವನ್ನು ಪರಿಪಾಲಿಸುವನೋ, ಅಂಥವನ ಆಜ್ಞೆಗೆ ಲೋಕದಲ್ಲಿ ಎಲ್ಲೂ ಭಂಗವು ಸಂಭವಿಸುವುದಿಲ್ಲ.

೨೬. ಯಾವನು ಈ ಕಾಲದಲ್ಲಿ ಭೋಜನ ಪಾತ್ರೆಯನ್ನು ಉಪಯೋಗಿಸದೆ ಬರಿಯ ನೆಲದಮೇಲೆ ಭೋಜನ ಮಾಡುವನೋ ಅಂಥವನು ಭೂಪತಿಯಾಗುವನು. “ ಓಂ ನಮೋ ನಾರಾಯಣಾಯ ” ಎಂಬ ಷಡಕ್ಷರವನ್ನು ಜಪಿಸಿದವನಿಗೆ ಅನಶನ ವ್ರತಫಲವು ಪ್ರಾಪ್ತಿಯಾಗುತ್ತದೆ.

ಪಾದಾಭಿವಂದನಾದ್ವಿಷ್ಣೋರ್ಲಭೇದ್ಗೋದಾನಜಂ ಫಲಂ ।
ವಿಷ್ಣುಪಾದಾಂಬುಸಂಸ್ಪರ್ಶಾತ್ಕೃತಕೃತ್ಯೋ ಭವೇನ್ನರಃ　　॥ ೨೭ ॥

ವಿಷ್ಣುದೇವಕುಲೇ ಕುರ್ಯಾದುಪಲೇಪನಮರ್ಚನಂ ।
ಕಲ್ಪಸ್ಥಾಯೀ ಭವೇದ್ರಾಜಾ ಸ ನರೋ ನಾತ್ರ ಸಂಶಯಃ　　॥ ೨೮ ॥

ಪ್ರದಕ್ಷಿಣಾಶತಂ ಯಸ್ತು ಕರೋತಿ ಸ್ತುತಿಪಾಠಕಃ ।
ಹಂಸಯುಕ್ತವಿಮಾನೇನ ಸ ಚ ವಿಷ್ಣುಪುರಂ ವ್ರಜೇತ್　　॥ ೨೯ ॥

ಗೀತವಾದ್ಯಕರೋ ವಿಷ್ಣೋರ್ಗಾಂಧರ್ವಂ ಲೋಕಮಾಪ್ನುಯಾತ್ ।
ನಿತ್ಯಂ ಶಾಸ್ತ್ರವಿನೋದೇನ ಲೋಕಾನ್ಯಸ್ತು ಪ್ರಬೋಧತಿ　　॥ ೩೦ ॥

---

೨೭. ಈ ನಾಲ್ಕು ತಿಂಗಳಲ್ಲಿ ಶ್ರೀ ಮಹಾವಿಷ್ಣುವಿನ ಪಾದಾಭಿವಂದನೆ ಮಾಡುವುದರಿಂದ, ಗೋದಾನದಿಂದ ಬರುವ ಪುಣ್ಯವು ಲಭಿಸುತ್ತದೆ. ಶ್ರೀ ಮಹಾವಿಷ್ಣುವಿನ ಪಾದೋದಕದ ಸ್ಪರ್ಶಮಾತ್ರದಿಂದಲೇ ಪುರುಷನು ಕೃತಾರ್ಥನಾಗುತ್ತಾನೆ.

೨೮. ಈ ತಿಂಗಳುಗಳಲ್ಲಿ ವಿಷ್ಣುದೇವಾಲಯದಲ್ಲಿ ಗಂಧೋಪಲೇಪನವನ್ನು ಮಾಡಿ ವಿಷ್ಣುವಿನ ಅರ್ಚನೆಯನ್ನು ಮಾಡಬೇಕು. ಹಾಗೆ ಮಾಡಿದ ಪುರುಷನು ಒಂದು ಕಲ್ಪದವರೆಗೆ ರಾಜನಾಗಿರುವನು. ಈ ವಿಷಯದಲ್ಲಿ ಸಂಶಯವಿಲ್ಲ.

೨೯. ಯಾವನು ಈ ಮಾಸಗಳಲ್ಲಿ ವಿಷ್ಣುಸ್ತೋತ್ರ ಪಠನಮಾಡುತ್ತಾ ವಿಷ್ಣು ದೇವಾಲಯದಲ್ಲಿ ನೂರುಪ್ರದಕ್ಷಿಣೆ ಮಾಡುವನೋ ಅಂಥವನು ಹಂಸಯುಕ್ತವಾದ ವಿಮಾನದಲ್ಲಿ ಕುಳಿತು ವಿಷ್ಣುಲೋಕಕ್ಕೆ ಹೋಗುತ್ತಾನೆ.

೩೦-೩೧. ಸಂಗೀತ, ವಾದ್ಯ, ನಾಟ್ಯ ಇತ್ಯಾದಿಗಳಿಂದ ಈ ಮಾಸಗಳಲ್ಲಿ ಮಹಾವಿಷ್ಣುವನ್ನು ಸೇವಿಸಿದವನು, ಗಂಧರ್ವಲೋಕವನ್ನು ಪಡೆಯುತ್ತಾನೆ. ಈ ಕಾಲದಲ್ಲಿ ನಿತ್ಯದಲ್ಲೂ ಶಾಸ್ತ್ರಪ್ರವಚನಮಾಡಿ ಜನರಿಗೆ ಜ್ಞಾನವನ್ನು ಅಭಿ

ಸ ವ್ಯಾಸರೂಪೀ ಭಗವಾನಂತೇ ವಿಷ್ಣುಪುರಂ ವ್ರಜೇತ್ ।
ಪುಷ್ಪಮಾಲಾದಿಭಿಃ ಪೂಜಾಂ ಕೃತ್ವಾ ವಿಷ್ಣುಪುರಂ ವ್ರಜೇತ್ ॥ ೩೧ ॥

ನಿತ್ಯಸ್ನಾಯೀ ನರೋ ಯಸ್ತು ನರಕಂ ಸ ನ ಪಶ್ಯತಿ ।
ಭೋಜನಂ ಚ ಜಯೇದ್ಯಸ್ತು ಸ ಸ್ನಾನಂ ಪೌಷ್ಕರಂ ಲಭೇತ್ ॥ ೩೨ ॥

ಕೃತ್ವಾ ಪ್ರೇಕ್ಷಣಕಂ ದಿವ್ಯಂ ರಾಜ್ಯಂ ಸೋಽಪ್ಸರಸಾಂ ಲಭೇತ್ ।
ಅಯಾಚಿತೇನ ಪ್ರಾಪ್ನೋತಿ ವಾಪೀಕೂಪೇ ಯಥಾ ಫಲಂ ॥ ೩೩ ॥

ಷಷ್ಠಕಾಲೇನ್ನಭೋಜ್ಯೇನ ಸ್ಥಾಯೀ ಸ್ವರ್ಗೇ ನರೋ ಭವೇತ್ ।
ಪರ್ಣೇಷು ಯೋ ನರೋ ಭುಂಕ್ತೇ ಕುರುಕ್ಷೇತ್ರಫಲಂ ಲಭೇತ್ ॥೩೪॥

---

ವೃದ್ಧಿ ಮಾಡಿಸುವವನು, ಪೂಜ್ಯನಾದ ವ್ಯಾಸಸಮಾನನಾಗಿ ದೇಹಾಂತದಲ್ಲಿ ವಿಷ್ಣುಲೋಕಕ್ಕೆ ಹೋಗುತ್ತಾನೆ. ಮತ್ತು ಪುಷ್ಪಮಾಲೆ ಮೊದಲಾದುವುಗಳಿಂದ ಶ್ರೀ ವಿಷ್ಣುವಿಗೆ ಪೂಜೆ ಮಾಡಿದವನು ವಿಷ್ಣುಲೋಕಕ್ಕೆ ಹೋಗುತ್ತಾನೆ.

೩೨. ಚಾತುರ್ಮಾಸ್ಯದಲ್ಲಿ ನಿತ್ಯವೂ ಪ್ರಾತಃಸ್ನಾನವನ್ನು ಆಚರಿಸಿದವನು ನರಕದರ್ಶನ ಮಾಡುವುದೇ ಇಲ್ಲ. ಈ ಕಾಲದಲ್ಲಿ ಭೋಜನವನ್ನು ಪರಿತ್ಯಾಗಮಾಡಿದವನು ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನಮಾಡಿದ ಫಲವನ್ನು ಹೊಂದುತ್ತಾನೆ.

೩೩. ಈ ಕಾಲದಲ್ಲಿ ದಿವ್ಯವಾದ ಶ್ರೀ ಹರಿಕಥಾಶ್ರವಣ, ಭಕ್ತಿಪ್ರಧಾನ ನಾಟಕಾವಲೋಕನ, ಇವನ್ನು ಆಚರಿಸಿದವನು ಅಪ್ಸರಸರ ರಾಜ್ಯವನ್ನು ಪಡೆಯುತ್ತಾನೆ. ಯಾಚನೆಮಾಡದೆ ಯದೃಚ್ಛಾಲಬ್ಧವಸ್ತುಗಳಿಂದ ಶ್ರೀ ಹರಿಯನ್ನು ಪೂಜಿಸಿದವನಿಗೆ, ವಾಪೀ ಕೂಪಾದಿಗಳನ್ನು ನಿರ್ಮಾಣಮಾಡಿಸುವುದರಿಂದ ಬರುವ ಫಲವು ಲಭಿಸುವುದು.

೩೪. ಈ ಮಾಸದ ಹಗಲಿನ ಆರನೆಯ ಅಂಶದಲ್ಲಿ ಭೋಜನ ಮಾಡಿದ್ದರಿಂದ ಪುರುಷನು ಸ್ವರ್ಗದಲ್ಲಿ ಸ್ಥಾಯಿಯಾಗಿ ವಾಸಿಸುವನು. ಈ ಚಾತುರ್ಮಾಸ್ಯದಲ್ಲಿ ಪರ್ಣಗಳಲ್ಲಿ ಯಾವನು ಭೋಜನ ಮಾಡುತ್ತಾನೋ ಅವನಿಗೆ ಕುರುಕ್ಷೇತ್ರವಾಸದ ಪುಣ್ಯಫಲವು ಪ್ರಾಪ್ತವಾಗುತ್ತದೆ.

ಶಿಲಾಯಾಂ ಭೋಜನಾನ್ನಿತ್ಯಂ ಸ್ನಾನಂ ಪ್ರಯಾಗಜಂ ಭವೇತ್ ।
ಯಾಮದ್ವಯೇ ಜಲತ್ಯಾಗಾನ್ನ ರೋಗೈಃ ಪರಿಭೂಯತೇ ॥ ೩೫ ॥

ಏವಮಾದಿವ್ರತೇ ಪಾರ್ಥ ತುಷ್ಟಿಮಾಯಾತಿ ಹೇತುತಃ ।
ಸುಪ್ತೇ ಸತಿ ಜಗನ್ನಾಥೇ ಕೇಶವೇ ಗರುಡಧ್ವಜೇ ॥ ೩೬ ॥

ನಿವರ್ತಂತೇ ಕ್ರಿಯಾಃ ಸರ್ವಾಃ ಚಾತುರ್ವರ್ಣ್ಯಸ್ಯ ಭಾರತ ।
ವಿವಾಹವ್ರತಬಂಧಾದಿಭೂತಸಂಸ್ಕಾರದೀಕ್ಷಣಮ್ ॥ ೩೭ ॥

ಯಜ್ಞಾಶ್ಚ ಗೃಹವೇಶಾದಿ ಗೋದಾನಾಚ್ಚ ಪ್ರತಿಷ್ಠಿತಂ ।
ಪೂಜ್ಯಾನಿ ಯಾನಿ ಕರ್ಮಾಣಿ ತಾನಿ ಸರ್ವಾಣಿ ವರ್ಜಯೇತ್ ॥ ೩೮ ॥

---

೩೫. ಈ ಚಾತುರ್ಮಾಸ್ಯದಲ್ಲಿ ನಿತ್ಯದಲ್ಲೂ ಶಿಲೆಯ ಮೇಲೆ ಭೋಜನ ಮಾಡಿದವನು, ಪ್ರಯಾಗದಲ್ಲಿ ಸ್ನಾನಮಾಡಿದ್ದರಿಂದ ಲಭಿಸುವ ಪುಣ್ಯವನ್ನು ಪಡೆಯುತ್ತಾನೆ. ಈ ಕಾಲದಲ್ಲಿ ಬೆಳಗಿನಿಂದ ಎರಡುಯಾಮ ಕಳೆಯುವವರೆಗೆ ಜಲಪಾನ ಸಹ ಮಾಡದೆ ನಿಯಮದಿಂದಿರುವವನು ರೋಗಪೀಡಿತನಾಗುವುದಿಲ್ಲ.

೩೬. ಅಯ್ಯಾ ಕುಂತೀಪುತ್ರನೇ ! ಜಗದೀಶನೂ, ಗರುಡಧ್ವಜನೂ ಆಗಿರುವ ಶ್ರೀ ಮಹಾವಿಷ್ಣುವು ಶಯನಮಾಡಿರುವ ಚಾತುರ್ಮಾಸ್ಯದಲ್ಲಿ ಇವೇ ಮೊದಲಾದ ನಿಯಮವನ್ನು ಪರಿಪಾಲಿಸಿದರೆ, ಈ ಕಾರಣದಿಂದ ಆ ಪುರುಷನ ವಿಷಯದಲ್ಲಿ ಶ್ರೀ ಮಹಾವಿಷ್ಣುವು ಸಂತುಷ್ಟನಾಗುತ್ತಾನೆ.

೩೭. ಅಯ್ಯಾ ಭಾರತನೇ ! ಈ ಮಹಾವಿಷ್ಣುವಿನ ಶಯನಕಾಲವಾದ ಆ ನಾಲ್ಕು ತಿಂಗಳುಗಳಲ್ಲಿ ಬ್ರಾಹ್ಮಣಾದಿ ನಾಲ್ಕು ವರ್ಣದವರೂ, ವಿವಾಹ, ವ್ರತಬಂಧ, ಭೂತಸಂಸ್ಕಾರ, ದೀಕ್ಷೆ ಮುಂತಾದ ಯಾವ ಶುಭ ಕರ್ಮಗಳನ್ನೂ ನಡೆಸತಕ್ಕುದಲ್ಲ.

೩೮. ಮತ್ತು ಈ ಚಾತುರ್ಮಾಸ್ಯಕಾಲದಲ್ಲಿ ಯಜ್ಞ, ನೂತನಗೃಹ ಪ್ರವೇಶ, ಗೋದಾನವೆಂಬ ಕೇಶಸಂಸ್ಕಾರ, ದೇವತಾಪ್ರತಿಷ್ಠೆ, ಪೂಜ್ಯವಾದ ಇತರ ಕರ್ಮ ವಿಶೇಷಗಳು ಇವು ಯಾವುದನ್ನೂ ಮಾಡಬಾರದು.

ಆಸಂಕ್ರಾಂತಂ ತು ಮಾಸಂ ವೈ ದೈವೇ ಪಿತ್ರ್ಯೇ ಚ ವರ್ಜಯೇತ್ ।
ಮಲಿಮ್ಲುಚಮಶೌಚಂ ಚ ಸೂರ್ಯಸಂಕ್ರಾತಿವರ್ಜಿತಂ ॥ ೩೯ ॥

ಪ್ರಾಪ್ತೇ ಭಾದ್ರಪದೇ ಮಾಸಿ ಏಕಾದಶ್ಯಾಂ ದಿನೇ ಹರೇಃ ।
ಕಟದಾನಂ ಭವೇದ್ವಿಷ್ಣೋರ್ಮಹಾಪೂಜಾಂ ಪ್ರವರ್ತಯೇತ್ ॥ ೪೦ ॥

ಯ ಏತದೇವ ಶಯನಂ ತತ್ರೇದಂ ಕಾರಣಂ ಶೃಣು ।
ಪುರಾ ತಪಃಪ್ರಭಾವೇನ ತೋಷಯಿತ್ವಾ ಹರಿಂ ವಿಭುಂ ॥ ೪೧ ॥

ಮಮಾಪಿ ಮಾನಯತ್ಯಂಗಂ ಪ್ರಾರ್ಥಿತೋ ಯೋಗನಿದ್ರಯಾ ।
ನಿರೀಕ್ಷ್ಯ ಚಾತ್ಮನೋ ದೇವ ರುದ್ಧಂ ಲಕ್ಷ್ಮ್ಯಾ ಉರಃಸ್ಥಲಂ ॥ ೪೨ ॥

---

೩೯. ಸೂರ್ಯಸಂಕ್ರಾಂತಿ ಸಂಬಂಧರಹಿತವಾಗಿ, ಶುಚಿಯಲ್ಲದ ಮಲಮಾಸವೆಂದು ಹೇಳಲ್ಪಡುವ ಅಧಿಕಮಾಸದಲ್ಲಿ ದೇವತಾ ಕರ್ಮವನ್ನು ಮತ್ತು ಪಿತೃಕರ್ಮವನ್ನೂ ಮಾಡಬಾರದು. ಯಾವ ಮಾಸದಲ್ಲಿ ಶುಕ್ಲಪ್ರತಿಪತ್ತಿನ ಆದಿಯಿಂದ ಅರಂಭಿಸಿ ಅಮಾವಾಸ್ಯೆಯ ಕೊನೆಯಕ್ಷಣದವರೆಗೆ ಮಧ್ಯೆಸಂಕ್ರಮಣ ಬರುವುದಿಲ್ಲವೋ ಅ ಮಾಸಕ್ಕೆ ಅಧಿಕಮಾಸವೆಂದು ಹೆಸರು.

೪೦. ಭಾದ್ರಪದ ಶುಕ್ಲಪಕ್ಷದ ಏಕಾದಶಿಯು ಬಂದಾಗ ಆ ದಿನದಲ್ಲಿ ಶ್ರೀಹರಿಪ್ರೀತ್ಯರ್ಥವಾಗಿ ಕಟಶಯ್ಯಾ (ಮಂದಲಿಗೆ) ದಾನಮಾಡಿ ಶ್ರೀಹರಿಗೆ ಮಹಾಪೂಜೆಯನ್ನು ಮಾಡಬೇಕು.

೪೧-೪೨. ಅಯ್ಯಾ ಯುಧಿಷ್ಠಿರನೇ ! ಶ್ರೀ ಮಹಾವಿಷ್ಣುವಿನ ಶಯನಕ್ಕೆ ಉಂಟಾದ ಕಾರಣವನ್ನು ಹೇಳುತ್ತೇನೆ ಶ್ರವಣಮಾಡು. ಪೂರ್ವಕಾಲದಲ್ಲಿ ಯೋಗ ನಿದ್ರೆಯು ತನ್ನ ತಪಃಪ್ರಭಾವದಿಂದ ಸ್ವಾಮಿಯಾದ ಶ್ರೀ ಹರಿಯನ್ನು ಸಂತೋಷಪಡಿಸಿ, ಆ ಶ್ರೀ ಹರಿಯನ್ನು ತನ್ನ ಶರೀರದಲ್ಲಿ ವಾಸಮಾಡಬೇಕೆಂದು ಪ್ರಾರ್ಥಿಸಿದಳು. ಆಗ ಶ್ರೀಹರಿಯ ಒಂದೊಂದು ಅಂಗವೂ ಒಬ್ಬೊಬ್ಬರಿಂದ ಆಕ್ರಮಿಸಲ್ಪಟ್ಟಿತ್ತು. ಶ್ರೀ ಲಕ್ಷ್ಮಿಯಿಂದ ಮಹಾವಿಷ್ಣುವಿನ ವಕ್ಷಸ್ಥಳವು ಆಕ್ರಾಂತವಾಗಿತ್ತು.

**ಶಂಖಚಕ್ರಾಸಿಪರ್ಾಗಾದ್ಯೈರ್ಬಾಹವೋಽಸ್ಯಥ ವಕ್ಷಸಾ ।**
**ಅಥೋ ನಾಭೇರ್ವಿರುದ್ಧಂ ಮೇ ವೈನತೇಯೇನ ಪಕ್ಷಿಣಾ ॥ ೪೩ ॥**

**ಮುಕುಟೇನ ಶಿರೋ ರುದ್ಧಂ ಕುಂಡಲಾಭ್ಯಾಂ ಚ ಕರ್ಣಕೌ ।**
**ತತೋ ದದಾವಹಂ ತುಷ್ಟೋ ನೇತ್ರಯೋಃ ಸ್ಥಾನಮಾದರಾತ್॥ ೪೪ ॥**

**ಚತುರೋ ವಾರ್ಷಿಕಾನ್ಮಾಸಾನ್ಮಾಽಽಶ್ರಿತಾ ಸಾ ಭವಿಷ್ಯತಿ ।**
**ಯೋಗನಿದ್ರಾಪಿ ಕದ್ವಾಕ್ಯಂ ಶ್ರುತ್ವಾ ಪೌರಾತನಂ ಶುಭಂ ॥ ೪೫ ॥**

**ಚಕಾರ ಲೋಚನಾವಾಸಮತೋಽರ್ಥಂ ಮೇ ಯುಧಿಷ್ಠಿರ ।**
**ಅಹಂ ಚ ತಾಂ ಭಾವಯಿತ್ವಾ ಮಾನಯಾಮಿ ಮನಸ್ವಿನೀಂ ॥ ೪೬ ॥**

**ಯೋಗನಿದ್ರಾಂ ಮಹಾನಿದ್ರಾಂ ಶೇಷಾಭಿಶಯನೇ ಸ್ಥಿತಃ ।**
**ಕ್ಷೀರೋದಧೌ ಚ ವಿಧ್ಯಗ್ರೇ ಧೌತಪಾದಃ ಸಮಾಹಿತಃ ॥ ೪೭ ॥**

---

೪೩. ಶಂಖ, ಚಕ್ರ, ಖಡ್ಗ, ಬಾಣಾದಿಗಳಿಂದ ನಾಲ್ಕು ಕೈಗಳೂ ಆಕ್ರಮಿಸಲ್ಪಟ್ಟಿದ್ದುವು. ಹೊಕ್ಕುಳಿನ ಕೆಳಭಾಗವು ಗರುಡಪಕ್ಷಿಯಿಂದ ಆಕ್ರಾಂತವಾಗಿತ್ತು.

೪೪. ಶಿರಸ್ಸು ಕಿರೀಟದಿಂದ ರುದ್ಧವಾಗಿತ್ತು. ಕಿವಿಗಳು ಕುಂಡಲಗಳಿಂದ ಆಕ್ರಾಂತಗಳಾಗಿದ್ದುವು. ಇದನ್ನು ಯೋಚಿಸಿ ಆ ಯೋಗನಿದ್ರೆಗೆ ಸಂತುಷ್ಟನಾದ ನಾನು ಅತ್ಯಾದರದಿಂದ ನನ್ನ ನಯನಗಳನ್ನೇ ಅವಳಿಗೆ ವಾಸಸ್ಥಾನವಾಗಿ ಕಲ್ಪಿಸಿದೆನು.

೪೫–೪೬. ಅಯ್ಯಾ ಯುಧಿಷ್ಠಿರನೇ ! ಮಳೆಗಾಲದ ನಾಲ್ಕು ತಿಂಗಳುಗಳಲ್ಲಿ ಆ ಯೋಗನಿದ್ರೆಯು ನನ್ನ ನಯನಗಳಲ್ಲಿ ವಾಸವಾಗಿರಬಹುದೆಂದು ಅವಳಿಗೆ ಆಜ್ಞೆಮಾಡಿದನು. ಯೋಗನಿದ್ರೆಯು ಕೂಡ ಆ ನನ್ನ ಆಜ್ಞಾವಚನವನ್ನು ಶ್ರವಣಮಾಡಿದವಳಾಗಿ, ಪುರಾತನವೂ ಶುಭಕರವೂ ಆದ ನನ್ನ ಲೋಚನಗಳಲ್ಲಿ ವಾಸಮಾಡಿದಳು. ನಾನೂ ಕೂಡ ಮಾನವತಿಯಾದ ಆ ಯೋಗನಿದ್ರೆಯನ್ನು ಮನ್ನಿಸುವೆನು.

೪೭. ಅಯ್ಯಾ ಪಾಂಡವಶ್ರೇಷ್ಠನೇ ! ನಾನು ಆ ಯೋಗನಿದ್ರೆಯನ್ನು ಹೊಂದುವುದಕ್ಕೆ ಮೊದಲು ಕ್ಷೀರಸಾಗರದಲ್ಲಿ ಕಾಲುಗಳನ್ನು ಪ್ರಕ್ಷಾಳನೆ ಮಾಡಿಕೊಂಡು ಚಿತ್ತೈಕಾಗ್ರತೆಯುಳ್ಳವನೂ ಆದಿಶೇಷನೆಂಬ ಹಾಸಿಗೆ ಮೇಲೆ ಮಲಗಿಕೊಂಡವನೂ ಆಗಿ ಬ್ರಹ್ಮನನ್ನು ಮುಂದಿಟ್ಟುಕೊಂಡು;

ಲಕ್ಷ್ಮೀಕರಾಂಬುಜೈರಚ್ಛೈರ್ಮೃದ್ಯಮಾನಪದದ್ವಯಃ ।
ತಸ್ಮಿನ್ಕಾಲೇಽಪಿ ಮದ್ಭಕ್ತೋ ಯೋ ಮಾಸಾಂಶ್ಚತುರಃ ಕ್ಷಿಪೇತ್ ॥೪೮॥

ವ್ರತೈರನೇಕೈರ್ನಿಯಮೈಃ ಪಾಂಡವಶ್ರೇಷ್ಠ ಮಾನವಃ ।
ಕಲ್ಪಸ್ಥಾಯೀ ವಿಷ್ಣುಲೋಕಂ ಸ ವ್ರಜೇನ್ನಾತ್ರ ಸಂಶಯಃ ॥ ೪೯ ॥

ತತೋಽವಬುಧ್ಯತೇ ದೇವಃ ಶ್ರೀಮಾಞ್ಛಂಖಗದಾಧರಃ ।
ಕಾರ್ತಿಕೇ ಶುಕ್ಲಪಕ್ಷಸ್ಯ ಏಕಾದಶ್ಯಾಂ ಪೃಥಕ್ಛೃಣು ॥ ೫೦ ॥

ಮಂತ್ರೇಣಾನೇನ ರಾಜೇಂದ್ರ ದೇವಮುತ್ಥಾಪಯೇದ್ದ್ವಿಜಃ ।
ಇದಂ ವಿಷ್ಣುರ್ವಿಚಕ್ರಮೇ ಸ್ಥಾಪನೇ ಚ ತದಾ ನೃಪ ॥ ೫೧ ॥

---

೪೮. ಶ್ರೀ ಲಕ್ಷ್ಮೀದೇವಿಯು ಪರಿಶುದ್ಧಗಳಾದ ಕರಕಮಲಗಳಿಂದ ಎರಡು ಕಾಲುಗಳನ್ನೂ ಒತ್ತಿಸಿಕೊಳ್ಳುತ್ತಾ, ಆ ಮಹಾನಿದ್ರಾಸ್ವರೂಪಳಾದ ಯೋಗನಿದ್ರೆಯನ್ನು ಅನುಭವಿಸುವೆನು. ನನ್ನ ಶಯನಕಾಲವಾದ ಆ ನಾಲ್ಕು ತಿಂಗಳುಗಳಲ್ಲಿ.

೪೯. ನನ್ನ ಭಕ್ತನಾದ ಯಾವಾತನು ವ್ರತಾಚರಣೆಗಳಿಂದಲೂ, ಅನೇಕ ನಿಯಮಪರಿಗ್ರಹಗಳನ್ನು ಮಾಡುವಮೂಲಕವೂ, ಕಾಲವನ್ನು ಕಳೆಯುತ್ತಾನೋ, ಅವನು ಒಂದು ಕಲ್ಪದವರೆಗೆ ಇಲ್ಲಿ ಸುಖವಾಗಿದ್ದು ಕೊನೆಗೆ ವಿಷ್ಣುಲೋಕಕ್ಕೆ ಹೋಗುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

೫೦. ಅಯ್ಯಾ ಯುಧಿಷ್ಠಿರನೇ ! ಅನಂತರ ಕಾರ್ತಿಕ ಶುಕ್ಲಪಕ್ಷದ ಏಕಾದಶಿಯ ದಿನದಲ್ಲಿ ಶಂಖಚಕ್ರಗದಾಧಾರಿಯಾದ ಶ್ರೀ ಮಹಾವಿಷ್ಣುವು ಯೋಗನಿದ್ರೆಯನ್ನು ಬಿಟ್ಟು ಏಳುತ್ತಾನೆ.

೫೧. ಅಯ್ಯಾ ರಾಜೇಂದ್ರನೇ ! ಆ ಕಾರ್ತಿಕಶುದ್ಧ ಏಕಾದಶಿಯದಿನ ಬ್ರಾಹ್ಮಣನು " ಇದಂ ವಿಷ್ಣುರ್ವಿಚಕ್ರಮೇ " ಎಂಬೀ ಮಂತ್ರವನ್ನು ಹೇಳಿ ಶ್ರೀ ವಿಷ್ಣುವನ್ನು ಎಬ್ಬಿಸಿ ಆಗ ಸುಂದರವಾದ ಆಸನವೊಂದರಲ್ಲಿ ಸ್ಥಾಪಿಸಬೇಕು.

ಸಮುತ್ಥಿತೇ ತದಾ ವಿಷ್ಣೌ ಕ್ರಿಯಾಃ ಸರ್ವಾಃ ಪ್ರವರ್ತಯೇತ್ ।
ಮಹಾತೂರ್ಯರವೇ ರಾತ್ರೌ ಭ್ರಾಮಯೇತ್ಸ್ಯಂದನೇ ಸ್ಥಿತಂ ॥ ೨೫ ॥

ಉತ್ಥಿತೇ ದೇವದೇವೇಶೇ ನಗರೇ ಪಾರ್ಥಿವಃ ಸ್ವಯಂ ।
ದೀಪೋದ್ರೇಕಕರೇ ಮಾರ್ಗೇ ನೃತ್ಯಗೀತಜನಾಕುಲೇ ॥ ೫೩ ॥

ಯಂಯಂ ದಾಮೋದರಃ ಪಶ್ಯೇದುತ್ಥಿತೋ ಧರಣೀಧರಃ ।
ತಂತಂ ಪ್ರದೇಯಂ ರಾಜೇಂದ್ರ ಸರ್ವಂ ಸ್ವರ್ಗಾಯ ಕಲ್ಪತೇ ॥ ೫೪ ॥

ರಾತ್ರೌ ಪ್ರಜಾಗರೇದೇವಮೇಕಾದಶ್ಯಾಂ ಸುರಾಲಯೇ ।
ಪ್ರಭಾತೇ ವಿಮಲೇ ಸ್ನಾತ್ವಾ ದ್ವಾದಶ್ಯಾಂ ವಿಷ್ಣುಮರ್ಚಯೇತ್ ॥೫೫॥

---

೫೨. ಆ ವಿಷ್ಣುವು ಉತ್ಥಿತನಾದ ಮೇಲೆ ಶ್ರೌತಸ್ಮಾರ್ತ ಶುಭಕರ್ಮಗಳನ್ನು ಆಚರಿಸಬೇಕು. ಆ ಕಾರ್ತಿಕಶುಕ್ಲ ಏಕಾದಶಿಯ ರಾತ್ರಿಯಲ್ಲಿ ಮಹಾವಾದ್ಯಘೋಷದೊಡನೆ ಶ್ರೀ ಹರಿಯನ್ನು ರಥದಮೇಲಿರಿಸಿ ಮೆರವಣಿಗೆಯಾಗಿ ಸುತ್ತಿಸಬೇಕು.

೫೩. ಅಯ್ಯಾ ರಾಜೇಂದ್ರನೇ! ದೇವಾಧಿದೇವನಾದ ಶ್ರೀ ಹರಿಯು ಉತ್ಥಿತನಾದ ಮೇಲೆ, ರಾಜನಾದವನು ತನ್ನ ನಗರದಲ್ಲಿ ಶ್ರೀಹರಿಯ ಉತ್ಸವವು ನಡೆಯುವ ಮಾರ್ಗದಲ್ಲಿ ದೀಪಗಳನ್ನು ಸಾಲುಸಾಲಾಗಿರಿಸಿ ದೀಪೋತ್ಸವವನ್ನು ಮಾಡಬೇಕು.

೫೪. ಆಗ ದೇವರ ರಥದ ಮುಂದೆ ಮಾರ್ಗದಲ್ಲಿ ಭಕ್ತರಿಂದ ನಡಿಸಲ್ಪಡುವ ನೃತ್ಯ, ಸಂಗೀತ, ಭಜನೆ ಈ ಸೇವೆಯನ್ನು ಭೂಧರನಾಗಿಯೂ ದಾಮೋದರನಾಗಿಯೂ ಇರುವ ಶ್ರೀಹರಿಯು ಸ್ವೀಕರಿಸುವನು. ಶ್ರೀಹರಿಯು ಯಾವ ಯಾವದನ್ನು ಇಷ್ಟಪಡುತ್ತಾನೋ ಅದದನ್ನೆಲ್ಲಾ ದಾನ ಮಾಡಬೇಕು. ಆ ಎಲ್ಲಾ ದಾನವೂ ಸ್ವರ್ಗಲೋಕ ಪ್ರಾಪ್ತಿಗೆ ಕಾರಣವಾಗುವುದು.

೫೫. ಆ ಕಾರ್ತಿಕ ಶುದ್ಧ ಏಕಾದಶಿಯ ರಾತ್ರಿಯಲ್ಲಿ ಈರೀತಿ ರಥೋತ್ಸವ ದೀಪೋತ್ಸವ ದರ್ಶನಾದಿಗಳಿಂದ ಆ ವಿಷ್ಣುದೇವಾಲಯದಲ್ಲೇ ಆ ರಾತ್ರಿಯನ್ನು ಜಾಗರಣೆಯಿಂದ ಕಳೆಯಬೇಕು. ಮರುದಿನ ಬೆಳಗಾದ ಮೇಲೆ ದ್ವಾದಶಿಯದಿನ ಸ್ನಾನಮಾಡಿ ಶ್ರೀ ವಿಷ್ಣುವಿಗೆ ಪೂಜೆ ಮಾಡಬೇಕು.

ಹೋಮಯೇದ್ಧವ್ಯವಾಹಂ ಚ ಹವ್ಯದ್ರವ್ಯೈರ್ಘೃತಾದಿಭಿಃ ।
ತತೋ ವಿಪ್ರಾಞ್ಛುಭಾನ್ಸ್ನಾತ್ವಾ ಭೋಜಯೇದನ್ನವಿಸ್ತರೈಃ ॥ ೫೬ ॥

ಘೃತದಧಿಕ್ಷೌದ್ರಕಾದ್ಯೈರ್ಗುಡಾಪೂಪೈಃ ಸಮೋದಕೈಃ ।
ಯಜಮಾನೋಽಪಿ ಸಂತುಷ್ಟಸ್ತ್ವರಾ ಹಾಸ್ಯವಿವರ್ಜಿತಃ ॥ ೫೭ ॥

ಏಕಾದಶ ದಶಾಷ್ಟೌ ವಾ ಪಂಚ ದ್ವೌ ವಾ ಕುರೂತ್ತಮ ।
ಅರ್ಚಯೇಚ್ಚಂದನೈರ್ಧೂಪೈಃ ಪುಷ್ಪೈರ್ಗಂಧೈರ್ದ್ವಿಜೋತ್ತಮಾನ್ ॥

ಶ್ರದ್ಧೋಕ್ತವಿಧಿನಾ ಪಾರ್ಥ ಭೋಜಯೇದ್ಭಾಗ್ಯವಾನ್ಯತೀನ್ ।
ಆಚಾಂತೇಭ್ಯಸ್ತತೋ ದದ್ಯಾತ್ತ್ಯಾಗಂ ಯತ್ಕಿಂಚಿದೇವ ಹಿ ॥ ೫೯ ॥

---

೫೬. ಅನಂತರ ಹೋಮಕ್ಕೆ ಯೋಗ್ಯಗಳಾದ ಘೃತಾದಿ ದ್ರವ್ಯಗಳಿಂದ ಅಗ್ನಿಯಲ್ಲಿ ಹೋಮ ಮಾಡಬೇಕು. ಆ ಮೇಲೆ ಮಧ್ಯಾಹ್ನ ಕಾಲದ ಸ್ನಾನಮಾಡಿ ಶುಭಾಚಾರಯುತರಾದ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು.

೫೭–೫೮. ಅಯ್ಯಾ ಕುರುಕುಲೋತ್ತಮನೇ ! ಈ ವ್ರತವನ್ನಾಚರಿಸುವ ಯಜಮಾನನು ಸಂತುಷ್ಟನಾಗಿ, ತ್ವರೆಪಡದೆ ಸಾವಕಾಶವಾಗಿಯೂ ಹಾಸ್ಯ ವಚನಾದಿಗಳಿಂದ ಇತರರಿಗೆ ಅಪಮಾನಮಾಡದೆಯೂ ಹನ್ನೊಂದು ಮಂದಿ, ಅಥವಾ ಹತ್ತುಮಂದಿ, ಇಲ್ಲದಿದ್ದರೆ ಎಂಟುಜನ, ಇಲ್ಲವೇ ಐದುಜನ, ಅದೂ ಇಲ್ಲ ದಿದ್ದರೆ ಕೊನೆಯಪಕ್ಷ ಇಬ್ಬರು ಬ್ರಾಹ್ಮಣರಿಗಾದರೂ ತುಪ್ಪ, ಮೊಸರು, ಜೇನು ತುಪ್ಪ ಇತ್ಯಾದಿಗಳಿಂದ ಭೋಜನ ಮಾಡಿಸಬೇಕು. ಊಟವಾದ ಮೇಲೆ ಆ ಬ್ರಾಹ್ಮಣೋತ್ತಮರನ್ನು ಚಂದನ, ಗಂಧ, ಪುಷ್ಪ, ಧೂಪ ಇತ್ಯಾದಿಗಳಿಂದ ಪೂಜಿಸಿ ಸತ್ಕರಿಸಬೇಕು.

೫೯. ಅಯ್ಯಾ ಕುಂತೀಪುತ್ರನೇ! ಭಾಗ್ಯಶಾಲಿಯಾದವನು ಮೇಲೆ ಹೇಳಿದ ರೀತಿಯಾಗಿಯೇ ಶ್ರದ್ಧಾಪೂರ್ವಕವಾಗಿ ಯತಿಗಳಿಗೂ ಭೋಜನ ಮಾಡಿಸ ಬೇಕು. ಭೋಜನಮಾಡಿ ಶುದ್ಧಾಚಮನಮಾಡಿದ ಮೇಲೆ ಆ ಬ್ರಾಹ್ಮಣರಿಗೆ ಯಥೋಕ್ತ ದಾನವನ್ನು ಕೊಡಬೇಕು.

ಸ್ವಿಶಾಣಾ ಸ್ವಮನೋಭೀಷ್ಟಪತ್ರಪುಷ್ಪಫಲಾದಿಕಂ ।
ಚತುರೋ ವಾರ್ಷಿಕಾನ್ಮಾಸಾನ್ನಿಯಮೋ ಯಸ್ಯ ಯಃ ಕೃತಃ ॥ ೭೦ ॥

ಕಥಯಿತ್ವಾ ದ್ವಿಜೇಭ್ಯಸ್ತಂ ದದ್ಯಾದ್ಭಕ್ತ್ಯಾ ಸದಕ್ಷಿಣಾಂ ।
ದತ್ವಾ ವಿಸರ್ಜಯೇದ್ವಿಪ್ರಾಂಸ್ತತೋ ಭುಂಜೀತ ಚ ಸ್ವಯಂ ॥ ೭೧ ॥

ಯಸ್ತ್ಯಕ್ತಂ ಚತುರೋ ಮಾಸಾನ್ಪ್ರವೃತ್ತಿಸ್ತಸ್ಯ ಚಾಚರೇತ್ ।
ಏವಂ ಯ ಆಚರೇತ್ಪಾರ್ಥ ಸೋಽನಂತಂ ಧರ್ಮಮಾಪ್ನುಯಾತ್ ॥೭೨॥

ಅವಸಾನೇ ತು ರಾಜೇಂದ್ರ ವಾಸುದೇವಪುರೀಂ ವ್ರಜೇತ್ ।
ಯಸ್ಯಾವಿಘ್ನೈಃ ಸಮಾಪ್ಯೇತ ಚಾತುರ್ಮಾಸ್ಯವ್ರತಂ ನೃಪ ॥ ೭೩ ॥

---

೭೦-೭೧. ಮತ್ತು ವರ್ಷಾಕಾಲದ ನಾಲ್ಕು ತಿಂಗಳುಗಳಲ್ಲಿ ಯಾರು ಯಾರು ತನ್ನ ಮನೋಭೀಷ್ಟಗಳಾದ ಪುಷ್ಪ, ಪತ್ರ, ಫಲಾದಿಗಳಲ್ಲಿ ಯಾವ ಯಾವದನ್ನು ವರ್ಜನೆ ಮಾಡಿದ್ದರೋ ಅದನ್ನು ಆ ಭೋಜನಮಾಡಿದ ಬ್ರಾಹ್ಮಣರಿಗೆ ಸ್ಪಷ್ಟವಾಗಿ ತನ್ನ ಮಾತಿನಿಂದ ತಿಳಿಸಿ, ವರ್ಜಿತವಾಗಿದ್ದ ಆ ವಸ್ತುಗಳನ್ನು ದಕ್ಷಿಣಾಸಹಿತವಾಗಿ ಭಕ್ತಿಯಿಂದ ಆ ಬ್ರಾಹ್ಮಣರಿಗೆ ದಾನಕೊಟ್ಟ ಮೇಲೆ ಆ ವಿಪ್ರರನ್ನು ಕಳುಹಿಸಬೇಕು. ಅನಂತರ ತಾನು ಭುಂಜಿಸಬೇಕು.

೭೨. ಅಯ್ಯಾ ಧರ್ಮರಾಜನೇ! ಹಿಂದೆ ಚಾತುರ್ಮಾಸ್ಯ ಕಾಲದಲ್ಲಿ ವ್ರತಕ್ಕಾಗಿ ತ್ಯಜಿಸಿದ್ದ ವಸ್ತುಗಳನ್ನು ಆ ಅನಂತರ ಉಪಯೋಗಿಸಬಹುದು. ಈ ಕ್ರಮದಿಂದ ಯಾವನು ಈ ವ್ರತವನ್ನಾಚರಿಸುವನೋ ಅವನು ಅನಂತವಾದ ಪುಣ್ಯವನ್ನು ಹೊಂದುತ್ತಾನೆ.

೭೩. ಅಯ್ಯಾ ರಾಜನೇ! ಯಾವನಿಗೆ ಈ ಚಾತುರ್ಮಾಸ್ಯವ್ರತವು ನಿರ್ವಿಘ್ನವಾಗಿ ಸಮಾಪ್ತವಾಗುವುದೋ, ಅವನು ದೇಹಾವಸಾನದಲ್ಲಿ ಶ್ರೀ ವಿಷ್ಣು ಲೋಕಕ್ಕೆ ಹೋಗುತ್ತಾನೆ.

ಸ ಭವೇತ್ಕೃತಕೃತ್ಯಸ್ತು ನ ಪುನರ್ಮಾತೃಕೋ ಭವೇತ್ ।
ಯೋ ದೇವಶಯನಂ ಪಾರ್ಥ ಮಾಸಂಮಾಸಂ ಸಮಾಚರೇತ್ ॥ ೬೮ ॥

ಉತ್ಥಾನಂ ಚಾಪಿ ಕೃಷ್ಣಸ್ಯ ಸ ಹರೇರ್ಲೋಕಮಾಪ್ನುಯಾತ್ ।
ಶೃಣೋತಿ ಧ್ಯಾಯತಿ ಸ್ತೌತಿ ಜುಹೋತ್ಯಾಖ್ಯಾತಿ ಯೋ ನರಃ ।
ವಿಷ್ಣೋರ್ಭಕ್ತಿಂ ಪರಾಂ ಪಾರ್ಥ ಸ ಗಚ್ಛೇದ್ವೈಷ್ಣವಂ ಪದಂ ॥ ೬೫ ॥

ದುಗ್ಧಾಬ್ಧಿಭೋಗಶಯನೇ ಭಗವಾನನಂತೋ ।
ಯಸ್ಮಿನ್ದಿನೇ ಸ್ವಪಿತಿ ಯತ್ರ ವಿಬುಧ್ಯತೇ ವಾ ।

---

೬೪. ಅಯ್ಯಾ ಕುಂತೀಪುತ್ರನೇ ! ಯಾವ ಪುರುಷನು ಪ್ರತಿವರ್ಷದಲ್ಲೂ (ವರ್ಷಾಕಾಲದಲ್ಲಿ) ಹಿಂದೆ ಹೇಳಿದ ಪ್ರಕಾರ ತಿಂಗಳುತಿಂಗಳಿನಲ್ಲಿಯೂ ಶ್ರೀ ಹರಿಯ ಶಯನೋತ್ಸವವನ್ನು ಆಚರಿಸುವನೋ ಅಂಥವನು ಕೃತಾರ್ಥನಾಗುವನು. ಮತ್ತು ಅವನಿಗೆ ಪುನರ್ಜನ್ಮವಿಲ್ಲ ಎಂದರೆ ಶಾಶ್ವತವಾಗಿ ಮೋಕ್ಷವನ್ನು ಪಡೆಯುತ್ತಾನೆ.

೬೫. ಅಯ್ಯಾ ಧರ್ಮಜನೇ! ಅವನು ಶ್ರೀ ವಿಷ್ಣುವಿನಲ್ಲಿ ಪರಮಭಕ್ತಿಯಿಂದ ಶ್ರೀ ಹರಿಯ ಉತ್ಥಾಪನಾಮಹೋತ್ಸವವನ್ನೂ ನೆರವೇರಿಸಿದರೆ ಶ್ರೀ ವಿಷ್ಣುಲೋಕವನ್ನೇ ಪಡೆಯುತ್ತಾನೆ. ಹಾಗೆಯೇ ಈ ವ್ರತಕಥಾಶ್ರವಣವನ್ನು ಯಾವ ಪುರುಷನು ಮಾಡುವನೋ, ಅಥವಾ ಯಾವಾತನು ಆ ದಿನದಲ್ಲಿ ಶ್ರೀ ಹರಿಯ ಧ್ಯಾನಮಾಡುವನೋ, ಯಾವನು ವಿಷ್ಣುವನ್ನುದ್ದೇಶಮಾಡಿ ಹೋಮಾದಿಗಳನ್ನು ಮಾಡುತ್ತಾನೋ, ಮತ್ತು ಯಾವಾತನು ಶ್ರೀ ವಿಷ್ಣುಸಂಬಂಧಿಯಾದ ಈ ವ್ರತವನ್ನು ಇತರರಿಗೆ ವಿವರಿಸಿ ಹೇಳುತ್ತಾನೋ, ಅಂತಹ ಪುಣ್ಯಾತ್ಮರೆಲ್ಲಾ ವಿಷ್ಣುಭಕ್ತಪದವಿಯನ್ನೇ ಪಡೆಯುತ್ತಾರೆ.

೬೬. ಭಗವಂತನಾದ ಶ್ರೀ ಹರಿಯು ಕ್ಷೀರಸಾಗರದಲ್ಲಿ ಶೇಷಶಾಯಿಯಾಗಿ ಯಾವ ದಿನ ಯೋಗನಿದ್ರೆಯನ್ನು ಹೊಂದುವನೋ, ಮತ್ತು ಯಾವ ದಿನದಲ್ಲಿ ಆ ನಿದ್ರೆಯಿಂದ ಎಚ್ಚರಗೊಳ್ಳುತ್ತಾನೋ ಆ ಎರಡು ದಿವಸಗಳಲ್ಲೂ ಉಪವಾಸ

ತಸ್ಮಿನ್ನನನ್ಯಮನಸಾಮುಪವಾಸಭಾಜಾಂ ।
ಪುಂಸಾಂ ದದಾತಿ ಸುಗತಿಂ ಗರುಡಾಂಗಸಂಗೀ ॥ ೬೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ದೇವಶಯನೋತ್ಥಾಪನದ್ವಾದಶೀ
ವ್ರತವರ್ಣನಂ ನಾಮ ಸಪ್ತತಿತಮೋಽಧ್ಯಾಯಃ.



---

ವನ್ನಾಚರಿಸಿ ಏಕಾಗ್ರತೆಯಿಂದ ಕ್ರಮವಾಗಿ ಶ್ರೀ ಹರಿಗೆ ಶಯನೋತ್ಸವ, ಉತ್ಥಾಪನೋತ್ಸವ ಇವುಗಳನ್ನು ಮಾಡಿದ ಪುರುಷರಿಗೆ ಗರುಡವಾಹನನಾದ ಆ ಶ್ರೀಹರಿಯು ಸದ್ಗತಿಯನ್ನು ಕೊಡುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ದೇವಶಯನೋ
ತ್ಥಾಪನ ದ್ವಾದಶೀ ವ್ರತವರ್ಣನೆ ಎಂಬ ಎಪ್ಪತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಏಕಸಪ್ತತಿತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

**ಪುರಾ ಬಭೂವ ರಾಜರ್ಷಿರಜಪಾಲ ಇತಿ ಶ್ರುತಃ ।**
**ಪ್ರಾರ್ಥಿತಃ ಸ ಪ್ರಜಾಭಿಸ್ತು ಸರ್ವದುಃಖಾಪನುತ್ತಯೇ ॥ ೧ ॥**

**ದುಃಖಾಪನೋದಂ ಕುರು ಭೋ ವ್ಯಾಧಿತಾನಾಂ ನರೇಶ್ವರ ।**
**ಏವಮುಕ್ತಶ್ಚಿರಂ ಧ್ಯಾತ್ವಾ ಕೃತ್ವಾ ವ್ಯಾಧೀನ್ಪ್ರಜಾಗಣಾನ್ ॥ ೨ ॥**

---

## ಎಪ್ಪತ್ತೊಂದನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಪೂರ್ವದಲ್ಲಿ ಅಜಪಾಲನೆಂದು ಪ್ರಸಿದ್ಧನಾದ ಒಬ್ಬ ರಾಜರ್ಷಿಯಿದ್ದನು. ಅವನ ಎಲ್ಲಾ ಪ್ರಜೆಗಳೂ ಸೇರಿ ತಮ್ಮ ಸರ್ವ ದುಃಖವನ್ನೂ ನಿವಾರಿಸಬೇಕೆಂದು ಆ ರಾಜನನ್ನು ಇಂತು ಪ್ರಾರ್ಥಿಸಿದರು.

೨. ಅಯ್ಯಾ ಪ್ರಜೇಶ್ವರನೇ ! ವ್ಯಾಧಿಗ್ರಸ್ತರಾಗಿ ದುಃಖಪಡುತ್ತಿರುವ ನಮ್ಮ ದುಃಖವನ್ನು ನಿವಾರಣೆ ಮಾಡು, ಎಂದು ಪ್ರಜೆಗಳಿಂದ ಪ್ರಾರ್ಥಿತನಾದ ಆ ರಾಜನು ಬಹುಕಾಲ ಧ್ಯಾನದೃಷ್ಟಿಯಿಂದ ಆಲೋಚಿಸಿ ಈ ಮುಂದೆ ಹೇಳುವ ವ್ರತದ ಮೂಲಕ ತನ್ನ ಪ್ರಜಾವರ್ಗವನ್ನು ವ್ಯಾಧಿವಿನಿರ್ಮುಕ್ತರನ್ನಾಗಿ ಮಾಡಿ ಸಂತೋಷದಿಂದ ಪ್ರಜಾಪಾಲನೆ ಮಾಡುತ್ತಿದ್ದನು.

ಪಾಲಯಾಮಾಸ ಹೃಷ್ಟೋऽಸಾವಜಪಾಲಸ್ತತೋऽಭವತ್ ।
ತೇನೈಷಾ ನಿರ್ಮಿತಾ ಶಾಂತಿರ್ನಾಮ್ನಾ ನೀರಾಜತಾ ಜನೇ　　॥ ೩ ॥

ತಸ್ಯಾಸ್ತು ಪಾಂಡವಶ್ರೇಷ್ಠ ಲಕ್ಷಣಂ ವಚ್ಮಿ ತೇ ಶೃಣು ।
ರಾಜ್ಞಾ ಪುರೋಹಿತೈಃ ಸಾರ್ಧಮನುಷ್ಠೇಯಾ ವಿಧಾನತಃ　　॥ ೪ ॥

ತಸ್ಮಿನ್ಕಾಲೇ ಬಭೂವಾಥ ರಾವಣೋ ರಾಕ್ಷಸೇಶ್ವರಃ ।
ಲಂಕಾಸ್ಥಿತಃ ಸುರಗಣಾನ್ನಿಯುನಕ್ತಿ ಸ್ವಕರ್ಮಸು　　॥ ೫ ॥

ಅಖಂಡಮಂಡಲಂ ಚಂದ್ರಮಾತಪತ್ರಂ ಚಕಾರ ಹ ।
ಇದ್ರಂ ಸೇನಾಪತಿಂ ಚಕ್ರೇ ವಾಯುಂ ಪಾಂಸುಪ್ರಮಾರ್ಜಕಂ　　॥ ೬ ॥

---

೩. ಈ ತರಹವಾದ ಪ್ರಜಾಪಾಲನೆಯು ಅವನಲ್ಲಿ ಇದ್ದದ್ದರಿಂದಲೇ ಅಜಪಾಲನೆಂಬ ನಾಮಧೇಯವು ಬಂದಿತು. ಈ ಅಜಪಾಲನೆಂಬ ಅರಸನು ವ್ಯಾಧಿಶಾಂತ್ಯರ್ಥವಾಗಿ ಈ ಮುಂದೆ ಹೇಳುವ ನೀರಾಜನ ಎಂಬ ನಾಮಧೇಯದ ವ್ರತವನ್ನು ಆಚರಿಸಿ, ಜನಸಮುದಾಯದಲ್ಲಿ ಪ್ರಸಿದ್ಧಿಗೆ ತಂದನು.

೪. ಅಯ್ಯಾ ಪಾಂಡವ ಶ್ರೇಷ್ಠನೇ ! ಈ ನೀರಾಜಿತಾ ಶಾಂತಿಯ ಲಕ್ಷಣ ವನ್ನು ಹೇಳುತ್ತೇನೆ ಕೇಳು. ರಾಜನಾದವನು ಪುರೋಹಿತಸಮೇತನಾಗಿ ಈ ಶಾಂತಿವ್ರತವನ್ನು ಶಾಸ್ತ್ರೋಕ್ತರೀತಿಯಲ್ಲಿ ಅನುಷ್ಠಾನಮಾಡಬೇಕು.

೫. ಈ ಅಜಪಾಲನ ಕಾಲದಲ್ಲಿಯೇ ರಾವಣನೆಂಬ ಒಬ್ಬ ರಾಕ್ಷಸೇಶ್ವ ರನು ಇದ್ದನು. ಅವನು ಲಂಕೆ ಎಂಬ ತನ್ನ ರಾಜಧಾನಿಯಲ್ಲಿ ವಾಸಿಸುತ್ತಾ ಎಲ್ಲಾ ದೇವತೆಗಳನ್ನೂ ತನ್ನ ಸೇವಾಕಾರ್ಯಮಾಡುವ ಭೃತ್ಯರನ್ನಾಗಿ ಮಾಡಿ ಕೊಂಡಿದ್ದನು.

೬. ಎಲ್ಲಾ ಕಲೆಗಳೂ ಸೇರಿ ಸಂಪೂರ್ಣ ಮಂಡಲಾಕೃತಿಯ ಚಂದ್ರನನ್ನು ತನ್ನ ಶ್ವೇತಚ್ಛತ್ರಿಯನ್ನಾಗಿ ಮಾಡಿಕೊಂಡಿದ್ದನು. ಹಾಗೆಯೇ ಇಂದ್ರನನ್ನು ತನ್ನ ಸೇನಾಪತಿಯನ್ನಾಗಿಯೂ, ವಾಯುವನ್ನು ತನ್ನ ಅರಮನೆಯ ಕಸಗುಡಿಸು ವವನನ್ನಾಗಿಯೂ, ಮಾಡಿಕೊಂಡಿದ್ದನು.

ವರುಣಂ ಬದ್ಧಕರ್ಮಸ್ಥಂ ಧನದಂ ಧನರಕ್ಷಕಂ ।
ಯಮಂ ಸಂಯಮನೇಽರೀಣಾಂ ಯುಯುಜೇ ಮಂತ್ರಣೇ ಮನುಂ ॥

ಮೇಘಾಶ್ಛಾದನ್ತಿ ನೃಪತಿದ್ರುಮಪುಷ್ಪಾದಿಪಂಕ್ತಿಷು ।
ಸಪ್ತರ್ಷಯಃ ಶಾಂತಿಪರಾ ಬ್ರಹ್ಮಣಾ ಸಹ ಸಂಸ್ಥಿತಾಃ ॥ ೮ ॥

ಯಾಮಿಕಾ ಮಧ್ಯಕಕ್ಷಾಯಾಂ ಗಂಧರ್ವಾ ಗೀತತತ್ಪರಾಃ ।
ಪ್ರೇಕ್ಷಣೀಯೇಽಪ್ಸರೋವೃಂದಂ ಬಾಹ್ಯೇ ವಿದ್ಯಾಧರಾ ವೃತಾಃ ॥ ೯ ॥

ಗಂಗಾದ್ಯಾಃ ಸರಿತಃ ಪಾನೇ ಗಾರ್ಹಪತ್ಯೇ ಹುತಾಶನಃ ।
ವಿಶ್ವಕರ್ಮಾನ್ಯಸಂಸ್ಕಾರೇ ಮಯಃ ಶಿಲ್ಪಿಪ್ರಯೋಜನೇ ॥ ೧೦ ॥

---

೭. ಮತ್ತು ವರುಣನನ್ನು ಸೆರೆಯಾಳುಗಳನ್ನು ಬಂಧಿಸುವುದು, ಬಂದಿಗಳನ್ನು ನೋಡಿಕೊಳ್ಳುವುದು ಈ ಕರ್ಮದಲ್ಲೂ, ಕುಬೇರನನ್ನು ಧನರಕ್ಷಕನಾದ ಕೋಶಾಧ್ಯಕ್ಷನ ಕೆಲಸದಲ್ಲೂ, ಯಮನನ್ನು ಶತ್ರುಗಳ ನಿಯಮನ ಕರ್ಮದಲ್ಲೂ, ಮನುವನ್ನು ಆಲೋಚನೆ ಹೇಳುವ ಮಂತ್ರಿಯ ಕೆಲಸದಲ್ಲೂ ನಿಯೋಗಿಸಿದನು.

೮. ಮೇಘಗಳು ಆ ರಾವಣೇಶ್ವರನ ಉದ್ಯಾನವೃಕ್ಷ, ಪುಷ್ಪ ಇತ್ಯಾದಿ ಪಂಕ್ತಿಗಳನ್ನು ಬಿಸಿಲಿನ ತಾಪ ತಗಲದಂತೆ ಆಚ್ಛಾದನ ಮಾಡುತ್ತಿದ್ದುವು. ಸಪ್ತರ್ಷಿಗಳು ಬ್ರಹ್ಮನ ಜತೆಯಲ್ಲಿ ಸೇರಿಕೊಂಡು ಆ ರಾವಣನಿಗೆ ಶಾಂತಿ ಪೌಷ್ಟಿಕ ಕರ್ಮಗಳನ್ನು ಮಾಡುವುದರಲ್ಲಿ ಆಸಕ್ತರಾಗಿದ್ದರು.

೯. ಗಂಧರ್ವರು ಆ ರಾವಣನ ಅರಮನೆಯ ಮಧ್ಯದ ತೊಟ್ಟಿಯಲ್ಲಿ ಅವನ ಪ್ರಭಾವವನ್ನು ಗಾನಮಾಡುವುದರಲ್ಲಿ ತತ್ಪರರಾಗಿ ಪರ್ಯಾಯದಿಂದ (ಸರದಿಯ ಕ್ರಮ) ಯಾಮ ಯಾಮಗಳಲ್ಲೂ ಕಾವಲುಕಾಯುತ್ತಿದ್ದರು. ಅವನು ಅಪ್ಸರರನ್ನು ನಾಟಕಾದಿ ಪ್ರೇಕ್ಷಣೀಯ ಕರ್ಮದಲ್ಲಿ ನಿಯೋಗಿಸಿದ್ದನು. ಹೊರಗಿನ ತೊಟ್ಟಿಯಲ್ಲಿ ವಿದ್ಯಾಧರರು ಸುತ್ತಲೂ ಆವರಿಸಿಕೊಂಡು ರಕ್ಷಕರಾಗಿದ್ದರು.

೧೦. ಗಂಗಾದಿ ಪವಿತ್ರ ನದಿಗಳು ಅವನ ಪಾನಕೃತ್ಯವನ್ನು ಪೂರೈಸುತ್ತಿದ್ದುವು. ಅಗ್ನಿಯು ಅವನ ಪಾಕಶಾಲೆಯ ಮತ್ತು ಉಗ್ರಾಣದ ಕೃತ್ಯಗಳನ್ನು ನೆರವೇರಿಸುತ್ತಿದ್ದನು. ವಿಶ್ವಕರ್ಮನು ಗೃಹಾಲಂಕಾರ ಕೆಲಸದಲ್ಲೂ, ಮಯನು ಶಿಲ್ಪಕಾರ್ಯದಲ್ಲೂ ನಿಯೋಜಿಸಲ್ಪಟ್ಟಿದ್ದರು.

ತಿಷ್ಠಂತಿ ಪಾರ್ಥಿವಾಃ ಸರ್ವೇ ಪುರಃಸೇವಾವಿಧಾಯಿನಃ ।
ದೃಶ್ಯಂತೇ ಭಾಸುರೈರತ್ನೈಃ ಪ್ರಭಾವಂತೋ ವಿಭೂಷಣೈಃ ॥ ೧೧ ॥

ಸಂದೃಶ್ಯ ರಾವಣಃ ಪ್ರಾಹ ಪ್ರಶಸ್ತಂ ಪ್ರತಿಹಾರಕಂ ।
ಸೇವಾಂ ಕರ್ತುಂ ಮಮ ಸ್ಥಾನೇ ಬ್ರೂಹಿ ಕೋತ್ರ ಸಮಾಗತಃ ॥ ೧೨ ॥

ಸ ಉವಾಚ ಪ್ರಣಮ್ಯಾಗ್ರೇ ದಂಡಪಾಣಿರ್ನಿಶಾಚರಃ ।
ಏಷ ಕಕುತ್ಸ್ಥೋ ಮಾಂಧಾತಾ ಧುಂಧುಮಾರೋ ನಲೋಽರ್ಜುನಃ ॥

ಯಯಾತಿರ್ನಹುಷೋ ಭೀಮೋ ರಾಘವೋಽಯಂ ವಿದೂರಥಃ ।
ಏತೇ ಚಾನ್ಯೇ ಚ ಬಹವೋ ರಾಜಾನ ಇತ ಆಸತೇ ॥ ೧೪ ॥

---

೧೧. ಪ್ರಕಾಶಮಾನವಾದ ರತ್ನಗಳಿಂದಲೂ, ವಸ್ತ್ರಾಲಂಕಾರಗಳಿಂದಲೂ ಬಹು ಕಾಂತಿಯುಕ್ತರಾಗಿ ಕಾಣಿಸುವ ಎಲ್ಲಾ ಅರಸುಗಳೂ ಆ ರಾವಣನ ಮುಂಭಾಗದಲ್ಲಿ ಸೇವೆಗಾಗಿ ಕಾದು ನಿಂತಿದ್ದರು.

೧೨. ಹೀಗಿರುವಾಗ ಕದಾಚಿತ್ ರಾವಣನು ತನ್ನ ಸೇವಾರ್ಥವಾಗಿ ಬಂದ ಅರಸರನ್ನು ನೋಡಿ, ಪ್ರಶಸ್ತನೆಂಬ ದ್ವಾರಪಾಲಕನನ್ನು ಕರೆದು, ಓ ಪ್ರಶಸ್ತನೇ ! ನನ್ನ ಸೇವೆಗಾಗಿ ಇಲ್ಲಿ ಯಾವನು ಬಂದಿರುತ್ತಾನೆ ! ಎಂಬುದನ್ನು ತಿಳಿದು ಹೇಳು ಎಂದು ಆಜ್ಞೆಮಾಡಿದನು.

೧೩. ಅನಂತರ ದಂಡಪಾಣಿಯಾದ ಆ ಪ್ರಹಸ್ತನೆಂಬ ನಿಶಾಚರನು, ರಾಕ್ಷಸಾಧಿಪತಿಯಾದ ರಾವಣನಿಗೆ ನಮಸ್ಕಾರಮಾಡಿ ಅವನ ಪುರೋಭಾಗದಲ್ಲಿ ನಿಂತು ಈ "ಕಕುತ್ಸ್ಥ ರಾಜನು ಮಾಂಧಾತನು, ಧುಂಧುಮಾರ, ನಲ, ಅರ್ಜುನ.

೧೪. ಮತ್ತು ಯಯಾತಿ, ನಹುಷ, ಭೀಮ ರಘುಕುಲೋತ್ಪನ್ನನಾದ ವಿದೂರಥ ಈ ರಾಜರೂ, ಇನ್ನೂ ಅನೇಕ ಇತರ ರಾಜರುಗಳೂ ಬಂದಿದ್ದಾರೆ.

ಮೇಘಾಕಾರಾಸ್ತವ ಸ್ಥಾನೇ ನಾಜಪಾಲ ಇಹಾಗತಃ ।
ರಾವಣಃ ಕುಪಿತಃ ಪ್ರಾಹ ಶೀಘ್ರಂ ದೂತಂ ವ್ಯಸರ್ಜಿತುಂ ॥ ೧೫ ॥

ಇತ್ಯುಕ್ತೇ ಪ್ರಹಿತೋ ದೂತೋ ಧೂಮ್ರಾಕ್ಷೋ ನಾಮ ರಾಕ್ಷಸಃ ।
ಧೂಮ್ರಾಕ್ಷ ಗಚ್ಛ ಬ್ರೂಹಿ ತ್ವಮಜಪಾಲಂ ಮಮಾಜ್ಞಯಾ ॥ ೧೬ ॥

ಸೇವಾಂಕುರು ಸಮಾಗಚ್ಛ ಕಬಂಧೋ ಯಸ್ಯ ಪಾರ್ಥಿವಃ ।
ಅನ್ಯಥಾ ಚಂದ್ರಹಾಸೇನ ತ್ವಾಂ ಕರಿಷ್ಯೇ ವಿಕಂಧರಂ ॥ ೧೭ ॥

ರಾವಣೇನೈವಮುಕ್ತಸ್ತು ಧೂಮ್ರಾಕ್ಷೋ ಗರುಡೋ ಯಥಾ ।
ಸಂಪ್ರಾಪ್ಯ ತಾಂ ಪುರೀಂ ರಮ್ಯಾಂ ತಚ್ಚ ರಾಜಕುಲಂ ಗತಃ ॥ ೧೮ ॥

---

೧೫. ಎಲ್ಲರೂ ಮೇಘಾಕಾರವುಳ್ಳವರಾಗಿ ನಿನ್ನ ದ್ವಾರಸ್ಥಾನದಲ್ಲಿ ನಿಂತಿರುತ್ತಾರೆ. ಆದರೆ ಅಜಪಾಲನು ಮಾತ್ರ ಬಂದಿಲ್ಲ ಎಂದು ವಿಜ್ಞಾಪಿಸಿದನು. ಆ ಮಾತನ್ನು ಕೇಳಿ ರಾವಣನು ಕುಪಿತನಾಗಿ ಶೀಘ್ರವಾಗಿ ದೂತನೊಬ್ಬನನ್ನು ಆ ಅಜಪಾಲನಿದ್ದಲ್ಲಿಗೆ ಕಳುಹಿಸಬೇಕೆಂದು ಹೇಳಿದನು.

೧೬–೧೭. ರಾವಣನು ಹೀಗೆ ಹೇಳಿದಕೂಡಲೆ ಧೂಮ್ರಾಕ್ಷನೆಂಬ ರಾಕ್ಷಸ ದೂತನು ರಾವಣನ ಸಮ್ಮುಖಕ್ಕೆ ಬಂದನು. ಅವನನ್ನು ಕಂಡು ರಾವಣನು "ಎಲೈ ಧೂಮ್ರಾಕ್ಷ! ನನ್ನ ಆಜ್ಞೆಯ ಪ್ರಕಾರ ಅಜಪಾಲನ ಬಳಿಗೆ ಹೋಗಿ ನೀನು ಶೀಘ್ರವಾಗಿ ಬಂದು ರಾವಣನ ಸೇವೆಯನ್ನು ಮಾಡು. ಅವನ ಕ್ರೂರದೃಷ್ಟಿ ಬಿದ್ದ ಅರಸರ ತಲೆ ಛೇದಿಸಿ ಹೋಗಿ ಕಬಂಧ ಕುಣಿದಾಡುವುದು. ನೀನು ಸೇವೆಗೆ ಬಾರದಿರುವ ಪಕ್ಷದಲ್ಲಿ ಚಂದ್ರಹಾಸವೆಂಬ ಖಡ್ಗದಿಂದ ನಿನ್ನ ತಲೆಯನ್ನು ಕತ್ತರಿಸಿ ಶಿರಸ್ಸಿಲ್ಲದವನನ್ನಾಗಿ ಮಾಡುವನೆಂದು ತಿಳಿಸು" ಎಂಬದಾಗಿ ಹೇಳಿ ಕಳುಹಿಸಿದನು.

೧೮. ರಾವಣನ ಈ ಸಂದೇಶವನ್ನು ತೆಗೆದುಕೊಂಡು ಧೂಮ್ರಾಕ್ಷನು ಗರುಡನ ಹಾಗೆ ಅತಿವೇಗದಿಂದ ಆ ಅಜಪಾಲನ ಸುಂದರವಾದ ನಗರಿಗೆ ಬಂದು ಅವನ ಅರಮನೆಗೆ ಹೋದನು.

ದದರ್ಶ ಯಂ ತಮೇಕಂ ಸ ಅಜಪಾಲಮುಜಾವೃತಂ ।
ಮುಕ್ತಕೇಶಂ ಮುಕ್ತಕಕ್ಷಂ ನೈಕಮುಕ್ತಕ್ರಮುದ್ವಯಂ || ೧೯ ||

ಯಷ್ಟಿಸ್ಕಂಧೈ ರೇಣುಭೃತ್ಯೈರ್ವ್ಯಾಧಿಭಿಃ ಪರಿವಾರಿತಂ ।
ನಿಹತಾಮಿತ್ರಶಾರ್ದೂಲಂ ಸರ್ವೋಪದ್ರವನಾಶನಂ || ೨೦ ||

ಮುಹ್ಯಾಮಾಲಿಖ್ಯ ನಾಮಾನಿ ವಿನಿಘ್ನಂತಂ ದ್ವಿಷಾಂ ಗಣಂ ।
ಸ್ನಾತಂ ಭುಕ್ತಂ ಶುಭೇ ಸ್ಥಾನೇ ಕೃತಕೃತ್ಯಂ ಮುನಿಂ ಯಥಾ || ೨೧ ||

ದೃಷ್ಟ್ವಾ ಹೃಷ್ಟಮನಾಃ ಪ್ರಾಹ ಧೂಮ್ರಾಕ್ಷೋ ರಾವಣೋದಿತಂ ।
ಸಾಕ್ಷೇಪಮಜಪಾಲೋಽಪಿ ಪ್ರತ್ಯುಕ್ತ್ವಾ ಕಾರಣಾಂತರಂ || ೨೨ ||

---

೧೯. ಅಲ್ಲಿ ಆ ಅಜಪಾಲನು ಸಮಸ್ತ ಪ್ರಜಾಪರಿವೃತನೂ ಮುಕ್ತಕೇಶನೂ, ಸೊಂಟದ ಮೇಲಕ್ಕೆ (ಕಂಕುಳ ಪ್ರದೇಶಕ್ಕೆ) ಯಾವ ಬಟ್ಟೆಯನ್ನೂ ಧರಿಸದವನೂ, ಯಾವನೂ ತನ್ನ ತನ್ನ ರೀತಿ ಮರ್ಯಾದೆಯನ್ನು ಉಲ್ಲಂಘಿಸದಂತೆ ಎಲ್ಲರನ್ನೂ ದರ್ಪದಿಂದ ಯೋಗ್ಯರೀತಿಯಲ್ಲಿ ಇರಿಸಿದವನೂ,

೨೦. ದಂಡವನ್ನು ಹೆಗಲ ಮೇಲೆ ಏರಿಸಿದವನೂ ಧೂಳಿಗಳಿಂದ ಕೂಡಿದವನೂ, ವ್ಯಾಧಿಗಳಿಂದ ಸುತ್ತಲೂ ಸೇವಿಸಲ್ಪಟ್ಟವನೂ, ಶತ್ರುಗಳೆಂಬ ವ್ಯಾಘ್ರಗಳನ್ನು ಸಂಹರಿಸಿದವನೂ, ಸರ್ವೋಪದ್ರವಗಳನ್ನೂ ನಿವಾರಿಸಿದವನೂ,

೨೧. ತನ್ನ ಶತ್ರುಗಳ ನಾಮಧೇಯವನ್ನು ಭೂಮಿಯಲ್ಲಿ ಬರೆದು ಕಾಲಿನಿಂದ ತೊಡೆದು ತನ್ಮೂಲಕವಾಗಿಯೇ ಅವರನ್ನು ನಾಶಮಾಡುವವನೂ ಆಗಿದ್ದನು. ಸ್ನಾನಮಾಡಿ ಭೋಜನ ನೆರವೇರಿಸಿ ಶುಚಿಯಾದ ಸ್ಥಾನದಲ್ಲಿ ಕುಳಿತು ಕೃತಕೃತ್ಯನಾಗಿ ಮಹಾಮುನಿಗೆ ಸಮಾನನಾಗಿರುವ ಆ ರಾಜನನ್ನು ಧೂಮ್ರಾಕ್ಷನು ದರ್ಶನಮಾಡಿದನು.

೨೨. ಧೂಮ್ರಾಕ್ಷನು ಹೀಗಿರುವ ಆ ಅಜಪಾಲನನ್ನು ನೋಡಿ, ಸಂತೋಷಪಟ್ಟವನಾಗಿ ರಾವಣನ ಸಂದೇಶವಚನವನ್ನು ವಿಜ್ಞಾಪಿಸಿದನು. ಆ ಅಜಪಾಲನು ಆ ಮಾತನ್ನು ಆಕ್ಷೇಪಿಸಿ ಲಂಕೆಗೆ ತಾನು ಬರದೇ ಇರಲು ಯಾವುದೋ ಒಂದು ಕಾರಣಾಂತರವನ್ನು ಅವನಿಗೆ ಪ್ರತ್ಯುತ್ತರವಾಗಿ ಹೇಳಿ.

ಪ್ರೇಷಯಾಮಾಸ ಧೂಮ್ರಾಕ್ಷಂ ತತಃ ಕೃತ್ಯಂ ಸಮಾದಧೆ ।
ಜ್ವರಮಾಕಾರಯಿತ್ವಾ ತು ಪ್ರೋವಾಚೇದಂ ಮಹೀಪತಿಃ ॥ ೨೩ ॥

ಗಚ್ಛ ಲಂಕಾಧಿಪಸ್ಥಾನಮಾಚರಸ್ವ ಯಥೋಚಿತಂ ।
ನಿಯುಕ್ತಸ್ತ್ವಜಪಾಲೇನ ಜ್ವರೋ ರಾಜಞ್ಜಗಾಮ ಹ ॥ ೨೪ ॥

ಗತ್ವಾ ಚ ಕಂಪಯಾಮಾಸ ಸಗಣಂ ರಾಕ್ಷಸೇಶ್ವರಂ ।
ರಾವಣಸ್ತಂ ವಿದಿತ್ವಾ ತು ಜ್ವರಂ ಪರಮದಾರುಣಂ ॥ ೨೫ ॥

ಪ್ರೋವಾಚ ತಿಷ್ಠತು ನೃಪಸ್ತೇನ ಮೇ ನ ಪ್ರಯೋಜನಂ ।
ತತಃ ಸವಿಜ್ವರೋ ರಾಜಾ ಬಭೂವ ಧನದಾನುಜಃ ॥ ೨೬ ॥

---

೨೩. ಆ ಧೂಮ್ರಾಕ್ಷನನ್ನು ಕಳುಹಿಸಿಕೊಟ್ಟನು. ಅನಂತರ ತನ್ನ ಮುಂದಿನ ಕರ್ತವ್ಯ ವಿಷಯವನ್ನು ಏಕಾಗ್ರತೆಯಿಂದ ಯೋಚಿಸಿದನು. ಹಾಗೆ ಯೋಚಿಸಿ ಆ ಅಜಪಾಲಭೂಪತಿಯು ಜ್ವರನನ್ನು ಕರೆಯಿಸಿ ಅವನನ್ನು ಕುರಿತು,

೨೪. "ಎಲೈ ಜ್ವರನೇ ! ನೀನು ಲಂಕಾಧಿಪತಿಯಾದ ರಾವಣನ ರಾಜಧಾನಿಗೆ ಹೋಗಿ ಯಥೋಚಿತವಾಗಿ ಕಾರ್ಯವನ್ನು ನಡೆಯಿಸು'' ಎಂದು ಹೇಳಿದನು. ಅಯ್ಯಾ ಧರ್ಮರಾಜನೇ ! ಹೀಗೆಂದು ಅಜಪಾಲನಿಂದ ನಿಯುಕ್ತನಾದ ಜ್ವರನು ಲಂಕೆಗೆ ಹೋದನು.

೨೫. ಆ ಜ್ವರನು ಲಂಕೆಗೆ ಹೋಗಿ ರಕ್ಷೋಗಣಸಹಿತನೂ ರಾಕ್ಷಸೇಶ್ವರನೂ ಆದ ರಾವಣನನ್ನು ತನ್ನ ಪ್ರಭಾವದಿಂದ ನಡುಗಿಸಿದನು. ಜ್ವರನು ಪರಮ ಭಯಂಕರನು ಎಂದು ಆಗ ರಾವಣನು ತಿಳಿದುಕೊಂಡನು.

೨೬. ಹಾಗೆ ತಿಳಿದುಕೊಂಡ ಮೇಲೆ, ಆ ರಾವಣನು ಜ್ವರನನ್ನು ಕರೆದು, "ನಿನ್ನ ಸ್ವಾಮಿಯಾದ ಅಜಪಾಲನು ಅಲ್ಲಿಯೇ ಇರಲಿ. ಅವನಿಂದ ಆಗಬೇಕಾದ ಯಾವ ಪ್ರಯೋಜನವೂ ನನಗಿಲ್ಲ. ನೀನು ಅವನಿದ್ದಲ್ಲಿಗೇ ಹಿಂದಿರುಗಿ ಹೋಗು'' ಎಂದು ಹೇಳಿದನು. ಅನಂತರ ಕುಬೇರನ ಅನುಜನಾದ ಆ ರಾವಣೇಶ್ವರನು ಜ್ವರ ನಿರ್ಮುಕ್ತನಾದನು.

ತೇನೈಷಾ ನಿರ್ಮಿತಾ ಶಾಂತಿರಜಪಾಲೇನ ಧೀಮತಾ ।
ಸರ್ವರೋಗಪ್ರಶಮನೀ ಸರ್ವೋಪದ್ರವನಾಶಿನೀ ॥ ೨೭ ॥

ಕಾರ್ತಿಕೇ ಶುಕ್ಲಪಕ್ಷಸ್ಯ ದ್ವಾದಶ್ಯಾಂ ರಜನೀಮುಖೇ ।
ಸಮುತ್ಥಿತೇ ವಿನಿದ್ರೇ ತು ದೇವೇ ದಾಮೋದರೇ ತದಾ ॥ ೨೮ ॥

ಮಂಟಪೇ ರತ್ನಮಾಲಾಭಿ ರಮ್ಯೇ ಮಾಲಾನುರಂಜಿತೇ ।
ಜನಯಿತ್ವಾ ನವಂ ವಿಷ್ಣುಂ ಹುತ್ವಾ ಮಂತ್ರೈರ್ದ್ವಿಜೋತ್ತಮೈಃ ॥೨೯॥

ವರ್ಧಮಾನತರೂತ್ಥಾಭಿರ್ದೀಪಿಕಾಭಿರ್ಹುತಾಶನಂ ।
ಕೃತ್ವಾ ಮಹಾಜನೈಃ ಸರ್ವೈರ್ಹರಿಂ ನೀರಾಜಯೇಚ್ಛನೈಃ ॥ ೩೦ ॥

ಪುಷ್ಪೈರಭ್ಯರ್ಚಿತಂ ದೇವಂ ಸಮಾಲಬ್ಧಂ ಚ ಚಂದನೈಃ ।
ಬದರೈಃ ಕರ್ಬುರೈಶ್ಚೈವ ತ್ರಪುಸೈರಿಕ್ಷುಭಿಸ್ತಥಾ ॥ ೩೧ ॥

---

೨೭. ಅಂತಹ ಬುದ್ಧಿಶಾಲಿಯಾದ ಅಜಪಾಲನು ಸರ್ವರೋಗ ನಾಶಕವಾಗಿಯೂ, ಸರ್ವೋಪದ್ರವನಿವಾರಕವಾಗಿಯೂ ಇರುವ ಈ ನೀರಾಜಿತಾ ಶಾಂತಿಯನ್ನು ಸೃಷ್ಟಿಸಿದವನು.

೨೮. ಕಾರ್ತೀಕಮಾಸದ ಶುಕ್ಲಪಕ್ಷದ ದ್ವಾದಶಿಯದಿನ ಪ್ರದೋಷಕಾಲದಲ್ಲಿ ದೇವದೇವನಾದ ಶ್ರೀ ದಾಮೋದರನು ಯೋಗನಿದ್ರೆಯನ್ನು ತ್ಯಜಿಸಿ ಏಳುವನು.

೨೯. ಆ ಸಮಯದಲ್ಲಿ ರತ್ನಮಾಲೆಗಳು ಮತ್ತು ಪುಷ್ಪಮಾಲೆಗಳು ಇವುಗಳಿಂದ ಅಲಂಕೃತವಾಗಿ ಸುಂದರವಾಗಿರುವ ಮಂಟಪದಲ್ಲಿ ಆಗತಾನೇ ಎದ್ದು ನವೀನನಂತೆ ಕಾಣಿಸುವ ಶ್ರೀ ಮಹಾವಿಷ್ಣುವನ್ನು ಸ್ಥಾಪನೆಮಾಡಿ, ಹರಳು ವೃಕ್ಷದ ಇಂಧನಗಳನ್ನು ಹಾಕಿ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡಬೇಕು.

೩೦. ಬಳಿಕ ಸಂಸ್ಕೃತವಾದ ಆ ಅಗ್ನಿಯಲ್ಲಿ ವಿಪ್ರೋತ್ತಮರಿಂದ ಮಂತ್ರಗಳನ್ನು ಹೇಳಿಸಿ ಹೋಮಮಾಡಿ, ಅನಂತರ ಮಹಾಜನಗಳನ್ನೆಲ್ಲಾ ಬರಮಾಡಿ ಶ್ರೀಹರಿಗೆಮಂಗಳ ನೀರಾಜನಕ್ಕೆ ಸಿದ್ಧಮಾಡಬೇಕು.

೩೧. ಶ್ರೀಹರಿಗೆ ಚಂದನವನ್ನು ಹಚ್ಚಿ, ಪುಷ್ಪಗಳಿಂದಲೂ ಮತ್ತು ಗಂಧ, ಆಭರಣ, ವಸ್ತ್ರ, ರತ್ನ ಇತ್ಯಾದಿಗಳಿಂದಲೂ ಪೂಜೆ ಮಾಡಬೇಕು.

**ಗಂಧೈಃ ಪುಷ್ಪೈರಲಂಕಾರೈರ್ವಸ್ತ್ರೈ ರತ್ನೈಶ್ಚ ಪೂಜಿತೈಃ ।**
**ತಸ್ಯೈವಾನುಮತಾಂ ಲಕ್ಷ್ಮೀಂ ಬ್ರಹ್ಮಾಣಂ ಚಂಡಿಕಾಂ ತಥಾ ॥ ೩೨ ॥**

**ಆದಿತ್ಯಂ ಶಕರಂ ಗೌರೀಂ ಯಕ್ಷಂ ಗಣಪತಿಂ ಗ್ರಹಾನ್ ।**
**ಮಾತರಂ ಪಿತರಂ ನಾಗಾನ್ಸರ್ವಾನ್ನೀರಾಜಯೇಚ್ಛನೈಃ ॥ ೩೩ ॥**

**ಗವಾಂ ನೀರಾಜನಂ ಕುರ್ಯಾನ್ಮಹಿಷ್ಯಾದೇಶ್ಚ ಮಂಡಲಂ ।**
**ಭ್ರಾಮಯೇತ್ರಾಸಯೇಚ್ಛರ್ದಿರ್ಘಂಟಾವಾಡನಘಾದನೈಃ ॥ ೩೪ ॥**

**ತಾ ಗಾವಃ ಪ್ರಸ್ತುತಾ ಯಾಂತಿ ಸ್ವಾಪೀಡಾಸ್ತಬಕಾಂಗದಾಃ ।**
**ಸಿಂದೂರಕೃತಶೃಂಗಾಗ್ರಾಃ ಸಂಭಾರವಶವತ್ಸಕಾಃ ॥ ೩೫ ॥**

---

೩೨. ಬೋರೇಹಣ್ಣು, ಖರ್ಜೂರಫಲ, ತ್ರಪುಸಫಲ, ಕಬ್ಬು ಇತ್ಯಾದಿ ಫಲಗಳನ್ನು ನೈವೇದ್ಯವಾಗಿ ಸಮರ್ಪಿಸಬೇಕು.

೩೩. ಹಾಗೆಯೇ ಆ ಶ್ರೀಹರಿಗೆ ಪ್ರೀತಿಪಾತ್ರರಾದ ಲಕ್ಷ್ಮಿ, ಬ್ರಹ್ಮ, ಮತ್ತು ಚಂಡಿಕೆ ಇವರನ್ನೂ; ಆದಿತ್ಯ, ಶಂಕರ, ಗೌರೀ, ಯಕ್ಷ, ಗಣಪತಿ, ನವಗ್ರಹಗಳು, ಸಪ್ತಮಾತೃಕೆಯರು, ಅಗ್ನಿಷ್ವಾತ್ತಾದಿ ಪಿತೃಗಳು, ನಾಗದೇವತೆಗಳು ಇವರೆಲ್ಲರನ್ನೂ ಅರ್ಚಿಸಿ, ಅನಂತರ ಈ ಸಮಸ್ತ ದೇವತೆಗಳಿಗೂ ಮಂಗಳಾರತಿಯನ್ನು ಬೆಳಗಬೇಕು.

೩೪. ಮತ್ತು ಗೋವುಗಳಿಗೂ ಮಹಿಷಾದಿ (ಎಮ್ಮೆ ಮೊದಲಾದುವು) ಗಳಿಗೂ ನೀರಾಜನವನ್ನು ಬೆಳಗಿ, ಅವುಗಳ ಮಂದೆಯನ್ನು ಊರಿನಲ್ಲಿ ಸುತ್ತಿಸಿ ಮೆರವಣಿಗೆ ಮಾಡಬೇಕು. ಆಗ ಅವುಗಳ ಕತ್ತಿಗೆ ಘಂಟೆಯನ್ನು ಕಟ್ಟಿ, ಅವುಗಳ ಮೈಗೆ ಬಣ್ಣದ ವಸ್ತ್ರವನ್ನು ಹೊದ್ದಿಸಬೇಕು.

೩೫. ಆ ಹಸುಗಳು, ಸಂತೋಷದಿಂದ ಹಾಲನ್ನು ಸುರಿಸುತ್ತಾ ತಮಗೆ ಅಲಂಕಾರಕ್ಕಾಗಿ ಹಾಕಿರುವ ಪುಷ್ಪಮಾಲಿಕೆಗಳನ್ನೂ ಅಂಗಗಳಲ್ಲಿ ಆಭರಣವನ್ನೂ ಧರಿಸಿರುವುವು. ಕೊಂಬುಗಳ ತುದಿಗಳಿಗೆ ಚಂದ್ರದ ಪುಡಿ ಲೇಪನಮಾಡಿ ಅಲಂಕರಿಸಲ್ಪಟ್ಟವುಗಳೂ, ಅನೇಕ ಪ್ರಕಾರವಾಗಿ ಅಲಂಕಾರ ಮಾಡಿದ ಕರುಗಳುಳ್ಳವುಗಳೂ ಆದ ಅವು ವನಗಳ ಕಡೆಗೆ ಹೊರಡುವುವು.

[illegible]ಯಾಂತಿ ಸಗೋಪಾಲಾಃ ಕಾಲಯಂತೋ ವನಾನಿ ತೇ ।
[illegible]ಲಿಪ್ತರಕ್ತಾಂಗಾ ರಕ್ತಪೀತಸಿತಾಂಬರಾಃ ॥ ೩೬ ॥

ಏವಂ ಕೋಲಾಹಲೇ ವೃತ್ತೇ ಗವಾಂ ನೀರಾಜನೋತ್ಸವೇ ।
ತುರಗಾಲ್ಲಕ್ಷಣೈರ್ಯುಕ್ತಾನ್ದ್ವಿರದಾಂಶ್ಚ ಸುಪೂಜಿತಾನ್ ॥ ೩೭ ॥

ರಾಜಚಿಹ್ನಾನಿ ಸರ್ವಾಣಿ ಉದ್ಧೃತ್ಯ ಸ್ವಗೃಹಾಂಗಣೇ ।
ರಾಜಾ ಪುರೋಹಿತೈಸ್ಸಾರ್ಧಂ ಮಂತ್ರಿಭೃತ್ಯಪುರಃಸರಃ ॥ ೩೮ ॥

ಸಿಂಹಾಸನೋಪವಿಷ್ಟಶ್ಚ ಶಂಖತೂರ್ಯಾದಿನಿಸ್ಸ್ವನೈಃ ।
ಪೂಜಯೇದ್ಗಂಧಕುಸುಮೈರ್ವಸ್ತ್ರದೀಪವಿಲೇಪನೈಃ । ॥ ೩೯ ॥

---

೩೬. ಆ ಹಸುಗಳನ್ನು ಗೋಪಾಲರು ಹಿಂಬಾಲಿಸುತ್ತಾ ಬರಲು ಅವು ಗುಂಪಾಗಿ ಸೇರಿ ಕಾಡಿಗೆ ಹೋಗುತ್ತವೆ. ಅವುಗಳ ಮೈಮೇಲೆ ಪದ್ಮ ಸ್ವಸ್ತಿಕಾದಿಗಳನ್ನು ಕೆಂಪು ಚಿತ್ರಿಸಿ ಬಣ್ಣದಿಂದ ಕೆಂಪಾದ ಶರೀರವುಳ್ಳವುಗಳೂ, ಕೆಂಪು, ಹಳದಿ, ಬಿಳುಪು ಈ ಬಣ್ಣದ ಬಟ್ಟೆ ಹೊದ್ದಿಸಿದವುಗಳೂ ಆಗಿ ಕಾಣುತ್ತವೆ.

೩೭. ಈ ರೀತಿ ಊರಲ್ಲಿ ಗೋವುಗಳಿಗೆ ನೀರಾಜನೋತ್ಸವವು ಬಹು ಕೋಲಾಹಲದಿಂದ ನಡೆಯುತ್ತಿರುವಾಗ್ಯೆ, ರಾಜನು ಲಕ್ಷಣಯುಕ್ತವಾದ ಉತ್ತಮವಾದ ಕುದುರೆಗಳನ್ನೂ, ಮತ್ತು ಆನೆಗಳನ್ನೂ, ಚೆನ್ನಾಗಿ ಅಲಂಕರಿಸಿ ಪೂಜಿಸಬೇಕು.

೩೮. ಮತ್ತು ಈ ಉತ್ಸವದಲ್ಲಿ ಇತರ ರಾಜಚಿಹ್ನೆಗಳಾದ ರಥ, ವಾಹನಾದಿ ಎಲ್ಲ ವಸ್ತುಗಳನ್ನೂ, ಪ್ರಾಣಿಗಳನ್ನೂ, ತನ್ನ ಅರಮನೆಯ ಅಂಗಳದಲ್ಲಿ ತಂದು ನಿಲ್ಲಿಸಿ, ಪುರೋಹಿತ, ಮಂತ್ರಿ, ಭೃತ್ಯ ಇವರುಗಳನ್ನು ಮುಂದಿಟ್ಟುಕೊಂಡವನಾಗಿ,

೩೯. ಭದ್ರಾಸನದಲ್ಲಿ ಕುಳಿತು ಭೇರೀಗಳು ಮಂಗಳವಾದ್ಯ ಮೊದಲಾದವು ಮೊಳಗುತ್ತಿರಲು, ಅವುಗಳಿಗೆ ವಸ್ತ್ರ, ಗಂಧ, ಪುಷ್ಪ, ಧೂಪ, ದೀಪ, ವಿಲೇಪನ ಇತ್ಯಾದಿಗಳಿಂದ ಪೂಜಿಸಬೇಕು.

ತತಃ ಸ್ತ್ರೀಲಕ್ಷಣೈರ್ಯುಕ್ತಾ ವೇಶ್ಯಾ ವಾಥ ಕುಲಾಂಗನಾ ।
ಶೀರ್ಷೋಪರಿ ನರೇಂದ್ರಸ್ಯ ಭ್ರಾಮಯೇದ್ದಾರುಪಾತ್ರಿಕಾಂ ॥ ೪೦ ॥

ಶಾಂತಿರಸ್ತು ಸಮೃದ್ಧಿಶ್ಚ ದ್ವಿಜೈಶ್ಚ ಸ್ವಜನೇನ ಚ ।
ತತೋ ನೀರಾಜಯೇತ್ಸೈನ್ಯಂ ಹಸ್ತ್ಯಶ್ವರಥಸಂಕುಲಂ ॥ ೪೧ ॥

ಏವಮೇಷಾ ಮಹಾಶಾಂತಿಃ ಖ್ಯಾತಾ ನೀರಾಜನೇ ಜನೇ ।
ಯೇಷಾಂ ರಾಷ್ಟ್ರೇ ಪುರೇ ಗ್ರಾಮೇ ಕ್ರಿಯತೆ ಪಾಂಡುನಂದನ ॥೪೨॥

ತೇಷಾಂ ರೋಗಾಃ ಕ್ಷಯಂ ಯಾಂತಿ ಸುಭಿಕ್ಷಂ ವರ್ಧತೆ ತದಾ ।
ಶಾಂತಿರ್ನೀರಾಜನಾಲ್ಲೋಕೇ ಸರ್ವಾನ್ರೋಗಾನ್ವ್ಯಪೋಹತಿ ॥ ೪೩ ॥

ಲೋಕಾನಾವರ್ಧಯಿತ್ವಾ ತು ಅಜಪಾಲನೃಪೋ ಯಥಾ ।
ಏಷಾಂ ರೋಗಾದಿಪೀಡಾಸು ಜಂತೂನಾಂ ಹಿತಮಿಚ್ಛತಾ ॥ ೪೪ ॥

---

೪೦. ಅನಂತರ ಸಮಗ್ರ ಸ್ತ್ರೀಲಕ್ಷಣಗಳಿಂದ ಕೂಡಿದ ಸುಂದರಿಯಾದ ವೇಶ್ಯೆಯಾಗಲಿ, ಅಥವಾ ಕುಲಸ್ತ್ರೀಯಾಗಲಿ ಆ ಆಸನಾರೂಢನಾದ ರಾಜನ ಶಿರಸ್ಸಿನಲ್ಲಿ ಮರದ ಪಾತ್ರೆಯಿಂದ ನೀರಾಜನವನ್ನು ಬೆಳಗಬೇಕು.

೪೧. ಆಗ ಬ್ರಾಹ್ಮಣೋತ್ತಮರೂ ಮತ್ತು ರಾಜ ಬಂಧುಜನರೂ "ಶಾಂತಿರಸ್ತು", "ಸಮೃದ್ಧಿರಸ್ತು" ಎಂದು ಆಶೀರ್ವಾದ ಮಾಡಬೇಕು. ಅನಂತರ ಆನೆ, ಕುದುರೆ, ರಥ ಮೊದಲಾದುವುಗಳಿಗೂ ನೀರಾಜನವನ್ನು ಮಾಡಬೇಕು.

೪೨. ಅಯ್ಯಾ ಪಾಂಡುಪುತ್ರನೇ ! ಈರೀತಿ ಈ ನೀರಾಜನವೆಂಬ ಮಹಾ ಶಾಂತಿಯು ಜನರಲ್ಲಿ ಪ್ರಸಿದ್ಧಿಗೆ ಬಂದಿದೆ. ಈ ಶಾಂತಿಯು ಯಾರ ರಾಷ್ಟ್ರ, ನಗರ, ಗ್ರಾಮ ಇವುಗಳಲ್ಲಿ ನಡೆಯುವುದೋ

೪೩. ಅವರ ಆ ರಾಷ್ಟ್ರಾದಿಗಳಲ್ಲಿ ಸಮಸ್ತ ರೋಗಗಳೂ ನಾಶವಾಗುವುವು. ಅಲ್ಲದೆ ಸುಭಿಕ್ಷವೂ ಉಂಟಾಗುತ್ತದೆ. ನೀರಾಜನ ನಾಮಧೇಯಕವಾದ ಈ ಶಾಂತಿಯು ಸರ್ವರೋಗವನ್ನೂ ನಾಶಮಾಡುತ್ತದೆ.

೪೪. ಈ ಶಾಂತಿಯು ರೋಗ ನಾಶಮಾಡಿ ಜನರಿಗೆ ವೃದ್ಧಿದಾಯಕವಾಗುವುದು. ಈ ವಿಷಯದಲ್ಲಿ ಅಜಪಾಲನೃಪನೇ ಉದಾಹರಣೆಯಾಗಿದ್ದಾನೆ.

ವರ್ಷೇವರ್ಷೇ ಪ್ರಯೋಕ್ತವ್ಯಾ ಶಾಂತಿರ್ನೀರಾಜನಾ ಇತಿ || ೪೫ ||

ನೀರಾಜಯಂತಿ ನವಮೇಘನಿಭಂ ಹರಿಂ ಯೇ |
ಗೋಬ್ರಾಹ್ಮಣಾನ್ರಥಗವಾಂಶ್ಚ ನರೇಶಚಿಹ್ನಾನ್ |
ತೇ ಸರ್ವರೋಗರಹಿತಾಶ್ಚ ನುತಾ ನರೇಂದ್ರೈಃ |
ಇಂದ್ರಪ್ರಭಾ ಭುವಿ ಭವಂತ್ಯಜಪಾಲವಾಕ್ಯಾತ್ || ೪೬ ||

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ನೀರಾಜನದ್ವಾದಶೀ ವ್ರತವರ್ಣನಂ ನಾಮೈಕಸಪ್ತತಿತಮೋಽಧ್ಯಾಯಃ



---

೪೫. ಪ್ರಾಣಿಗಳು ರೋಗಾದಿಗಳಿಂದ ಪೀಡಿತವಾಗಿರುವಾಗ ಅವುಗಳಿಗೆ ಹಿತವಾಗಬೇಕೆಂದು ಯಾರು ಇಚ್ಛಿಸುವರೋ ಅವರು ಈ ನೀರಾಜನವೆಂಬ ಮಹಾಶಾಂತಿಯನ್ನು ವರ್ಷೇ ವರ್ಷೇ ಆಚರಿಸಬೇಕು.

೪೬. ಹೊಸದಾದ ನೀಲಮೇಘದಂತೆ ಶೋಭಿಸುವ ಶ್ರೀಹರಿಗೆ ನೀರಾಜನ ಮಾಡಿ ಗೋವುಗಳಿಗೂ, ಬ್ರಾಹ್ಮಣರಿಗೂ, ರಾಜಚಿಹ್ನೆಗಳಾದ ರಥ, ಗಜ, ಇತ್ಯಾದಿಗಳಿಗೂ, ನೀರಾಜನವನ್ನು ಯಾರು ಮಾಡುವರೋ ಅಂಥವರು ಸರ್ವ ರೋಗರಹಿತರೂ, ನರೇಂದ್ರ ಸ್ತೋತ್ರಪಾತ್ರರೂ, ಈ ಭೂಲೋಕದಲ್ಲಿ ದೇವೇಂದ್ರ ಸಮಾನ ತೇಜಸ್ವಿಗಳೂ, ಆಗುತ್ತಾರೆಂದು ಅಜಪಾಲನ ವಿಚಾರದಿಂದ ತಿಳಿಯಬೇಕು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ನೀರಾಜನ ದ್ವಾದಶೀ ವ್ರತವರ್ಣನೆಯೆಂಬ ಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ದ್ವಿಸಪ್ತತಿತಮೋಽಧ್ಯಾಯಃ

---

|| ಯುಧಿಷ್ಠಿರ ಉವಾಚ ||

ಯದೇತದತುಲಂ ಪುಣ್ಯಂ ವ್ರತಾನಾಮುತ್ತಮಂ ವ್ರತಂ |
ಕರ್ತವ್ಯಂ ಕಾರ್ತಿಕೇ ಮಾಸಿ ಪ್ರಯತ್ನಾದ್ಭೀಷ್ಮಪಂಚಕಂ || ೧ ||

ವಿಧಾನಂ ಕೀದೃಶಂ ತಸ್ಯ ಫಲಂ ಚ ಯದುಸತ್ತಮ |
ಕಥಯಸ್ವ ಪ್ರಸಾದಾನ್ಮೇ ಮುನೀನಾಂ ಹಿತಮಿಚ್ಛತಾಂ || ೨ ||

|| ಶ್ರೀ ಕೃಷ್ಣ ಉವಾಚ ||

ಪ್ರವಕ್ಷ್ಯಾಮಿ ವ್ರತಂ ಪುಣ್ಯಂ ವ್ರತಾನಾಮುತ್ತಮಂ ವ್ರತಂ |
ಯಥಾವಿಧಿ ಚ ಕರ್ತವ್ಯಂ ಫಲಂ ಚಾಸ್ಯ ಯಥೋದಿತಂ || ೩ ||

---

### ಎಪ್ಪತ್ತೆರಡನೆಯ ಅಧ್ಯಾಯ

೧-೨. ಯುಧಿಷ್ಠಿರನು ಹೇಳುತ್ತಾನೆ—ಅಯ್ಯಾ ಯಾದವೋತ್ತಮನೇ! ಅತುಲಪುಣ್ಯಪ್ರದವೂ, ಕಾರ್ತಿಕಮಾಸದಲ್ಲಿ ಅತಿ ಪ್ರಯತ್ನಪೂರ್ವಕವಾಗಿ ಆಚರಿಸತಕ್ಕ ಉತ್ತಮೋತ್ತಮವ್ರತವೂ, ಹಿತಾಭಿಲಾಷೆಯಿಂದ ಪೂರ್ವದಲ್ಲಿ ಋಷಿಗಳಿಂದ ಆಚರಿಸಲ್ಪಟ್ಟಿದೂ ಆದ ವ್ರತವೊಂದು ಭೀಷ್ಮಪಂಚಕವೆಂಬ ಹೆಸರಿನಿಂದ ಕೂಡಿದೆ ಎಂದು ಕೇಳಿದ್ದೇನೆ ಆ ವ್ರತದ ವಿಧಾನವೇನು? ಅದರಿಂದ ಯಾವ ಫಲವು ಲಭಿಸುವುದು? ಎಂಬುದನ್ನು ಅನುಗ್ರಹಿಸಿ ನನಗೆ ಉಪದೇಶಿಸು ಎಂದನು.

೩. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ! ಎಲ್ಲಾ ವ್ರತಗಳಲ್ಲಿ ಉತ್ತಮವ್ರತವೂ, ಪುಣ್ಯಪ್ರದವೂ, ಶಾಸ್ತ್ರರೀತಿಯಲ್ಲಿ ಆಚರಿಸತಕ್ಕುದೂ, ಯಥೋಕ್ತ ಫಲದಾಯಕವೂ ಆಗಿರುವ, ಭೀಷ್ಮಪಂಚಕವ್ರತ ವಿಚಾರವನ್ನು ಹೇಳುತ್ತೇನೆ ಶ್ರವಣಮಾಡು.

ಮಯಾಪಿ ಭೃಗವೇ ಪ್ರೋಕ್ತಂ ಭೃಗುಶ್ಚೋಶನಸೇ ದದೌ ।
ಉಶನಾಪಿ ಹಿ ವಿಪ್ರೇಭ್ಯಃ ಪ್ರಹ್ಲಾದಾಯ ಚ ಧೀಮತೇ ॥ ೪ ॥

ತೇಜಸ್ವಿನಾಂ ಯಥಾ ವಹ್ನಿಃ ಪವನಃ ಶೀಘ್ರಗಾಮಿನಾಮ್ ।
ವಿಪ್ರೋ ಯಥಾ ಚ ಪೂಜ್ಯಾನಾಂ ದಾನಾನಾಂ ಕಾಂಚನಂ ಯಥಾ ॥೫॥

ಭೂಲೋಕಃ ಸರ್ವಲೋಕಾನಾಂ ತೀರ್ಥಾನಾಂ ಜಾಹ್ನವೀ ಯಥಾ ।
ಯಥಾಶ್ವಮೇಧೋ ಯಜ್ಞಾನಾಂ ಮಥುರಾ ಮುಕ್ತಿಕಾಂಕ್ಷಿಣಾಂ॥ ೬ ॥

ವೇದೋ ಯಥೈವ ಶಾಸ್ತ್ರಾಣಾಂ ದೇವಾನಾಮಚ್ಯುತೋ ಯಥಾ ।
ತಥಾ ಸರ್ವವ್ರತಾನಾಂ ತು ಪರೋಕ್ತಂ ಭೀಷ್ಮಪಂಚಕಂ ॥ ೭ ॥

---

೪. ಹಿಂದೆ ನಾನು ಈ ವ್ರತವನ್ನು ಭೃಗುಮಹರ್ಷಿಗೆ ಹೇಳಿದೆನು. ಆ ಭೃಗುವು ಉಶನಸಮುನಿಗೆ ಉಪದೇಶಿಸಿದನು. ಉಶನಸನು ಬ್ರಾಹ್ಮಣರಿಗೂ ಮತ್ತು ಬುದ್ಧಿಶಾಲಿಯಾದ ಪ್ರಹ್ಲಾದನಿಗೂ ಉಪದೇಶಮಾಡಿದನು.

೫. ತೇಜಸ್ವಿಗಳಲ್ಲಿ ಹೇಗೆ ಅಗ್ನಿಯು ಉತ್ತಮನೋ, ಶೀಘ್ರಗಾಮಿಗಳಲ್ಲಿ ಹೇಗೆ ವಾಯುವು ಹೆಸರಾಂತವನೆನಿಸಿಕೊಂಡಿರುವನೋ, ಪೂಜ್ಯರ ನಡುವೆ ಬ್ರಾಹ್ಮಣನು ಹೇಗೆ ಪರಮಪೂಜ್ಯನೋ, ದಾನಗಳಲ್ಲಿ ಸುವರ್ಣದಾನವು ಯಾವ ರೀತಿ ಅತಿಶ್ರೇಷ್ಠವೋ,

೬. ಸರ್ವಲೋಕಗಳಲ್ಲಿ ಈ ಭೂಲೋಕವು ಹೇಗೆ ಅತ್ಯುತ್ತಮವೋ. ತೀರ್ಥಗಳಲ್ಲಿ ಹೇಗೆ ಗಂಗೆಯು ಪರಮಪಾವನವೋ, ಯಜ್ಞಗಳಲ್ಲಿ ಹೇಗೆ ಅಶ್ವಮೇಧಯಜ್ಞವು ಅತ್ಯುತ್ತಮವೋ, ಮುಕ್ತ್ಯಭಿಲಾಷಿಗಳಿಗೆ ಹೇಗೆ ಮಥುರಾ ಕ್ಷೇತ್ರವಾಸವು ಉತ್ತಮವೋ,

೭. ಸರ್ವಶಾಸ್ತ್ರಗಳಲ್ಲಿ ವೇದವು ಹೇಗೆ ಉತ್ತಮವೋ, ದೇವತೆಗಳಲ್ಲಿ ಅಚ್ಯುತನು ಹೇಗೆ ದೇವೋತ್ತಮನೋ, ಹಾಗೆಯೇ ಸರ್ವವ್ರತಗಳಲ್ಲಿ ಈ ಭೀಷ್ಮ ಪಂಚಕವ್ರತವು ಉತ್ತಮವ್ರತವೆನಿಸಿಕೊಂಡಿದೆ.

ದುಷ್ಕರಂ ಭೀಷ್ಮಮಿತ್ಯಾಹುರ್ನ ಶಕ್ಯಂ ತದಿಹೋಚ್ಯತೇ ।
ಯಸ್ತತ್ಕರೋತಿ ರಾಜೇಂದ್ರ ತೇನ ಸರ್ವಂ ಕೃತಂ ಭವೇತ್ ॥ ೮ ॥

ವಸಿಷ್ಠಭೃಗುಭರ್ಗಾದ್ಯೈಶ್ಚೀರ್ಣಂ ಕೃತಯುಗಾದಿಷು ।
ನಾಭಾಗಾಂಗಾಂಬರೀಷಾದ್ಯೈಶ್ಚೀರ್ಣಂ ತ್ರೇತಾಯುಗಾದಿಷು ॥ ೯ ॥

ಸೀರಭದ್ರಾದಿಭಿರ್ವೈಶ್ಯೈಃ ಶೂದ್ರೈರನ್ಯೈಃ ಕಲೌ ಯುಗೇ ।
ದಿನಾನಿ ಪಂಚ ಪೂಜ್ಯಾನಿ ಚೀರ್ಣಮೇತನ್ಮಹಾವ್ರತಂ ॥ ೧೦ ॥

ಬ್ರಾಹ್ಮಣೈರ್ಬ್ರಹ್ಮಚರ್ಯೇಣ ಜಪಹೋಮಕ್ರಿಯಾದಿಭಿಃ ।
ಕ್ಷತ್ರಿಯೈಶ್ಚ ತಥಾ ಶಕ್ತ್ಯಾ ಶೌಚವ್ರತಪರಾಯಣೈಃ ॥ ೧೧ ॥

---

೮. ಅಯ್ಯಾ ರಾಜೇಂದ್ರನೇ ! ಯಾವುದು ಲೋಕದಲ್ಲಿ ಮಾಡುವುದಕ್ಕೆ ಕಷ್ಟಸಾಧ್ಯವಾಗಿರುವುದೋ ಅಂತಹ ಕರ್ಮವನ್ನು "ದುಷ್ಕರ", "ಭೀಷ್ಮ" ಇತ್ಯಾದಿ ನಾಮಗಳಿಂದ ವ್ಯವಹರಿಸುವರು. ಆದುದರಿಂದ ಅಂತಹ ದುಸ್ಸಾಧ್ಯವಾದ ಈ ಭೀಷ್ಮಪಂಚಕ ವ್ರತವನ್ನು ಸಾಂಗವಾಗಿ ಆಚರಿಸಿದ ಪುರುಷನು ಎಲ್ಲವನ್ನೂ ಸಾಧಿಸಿದ ಹಾಗೆಯೇ ಆಗುವುದು.

೯. ಕೃತ ತ್ರೇತಾದಿಯುಗಗಳಲ್ಲಿ ವಸಿಷ್ಠ, ಭೃಗು, ಭರ್ಗಾದಿ ಮಹರ್ಷಿಗಳೂ, ನಾಭಾಗ, ಅಂಗರಾಜ, ಅಂಬರೀಷ ಇತ್ಯಾದಿ ರಾಜರುಗಳೂ ಈ ಮಹಾವ್ರತವನ್ನು ಮಾಡಿರುತ್ತಾರೆ.

೧೦. ಅಲ್ಲದೆ ಸೀರಭದ್ರಾದಿ ವೈಶ್ಯರೂ, ಮತ್ತು ಇತರ ಶೂದ್ರರೂ, ಕಲಿಯುಗದಲ್ಲಿ ಪೂಜ್ಯವಾದ ಈ ಮಹಾವ್ರತವನ್ನು ಐದುದಿನಗಳಲ್ಲಿ ಆಚರಿಸಿರುತ್ತಾರೆ.

೧೧. ಜಪ, ಹೋಮ, ನಿತ್ಯಕರ್ಮ ಇವುಗಳನ್ನು ಆಚರಿಸುತ್ತಿರುವ ಬ್ರಾಹ್ಮಣರು, ಬ್ರಹ್ಮಚರ್ಯಾಪರಿಪಾಲನ ಪೂರ್ವಕವಾಗಿ, ಇದನ್ನು ಆಚರಿಸಬೇಕು. ಹಾಗೆಯೇ ಕ್ಷತ್ರಿಯರೂ ಶೌಚನಿಯಮಪರಾಯಣರಾಗಿ ಈ ವ್ರತವನ್ನು ಅನುಷ್ಠಾನ ಮಾಡಬೇಕು.

[illegible]ಃ ಪರಿಹರ್ತವ್ಯೋ ಬ್ರಹ್ಮಚರ್ಯೇಣ ನಿಷ್ಠಯಾ |
ಮದ್ಯಂ ಮಾಂಸಂ ಪರಿತ್ಯಜ್ಯ ಮೈಥುನಂ ಪಾಪಭಾಷಣಂ ೧೨ ||

ಶಾಕಾಹಾರಪರೈಶ್ಚೈವ ಕೃಷ್ಣಾರ್ಚನಪರೈರ್ನರೈಃ |
ಸ್ತ್ರೀಭಿರ್ವಾ ಭರ್ತೃವಾಕ್ಯೇನ ಕರ್ತವ್ಯಂ ಸುಖವರ್ಧನಂ || ೧೩ ||

ವಿಧವಾಭಿಶ್ಚ ಕರ್ತವ್ಯಂ ಪುತ್ರಪೌತ್ರಾದಿವೃದ್ಧಯೇ |
ಸರ್ವಕಾಮಸಮೃದ್ಧ್ಯರ್ಥಂ ಮೋಕ್ಷಾರ್ಥಮಪಿ ಪಾಂಡವ || ೧೪ ||

ನಿತ್ಯಂ ಸ್ನಾನೇನ ದಾನೇನ ಕಾರ್ತಿಕೀ ಯಾವದೇವ ತು |
ಪ್ರಾತಃ ಸ್ನಾತ್ವಾ ವಿಧಾನೇನ ಮಧ್ಯಾಹ್ನೇ ಚ ತಥಾ ವ್ರತೀ || ೧೫ ||

---

೧೨. ಈ ವ್ರತಾನುಷ್ಠಾತೃವು ಮುಖ್ಯವಾಗಿ ಬ್ರಹ್ಮಚರ್ಯೆಯನ್ನು ರಕ್ಷಿಸಿಕೊಂಡಿರಬೇಕು. ಇತರರಿಗೆ ಮನೋವ್ಯಥೆಯಾಗುವ ರೀತಿ ಯಾವುದನ್ನೂ ಮಾಡಬಾರದು. ಮದ್ಯ, ಮಾಂಸ, ಸ್ತ್ರೀಸಂಗ, ನಿಷ್ಠುರವಚನ ಇವುಗಳನ್ನು ಪರಿತ್ಯಾಗ ಮಾಡಬೇಕು.

೧೩. ಸುಖಾಭಿವೃದ್ಧಿಗೆ ಕಾರಣವಾದ ಈ ವ್ರತವನ್ನು ಕೃಷ್ಣಪೂಜಾ ನಿರತರಾಗಿಯೂ, ಶಾಕಾಹಾರಿಗಳಾಗಿಯೂ ಇರುವ ಗಂಡಸರೂ ತಮ್ಮ ಪತಿಯ ಅಪ್ಪಣೆಯನ್ನು ಪಡೆದುಕೊಂಡ ಹೆಂಗಸರೂ ಸಹ ಆಚರಿಸಬಹುದು.

೧೪. ಅಯ್ಯಾ ಪಾಂಡುಪುತ್ರನೇ ! ವಿಧವೆಯರೂ ಸಹ ಈ ವ್ರತವನ್ನು ಆಚರಿಸಬಹುದು. ಈ ವ್ರತವು ಪುತ್ರಪೌತ್ರಾದಿ ಸಂತಾನಫಲ ಪ್ರಾಪ್ತಿಗಾಗಿಯೂ, ಸರ್ವಕಾಮ ಸಮೃದ್ಧಿಗಾಗಿಯೂ, ಮೋಕ್ಷಪ್ರಾಪ್ತಿಗಾಗಿಯೂ ಆಚರಿಸಲ್ಪಡ ತಕ್ಕದ್ದಾಗಿದೆ.

೧೫. ಕಾರ್ತಿಕಮಾಸವು ಪ್ರಾಪ್ತವಾದಾಗ ಆ ಐದುದಿನಗಳಲ್ಲಿ ನಿತ್ಯವೂ ಸ್ನಾನ ಮತ್ತು ದಾನಗಳನ್ನು ಆಚರಿಸಿ ಈ ವ್ರತವನ್ನು ಮಾಡಬೇಕು. ಈ ವ್ರತಾನುಷ್ಠಾತೃವು ಪ್ರಾತಃಸ್ನಾನ ಸಂಧ್ಯಾದಿಗಳನ್ನು ಮಾಡಿ ಹಾಗಯೇ ಮಧ್ಯಾಹ್ನದಲ್ಲೂ,

ನದ್ಯಾಂ ನಿರ್ಝರಗರ್ತೇ ವಾ ಸಮಾಲಭ್ಯ ಚ ಗೋಮಯಂ ।
ಯವವ್ರೀಹಿತಿಲೈಃ ಸಮ್ಯಕ್ತರ್ಪಯೇಚ್ಚ ಪ್ರಯತ್ನತಃ ॥ ೧೬ ॥

ದೇವಾನೃಷೀನ್ಪಿತೄಂಶ್ಚೈವ ತತೋನ್ಯಾನ್ಕಾಮಚಾರಿಣಃ ।
ಸ್ನಾನಂ ಮೌನಂ ನರಃ ಕೃತ್ವಾ ಧೌತವಾಸಾ ದೃಢವ್ರತಃ ॥ ೧೭ ॥

ತತೋಽನುಪೂಜಯೇದ್ದೇವಂ ಸರ್ವಪಾಪಹರಂ ಹರಿಂ ।
ಸ್ನಾಪಯೇಚ್ಚಾಚ್ಯುತಂ ಭಕ್ತ್ಯಾ ಮಧುಕ್ಷೀರಘೃತೇನ ಚ ॥ ೧೮ ॥

ತತ್ರೈವ ಪಂಚಗವ್ಯೇನ ಗಂಧಚಂದನವಾರಿಣಾ ।
ಚಂದನೇನ ಸುಗಂಧೇನ ಕುಂಕುಮೇನಾಥ ಕೇಶವಂ ॥ ೧೯ ॥

---

೧೬. ನದಿ, ಗಿರಿನಿರ್ಝರ (ಪರ್ವತದ ಜಲಪಾತ) ಕೊಳ, ಇವುಗಳಿಗೆ ಹೋಗಿ ಶರೀರಕ್ಕೆ ಗೋಮಯವನ್ನು ಲೇಪಿಸಿಕೊಂಡು ವಿಧಿಪೂರ್ವಕವಾಗಿ ಸ್ನಾನಮಾಡಬೇಕು. ಅನಂತರ ಒಗೆದು ಮಡಿಮಾಡಿರುವ ವಸ್ತ್ರವನ್ನುಟ್ಟು ಮೌನವ್ರತಾವಲಂಬಿಯೂ ದೃಢವಾದ ನಿಯಮಯುತನೂ ಆಗಿ, ಯವ, ವ್ರೀಹಿ, ತಿಲ ಇವುಗಳನ್ನು ಸಿದ್ಧಪಡಿಸಿಕೊಂಡು.

೧೭. ದೇವ, ಋಷಿ, ಪಿತೃಗಳಿಗೂ; ಇಷ್ಟಬಂದಕಡೆ ಸಂಚರಿಸಬಲ್ಲ ಮಹಾಯೋಗಿಗಳಿಗೂ ಚೆನ್ನಾಗಿ ತೃಪ್ತಿಪಡಿಸಬೇಕು.

೧೮. ಅನಂತರ ಸರ್ವಪಾಪನಾಶಕನಾದ ಶ್ರೀಹರಿಯನ್ನು ಭಕ್ತಿಪೂರ್ವಕವಾಗಿ ಪೂಜೆಮಾಡತೊಡಗಿ ಶ್ರೀ ಮೂರ್ತಿಗೆ ತುಪ್ಪ, ಹಾಲು, ಜೇನುತುಪ್ಪ ಇವುಗಳನ್ನು ಅಭಿಷೇಕ ಮಾಡಬೇಕು.

೧೯. ಬಳಿಕ ಪಂಚಗವ್ಯ, ಗಂಧೋದಕ, ಚಂದನೋದಕ ಇವುಗಳಿಂದಲೂ ಅಭಿಷೇಕ ಮಾಡಬೇಕು. ಅನಂತರ ಗರುಡಧ್ವಜನಾದ ಶ್ರೀಮೂರ್ತಿಯನ್ನು ಮಡಿವಸ್ತ್ರದಲ್ಲಿ ಒರಸಿ,

ಕರ್ಪೂರೋಶೀರಮಿಶ್ರೇಣ ಲೇಪಯೇದ್ಗರುಡಧ್ವಜಂ ।
ಅರ್ಚಯೇದ್ರುಚಿರೈಃ ಪುಷ್ಪೈರ್ಗಂಧಧೂಪಸಮನ್ವಿತೈಃ　　॥ ೨೦ ॥

ಗುಗ್ಗುಲುಂ ಘೃತಸಂಯುಕ್ತಂ ದಹೇತ್ಕೃಷ್ಣಾಯ ಭಕ್ತಿತಃ ।
ದೀಪಕಂ ಚ ದಿವಾರಾತ್ರೌ ದದ್ಯಾತ್ಪಂಚದಿನಾನಿ ತು　　॥ ೨೧ ॥

ನೈವೇದ್ಯಂ ದೇವದೇವಸ್ಯ ಪರಮಾನ್ನಂ ನಿವೇದಯೇತ್ ।
ಓಂ ನಮೋ ವಾಸುದೇವಾಯೇತಿ ಜಪೇದಷ್ಟೋತ್ತರಂ ಶತಂ　　॥ ೨೨ ॥

ಜುಹುಯಾಚ್ಚ ಘೃತಾಕ್ತಾಂಶ್ಚ ತಿಲವ್ರೀಹೀಂಸ್ತತೋ ವ್ರತೀ ।
ಷಡಕ್ಷರೇಣ ಮಂತ್ರೇಣ ಸ್ವಾಹಾಕಾರಾನ್ವಿತೇನ ಚ　　॥ ೨೩ ॥

---

೨೦. ಪಚ್ಚಕರ್ಪೂರ, ಲಾಮಂಚ ಇವುಗಳನ್ನು ಹಾಕಿ ಸುಗಂಧವುಳ್ಳ ಚಂದನ, ಕುಂಕುಮ ಇವುಗಳನ್ನು ಲೇಪನ ಮಾಡಬೇಕು. ಹಾಗೆಯೇ ಸುವಾಸನೆಯುಳ್ಳ ಮನೋಹರವಾದ ಪುಷ್ಪಗಳು, ಧೂಪ, ಇತ್ಯಾದಿಗಳಿಂದ ಅರ್ಚನೆ ಮಾಡಬೇಕು.

೨೧. ಶ್ರೀಹರಿಯ ಇದಿರಿಗೆ ಭಕ್ತಿಪೂರ್ವಕವಾಗಿ ಗುಗ್ಗುಲ ಧೂಪವನ್ನು ಹತ್ತಿಸಿ, ಆ ಭೀಷ್ಮಪಂಚಕ ವ್ರತವನ್ನಾಚರಿಸುವ ಐದುದಿನಗಳಲ್ಲಿ ಹಗಲೂ ರಾತ್ರಿ ತುಪ್ಪದ ನಂದಾದೀಪವನ್ನು ಹತ್ತಿಸಿರಬೇಕು.

೨೨. ದೇವದೇವನಾದ ಶ್ರೀಹರಿಗೆ ಪಾಯಸವನ್ನು ನೈವೇದ್ಯವಾಗಿ ಅರ್ಪಿಸಬೇಕು. ಬಳಿಕ " ಓಂ ನಮೋ ವಾಸುದೇವಾಯ " ಎಂಬದಾಗಿ ನೂರೆಂಟು ಸಲ ಜಪವನ್ನು ಮಾಡಬೇಕು.

೨೩. ಅನಂತರ ಈ ವ್ರತಾನುಷ್ಠಾತೃವು ಘೃತಮಿಶ್ರವಾದ ತಿಲ, ವ್ರೀಹಿಗಳ ಹವಿಸ್ಸಿನಿಂದ, ಷಡಕ್ಷರಮಂತ್ರಾಂತ್ಯದಲ್ಲಿ ಸ್ವಾಹಾಶಬ್ದವನ್ನೂ ಸೇರಿಸಿ ಹೋಮ ಮಾಡಬೇಕು.

ಉಪಾಸ್ಯ ಪಶ್ಚಿಮಾಂ ಸಂಧ್ಯಾಂ ಪ್ರಣಮ್ಯ ಗರುಡಧ್ವಜಂ ।
ಜಪಿತ್ವಾ ಪೂರ್ವವನ್ಮಂತ್ರಂ ಕ್ಷಿತಿಶಾಯೀ ಭವೇನ್ನರಃ ॥ ೨೪ ॥

ಸರ್ವಮೇತದ್ವಿಧಾನಂ ಚ ಕಾರ್ಯಂ ಪಂಚದಿನೇಷು ಹಿ ।
ಸಂವಿಶೇತ್ಕಂಬಲೇ ಚಾಸ್ಮಿನ್ಪದಪರ್ವಂ ಶೃಣುಷ್ವ ಮೇ ॥ ೨೫ ॥

ಪ್ರಥಮೇಽಹ್ನಿ ಹರೇಃ ಪಾದೌ ಪೂಜಯೇತ್ಕಮಲೈರ್ನರಃ ।
ದ್ವಿತೀಯೇ ಬಿಲ್ವಪತ್ರೇಣ ಜಾನುದೇಶಂ ಸಮರ್ಚಯೇತ್ ॥ ೨೬ ॥

ಪೂಜಯೇಚ್ಚ ತೃತೀಯೇಽಹ್ನಿ ನಾಭಿಂ ಭೃಂಗರಸೇನ ಚ ।
ಮಧ್ಯೇ ಬಿಲ್ವಜಯಾಭಿಶ್ಚ ತತಃ ಸ್ಕಂಧೌ ಪ್ರಪೂಜಯೇತ್ ॥ ೨೭ ॥

---

೨೪. ಅನಂತರ ಸಾಯಂಸಂಧ್ಯೋಪಾಸನೆಯನ್ನು ಮಾಡಿ, ಗರುಡಧ್ವಜನಾದ ಶ್ರೀ ಹರಿಯನ್ನು ವಂದಿಸಿ, ಹಿಂದೆ ಹೇಳಿದಂತೆ "ಓಂ ನಮೋ ವಾಸುದೇವಾಯ" ಎಂದು ನೂರೆಂಟುಸಲ ಜಪವನ್ನಾಚರಿಸಿ, ರಾತ್ರಿಯಲ್ಲಿ ಭೂಮಿಯಲ್ಲಿ ಶಯನಮಾಡಬೇಕು.

೨೫. ಐದು ದಿನಗಳೂ ಈ ಕ್ರಮದಲ್ಲಿಯೇ ಎಲ್ಲಾ ಕಾರ್ಯಗಳನ್ನೂ ಮಾಡಬೇಕು. ಈ ವ್ರತದಲ್ಲಿ ದೇವತಾರ್ಚನೆಯ ಕಾಲದಲ್ಲಿ ಕಂಬಲಾಸನದಲ್ಲಿ ಕುಳಿತುಕೊಳ್ಳಬೇಕು. ಪಾದಾದಿ ಶಿರಃಪರ್ಯಂತವಾಗಿ ಶ್ರೀ ವಿಷ್ಣುವಿನ ಪೂಜಾ ವಿಧಾನವನ್ನು ಹೇಳುತ್ತೇನೆ ಶ್ರವಣಮಾಡು.

೨೬. ವ್ರತಾನುಷ್ಠಾತೃವು ಕಾರ್ತಿಕಮಾಸದ ಶುಕ್ಲ ಏಕಾದಶಿಯಿಂದ ಆರಂಭಿಸಿ, ಪೂರ್ಣಿಮಾವರೆಗೆ ಐದುದಿನಗಳು ಆಚರಿಸುವ ಈ ಭೀಷ್ಮಪಂಚಕದ ಮೊದಲನೆಯ ದಿನದಲ್ಲಿ, ಶ್ರೀ ಹರಿಯ ಪಾದಗಳನ್ನು ಕಮಲಪುಷ್ಪಗಳಿಂದ ಅರ್ಚಿಸಬೇಕು. ಎರಡನೆಯದಿನ ಬಿಲ್ವಪತ್ರದಿಂದ ಜಾನುಪ್ರದೇಶವನ್ನು (ಮೊಣಕಾಲು) ಪೂಜಿಸಬೇಕು.

೨೭. ಮೂರನೆಯ ದಿನದಲ್ಲಿ ಶ್ರೀ ಹರಿಯ ನಾಭಿಪ್ರದೇಶವನ್ನು ಭೃಂಗಾರ ಪುಷ್ಪದಿಂದ ಪೂಜಿಸಬೇಕು. ನಾಲ್ಕನೆಯ ದಿನದಲ್ಲಿ ಬಿಲ್ವ ನಾಗ ಸಂಪಿಗೆ ಇತ್ಯಾದಿ ಪುಷ್ಪಗಳಿಂದ ಶ್ರೀ ಹರಿಯ ಸ್ಕಂಧಪ್ರದೇಶವನ್ನು ಪೂಜಿಸಬೇಕು.

ತತೋಽನುಪೂಜಯೇಚ್ಛೀರ್ಷಂ ಮಾಲತ್ಯಾ ಕುಸುಮೈರ್ನವೈಃ ।
ಕಾರ್ತಿಕ್ಯಾಂ ದೇವದೇವಸ್ಯ ಭಕ್ತ್ಯಾ ತದ್ಗತಮಾನಸಃ　　॥ ೨೮ ॥

ಅರ್ಚಯಿತ್ವಾ ಹೃಷೀಕೇಶಮೇಕಾದಶ್ಯಾಂ ಸಮಾಹಿತಃ ।
ಸಂಪ್ರಾಶ್ಯ ಗೋಮಯಂ ಸಮ್ಯಕ್ ಮಂತ್ರವತ್ಸಮುಪಾವಸೇತ್ ॥೨೯॥

ಗೋಮೂತ್ರಂ ಮಂತ್ರವತ್ಕೃತ್ವಾ ದ್ವಾದಶ್ಯಾಂ ಪ್ರಾಶಯೇದ್ವ್ರತೀ ।
ಕ್ಷೀರಂ ತತ್ರ ತ್ರಯೋದಶ್ಯಾಂ ಚತುರ್ದಶ್ಯಾಂ ತಥಾ ದಧಿ　　॥ ೩೦ ॥

ಸಂಪ್ರಾಶ್ಯ ಕಾಯಶುದ್ಧ್ಯರ್ಥಂ ಲಂಘಯೇತ ಚತುರ್ದಿನಂ ।
ಪಂಚಮೇ ತು ದಿನೇ ಸ್ನಾತ್ವಾ ವಿಧಿವತ್ಪೂಜ್ಯ ಕೇಶವಂ　　॥ ೩೧ ॥

ಭೋಜಯೇದ್ಬ್ರಾಹ್ಮಣಾನ್ಭಕ್ತ್ಯಾ ತೇಭ್ಯೋ ದದ್ಯಾಚ್ಚ ದಕ್ಷಿಣಾಂ ।
ತಥೋಪದೇಷ್ಟಾರಮಪಿ ಪೂಜಯೇದ್ವಸ್ತ್ರಭೂಷಣೈಃ　　॥ ೩೨ ॥

---

೨೮. ಅನಂತರ ಐದನೆಯ ದಿನದಲ್ಲಿ ಹೊಸದಾದ ಮಲ್ಲಿಗೆಯ ಹೂವುಗಳಿಂದ ಶ್ರೀ ಹರಿಯ ಶಿರಃಪೂಜೆಯನ್ನು ಮಾಡಬೇಕು. ದೇವಾಧಿದೇವನಾದ ಶ್ರೀ ಹರಿಯಲ್ಲೇ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಿ, ಭಕ್ತಿಯಿಂದ ಈರೀತಿ ಪೂಜಿಸಬೇಕು.

೨೯. ಈ ವ್ರತಿಯು ಏಕಾದಶಿಯದಿನ ಚಿತ್ತೈಕಾಗ್ರತೆಯುಳ್ಳವನಾಗಿ ಶ್ರೀ ಹರಿಯ ಪೂಜೆಮಾಡಿದ ಮೇಲೆ ಆದಿನ ಮಂತ್ರಪೂರ್ವಕವಾಗಿ ಗೋಮಯ ಪ್ರಾಶನೆಮಾಡಿ ಉಪವಾಸವನ್ನು ಆಚರಿಸಬೇಕು.

೩೦. ದ್ವಾದಶೀದಿನದಲ್ಲಿ ಪೂಜೆಯಾದ ಮೇಲೆ ಮಂತ್ರಪೂರ್ವಕವಾಗಿ ಗೋಮೂತ್ರ ಪ್ರಾಶನೆಮಾಡಿ ಉಪವಾಸದಿಂದಿರಬೇಕು. ತ್ರಯೋದಶಿದಿನ ಪೂಜೆಯಾದ ಮೇಲೆ ಕ್ಷೀರಪ್ರಾಶನೆ ಮಾಡಬೇಕು. ಹಾಗೆಯೇ ಚತುರ್ದಶಿಯಲ್ಲಿ ದಧಿಪ್ರಾಶನೆಮಾಡಬೇಕು.

೩೧-೩೨. ದೇಹಶುದ್ಧ್ಯರ್ಥವಾಗಿ ಈರೀತಿ ಮೇಲೆ ಹೇಳಿದ ವಸ್ತುಗಳನ್ನು ಸ್ವಲ್ಪ ಪ್ರಾಶನೆಮಾಡಬೇಕೇ ವಿನಾ ನಾಲ್ಕು ದಿನಗಳಲ್ಲೂ ಭೋಜನಮಾಡಬಾರದು. ಐದನೆಯದಿನ ಸ್ನಾನಮಾಡಿ ಶಾಸ್ತ್ರಪ್ರಕಾರವಾಗಿ ಶ್ರೀ ಹರಿಪೂಜೆಯನ್ನು ಮಾಡಿ ಭಕ್ತಿಯಿಂದ ಬ್ರಾಹ್ಮಣರಿಗೆ ಭೋಜನಮಾಡಿಸಿ ಅವರಿಗೆ ದಕ್ಷಿಣೆಯನ್ನು ಕೊಡಬೇಕು. ಹಾಗೆಯೇ ಈ ವ್ರತೋಪದೇಷ್ಟೃವಾದ ಆಚಾರ್ಯನನ್ನೂ ವಸ್ತ್ರಾಭರಣಾದಿಗಳಿಂದ ಪೂಜೆಮಾಡಬೇಕು.

ತತೋ ನಕ್ತಂ ಸಮಶ್ನೀಯಾತ್ಪಂಚಗವ್ಯಪುರಸ್ಸರಂ ।
ಏವಂ ಸಮಾಪಯೇತ್ಸಮ್ಯಗ್ಯಥೋಕ್ತಂ ವ್ರತಮುತ್ತಮಂ ॥ ೩೩ ॥

ಸರ್ವಪಾಪಹರಂ ಪುಣ್ಯಂ ಪ್ರಖ್ಯಾತಂ ಭೀಷ್ಮಪಂಚಕಂ ।
ಮದ್ಯಪೋ ಯಸ್ತ್ಯಜೇನ್ಮದ್ಯಂ ಜನ್ಮನೋ ಮರಣಾಂತಿಕಂ ॥ ೩೪ ॥

ತದ್ಭೀಷ್ಮಪಂಚಕಂ ಕೃತ್ವಾ ಪ್ರಾಪ್ನೋತ್ಯಭ್ಯಧಿಕಂ ಫಲಂ ।
ಬ್ರಹ್ಮಚರ್ಯಂ ನರಶ್ಚೀತ್ವಾ ಸುಘೋರಂ ನೈಷ್ಠಿಕಂ ವ್ರತಂ ॥ ೩೫ ॥

ಯತ್ಪ್ರಾಪ್ನೋತಿ ಮಹತ್ಪುಣ್ಯಂ ತತ್ಕೃತ್ವಾ ಭೀಷ್ಮಪಂಚಕಂ ।
ಗಾತ್ರಾಭ್ಯಂಗಂ ಶಿರೋಽಭ್ಯಂಗಂ ಮಧು ಮಾಂಸಂ ಚ ಮೈಥುನಂ ॥

---

೩೩. ಅನಂತರ ಐದನೆಯದಿನ ರಾತ್ರಿ ಪಂಚಗವ್ಯ ಪ್ರಾಶನಪುರಸ್ಸರವಾಗಿ ಭೋಜನಮಾಡಬೇಕು. ಉತ್ತಮವಾದ ಭೀಷ್ಮಪಂಚಕ ವ್ರತವನ್ನು ಈ ಕ್ರಮದಲ್ಲಿ ಸಮಾಪ್ತಿಗೊಳಿಸಬೇಕು.

೩೪. ಈ ಭೀಷ್ಮಪಂಚಕವ್ರತವು ಸರ್ವಪಾಪನಾಶಕವೂ ಪುಣ್ಯಪ್ರದವೂ ಲೋಕವಿಖ್ಯಾತವೂ ಆಗಿದೆ. ಮದ್ಯಪಾನಮಾಡುದ ಜನಾಂಗದಲ್ಲಿ ಹುಟ್ಟಿದವನು ತನ್ನ ಜನನದಿಂದ ಆರಂಭಿಸಿ ಮರಣದಪರ್ಯಂತ ಮದ್ಯಪಾನವನ್ನು ಪರಿತ್ಯಾಗ ಮಾಡುವುದು ಬಲು ಅತಿಶಯ.

೩೫. ಅಂಥವನಿಗೆ ಯಾವಫಲ ಪ್ರಾಪ್ತವಾಗುವುದೋ, ಆ ಫಲಕ್ಕೂ ಅಧಿಕವಾದ ಫಲವು ಈ ಭೀಷ್ಮಪಂಚಕ ವ್ರತವನ್ನು ಆಚರಿಸಿದವನಿಗೆ ಲಭಿಸುತ್ತದೆ ಅಲ್ಲದೆ ಆಮರಣಾಂತವಾಗಿ ಘೋರವಾದ ನೈಷ್ಠಿಕಬ್ರಹ್ಮಚರ್ಯ ವ್ರತವನ್ನು ಆಚರಿಸಿದ ಮನುಷ್ಯನು,

೩೬. ಯಾವ ಮಹಾಪುಣ್ಯವನ್ನು ಹೊಂದುತ್ತಾನೋ, ಅಂತಹ ಪುಣ್ಯಫಲವನ್ನು ಈ ಭೀಷ್ಮಪಂಚಕ ವ್ರತವನ್ನು ಆಚರಿಸಿದವನೂ ಪಡೆಯುತ್ತಾನೆ. ಹಾಗೆಯೇ ಶರೀರಾಭ್ಯಂಗ, ಶಿರೋಭ್ಯಂಗ, ಮಧು, ಮಾಂಸ, ಸ್ತ್ರೀಸಂಗ, ಇವುಗಳನ್ನು;

ಬ್ರಹ್ಮಲೋಕಮವಾಪ್ನೋತಿ ತ್ವೇಕತ್ವೈಕಂ ಭೀಷ್ಮಪಂಚಕಂ ।
ಸಂವತ್ಸರೇಣ ಯತ್ಪುಣ್ಯಂ ಕಾರ್ತಿಕೇನ ಚ ತದ್ಭವೇತ್ ॥ ೩೭ ॥

ಯತ್ಫಲಂ ಕಾರ್ತಿಕೇನೋಕ್ತಂ ಭವೇತ್ತದ್ಭೀಷ್ಮಪಂಚಕೇ ।
ವ್ರತಮೇತತ್ಸುರೈಃ ಸಿದ್ಧೈಃ ಕಿನ್ನರೈರ್ನಾಗಗುಹ್ಯಕೈಃ ॥ ೩೮ ॥

ಫಲಂ ಸಮೀಹಿತಂ ಪ್ರಾಪ್ತುಂ ಕೃತ್ವಾಭ್ಯರ್ಚ್ಯ ಜನಾರ್ದನಂ ।
ಪಾಪಸ್ಯ ಪ್ರತಿಮಾ ಕಾರ್ಯಾ ರೌದ್ರವಕ್ತ್ರಾತಿಭೀಷಣಾ ॥ ೩೯ ॥

ಖಡ್ಗಹಸ್ತಾತಿವಿಕೃತಾ ಸರ್ವಲೋಕಮಯೀ ನೃಪ ।
ತಿಲಪ್ರಸ್ಥೋಪರಿ ಸ್ಥಾಪ್ಯಾ ಕೃಷ್ಣವಸ್ತ್ರಾಭಿವೇಷ್ಟಿತಾ ॥ ೪೦ ॥

---

೩೭. ಜನನ ಮೊದಲ್ಗೊಂಡು ಮರಣಾಂತ್ಯವಾಗಿ ಪರಿತ್ಯಾಗಮಾಡಿದವನು ಹೇಗೆ ಬ್ರಹ್ಮಲೋಕಕ್ಕೆ ಹೋಗುತ್ತಾನೋ, ಹಾಗೆಯೇ ಈ ಒಂದು ಭೀಷ್ಮಪಂಚಕ ವ್ರತವನ್ನು ಆಚರಿಸಿದವನು ಬ್ರಹ್ಮಲೋಕವನ್ನು ಪಡೆಯುತ್ತಾನೆ. ಒಂದು ವರ್ಷವೂ ಇತರ ವ್ರತಮಾಡಿ ಎಷ್ಟು ಪುಣ್ಯವನ್ನು ಸಂಪಾದಿಸಬಹುದೋ ಅಷ್ಟು ಪುಣ್ಯವು ಕಾರ್ತೀಕಮಾಸದಲ್ಲಿ ಈ ಭೀಷ್ಮಪಂಚಕ ವ್ರತಾಚರಣಮಾತ್ರದಿಂದಲೇ ಲಭಿಸುವುದು.

೩೮. ಕಾರ್ತಿಕಮಾಸಪೂರ್ತಿ ಕರ್ಮಾನುಷ್ಠಾನ ಮಾಡಿದ್ದರಿಂದ ಯಾವ ಫಲವು ಬರುವುದೆಂದು ಉಕ್ತವಾಗಿದೆಯೋ, ಆ ಫಲವು ಭೀಷ್ಮಪಂಚಕ ವ್ರತಾಚರಣದಿಂದಲೇ ಲಭಿಸುತ್ತದೆ. ಈ ವ್ರತವನ್ನು ದೇವತೆಗಳೂ, ಸಿದ್ಧಪುರುಷರೂ, ಕಿನ್ನರರೂ, ನಾಗರೂ, ಗುಹ್ಯಕರೂ ಸಹ ಆಚರಿಸುತ್ತಾರೆ.

೩೯. ಅಭಿಲಷಿತ ಫಲಪ್ರಾಪ್ತಿಗಾಗಿ ಈ ವ್ರತದಲ್ಲಿ ಶ್ರೀ ಹರಿಯನ್ನು ಮುಖ್ಯವಾಗಿ ಪೂಜಿಸಬೇಕು. ಅಲ್ಲದೆ ಪಾಪಪುರುಷನ ಪ್ರತಿಮೆಯನ್ನು ಅತಿರೌದ್ರವದನಯುಕ್ತವಾಗಿಯೂ, ಅತಿಭಯಂಕರವಾಗಿಯೂ ಇರುವಂತೆ ಮಾಡಿಸಬೇಕು.

೪೦. ಅಯ್ಯಾ ರಾಜನೇ ! ಆ ಪ್ರತಿಮೆಯನ್ನು ಕೈಯಲ್ಲಿ ಖಡ್ಗಯುತವಾಗಿಯೂ, ಅತಿವಿಕಾರವಾಗಿಯೂ, ಸರ್ವಲೋಕಮಯವಾಗಿಯೂ, ರಚಿಸಿ ಎಳ್ಳಿನ ರಾಶಿಯ ಮೇಲೆ ಕಪ್ಪುಬಟ್ಟೆಯನ್ನು ಹೊದ್ದಿಸಿ ಪ್ರತಿಷ್ಠಾಪಿಸಬೇಕು.

ಕರವೀರಕುಸುಮಾಪೀಡಾ ಚಲತ್ಕಾಂಚನಕುಂಡಲಾ ।
ಬ್ರಾಹ್ಮಣಾಯ ಪ್ರದಾತವ್ಯಾ ಕೃಷ್ಣೋ ಮೇ ಪ್ರೀಯತಾಮಿತಿ ॥ ೪೧ ॥

ಅನ್ಯೇಷಾಮಪಿ ದಾತವ್ಯಂ ಯತ್ಕೃತ್ವಾ ವಸು ವಾಂಛಿತಂ ।
ಕೃತಕೃತ್ಯಃ ಸ್ಥಿರೋ ಭೂತ್ವಾ ವಿರಕ್ತಃ ಸಂಯತೋ ಭವೇತ್ ॥ ೪೨ ॥

ಶಾಂತಚೇತಾ ನಿರಾಬಾಧಃ ಪರಂ ಪದಮವಾಪ್ನುಯಾತ್ ।
ನೀಲೋತ್ಪಲದಲಶ್ಯಾಮಶ್ಚತುರ್ದಂಷ್ಟ್ರಶ್ಚತುರ್ಭುಜಃ ॥ ೪೩ ॥

ಅಷ್ಟಪಷ್ಠೈಕನಯನಃ ಶಂಕುಕರ್ಣೋ ಮಹಾಸ್ವನಃ ।
ಜಟೀ ದ್ವಿಜಿಹ್ವಸ್ತಾಮ್ರಾಸ್ಯೋ ಮೃಗರಾಜತನುಚ್ಛದಃ ॥ ೪೪ ॥

---

೪೧. ಅದನ್ನು ಕರವೀರ ಪುಷ್ಪಗಳಿಂದ ಅಲಂಕರಿಸಿ, ಸುವರ್ಣಕುಂಡಲಗಳು ಅಲುಗುತ್ತಿರುವಂತೆ ಅಲಂಕಾರ ಮಾಡಬೇಕು. ಅಂತಹ ಆ ಪ್ರತಿಮೆಯನ್ನು "ಕೃಷ್ಣೋಮೇಪ್ರಿಯತಾಂ" ಎಂದು ಹೇಳಿ ಬ್ರಾಹ್ಮಣನಿಗೆ ದಾನಮಾಡಬೇಕು.

೪೨. ಮತ್ತು ಇತರ ಬ್ರಾಹ್ಮಣರಿಗೂ ಯಥಾಶಕ್ತಿ ಧನವನ್ನು ದಾನ ಮಾಡಬೇಕು. ಈರೀತಿ ಈ ವ್ರತವನ್ನಾಚರಿಸಿದ್ದರಿಂದ ಕೃತಕೃತ್ಯನೂ ದೃಢ ವೈರಾಗ್ಯಯುತನೂ ಇಂದ್ರಿಯನಿಗ್ರಹವುಳ್ಳವನೂ ಆಗುತ್ತಾನೆ.

೪೩. ಮತ್ತು ಇದರಿಂದ ಶಾಂತಚಿತ್ತನೂ ನಿರುಪದ್ರವನೂ ಆಗಿ ಪರಮಪದ ಮೋಕ್ಷವನ್ನು ಪಡೆಯುತ್ತಾನೆ. ಮತ್ತು ಈ ವ್ರತಾನುಷ್ಠಾತೃವು ಕನ್ನೈದಿಲೆಯ ದಳಗಳಂತೆ ಕಪ್ಪಾದ ಮೈಬಣ್ಣವುಳ್ಳವನೂ ನಾಲ್ಕು ಕೋರೆದಾಡೆ ನಾಲ್ಕು ನಾಲ್ಕು ಭುಜಗಳು ಇವುಗಳಿಂದ ಕೂಡಿದವನಾಗಿಯೂ,

೪೪. ಹದಿನೈದು ಕಣ್ಣುಗಳುಳ್ಳವನೂ, ಶಂಕುವಿನ ಅಕಾರವಾದ ಕಿವಿಗಳುಳ್ಳವನೂ, ಮಹಾಧ್ವನಿಯುಳ್ಳವನೂ, ಜಟಾಧಾರಿಯೂ, ಎರಡು ನಾಲಗೆಗಳುಳ್ಳವನೂ, ತಾಮ್ರದಂತೆ ಕೆಂಪಾದ ವದನವುಳ್ಳವನೂ, ವ್ಯಾಘ್ರಚರ್ಮವನ್ನು ಹೊದೆದುಕೊಂಡವನೂ,

ಚಿಂತನೀಯೋ ಮಹಾದೇವೋ ಯಸ್ಯ ರೂಪಂ ನ ವಿದ್ಯತೇ ।
ಇದಂ ಭೀಷ್ಮೇಣ ಕಥಿತಂ ಶರಶಲ್ಪಗತೇನ ಮೇ ॥ ೪೫ ॥

ತದೇವ ತೇ ಸಮಾಖ್ಯಾತಂ ದುಷ್ಕರಂ ಭೀಷ್ಮಪಂಚಕಂ ।
ವ್ರತಂ ಚ ರಾಜಶಾರ್ದೂಲ ಪ್ರವರಂ ಭೀಷ್ಮಪಂಚಕಂ ॥ ೪೬ ॥

ಯಸ್ತಸ್ಮಿಂಸ್ತೋಷಯೇದ್ಭಕ್ತ್ಯಾ ತಸ್ಮೈ ಮುಕ್ತಿಪ್ರದೋಽಚ್ಯುತಃ ।
ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋಽಥವಾ ಯತಿಃ ॥ ೪೭ ॥

ಪ್ರಾಪ್ನೋತಿ ವೈಷ್ಣವಂ ಸ್ಥಾನಂ ಸತ್ಕೃತ್ವಾ ಭೀಷ್ಮಪಂಚಕಂ ।
ಬ್ರಹ್ಮಹಾ ಮದ್ಯಪಃ ಸ್ತೇಯೀ ಗುರುಗಾಮೀ ಸದಾಕೃತೀ ॥ ೪೮ ॥

---

೪೫. ಪರಮಾರ್ಥತಃ ಯಾವ ರೂಪವೂ ಇಲ್ಲವೆ ಇರುವವನೂ, ಆವವನೆಂದು ಮಹಾದೇವನನ್ನು ಧ್ಯಾನಿಸಬೇಕು. ಈ ಭೀಷ್ಮಪಂಚಕ ವ್ರತವನ್ನು ಭೀಷ್ಮನು ಶರಶಯ್ಯೆಯಲ್ಲಿ ಮಲಗಿರುವಾಗ ನನಗೆ ಉಪದೇಶಿಸಿದನು.

೪೬. ಅಯ್ಯಾ ನೃಪೋತ್ತಮನೇ ! ದುಷ್ಕರವೂ, ಅತಿಶ್ರೇಷ್ಠವೂ, ಆದುದೆನಿಸಿ ಅವನಿಂದ ಉಪದಿಷ್ಟವಾದ ಈ ಭೀಷ್ಮಪಂಚಕ ವ್ರತವನ್ನು ನಿನಗೆ ನಾನು ಹೇಳಿರುತ್ತೇನೆ.

೪೭. ಬ್ರಹ್ಮಚಾರೀ, ಗೃಹಸ್ಥ, ವಾನಪ್ರಸ್ಥ, ಅಥವಾ ಸಂನ್ಯಾಸಿ ಈ ನಾಲ್ಕು ಆಶ್ರಮಿಗಳಲ್ಲಿ ಯಾವನೇ ಆಗಲಿ, ಈ ಭೀಷ್ಮಪಂಚಕ ವ್ರತಾಂಗವಾಗಿ ಭಕ್ತಿಯಿಂದ ಶ್ರೀಹರಿಯನ್ನು ಪೂಜಿಸಿ ಸಂತೋಷಪಡಿಸುವನೋ, ಅವನಿಗೆ ಆ ಹರಿಯು ಮೋಕ್ಷವನ್ನು ಕರುಣಿಸುವನು.

೪೮. ಈ ಭೀಷ್ಮಪಂಚಕ ವ್ರತವನ್ನು ಭಕ್ತಿಯಿಂದ ಚೆನ್ನಾಗಿ ಆಚರಿಸಿದವನು ವೈಷ್ಣವಪದವನ್ನು ಪಡೆಯುತ್ತಾನೆ. ಬ್ರಹ್ಮಹತ್ಯ, ಮದ್ಯಪಾನ, ಸ್ವರ್ಣಸ್ತೇಯ, ಗುರುದಾರಗಮನ ಸದಾ ದುಷ್ಕರ್ಮಾಚರಣ ಇತ್ಯಾದಿ ಮಹಾಪಾಪಗಳನ್ನು ಮಾಡಿದವನು.

ಮುಚ್ಯತೇ ಪಾತಕಾತ್ಸದ್ಯಃ ಕೃತ್ವೈವಂ ಭೀಷ್ಮಪಂಚಕಂ ।
ನಾಸ್ಮಾದ್ವ್ರತಾತ್ಪುಣ್ಯತಮಂ ವೈಷ್ಣವೇಭ್ಯೋ ಯತೋ ವ್ರತಂ ॥೪೯॥

ಅಥಾಸ್ಮಿಂಸ್ತೋಷಿತೋ ವಿಷ್ಣುರ್ನೃಣಾಂ ಮುಕ್ತಿಪ್ರದೋ ಭವೇತ್ ।
ಶ್ರುತ್ವೈತತ್ಪಠ್ಯಮಾನಂ ತು ಪವಿತ್ರಂ ಭೀಷ್ಮಪಂಚಕಂ ॥ ೫೦ ॥

ಮುಚ್ಯತೇ ಪಾತಕೇಭ್ಯೋ ವಾ ಪಾಠಕೋ ವಿಷ್ಣುಲೋಕಭಾಕ್ ।
ಧನ್ಯಂ ಪುಣ್ಯಂ ಪಾಪಹರಂ ಯುಧಿಷ್ಠಿರ ಮಹಾವ್ರತಂ ॥ ೫೧ ॥

ಯದ್ಭೀಷ್ಮಪಂಚಕಮಿತಿ ಪ್ರಥಿತಂ ಪೃಥಿವ್ಯಾ ।
ಮೇಕಾದಶೀಪ್ರಭೃತಿಪಂಚದಶೀನಿರುದ್ಧಂ ।

---

೪೯. ಒಂದುಸಲ ಈ ಭೀಷ್ಮಪಂಚಕ ವ್ರತವನ್ನು ಚೆನ್ನಾಗಿ ಆಚರಿಸಿದರೆ, ಆ ಎಲ್ಲ ಪಾಪಗಳಿಂದಲೂ ನಿರ್ಮುಕ್ತನಾಗುತ್ತಾನೆ. ವಿಷ್ಣುಭಕ್ತರಿಗೆ ಈ ಭೀಷ್ಮ ಪಂಚಕವ್ರತಕ್ಕಿಂತಲೂ ಮಿಗಿಲಾಗಿ ಪುಣ್ಯಪ್ರದವಾದ ಮತ್ತೊಂದು ವ್ರತವು ಇಲ್ಲ.

೫೦. ಅಯ್ಯಾ ಯುಧಿಷ್ಠಿರನೇ ! ಈ ವ್ರತದಲ್ಲಿ ಶ್ರೀಹರಿಯನ್ನು ಸಂತೋಷಪಡಿಸಿದರೆ ಅವನು ವ್ರತಿಗಳಿಗೆ ಮುಕ್ತಿಯನ್ನು ಕೊಡುತ್ತಾನೆ. ಪವಿತ್ರವಾದ ಈ ಭೀಷ್ಮಪಂಚಕವ್ರತಗ್ರಂಥವನ್ನು ಪಠಣಮಾಡುವಾಗ ಭಕ್ತಿಯಿಂದ ಶ್ರವಣ ಮಾಡಿದವನನ್ನು ಶ್ರೀಹರಿಯು ಮಹಾಪಾತಕಗಳಿಂದ ಬಿಡುಗಡೆ ಮಾಡುತ್ತಾನೆ.

೫೧. ಕೃತಾರ್ಥತೆಯನ್ನು ಕೊಡುವುದಾಗಿಯೂ, ಪುಣ್ಯಪ್ರದವಾಗಿಯೂ, ಪಾಪನಿವಾರಕವಾಗಿಯೂ, ಇರುವ ಈ ಮಹಾವ್ರತ ಗ್ರಂಥವನ್ನು ಪಠಣಮಾಡಿದವನು ಶ್ರೀ ವಿಷ್ಣುಲೋಕವನ್ನು ಪಡೆಯುತ್ತಾನೆ.

೫೨. ಅಯ್ಯಾ ಪಾಂಡವನೇ ! ಕಾರ್ತಿಕಶುದ್ಧ ಏಕಾದಶಿ ಮೊದಲ್ಗೊಂಡು ಪೂರ್ಣಿಮೆಯುವರೆಗೆ ಆಚರಿಸತಕ್ಕುದೂ, ಭೂಲೋಕದಲ್ಲಿ ಭೀಷ್ಮಪಂಚಕವೆಂಬ ನಾಮಧೇಯದಿಂದ ಪ್ರಸಿದ್ಧವೂ ಆಗಿರುವ, ಈ ವ್ರತದಲ್ಲಿ ಸಂಪೂರ್ಣವಾಗಿ

ಅನ್ನಸ್ಯ ಭೋಜನನಿವೃತ್ತಿವಶಾದಮುಷ್ಮಿನ್ ।
ಇಷ್ಟಂ ಫಲಂ ದಿಶತಿ ಪಾಂಡವ ಶಾರ್ಙ್ಗಧನ್ವಾ　　　　॥ ೫೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಭೀಷ್ಮಪಂಚಕವ್ರತವರ್ಣನಂ
ನಾಮ ದ್ವಿಸಪ್ತತಿತಮೋಽಧ್ಯಾಯಃ



---

ಭೋಜನವನ್ನು ವರ್ಜ್ಯಮಾಡಿ, ಉಪವಾಸವನ್ನಾಚರಿಸುವುದರಿಂದ ಶಾರ್ಙ್ಗ ಧನುರ್ಧಾರಿಯಾದ ಶ್ರೀ ಹರಿಯು ಸಂತುಷ್ಟನಾಗಿ, ವ್ರತಿಗೆ ಇಷ್ಟವಾದ ಫಲವನ್ನು ಕೊಡುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಭೀಷ್ಮಪಂಚಕ
ವ್ರತವರ್ಣನೆಯೆಂಬ ಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ತ್ರಿಸಪ್ತತಿತಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಶಂಖಚಕ್ರಗದಾಪಾಣೇ ಶ್ರೀವತ್ಸ ಗರುಡಾಸನ ।
ಬ್ರೂಹಿ ಮೇ ಮಲ್ಲದ್ವಾದಶ್ಯಾ ವಿಧಾನಂ ದೇವಕೀಸುತ ॥ ೧ ॥

॥ ಶ್ರೀ ಕೃಷ್ಣ ಉವಾಚ ॥

ಯದಾ ಭಾಂಡೀರನ್ಯಗ್ರೋಧೇ ವಸಾಮಿ ಯಮುನಾತಟೇ ।
ಗೋಪಾಲಮಧ್ಯೇ ಗೋವತ್ಸೈರಷ್ಟವರ್ಷೋಽಸ್ಮಿ ಲೀಲಯಾ ॥ ೨ ॥

---

## ಎಪ್ಪತ್ತಮೂರನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಶಂಖಚಕ್ರಗದಾಪಾಣಿಯೂ, ಶ್ರೀವತ್ಸಾಂಕಿತವಕ್ಷನೂ, ಗರುಡವಾಹನನೂ, ಆಗಿರುವ ಓ ದೇವಕೀಸುತನೇ ! ನನಗೆ ಮಲ್ಲದ್ವಾದಶೀ ವ್ರತವಿಧಾನವನ್ನು ಹೇಳು ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ ! ಕಂಸಾಸುರನನ್ನು ಸಂಹಾರಮಾಡುವುದಕ್ಕಾಗಿ ಜನಿಸಿದ ನಾನು, ಮಧುರಾನಗರಿಯ ಉಪವನದಲ್ಲಿ ಹಸು ಕರುಗಳ ಸಮೇತ ಗೋಪಾಲರ ಮಧ್ಯದಲ್ಲಿ ಸೇರಿಕೊಂಡು ಕ್ರೀಡಿಸುತ್ತಿದ್ದೆನು.

ಕಂಸಾಸುರವಧಾರ್ಥಾಯ ಮಥುರೋಪವನೇ ತದಾ ।
ಆಬಾಲೋ ಬಾಲರೂಪೇಣ ಗೋಪಮಲ್ಲೈರ್ಬಲೋತ್ಕಟೈಃ ॥ ೩ ॥

ಸಮೇತ್ಯ ಮಲ್ಲಗೋಪಸ್ಯ ಬಲೇನ ಸಹ ಕಾನನೇ ।
ಅಸ್ಫೋಟಯಂತಿ ನೃತ್ಯಂತಿ ತ್ರಿದಶೇ ತ್ರಿಡಶಾ ಇವ ॥ ೪ ॥

ಸುರಭದ್ರೋ ಮಂಡಲೀಕಯೋಗವರ್ಧನಯೋಗದಾಃ ।
ಯಕ್ಷೇಂದ್ರಭದ್ರ ಇತ್ಯಾದಿ ತೇಷಾಂ ನಾಮಾನಿ ಗೋಕುಲೇ ॥ ೫ ॥

ಗೋಪೀನಾಮಪಿ ನಾಮಾನಿ ಪ್ರಾಧಾನ್ಯೇನ ನಿಬೋಧ ಮೇ ।
ಗೋಪಾಲೀ ಪಾಲಿಕಾ ಧನ್ಯಾ ವಿಶಾಖಾ ಧ್ಯಾನನಿಷ್ಠಿಕಾ ॥ ೬ ॥

ಇಲ್ವಾನುಗಂಧಾ ಸುಭಗಾ ತಾರಕಾ ದಶಮೀ ತಥಾ ।
ಇತ್ಯೇವಮಾದಿಭಿರಹಂ ಸೂಪವಿಷ್ಟೋ ವರಾಸನೇ ॥ ೭ ॥

---

೩. ವಸ್ತುತಃ ಬಾಲ್ಯಾದ್ಯವಸ್ಥಾರಹಿತನಾದುದರಿಂದ ಬಾಲನಲ್ಲದಿದ್ದರೂ ಮಾಯೆಯಿಂದ ಎಂಟುವರ್ಷದ ಬಾಲರೂಪವನ್ನು ಧರಿಸಿ, ಯಮುನೆಯ ತೀರದಲ್ಲಿ ಮಂಜಿಷ್ಠಿಕೆ ಎಂಬ ಲತೆಯುಆವರಿಸಿದ ವಟವೃಕ್ಷಮೂಲದಲ್ಲಿ ಆಗಾಗ ಇರುತ್ತಿದ್ದೆನು

೪. ಆ ಕಾಡಿನಲ್ಲಿ ಬಲಶಾಲಿಗಳಾದ ಗೋಪರು, ಮಲ್ಲರು, ನಾನೂ ನಂದ ಗೋಪ ಬಲಸಮೇತರಾಗಿ ಸ್ವರ್ಗದಲ್ಲಿ ದೇವತೆಗಳ ಹಾಗೆ ಕೈಚಪ್ಪಾಳೆ ಹಾಕಿಕೊಂಡು ಕುಣಿದಾಡುತ್ತಿದ್ದೆವು.

೫. ಆ ನಂದಗೋಕುಲದಲ್ಲಿದ್ದ ಆ ಗೋಪಮಲ್ಲರಿಗೆ ಸುರಭದ್ರ, ಮಂಡಲೀಕ, ಯೋಗವರ್ಧನ, ಯೋಗದ, ಯಕ್ಷ, ಇಂದ್ರಭದ್ರ, ಇತ್ಯಾದಿ ಹೆಸರುಗಳು ಪ್ರಸಿದ್ಧಗಳಾಗಿದ್ದುವು.

೬. ಅಯ್ಯಾ ರಾಜನೇ ! ಪ್ರಧಾನರಾದ ಕೆಲವು ಗೋಪಿಕಾಸ್ತ್ರೀಯರ ನಾಮಧೇಯಗಳನ್ನು ಹೇಳುತ್ತೇನೆ ಶ್ರವಣಮಾಡು.

೭. ಗೋಪಾಲೀ, ಪಾಲಿಕೆ, ಧನ್ಯೆ, ವಿಶಾಖೆ, ಧ್ಯಾನನಿಷ್ಠಿಕೆ, ಇಲ್ವಾನುಗಂಧೆ, ಸುಭಗೆ, ತಾರಕೆ ಇವರು ಪ್ರಮುಖ ಗೋಪಿಕಾಸ್ತ್ರೀಯರು. ಇವರೇ ಮೊದಲಾದ ಗೋಪಿಕಾಸ್ತ್ರೀಯರಿಂದ ಪರಿವೃತನಾಗಿ ನಾನು ಉತ್ತಮವಾದ ಆಸನದಲ್ಲಿ ಕುಳಿತಿದ್ದೆನು.

ಪೂಜಿತೋಽಸ್ಮಿ ಸುರೈಃ ಪುಷ್ಪೈರ್ದಧಿದುಗ್ಧಾಕ್ಷತೈಸ್ತಥಾ ।
ಶತಾನಿ ತ್ರೀಣಿ ಷಷ್ಟಿಶ್ಚ ಮಲ್ಲಾನಾಂ ಪೂಜಯಂತಿ ಮಾಂ ॥ ೮ ॥

ಮಲ್ಲಿನ್ಯಶ್ಚ ಸುರಾಮಾಂಸೈರಂಗಜಾಗರನರ್ತನೈಃ ।
ಮಲ್ಲಯುದ್ಧೈರ್ಬಹುವಿಧೈರ್ಬಾಹ್ಯೈರ್ಮಲ್ಲಭಟೈಃ ಸ್ಫುಟೈಃ ॥ ೯ ॥

ಭಕ್ಷ್ಯೈರ್ಭೋಜ್ಯೈಸ್ತಥಾ ಪಾನೈರ್ದಧಿದುಗ್ಧಘೃತಾಸವೈಃ ।
ಗೋದಾನೈರ್ವೃಷದಾನೈಶ್ಚ ಶ್ರದ್ಧಯಾ ವಿಪ್ರಪೂಜನೈಃ ॥ ೧೦ ॥

ಗೋಷ್ಠೀಪ್ರಭೂತೈರ್ಬಂಧೂನಾಂ ಸ್ನೇಹಸಂಭಾಷಣೈರ್ಮಿಥಃ ।
ಏವಂ ದ್ವಾದಶ ದ್ವಾದಶ್ಯೋ ಗೃಹೀತವ್ಯಾ ಯಥೇಚ್ಛಯಾ ॥ ೧೧ ॥

---

೮. ಆಗ ದೇವತೆಗಳು ಪುಷ್ಪ, ಹಾಲು, ಮೊಸರು, ಅಕ್ಷತೆ ಇತ್ಯಾದಿಗಳಿಂದ ನನ್ನನ್ನು ಪೂಜಿಸುತ್ತಿದ್ದರು. ಮತ್ತು ಮೂರುನೂರುಅರವತ್ತು ಮಂದಿ ಮಲ್ಲರೂ ನನ್ನನ್ನು ಪೂಜಿಸುತ್ತಿದ್ದರು.

೯. ಮತ್ತು ಆ ಮಲ್ಲಗೋಪರ ಸ್ತ್ರೀಯರೂ, ಮದ್ಯ ಮಾಂಸ ರಹಿತರಾಗಿ ಜಾಗರಣೆ ಅಂಗವಿಕ್ಷೇಪಪೂರ್ವಕವಾದ ನರ್ತನೆ, ಇತ್ಯಾದಿಗಳಿಂದ ನನ್ನ ಆರಾಧನೆಯನ್ನು ಮಾಡುತ್ತಿದ್ದರು. ಅಲ್ಲದೆ ಮಲ್ಲಗೋಪರು ನನ್ನ ಪ್ರೀತ್ಯರ್ಥವಾಗಿ ಗೋಪಜಾತಿಯಿಂದ ಬಾಹ್ಯರಾದ ಮಲ್ಲಭಟರ ಜತೆಯಲ್ಲಿ ಸೇರಿಕೊಂಡು ನಾನಾತರಹದ ಮಲ್ಲಯುದ್ಧಗಳನ್ನೂ ಪ್ರದರ್ಶಿಸುತ್ತಿದ್ದರು.

೧೦. ಈ ವ್ರತದಲ್ಲಿ ಭಕ್ಷ್ಯ, ಭೋಜ್ಯ, ಪಾನ, ಮೊಸರು, ಹಾಲು, ತುಪ್ಪ ಇತ್ಯಾದಿ ವಸ್ತುಗಳನ್ನು ನನಗೆ ನಿವೇದಿಸಬೇಕು. ಮತ್ತು ಗೋದಾನ, ವೃಷಭದಾನ, ಬ್ರಾಹ್ಮಣಪೂಜೆ ಇವುಗಳನ್ನೂ ಶ್ರದ್ಧಾಪೂರ್ವಕವಾಗಿ ಮಾಡಬೇಕು.

೧೧. ಮತ್ತು ಈ ವ್ರತಾಂಗವಾಗಿ ಬಹಳ ಜನ ವಿದ್ವಾಂಸರು ಸೇರಿ, ಶಾಸ್ತ್ರಾರ್ಥ ವಿಚಾರ ಮುಂತಾದುವುಗಳನ್ನೂ, ಬಂಧುಮಿತ್ರರೊಡಗೂಡಿ ಅನ್ಯೋನ್ಯವಾಗಿ ಸ್ನೇಹ ಸಂಭಾಷಣೆಯನ್ನೂ ಮಾಡಬೇಕು. ಈ ವ್ರತ ಮಾಡಬೇಕೆಂದು ತನ್ನ ಮನಸ್ಸಿಗೆ ತೋರಿದಾಗ, ಯಾವುದಾದರೂ ಒಂದು ದ್ವಾದಶಿಯಿಂದಲೋ ಅಥವಾ ಮಾರ್ಗಶೀರ್ಷ ಶುಕ್ಲ ದ್ವಾದಶಿಯಿಂದಲೋ ಪ್ರಾರಂಭಿಸಿ ಹನ್ನೆರಡು ದ್ವಾದಶಿಗಳಲ್ಲಿ ನಿಯಮದಿಂದ ಆಚರಿಸಬೇಕು.

ಸಂಬಂಧಿಭಿಃ ಕ್ರಮೇಣೈವ ಮಲ್ಲಾನಾಂ ಚ ಪೃಥಕ್ಪೃಥಕ್ ।
ಪೂಜಯಂತಿ ಕ್ರಮೇಣೈವ ಮಾಸಿಮಾಸಿ ತನುಂ ಮಮ ॥ ೧೨ ॥

ಮಾರ್ಗಾದಿಕಾರ್ತಿಕಾಂತಂ ಚ ಭಕ್ತ್ಯಾ ದ್ವಾದಶನಾಮಭಿಃ ।
ಪಾರಣೇಪಾರಣೇ ದದ್ಯಾನ್ಮಲ್ಲಕಾನಿ ದ್ವಿಜಾತಯೇ ॥ ೧೩ ॥

ಕೇಶವನಾರಾಯಣಮಾಧವಗೋವಿಂದವಿಷ್ಣುಮಧುಸೂದನ ।
ತ್ರಿವಿಕ್ರಮವಾಮನಶ್ರೀಧರಹೃಷೀಕೇಶಪದ್ಮನಾಭದಾಮೋದರಾಣಾಂ
ನಮೋನಮ ಇತಿ ॥ ೧೪ ॥

ಗಂಧೈಃ ಪುಷ್ಪೈಸ್ತಥಾ ಧೂಪೈರ್ದೀಪೈರ್ಜಾಗರಣೈರ್ನಿಶಿ ।
ಗೀತವಾದ್ಯೈಶ್ಚ ನೃತ್ಯೈಶ್ಚ ಮಲ್ಲಕ್ಷ್ವೇಡಾಂಗಯುದ್ಧಕೈಃ ॥ ೧೫ ॥

---

೧೨. ಆ ನಂದಗೋಕುಲದಲ್ಲಿ ಪ್ರತ್ಯೇಕವಾಗಿ ಪ್ರತಿಯೊಬ್ಬ ಮಲ್ಲನೂ ತಮ್ಮ ತಮ್ಮ ಸಂಬಂಧಿಗಳೊಡನೆ ಕೂಡಿಕೊಂಡು ಪ್ರತಿತಿಂಗಳಲ್ಲೂ ಕ್ರಮವಾಗಿ ನನ್ನ ಮೂರ್ತಿಯನ್ನು ಪೂಜಿಸುತ್ತಿದ್ದನು.

೧೩. ಮಾರ್ಗಶೀರ್ಷಮಾಸದ ದ್ವಾದಶಿ ಮೊದಲ್ಗೊಂಡು ಕಾರ್ತಿಕ ಶುದ್ಧ ದ್ವಾದಶಿಯವರೆಗೆ ಈ ಹನ್ನೆರಡು ದ್ವಾದಶಿಗಳಲ್ಲಿ ಭಕ್ತಿಪೂರ್ವಕವಾಗಿ ಕೇಶವಾದಿ ದ್ವಾದಶನಾಮಗಳನ್ನು ಹೇಳಿ ಪೂಜಿಸಿ, ಪ್ರತಿ ತಿಂಗಳಲ್ಲೂ ವ್ರತಾಂಗವಾದ ಪಾರಣೆಯಲ್ಲಿ ಬ್ರಾಹ್ಮಣರಿಗೆ ಉದಕುಂಭಪಾತ್ರೆಯನ್ನು ದಾನಮಾಡಬೇಕು.

೧೪. ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದನ, ತ್ರಿವಿಕ್ರಮ, ವಾಮನ, ಶ್ರೀಧರ, ಹೃಷೀಕೇಶ, ಪದ್ಮನಾಭ, ದಾಮೋದರ ಎಂಬ ಈ ದ್ವಾದಶನಾಮಗಳಿಗೆ ನಮಃ ಪದವನ್ನು ಜೋಡಿಸಿ ಕೇಶವಾಯ ನಮಃ ಇತ್ಯಾದಿ ಕ್ರಮದಿಂದ ಹೇಳಿ ಹನ್ನೆರಡು ದ್ವಾದಶಿಗಳಲ್ಲಿ ಅರ್ಚಿಸಬೇಕು.

೧೫. ಅಯ್ಯಾ ರಾಜನೇ ! ಗಂಧ, ಪುಷ್ಪ, ಧೂಪ, ದೀಪ ಇತ್ಯಾದಿಗಳಿಂದ ಸಾಂಗವಾಗಿ ಅರ್ಚಿಸಿ, ರಾತ್ರಿ ಜಾಗರಣೆಯನ್ನಾಚರಿಸಿ; ಗೀತ, ವಾದ್ಯ, ನೃತ್ಯ. ಮಲ್ಲಯುದ್ಧ ಇತ್ಯಾದಿಗಳನ್ನು ಪ್ರದರ್ಶನ ಮಾಡಿಸಬೇಕು.

ಘೃತದಾನ್ಯೈಃ ಕ್ಷೀರದಾನ್ಯೈಃ ಕೃಷ್ಣೋ ಮೇ ಪ್ರೀಯತಾಮಿತಿ ।
ಏವಮೇಷ ವಿಧಿಃ ಪ್ರೋಕ್ತೋ ಮಾಸೈರ್ದ್ವಾದಶಭಿರ್ನೃಪ ॥ ೧೬ ॥

ದ್ವಾದಶೀ ಯಾ ಮಮಾದ್ಯಾಪಿ ಮನಸಃ ಪ್ರೀತಿವರ್ಧನೀ ।
ಮಲ್ಲೈಃ ಪ್ರವರ್ತಿತಾ ಯಸ್ಮಾದತೋಽರ್ಥಂ ಮಲ್ಲದ್ವಾದಶೀ ॥ ೧೭ ॥

ತೇಷಾಂ ಪರಮಮಲ್ಲಾನಾಂ ತೇಷಾಂ ಜ್ಞಾನ ಯುಧಿಷ್ಠಿರ ।
ಗೋಷ್ಠೇ ಬಭೂವ ಸುಸ್ರಾಜ್ಯಂ ಗೋಮಹಿಷ್ಯಾದ್ಯಜಾವಿಕಂ ॥ ೧೮ ॥

ಮತ್ಪ್ರಸಾದಾದ್ಧರ್ಮಪುತ್ರ ಬಲಂ ಕೀರ್ತಿರ್ಯಶೋಧನಂ ।
ಏವಮನ್ಯೇಽಪಿ ಪುರುಷಾ ಹ್ಯಬಲಾ ಮಲ್ಲದ್ವಾದಶೀಂ ॥ ೧೯ ॥

ಯೇ ಕರಿಷ್ಯಂತಿ ಮದ್ಭಕ್ತಾಸ್ತೇಷಾಂ ದಾಸ್ಯಾಮಿ ಹೃದ್ಗತಂ ।
ಆರೋಗ್ಯಂ ಬಲಮೈಶ್ವರ್ಯಂ ವಿಷ್ಣುಲೋಕಂ ಚ ಶಾಶ್ವತಂ ॥ ೨೦ ॥

---

೧೬. ಘೃತ, ಕ್ಷೀರ ಇವುಗಳನ್ನು "ಶ್ರೀ ಕೃಷ್ಣೋಮೇ ಪ್ರೀಯತಾಂ" ಎಂದು ಹೇಳಿ ದಾನ ಕೊಡಬೇಕು. ಈ ವ್ರತಕ್ಕೆ ಹನ್ನೆರಡು ತಿಂಗಳುಗಳಲ್ಲೂ ಆಚರಣಕ್ರಮವು ಈರೀತಿಯಾಗಿ ಉಕ್ತವಾಗಿದೆ.

೧೭. ನನ್ನ ಮನಸ್ಸಿಗೆ ಪ್ರೀತಿಜನಕವಾದ ಈ ದ್ವಾದಶೀ ವ್ರತವು, ಆದಿಯಲ್ಲಿ ಗೋಪಮಲ್ಲರಿಂದ ರೂಢಿಗೆ ಬಂದಿತಾದುದರಿಂದ ಈ ವ್ರತಕ್ಕೆ ಮಲ್ಲದ್ವಾವಶೀ ವ್ರತವೆಂದು ನಾಮಧೇಯ ಬಂದಿದೆ.

೧೮. ಅಯ್ಯಾ ಯುಧಿಷ್ಠಿರನೇ ! ಈ ವ್ರತಾಚರಣೆಯಿಂದ ಗೋಕುಲದಲ್ಲಿ ಆ ಮಲ್ಲಶ್ರೇಷ್ಠರಿಗೆ ಸಮ್ಯಜ್ಞಾನವೂ ಗೋ, ಮಹಿಷಿ, ಆಡು, ಕುರಿ ಇತ್ಯಾದಿ ಸಂಪತ್ತುಗಳೂ ಸಮೃದ್ಧಿಯಾಗಿಯೂ ಲಭಿಸಿದುವು.

೧೯. ಅಯ್ಯಾ ಧರ್ಮಪುತ್ರನೇ ! ಇಷ್ಟೇ ಅಲ್ಲದೆ ಆ ಗೋಪರಿಗೆ ನನ್ನ ಅನುಗ್ರಹದಿಂದ ಬಲ, ಕೀರ್ತಿ, ಧನ, ಇವುಗಳೆಲ್ಲಾ ಲಭಿಸಿದುವು. ಮಲ್ಲರಲ್ಲದ ಗಂಡಸು ಅಥವಾ ಹೆಂಗಸು ಯಾರೇ ಆಗಲೀ ನನ್ನಲ್ಲಿ ಭಕ್ತಿ ಇಟ್ಟವರಾಗಿ,

೨೦. ಇದೇ ಕ್ರಮವಾಗಿ ಈ ಮಲ್ಲದ್ವಾದಶೀ ವ್ರತವನ್ನಾಚರಿಸಿದರೆ ಅವರ ಮನೋರಥವನ್ನೂ ನಾನು ಸಫಲಮಾಡುತ್ತೇನೆ. ಮತ್ತು ಅಂತಹವರಿಗೆ ಇಹದಲ್ಲಿ ದೇಹಾರೋಗ್ಯ, ಬಲ, ಐಶ್ವರ್ಯಗಳನ್ನು ಕೊಟ್ಟು ದೇಹಾಂತದಲ್ಲಿ ಶಾಶ್ವತವಿಷ್ಣುಲೋಕವಾಸವನ್ನೂ ಕೊಡುತ್ತೇನೆ.

ಭಾಂಡೀರಪಾದಪತಲೇ ಮಿಲಿತೈರ್ಮಹದ್ಭಿಃ ।
ಮಲ್ಲೈರನಾಕುಲಿತ ಬಾಹುಬಲೈರ್ಬಲಿಷ್ಠೈಃ ।
ಸಂಪೂಜಿತಃ ಸಪದಿ ಯತ್ರ ತಿಥೌ ತತಶ್ಚ ।
ಸಾ ದ್ವಾದಶೀ ಸುವಿದಿತಾ ವ್ರತಮಲ್ಲಸಂಜ್ಞಾ ॥ ೨೧ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಮಲ್ಲದ್ವಾದಶೀ ವ್ರತವರ್ಣನಂ ನಾಮ ತ್ರಿಸಪ್ತತಿತಮೋಽಧ್ಯಾಯಃ.



೨೧. ಮಂಜಿಷ್ಠಿಕೆ ಎಂಬ ಲತೆಯಿಂದ ಆವೃತವಾದ ವಟವೃಕ್ಷದ ಮೂಲದಲ್ಲಿ, ಅಪ್ರತಿಹತವಾದ ಬಾಹುಬಲದಿಂದ ಕೂಡಿ ಬಲಶಾಲಿಗಳಾದ ಮಹಾಮಲ್ಲಗೋಪರು ಸೇರಿ, ದ್ವಾದಶೀದಿನ ಹೊತ್ತಿಗೆ ಮುಂಚೆ ನನ್ನನ್ನು ಚೆನ್ನಾಗಿ ಪೂಜಿಸಿ ಈ ವ್ರತವನ್ನು ಆಚರಿಸಿದುದರಿಂದ, ಈ ದ್ವಾದಶೀವ್ರತಕ್ಕೆ ಮಲ್ಲದ್ವಾದಶೀವ್ರತವೆಂಬ ನಾಮಧೇಯವು ಎಲ್ಲರಿಂದಲೂ ವ್ಯವಹರಿಸಲ್ಪಟ್ಟು ಪ್ರಸಿದ್ಧವಾಗಿದೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಮಲ್ಲದ್ವಾದಶೀ ವ್ರತವರ್ಣನೆಯೆಂಬ ಎಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಚತುಃಸಪ್ತತಿತಮೋಽಧ್ಯಾಯಃ

|| ಶ್ರೀ ಕೃಷ್ಣ ಉವಾಚ ||

ವಿದರ್ಭಾಧಿಪತಿಃ ಶ್ರೀಮಾನಾಸೀತ್ಪೂರ್ವಂ ಸುಧಾರ್ಮಿಕಃ |
ದಮಯಂತ್ಯಾಃ ಪಿತಾ ಪೂರ್ವಂ ನಲಸ್ಯ ಶ್ವಶುರೋ ಭುವಿ || ೧ ||

ಸತ್ಯವಾದನಶೀಲಶ್ಚ ಪ್ರಜಾಪಾಲನತತ್ಪರಃ |
ಕ್ಷತ್ರಧರ್ಮರತಃ ಶ್ರೀಮಾನ್ಸಂಗ್ರಾಮೇಷ್ವಪರಾಜಿತಃ || ೨ ||

---

## ಎಪ್ಪತ್ತನಾಲ್ಕನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ ! ಪೂರ್ವದಲ್ಲಿ ಭರತಖಂಡದ ವಿದರ್ಭದೇಶದಲ್ಲಿ ಅತುಲೈಶ್ವರ್ಯಯುಕ್ತನೂ, ಧಾರ್ಮಿಕನೂ ಆದ ಒಬ್ಬ ಅರಸನಿದ್ದನು. ಆತನೇ ದಮಯಂತಿಯ ತಂದೆಯೂ, ನಳಚಕ್ರವರ್ತಿಯ ಮಾವನೂ ಆದ ಭೀಮಭೂಪಾಲನು.

೨. ಆ ರಾಜನು ಸತ್ಯವನ್ನೇ ನುಡಿಯುವ ಸ್ವಭಾವವುಳ್ಳವನೂ, ಪ್ರಜಾಪರಿಪಾಲನತತ್ಪರನೂ, ಉತ್ತಮವಾದ ಧರ್ಮವನ್ನು ಆಚರಿಸುವುದರಲ್ಲಿ ಕ್ಷತ್ರಿಯರಿಗೆ ಮಾದರಿಯಾದ ನಡವಳಿಕೆಯುಳ್ಳವನೂ, ಯುದ್ಧಗಳಲ್ಲಿ ಸೋಲಿಲ್ಲದವನೂ ಆಗಿದ್ದನು.

ತಸ್ಯಾ.ಕುಪಿರ್ವತೋ ರಾಜ್ಯಂ ಶಾಸ್ತ್ರದೃಷ್ಟೇನ ಕರ್ಮಣಾ ।
ಆಜಗಾಮ ಮಹಾಭಾಗಃ ಪುಲಸ್ತ್ಯೋ ಬ್ರಹ್ಮಣಃ ಸುತಃ ॥ ೩ ॥

ಸರ್ವಜ್ಞಾನನಿಧಿಃ ಶ್ರೀಮಾಂಸ್ತೀರ್ಥಯಾತ್ರಾಪ್ರಸಂಗತಃ ।
ತಮಾಗತಮಥೋ ದೃಷ್ಟ್ವಾ ಬ್ರಹ್ಮಯೋದಿಮಕಲ್ಮಷಂ ॥ ೪ ॥

ಉತ್ಥಾಯ ಪ್ರದದೌ ರಾಜಾ ಸ್ವಮಾಸನಮಭೀಪ್ಸಿತಂ ।
ಅರ್ಘಂ ಪಾದ್ಯಂ ಚ ಯತ್ಕಿಂಚಿತ್ತತ್ತಸ್ಮೈ ಪ್ರದದೌ ಸ್ವಯಂ ॥ ೫ ॥

ರಾಜ್ಯಂ ಚೈವಾತ್ಮನಾ ಸಾರ್ಧಂ ನಿವೇದ್ಯ ಸ ಕೃತಾಂಜಲಿಃ ।
ತೇನ ಚೈವಾಭ್ಯನುಜ್ಞಾತೋ ನಿಷಸಾದ ವರಾಸನೇ ॥ ೬ ॥

---

೩. ಶಾಸ್ತ್ರೋಕ್ತ ಕರ್ಮಗಳನ್ನು ಶ್ರದ್ಧೆಯಿಂದ ಆಚರಿಸುತ್ತಾ, ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಿರುವಾಗ, ಬ್ರಹ್ಮಪುತ್ರನಾಗಿಯೂ, ಮಹಾಮಹಿಮಸಂಪನ್ನನಾಗಿಯೂ ಇರುವ, ಪುಲಸ್ತ್ಯನೆಂಬ ಮಹರ್ಷಿಯು ಆ ರಾಜನ ಬಳಿಗೆ ಬಂದನು.

೪. ಆ ಮಹರ್ಷಿಯು ಉತ್ತಮೋತ್ತಮರಾದ ಸರ್ವಜ್ಞಾನಿಗಳಿಗೂ ನಿಧಿಸ್ವರೂಪನು. ಆತನು ತೀರ್ಥಯಾತ್ರಾ ಮಾರ್ಗವಶಾತ್ ಆ ವಿಧರ್ಭಾಧಿಪತಿಯ ಪಟ್ಟಣಕ್ಕೆ ಬಂದನು.

೫. ಬ್ರಹ್ಮಪುತ್ರನಾಗಿಯೂ, ನಿಷ್ಕಲ್ಮಷನಾಗಿಯೂ ಇರುವ, ಆ ಪುಲಸ್ತ್ಯನು ಬಂದುದನ್ನು ನೋಡಿ ಆ ಅರಸನು ಪ್ರತ್ಯುತ್ಥಾನಮಾಡಿ, ತನ್ನ ಆಸನವನ್ನೇ ಆತನಿಗೆ ಕೊಟ್ಟು, ಸತ್ಕರಿಸಿ, ಅತಿಥಿಗಳಿಗೆ ಸಲ್ಲಿಸಬೇಕಾದ ಅರ್ಘ್ಯಪಾದ್ಯಾದಿಗಳೆಲ್ಲವನ್ನೂ ಸಾಕ್ಷಾತ್ತಾಗಿ ಸಮರ್ಪಿಸಿ ಪೂಜಿಸಿದನು.

೬. ಇದಲ್ಲದೆ ಆ ರಾಜನು ತನ್ನ ರಾಜ್ಯವನ್ನೂ, ಕೊನೆಗೆ ಅದರ ಜತೆಯಲ್ಲಿ ತನ್ನ ಶರೀರವನ್ನೂ ಆ ಮುನಿಗೆ ಸಮರ್ಪಿಸಿ, ಕೈಜೋಡಿಸಿ ನಿಂತನು. ಅನಂತರ ಆ ಋಷಿಯ ಆಜ್ಞಾನುಸಾರವಾಗಿ ತಾನೂ ಉತ್ತಮವಾದ ಆಸನದಲ್ಲಿ ಕುಳಿತನು.

ಪಪ್ರಚ್ಛ ಕುಶಲಪ್ರಶ್ನಂ ತಪಸ್ಯಧ್ಯಯನೇ ತಥಾ ।
ತಥೇತಿ ಚೋಕ್ತ್ವಾ ಸ ಮುನಿಸ್ತಂ ರಾಜಾನಮಭಾಷತ ॥ ೭ ॥

॥ ಪುಲಸ್ತ್ಯ ಉವಾಚ ॥

ಕಚ್ಚಿತ್ತೇ ಕುಶಲಂ ರಾಜನ್ಕೋಶೇ ಜನಪದೇ ಪುರೇ ।
ಧರ್ಮೇ ಚ ತೇ ಮತಿರ್ನಿತ್ಯಂ ಕಚ್ಚಿತ್ಪಾರ್ಥಿವ ವರ್ತತೇ ॥ ೮ ॥

॥ ಭೀಮ ಉವಾಚ ॥

ಸರ್ವತ್ರ ಕುಶಲಂ ಬ್ರಹ್ಮನ್ಯೇಷಾಂ ಕುಶಲಮಿಚ್ಛಸಿ ।
ತವ ಚಾಗಮನೇನಾಹಂ ಪಾವಿತಃ ಸಂಗವಾರಿಣಾ ॥ ೯ ॥

ಏವಂ ತೌ ಸಂವಿದಂ ಕೃತ್ವಾ ಸಂಭಾಷ್ಯಾಥ ಪರಸ್ಪರಂ ।
ರೇಮಾತೇ ಪೂರ್ವವೃತ್ತಾಂತೈಃ ಕಥಾಭಿರಿತರೇತರಂ ॥ ೧೦ ॥

---

೭. ಅನಂತರ ರಾಜನು ಆ ಋಷಿಗಳ ತಪೋನುಷ್ಠಾನ ವಿಷಯದಲ್ಲೂ ಹಾಗೆಯೇ ಅಧ್ಯಯನ ವಿಷಯದಲ್ಲೂ ಕುಶಲಪ್ರಶ್ನೆ ಮಾಡಿದನು. ಆಗ ಆ ಮುನಿವರ್ಯರು "ಅಯ್ಯಾ ರಾಜನೇ! ನನ್ನ ತಪೋನುಷ್ಠಾನವೂ ವೇದಗಳ ಧಾರಣಾಧ್ಯಯನವೂ ತೊಂದರೆ ಇಲ್ಲದೆ ನಡೆಯುತ್ತಿದೆ. ಆ ವಿಷಯಗಳಲ್ಲಿ ನನಗೆ ಕುಶಲವಾಗಿಯೇ ಇದೆ" ಎಂದು ಹೇಳಿ ಮಾತನ್ನು ಮುಂದುವರಿಸಿದರು.

೮. ಪುಲಸ್ತ್ಯಮುನಿವರ್ಯರು ಹೇಳುತ್ತಾರೆ—ಅಯ್ಯಾ ರಾಜನೇ ! ನಿನಗೆ ಕುಶಲವೇ ? ಮತ್ತು ನಿನ್ನ ಕೋಶ, ದೇಶ, ನಗರ ಇವುಗಳೆಲ್ಲಾ ಕುಶಲವೇ ? ಯಾವಾಗಲೂ ನಿನ್ನ ಬುದ್ಧಿಯು ಧರ್ಮಾಚರಣೆಯಲ್ಲಿಯೇ ಪ್ರವರ್ತಿಸುತ್ತಿದೆಯೇ ? ಎಂದನು.

೯. ಭೀಮರಾಜನು ಹೇಳುತ್ತಾನೆ—ಅಯ್ಯಾ ಬ್ರಹ್ಮರ್ಷಿಯೇ ! ನೀನು ಯಾರಿಗೆ ಕುಶಲವಾಗಲೆಂದು ಬಯಸುವೆಯೋ ಅವರಿಗೆ ಎಲ್ಲಾ ವಿಷಯಗಳಲ್ಲೂ ಕುಶಲವೇ ಇರುವುದು. ಮತ್ತು ನೀನು ಈಗ ಇಲ್ಲಿಗೆ ಬಂದುದರಿಂದ ನಿನ್ನ ಸಂಸರ್ಗವೆಂಬ ಜಲದಿಂದ ನನ್ನ ಪಾಪವು ಕ್ಷಾಲನೆಯಾಗಿ ನಾನು ಪವಿತ್ರನಾದೆನು.

೧೦. ಈರೀತಿ ಆ ಮುನಿವರ್ಯ ಪಾರ್ಥಿವಶ್ರೇಷ್ಠರು ಪರಸ್ಪರ ಕುಶಲಪ್ರಶ್ನೆಮಾಡಿ ಪರಸ್ಪರ ಸಂಭಾಷಣೆಯನ್ನು ಮಾಡುತ್ತಾ ಪೂರ್ವವೃತ್ತಾಂತ ಕಥನಾದಿಗಳಿಂದ ಬಹು ಸಂತೋಷಪಟ್ಟರು.

ತತಃ ಕಥಾಂತೇ ರಾಜೇಂದ್ರ ಪುಲಸ್ತ್ಯಂ ಜಾತವಿಸ್ಮಯಃ ।
ಪಪ್ರಚ್ಛ ಸರ್ವಲೋಕಸ್ಯ ಹಿತಾಯ ಜಗತಃ ಪತಿಃ ॥ ೧೧ ॥

ಭಗವನ್ಪ್ರಾಣಿನಃ ಸರ್ವೇ ಸಂಸಾರಾರ್ಣವಮಧ್ಯಗಾಃ ।
ದೃಶ್ಯಂತೇ ವಿವಿಧೈರ್ದುಃಖೈಃ ಪೀಡ್ಯಮಾನಾ ದಿವಾನಿಶಂ ॥ ೧೨ ॥

ನರಕೇ ಗರ್ಭವಾಸೇ ಚ ವ್ಯಾಧಿಭಿರ್ಜನ್ಮನಾ ತಥಾ ।
ತಥಾ ಕಷ್ಟವಿಯೋಗಾದಿದುಃಖೈರ್ದೌರ್ಗತ್ಯಸಂಭವೈಃ ॥ ೧೩ ॥

ಲಾಲಪ್ಯಮಾನಾ ಬಹವಃ ಪರಪೀಡೋಪಜೀವಿನಃ ।
ಏವಂ ವಿಧಾನ್ಯನೇಕಾನಿ ದುಃಖಾನಿ ಮುನಿಪುಂಗವ ॥ ೧೪ ॥

---

೧೧. ಅಯ್ಯಾ ರಾಜೇಂದ್ರನೇ ! ಈ ಪ್ರಕಾರವಾಗಿ ಪೂರ್ವಕಥೆಯು ಕೊನೆಗೊಂಡ ಮೇಲೆ, ಸರ್ವಲೋಕಕ್ಕೂ ಹಿತವಾಗಲೆಂಬ ಉದ್ದೇಶದಿಂದ ಆ ಪುಲಸ್ತ್ಯಋಷಿಯನ್ನು ಕುರಿತು ಆ ಭೀಮಭೂಪತಿಯು ಆಶ್ಚರ್ಯಪೂರ್ವಕವಾಗಿ ಈ ರೀತಿ ಪ್ರಶ್ನೆ ಮಾಡಿದನು.

೧೨. " ಓ ಪರಮಪೂಜ್ಯನೇ ! ಎಲ್ಲಾ ಪ್ರಾಣಿಗಳೂ ಈ ಸಂಸಾರವೆಂಬ ಸಾಗರದಲ್ಲಿ ಮಗ್ನವಾಗಿ, ಹಗಲೂ ರಾತ್ರಿ ವಿವಿಧ ದುಃಖಗಳಿಂದ ಪೀಡಿತವಾಗಿರುವಂತೆ ಕಾಣುತ್ತದೆ.

೧೩. ನರಕದಲ್ಲಿ ನರಳಿ, ಬಳಿಕ ಗರ್ಭವಾಸದಲ್ಲಿದ್ದು, ಜನಿಸಿದ ಮೇಲೆ ವ್ಯಾಧಿಗಳ ಪೀಡೆ, ಮತ್ತೆ ಜನ್ಮವೆತ್ತುವುದು. ಇತರ ಕಷ್ಟಗಳು, ಇಷ್ಟವಿಯೋಗ, ದಾರಿದ್ರ್ಯಾದಿ ದುಃಖಗಳು, ಇವೆಲ್ಲದರಿಂದ ಪೀಡಿತರಾಗಿ ಬಹುವಿಧವಾಗಿ ಪ್ರಲಾಪ ಮಾಡುತ್ತಾರೆ.

೧೪. ಇನ್ನೂ ಅನೇಕ ಜನರು ಪರಪೀಡೆಯಿಂದಲೇ ಜೀವಿಸುತ್ತಿರುವರು. ಅಯ್ಯಾ ಮುನಿವರ್ಯನೇ ! ಈ ಸಂಸಾರದಲ್ಲಿ ಈ ರೀತಿಯಾದ ಅನೇಕ ದುಃಖಗಳು ಕಾಣಬರುತ್ತದೆ.

ದೃಷ್ಟ್ವೈವ ತಾನಿ ತಾನ್ಯೇವ ಭೃಶಂ ಮೇ ವ್ಯಾಥಿತಂ ಮನಃ |
ತೇಷಾಂ ದುಃಖಾನಿ ಭೂತಾನಾಂ ಪ್ರಾಣಿನಾಂ ಭುವಿ ಮಾನದ || ೧೫ ||

ಉಪಕಾರಕರಂ ಬ್ರೂಹಿ ಮಮಾನುಗ್ರಹಕಾಮ್ಯಯಾ |
ಸ್ವಲ್ಪಾಯಾಸೇನ ಭಗವಞ್ಞಾಯತೇ ಸುಮಹತ್ಫಲಂ || ೧೬ ||

|| ಪುಲಸ್ತ್ಯ ಉವಾಚ ||
ಶೃಣು ರಾಜನ್ಪ್ರವಕ್ಷ್ಯಾಮಿ ವ್ರತಾನಾಮುತ್ತಮಂ ವ್ರತಂ |
ಯದುಪೋಷ್ಯ ನ ದುಃಖಾನಾಂ ಭಾಜನೋ ಜಾಯತೇ ಜನಃ || ೧೭ ||

ಮಾಘಮಾಸೇ ಸಿತೇ ಪಕ್ಷೇ ದ್ವಾದಶೀ ಪಾವನೀ ಸ್ಮೃತಾ |
ತಸ್ಯಾಂ ಜಲಾರ್ದ್ರವಸನ ಉಪೋಷ್ಯ ಸುಖಭಾಗ್ಭವೇತ್ || ೧೮ ||

---

೧೫. ಓ ಋಷಿಯೇ ! ಭೂಲೋಕದಲ್ಲಿ ಚರಾಚರಪ್ರಾಣಿಗಳು ಅನುಭವಿಸುತ್ತಿರುವ ಆ ಪರಿಯ ದುಃಖಗಳನ್ನು ನೋಡಿ ನನ್ನ ಮನಸ್ಸಿಗೆ ಬಹಳ ವ್ಯಥೆಯಾಗಿದೆ.

೧೬. ಎಲೈ ಪೂಜ್ಯಮುನಿಯೇ ! ಆದುದರಿಂದ ನನಗೆ ಅನುಗ್ರಹಿಸಬೇಕೆಂದು ಮನಸ್ಸುಮಾಡಿ, ನಿನಗೆ ಸ್ವಲ್ಪ ಪ್ರಯಾಸವಾದರೂ ಲಕ್ಷಿಸದೆ, ಮಹಾಫಲದಾಯಕವಾದ ಒಂದು ಕರ್ಮವನ್ನು ಯೋಚಿಸಿ, ಎಲ್ಲ ಪ್ರಾಣಿಗಳಿಗೂ ಉಪಕಾರಕವಾಗಲಿ ಎಂದು ಉಪದೇಶಮಾಡಬೇಕು ” ಎಂದನು.

೧೭. ಪುಲಸ್ತ್ಯಮುನಿವರ್ಯರು ಹೇಳುತ್ತಾರೆ—ಅಯ್ಯಾ ರಾಜನೇ ! ಯಾವ ವ್ರತಾಂಗವಾಗಿ ಉಪವಾಸವನ್ನಾಚರಿಸಿದ ಪುರುಷನು ಸರ್ವದುಃಖಗಳಿಂದ ವಿಮುಕ್ತನಾಗುವನೋ ಅಂತಹ ಸರ್ವೋತ್ತಮವಾದ ವ್ರತವನ್ನು ಹೇಳುತ್ತೇನೆ ಶ್ರವಣಮಾಡು.

೧೮. ಮಾಘಶುಕ್ಲದ್ವಾದಶಿಯು ಪರಮಪವಿತ್ರವೆಂದು ಉಕ್ತವಾಗಿದೆ. ಆ ದ್ವಾದಶಿಯದಿನ ಒದ್ದೆಯ ಬಟ್ಟೆಯನ್ನುಟ್ಟು ಉಪವಾಸವನ್ನು ಆಚರಿಸಿದವನು ಸುಖಭಾಗಿಯಾಗುವನು ಎಂದನು.

|| ಭೀಮ ಉವಾಚ ||
ಕಥಂ ಸಾ ಮುನಿಶಾರ್ದೂಲ ಉಪೋಷ್ಯಾ ದ್ವಾದಶೀ ಭವೇತ್ |
ವಿಧಿನಾ ಕೇನ ವಿಪ್ರೇನ್ದ್ರ ತನ್ಮೇ ಬ್ರೂಹಿ ಯಥಾಕ್ರಮಂ　　|| ೧೯ ||

|| ಪುಲಸ್ತ್ಯ ಉವಾಚ ||
ಶೃಣು ರಾಜನ್ನವಹಿತೋ ವ್ರತಂ ಪಾಪಪ್ರಣಾಶನಂ |
ತವ ಶುಶ್ರೂಷಣಾದ್ವಾಚ್ಯಂ ಮಯಾಪ್ಯೇತನ್ನ ಸಂಶಯಃ　　|| ೨೦ ||

ಅದೀಕ್ಷಿತಾಯ ನೋ ದೇಯಾ ನಾಶಿಷ್ಯಾಯ ಕದಾಚನ |
ವಿಷ್ಣುಭಕ್ತಾಯ ಶಾಂತಾಯ ಧರ್ಮನಿಷ್ಠಾಯ ಚೈವ ಹಿ　　|| ೨೧ ||

ವಾಚ್ಯಮೇತನ್ಮಹಾರಾಜ ಭವತಾನ್ಯಸ್ಯ ನ ಕ್ವಚಿತ್ |
ಬ್ರಹ್ಮಹಾ ಗುರುಘಾತೀ ಚ ಬಾಲಸ್ತ್ರೀಘಾತಕಸ್ತಥಾ　　|| ೨೨ ||

---

೧೯. ಭೀಮಭೂಪತಿಯು ಹೇಳುತ್ತಾನೆ—ಅಯ್ಯಾ ಋಷಿವರ್ಯರಾದ ಬ್ರಾಹ್ಮಣೋತ್ತಮರೇ ! ಆ ದ್ವಾದಶಿಯಲ್ಲಿ ಹೇಗೆ ಉಪವಾಸವನ್ನಾಚರಿಸಬೇಕು ? ಮತ್ತು ಆದಿನ ಯಾವ ವಿಧಿಯಿಂದ ಆ ವ್ರತವನ್ನು ಆಚರಿಸಬೇಕು? ಎಂಬುದನ್ನು ವಿಶದವಾಗಿ ನನಗೆ ಹೇಳಿ ಎಂದನು.

೨೦. ಪುಲಸ್ತ್ಯಮುನಿವರ್ಯರು ಹೇಳುತ್ತಾರೆ—ರಾಜನೇ! ಪಾಪನಾಶಕವಾದ ಒಂದು ವ್ರತವನ್ನು ಹೇಳುವೆನು ಸಾವಧಾನವಾಗಿ ಶ್ರವಣಮಾಡು. ಈ ನಿನ್ನ ಶುಶ್ರೂಷೆಯಿಂದ ನಾನು ನಿಜವಾಗಿಯೂ ಸಂತುಷ್ಟನಾಗಿ ನಿನಗೆ ಉಪದೇಶ ಮಾಡುವನು

೨೧. ಅಯ್ಯಾ ಮಹಾರಾಜನೇ ! ಯಜ್ಞಮಾಡಿ ದೀಕ್ಷಿತನಾಗವೆ ಇರುವ ಬ್ರಾಹ್ಮಣನಿಗೂ, ಶಿಷ್ಯವೃತ್ತಿಯನ್ನವಲಂಬಿಸಿ ಸೇವೆಯನ್ನು ಆಚರಿಸದಿರುವವನಿಗೂ, ಯಾವ ಕಾರಣದಿಂದಲೂ ಈ ವ್ರತವನ್ನು ಉಪದೇಶಮಾಡಬಾರದು.

೨೨. ಆದರೆ ಈ ವ್ರತವನ್ನು ವಿಷ್ಣುಭಕ್ತನೂ, ಶಮಾದಿಗುಣಸಂಪನ್ನನೂ, ಧರ್ಮಾನುಷ್ಠಾನನಿರತನೂ, ಆಗಿರುವವನಿಗೇ ಉಪದೇಶ ಮಾಡಬೇಕು. ಇತರರಿಗೆ ಯಾವ ಕಾಲದಲ್ಲೂ ಎಲ್ಲೂ ಉಪದೇಶಿಸಬಾರದು.

ಕೃತಘ್ನೋ ಮಿತ್ರಧ್ರುಕ್ಚೌರಃ ಕ್ಷುದ್ರೋ ಭಗ್ನವ್ರತಸ್ತಥಾ ।
ಮುಚ್ಯತೇ ಪಾತಕೈಃ ಸರ್ವೈರ್ವ್ರತೇನಾನೇನ ಭೂಪತೇ ॥ ೨೩ ॥

ಶುದ್ಧೇ ತಿಥೌ ಮುಹೂರ್ತೇ ಚ ಮಂಟಪಂ ಕಾರಯೇತ್ತತಃ ।
ದಶಹಸ್ತಪ್ರಮಾಣೇನ ದಶಪೂರ್ವೋತ್ತರೇ ಪ್ಲವೇ ॥ ೨೪ ॥

ತನ್ಮಧ್ಯೇ ಪಂಚಹಸ್ತಾಂ ತು ವೇದಿಕಾಂ ಪರಿಕಲ್ಪಯೇತ್ ।
ಶುಕ್ಲಾಂ ಸುಕುಟ್ಟಿಮಾಂ ಭೂಮಿಂ ವೇದ್ಯಾಂ ಕೃತ್ವಾ ಪ್ರಯತ್ನತಃ ॥

ವಿಲಿಖೇನ್ಮಂಡಲಂ ತತ್ರ ಪಂಚವರ್ಣೈರ್ವಿಧಾನತಃ ।
ಬ್ರಾಹ್ಮಣೋ ವೇದಸಂಪನ್ನೋ ವಿಷ್ಣುಭಕ್ತೋ ಜಿತೇಂದ್ರಿಯಃ ॥ ೨೬ ॥

---

೨೩. ಅಯ್ಯಾ ಭೂಪತಿಯೇ ! ಈ ವ್ರತಾನುಷ್ಠಾನದಿಂದ ಬ್ರಹ್ಮಹತ್ಯೆ ಗುರುಹತ್ಯೆ, ಬಾಲಹತ್ಯೆ, ಸ್ತ್ರೀಹತ್ಯೆ, ಕೃತಘ್ನತೆ, ಮಿತ್ರದ್ರೋಹ, ಚೌರ್ಯ, (ಕಳ್ಳತನ) ಚಾಡಿಕೋರತನ, ಪ್ರತಿಜ್ಞಾಭಂಗ ಮುಂತಾದ ಪಾತಕಗಳನ್ನು ಮಾಡಿದವನು ತನ್ನ ಸರ್ವಪಾಪಗಳಿಂದ ಮುಕ್ತನಾಗುತ್ತಾನೆ.

೨೪. ಈ ವ್ರತಾನುಷ್ಠಾತೃವು ಅಖಂಡವೂ ಶುದ್ಧವೂ ಆದ ತಿಥಿಯಲ್ಲಿ ಶುಭಮುಹೂರ್ತದಲ್ಲಿ ಮಂಟಪವನ್ನು ರಚಿಸಬೇಕು: ಆ ಮಂಟಪವು ಪೂರ್ವ ಪಶ್ಚಿಮವಾಗಿಯೂ ದಕ್ಷಿಣೋತ್ತರವಾಗಿಯೂ ದಶಹಸ್ತಪರಿಮಿತ ಅಳತೆಯುಳ್ಳದ್ದಾಗಿರತಕ್ಕದ್ದು.

೨೫. ಆ ಮಂಟಪದ ಮಧ್ಯದಲ್ಲಿ ಐದುಹಸ್ತ ಪ್ರಮಾಣವುಳ್ಳ ಒಂದು ವೇದಿಕೆಯನ್ನು ಕಲ್ಪಿಸಬೇಕು. ಆ ವೇದಿಕೆಯ ಮೇಲ್ಭಾಗವನ್ನು ಪ್ರಯತ್ನ ಪೂರ್ವಕವಾಗಿ ಬಿಳಿಯಬಣ್ಣವುಳ್ಳದ್ದನ್ನಾಗಿ ಮಾಡಬೇಕು.

೨೬. ಆ ವೇದಿಕೆಯ ಮೇಲೆ ವೇದಾಧ್ಯಯನಸಂಪನ್ನನಾಗಿಯೂ, ವಿಷ್ಣು ಭಕ್ತನಾಗಿಯೂ, ಜಿತೇಂದ್ರಿಯನಾಗಿಯೂ, (ಮೂಲಪ್ರಕೃತಿ, ಮಹತ್ತತ್ವ, ಅಹಂ ಕಾರತತ್ವ, ಶಬ್ದಾದಿ ಪಂಚತನ್ಮಾತ್ರಗಳು, ಪೃಥಿವ್ಯಾದಿ ಪಂಚಸ್ಥೂಲ ಭೂತಗಳು, ಏಕಾದಶ ಇಂದ್ರಿಯಗಳು, ಪುರುಷ ಇವೇ ಪಂಚವಿಂಶತಿ ತತ್ವಗಳು.)

**ಪಂಚವಿಂಶತಿತತ್ತ್ವಜ್ಞೈಃ ಸ್ವಾಚಾರಾಭಿರತಸ್ತಥಾ ।**
**ಕುಂಡಾನಿ ಕಲ್ಪಯೇತ್ತತ್ರ ಅಷ್ಟೌ ಚತ್ವಾರಿ ವಾ ಪುನಃ    ॥ ೨೭ ॥**

**ಬ್ರಾಹ್ಮಣಾಂಸ್ತೇಷು ಯುಂಜೀತ ಚಾತುಶ್ಚರಣಿಕಾಞ್ಛುಭಾನ್ ।**
**ಮಧ್ಯೇ ಚ ಮಂಡಲಸ್ಯಾಥ ಕರ್ಣಿಕಾಯಾಂ ಜನಾರ್ದನಂ    ॥ ೨೮ ॥**

**ಪ್ರತ್ಯಙ್ಮುಖಂ ನ್ಯಸೇದ್ದೇವಂ ಚತುರ್ಬಾಹುಮರಿಂದಮ ।**
**ಪೂಜಯೇತ್ತಂ ವಿಧಾನೇನ ಶಾಸ್ತ್ರೋಕ್ತೇನ ವಿಚಕ್ಷಣಃ    ॥ ೨೯ ॥**

**ಗಂಧೈಃ ಪುಷ್ಪೈಸ್ತಥಾಧೂಪೈರ್ನೈವೇದ್ಯೈರ್ವಿವಿಧೈರಪಿ ।**
**ಏವಂ ಸಂಪೂಜ್ಯ ದೇವೇಶಂ ಬ್ರಾಹ್ಮಣೈಃ ಸಹ ದೇಶಿಕಃ    ॥ ೩೦ ॥**

---

೨೭. ಈ ಇಪ್ಪತ್ತೈದು ತತ್ವಗಳ ಸ್ವರೂಪವನ್ನು ಚೆನ್ನಾಗಿ ತಿಳಿದವನಾಗಿಯೂ, ಸದಾಚಾರ ಸಂಪನ್ನನಾಗಿಯೂ ಇರುವ ಬ್ರಾಹ್ಮಣನು, ಪಂಚವರ್ಣದ ರಂಗವಲ್ಲಿಯ ಪುಡಿಗಳಿಂದ ಶಾಸ್ತ್ರಪ್ರಕಾರವಾಗಿ ಮಂಡಲವನ್ನು ಬರೆಯಬೇಕು. ಅಲ್ಲದೆ ಎಂಟೋ ಅಥವಾ ನಾಲ್ಕೋ ಹೋಮಕುಂಡಗಳನ್ನು ರಚಿಸಬೇಕು. (ಮಾಡಬೇಕು).

೨೮. ಅಯ್ಯಾ ರಾಜನೇ ! ಆ ಕುಂಡಗಳಲ್ಲಿ ಹೋಮಮಾಡುವುದಕ್ಕಾಗಿ ಧರ್ಮದ ನಾಲ್ಕು ಪಾದಗಳೂ ಉಳ್ಳ (ಸಂಪೂರ್ಣ ಧರ್ಮವನ್ನು ಆಚರಿಸುತ್ತಿರುವ) ಶುಭಕರರಾದ ಬ್ರಾಹ್ಮಣರನ್ನು ನಿಯಮಿಸಬೇಕು.

೨೯. ಪ್ರಾಜ್ಞನಾದವನು ಈ ಪೂರ್ವೋಕ್ತರೀತಿ ಪಂಚವರ್ಣದ ಚೂರ್ಣಗಳಿಂದ ಬರೆದ ಈ ಮಂಡಲದ ಮಧ್ಯೆ ಕರ್ಣಿಕೆಯಲ್ಲಿ ಚತುರ್ಭುಜನಾದ ಶ್ರೀ ಜನಾರ್ದನ ಮೂರ್ತಿಯನ್ನು ಪ್ರತ್ಯಙ್ಮುಖವಾಗಿ ಸ್ಥಾಪಿಸಿ, ಆ ಮೂರ್ತಿಯಲ್ಲಿ ಶಾಸ್ತ್ರೋಕ್ತ ವಿಧಾನದಿಂದ ಶ್ರೀ ಹರಿಯನ್ನು ಆವಾಹಿಸಬೇಕು.

೩೦. ಆಚಾರ್ಯನು ಬ್ರಾಹ್ಮಣರೊಡಗೂಡಿ ಗಂಧ, ಪುಷ್ಪ, ಧೂಪ, ವಿವಿಧ ನೈವೇದ್ಯ ಇವುಗಳಿಂದ ದೇವಾಧೀಶನಾದ ಶ್ರೀ ಹರಿಯನ್ನು ಪೂಜಿಸಬೇಕು.

ನ್ಯಸೇತ್ಸ್ತಂಭದ್ವಯಂ ಪಶ್ಚಾತ್ತ್ರಿಹಸ್ತಾಸ್ಯಸಮನ್ವಿತಂ ।
ದೇವಸ್ಯಾಭಿಮುಖಂ ತತ್ರ ಪೀಠಂ ತು ಪರಿಕಲ್ಪಯೇತ್ ॥ ೩೧ ॥

ಷಟ್ತ್ರಿಂಶದಂಗುಲಂ ಶ್ರೇಷ್ಠಂ ಚತುರಸ್ರಂ ಸಮಂತತಃ ।
ತತ್ರ ಶಿಕ್ಯಂ ಸಮಾಲಂಬ್ಯ ಸುವೃತ್ತಂ ಸುದೃಢಂ ನವಂ ॥ ೩೨ ॥

ಆರೋಪಯೇದ್ಘಟಂ ತತ್ರ ಯಾದೃಶಂ ತಚ್ಛೃಣುಷ್ವ ಮೇ ।
ಕಲಧೌತಂ ತಥಾ ರೌಪ್ಯಂ ತಾಮ್ರಂ ವಾಪ್ಯಥ ಮೃನ್ಮಯಂ ॥ ೩೩ ॥

ಸರ್ವಲಕ್ಷಣಸಂಯುಕ್ತಂ ದೃಢಂ ವ್ಯಂಗವಿವರ್ಜಿತಂ ।
ತತ್ಸಹಸ್ರಂ ಶತಂ ಕುರ್ಯಾದೇಕಚ್ಛಿದ್ರಮಥಾಪಿ ವಾ ॥ ೩೪ ॥

ಕುಶಲತ್ವಾನುರೂಪೇಣ ಪಾಶೈಕಚ್ಛಿದ್ರಮೇವ ವಾ ।
ಸನ್ನಿಧಾನೇ ತತಃ ಕುರ್ಯಾತ್ಸಲಿಲಂ ವಸ್ತ್ರಪಾವನಂ ॥ ೩೫ ॥

---

೩೧. ಬಳಿಕ ಆಚಾರ್ಯನು ಮಧ್ಯೆ ಮರವನ್ನು ಜೋಡಿಸಿದ ಎರಡು ಕಂಭವನ್ನು ಅಲ್ಲಿ ದೇವಾಭಿಮುಖವಾಗಿ ನೆಡಬೇಕು. ಆ ಕಂಭಗಳ ಮಧ್ಯೆ ಭೂಮಿಯ ಮೇಲೆ ದೇವರಿಗೆ ಇದಿರಾಗಿ ಒಂದು ಪೀಠವನ್ನು ಇರಿಸಬೇಕು.

೩೨. ಆ ಪೀಠವು ಮೂವತ್ತಾರು ಅಂಗುಲ ಸುತ್ತಳತೆಯುಳ್ಳದ್ದಾಗಿಯೂ, ಚತುರಸ್ರ (ಚಚ್ಚೌಕ) ವಾಗಿಯೂ ಇರಬೇಕು. ಆ ಕಂಭಗಳ ಮೇಲ್ಗಡೆ ಜೋಡಿಸಿದ ಮರದ ಮಧ್ಯದಲ್ಲಿ ಒಂದು ಕೊಕ್ಕೆಯಿರಬೇಕು.

೩೩. ಆ ಕೊಕ್ಕೆಯಲ್ಲಿ ದುಂಡಾಗಿಯೂ, ಗಟ್ಟಿಯಾಗಿಯೂ, ಹೊಸದಾಗಿಯೂ ಇರುವ ಕುಂಭವನ್ನು ತೂಗಹಾಕಬೇಕು. ಆ ಗಡಿಗೆಯ ಲಕ್ಷಣವನ್ನು ವಿವರವಾಗಿ ಹೇಳುತ್ತೇನೆ ಕೇಳು. ಅದು ಸುವರ್ಣ, ಇಲ್ಲವೇ ಬೆಳ್ಳಿ, ತಾಮ್ರ ಅಥವಾ ಮಣ್ಣು ಇವುಗಳಲ್ಲಿ ಯಾವುದರಿಂದಲಾದರೂ ಮಾಡಿದ್ದಾಗಿರಬೇಕು.

೩೪. ಆ ಘಟವು ಸರ್ವಲಕ್ಷಣಯುತವೂ, ದೃಢವೂ, ವಿರೂಪವಲ್ಲದ್ದೂ ಆಗಿರಬೇಕಲ್ಲದೆ ಒಂದು ಛಿದ್ರವುಳ್ಳದ್ದಾಗಿ ಇರಬೇಕು.

೩೫. ಅಥವಾ ತನ್ನ ಕೌಶಲ್ಯಾನುಸಾರ ಸಿಕ್ಕದಲ್ಲಿರುವ ರಜ್ಜುವಿನ ಸಂಖ್ಯೆಯನ್ನನುಸರಿಸಿ ಒಂದೊಂದು ರಜ್ಜುವಿಗೆ ಒಂದೊಂದು ಛಿದ್ರದಂತೆ ಎಣಿಸಿ ಆ ಕುಂಭದಲ್ಲಿಯೂ ಅಷ್ಟು ಛಿದ್ರಗಳನ್ನು ಕಲ್ಪಿಸಿರಬೇಕು. ಅನಂತರ ವಸ್ತ್ರದಿಂದ ಶೋಧಿಸಿದ ಪವಿತ್ರವಾದ ಜಲವನ್ನು ಆ ಕುಂಭದಲ್ಲಿ ತುಂಬಬೇಕು.

**ಹೋಮಾರ್ಥಂ ಕಲ್ಪಯೇಚ್ಚಾಪಿ ಪಾಲಾಶ್ಯಃ ಸಮಿಧಃ ಶುಭಾಃ ।**
**ತಿಲಾ ಘೃತಂ ತಥಾ ಕ್ಷೀರಂ ಶಮೀಪತ್ರಾಣಿ ಚೈವ ಹಿ　　॥ ೩೬ ॥**

**ವೇದ್ಯಾಃ ಪೂರ್ವೋತ್ತರೇ ಭಾಗೇ ಗ್ರಹಪೀಠಂ ಪ್ರಕಲ್ಪಯೇತ್ ।**
**ತತ್ರ ಪೂಜ್ಯಾ ಗ್ರಹಾಃ ಸರ್ವೇ ಗ್ರಹಯಜ್ಞವಿಧಾನತಃ　　॥ ೩೭ ॥**

**ಪೂರ್ವಸ್ಯಾಂ ದಿಶಿ ಶಕ್ರಸ್ಯ ಪೂಜಾಂ ಕುರ್ವೀತ ಯತ್ನತಃ ।**
**ದಕ್ಷಿಣಸ್ಯಾಂ ಯಮಸ್ಯಾಥ ಪ್ರತೀಚ್ಯಾಂ ವರುಣಸ್ಯ ಚ　　॥ ೩೮ ॥**

**ಕುಬೇರಸ್ಯ ತಥೋದೀಚ್ಯಾಂ ಬಲಿಂ ಕುರ್ಯಾತ್ಫಲಾಕ್ಷತೈಃ ।**
**ಏವಂ ಸಂಭೃತ್ಯ ಸಂಭಾರಂ ಶುಕ್ಲಾಂಬರಧರಂ ತಥಾ　　॥ ೩೯ ॥**

**ಸಮಾಲಭ್ಯ ಶುಭೈರ್ಗಂಧೈರ್ದರ್ಭಪಾಣಿಮತಂದ್ರಿತಂ ।**
**ಪೀಠಮಾರೋಪಯೇಯುಸ್ತೇ ಯಜಮಾನಂ ದ್ವಿಜೋತ್ತಮಾಃ ॥೪೦॥**

---

೩೬. ಪೂರ್ವೋಕ್ತವಾದ ಕುಂಡಗಳಲ್ಲಿ ಹೋಮಮಾಡುವುದಕ್ಕಾಗಿ ಫಲಾಶದ ಸಮಿತ್ತುಗಳನ್ನೂ, ತಿಲ, ಘೃತ, ಕ್ಷೀರ, ಶಮೀಪತ್ರ ಇವುಗಳನ್ನೂ ಸಿದ್ಧಪಡಿಸಬೇಕು.

೩೭. ಆ ವೇದಿಕೆಯ ಪೂರ್ವೋತ್ತರ ಭಾಗಗಳಲ್ಲಿ ನವಗ್ರಹ ಮಂಡಲವನ್ನು ಬರೆಯಬೇಕು. ಆ ಮಂಡಲದಲ್ಲಿ ಗ್ರಹಯಜ್ಞದಲ್ಲಿ ಉಕ್ತವಾದ ಪ್ರಕಾರ ಎಲ್ಲಾ ಗ್ರಹಗಳನ್ನೂ ಆವಾಹಿಸಿ ಆರಾಧಿಸಬೇಕು.

೩೮. ಗ್ರಹಮಂಡಲದ ಪೂರ್ವದಿಕ್ಕಿನಲ್ಲಿ ಇಂದ್ರನನ್ನೂ ದಕ್ಷಿಣದಿಕ್ಕಿನಲ್ಲಿ ಯಮನನ್ನೂ ಪಶ್ಚಿಮದಿಕ್ಕಿನಲ್ಲಿ ವರುಣನನ್ನೂ,

೩೯. ಹಾಗೆಯೇ ಉತ್ತರದಿಕ್ಕಿನಲ್ಲಿ ಕುಬೇರನನ್ನೂ ಆವಾಹಿಸಿ, ಫಲ ಅಕ್ಷತೆ ಮೊದಲಾದ ಎಲ್ಲಾ ಪೂಜೆಯ ಸಂಭಾರಗಳನ್ನೂ ಸಮಗ್ರವಾಗಿ ಒದಗಿಸಿಕೊಂಡು ಪೂಜೆಮಾಡಿ ಬಲಿಸಮರ್ಪಣೆ ಮಾಡಬೇಕು.

೪೦. ಆಮೇಲೆ ಎಲ್ಲಾ ಬ್ರಾಹ್ಮಣರೂ ಸೇರಿ, ಶುಕ್ಲವಸ್ತ್ರಧಾರಿಯಾಗಿ ಶುಭಕರವಾದ ಗಂಧವಿಟ್ಟು ಪವಿತ್ರಪಾಣಿಯಾಗಿರುವ ಆ ಯಜಮಾನನನ್ನು ಪೂರ್ವೋಕ್ತವಾದ ಪೀಠದ ಮೇಲೆ ಕುಳ್ಳಿರಿಸಬೇಕು.

ಯಜಮಾನೋಽಪಿ ದೇವಸ್ಯ ಸಂಮುಖಃ ಪ್ರಯತಃ ಶುಚಿಃ ।
ಉಪವಿಶ್ಯ ಪಠೇನ್ಮಂತ್ರಂ ಪುರಾಣೋಕ್ತಮಿದಂ ಶೃಣು ॥ ೪೧ ॥

ನಮಸ್ತೇ ದೇವದೇವೇಶ ನಮಸ್ತೇ ಭುವನೇಶ್ವರ ।
ವ್ರತೇನಾನೇನ ಮಾಂ ಪಾಹಿ ಪರಮಾತ್ಮನ್ನಮೋಽಸ್ತು ತೇ ॥ ೪೨ ॥

ತತೋದಕಸ್ಯ ಧಾರಾಸ್ತಾಃ ಪ್ರತ್ಯಂಗೇಷು ಸಮುಸ್ಥಿತಾಃ ।
ಶಿರಸಾ ಧಾರಯೇತ್ತೂಷ್ಣೀಂ ತದ್ಗತೇನಾಂತರಾತ್ಮನಾ ॥ ೪೩ ॥

ಹೋಮಂ ಕುರ್ಯುಸ್ತತೋ ವಿಪ್ರಾ ದಿಕ್ಷು ಸರ್ವಾಸು ತತ್ಪರಾಃ ।
ಪಠೇಯುಃ ಶಾಂತಿಕಾಧ್ಯಾಯಂ ವಿಷ್ಣುಸಂಜ್ಞಾನಿ ಯಾನಿ ವೈ ॥ ೪೪ ॥

---

೪೧. ಆ ಯಜಮಾನನು ಬಾಹ್ಯ ಅಭ್ಯಂತರಗಳಲ್ಲಿ ಶುಚಿ ಸಮನ್ವಿತನಾಗಿ ದೇವತಾಭಿಮುಖವಾಗಿ ಆ ಪೀಠದ ಮೇಲೆ ಕುಳಿತು ಪುರಾಣೋಕ್ತವಾದ ಈ ಮಂತ್ರವನ್ನು ಪಠಿಸಬೇಕು.

೪೨. ಓ ದೇವಾಧಿದೇವನೇ ! ನಿನಗೆ ವಂದಿಸುವೆನು. ಲೋಕಾಧೀಶನೇ ನಿನಗೆ ನಮಸ್ಕಾರ. ಓ ಪರಮಾತ್ಮನೇ ! ಈ ವ್ರತಾಚರಣೆಯಿಂದ ಸಂತುಷ್ಟನಾಗಿ ನನ್ನನ್ನು ರಕ್ಷಿಸು. ನಿನಗೆ ನಮಸ್ಕಾರಗಳು ಎಂಬುದೇ ಈ ಮಂತ್ರಾರ್ಥ

೪೩. ಅನಂತರ ಶಿಕ್ಕದಲ್ಲಿ ಸೇರಿಸಿದ ಘಟದ ಛಿದ್ರಗಳಿಂದ ಉದಕಧಾರೆಗಳು ಶಿರಸ್ಸಿನ ಮೇಲೂ ಪ್ರತ್ಯಂಗಗಳ ಮೇಲೂ ಬೀಳುವಂತೆ ಧರಿಸಬೇಕು. ಆಗ ಮನಸ್ಸಿನಲ್ಲಿ ಶ್ರೀ ಹರಿಯನ್ನೇ ಮೌನವಾಗಿ ಧ್ಯಾನಿಸುತ್ತಾ ಶಿರಸ್ಸಿನಲ್ಲಿ ಆ ಜಲ ಧಾರೆಯನ್ನು ಧರಿಸಬೇಕು.

೪೪. ಅನಂತರ ಹೋಮತತ್ಪರರಾದ ಬ್ರಾಹ್ಮಣರು ಆ ಮಂಟಪದಲ್ಲಿ ದಿಕ್ಕು ದಿಕ್ಕುಗಳಲ್ಲಿ ರಚಿಸಿದ ಹೋಮಕುಂಡಗಳಲ್ಲಿ ಹೋಮಕ್ಕೆ ಆರಂಭಿಸಿ ವಿಷ್ಣು ಪ್ರತಿಪಾದಕವಾದ ಋಗ್ವೇದದ ಶಾಂತಿಯ ಅಧ್ಯಾಯವನ್ನು ಪಠಿಸುತ್ತಾ ಹೋಮ ಮಾಡಬೇಕು.

ವಾದಿತ್ರೈಸ್ತಾಡ್ಯಮಾನೈಶ್ಚ ಶಂಖಗೇಯಸ್ವನೈಸ್ತಥಾ ।
ಪುಣ್ಯಾಹಜಯಶಬ್ದೈಶ್ಚ ವೇದಸ್ವನವಿಮಿಶ್ರಿತೈಃ ॥ ೪೫ ॥

ಮಂಗಲ್ಯೈಃ ಸ್ತುತಿಸಂಯುಕ್ತೈಃ ಕಾರಯೇತ್ತನ್ಮಹೋತ್ಸವಂ ।
ದೇವದೇವಸ್ಯ ಚರಿತಂ ಕೇಶವಸ್ಯ ಮಹಾತ್ಮನಃ ॥ ೪೬ ॥

ಹರಿವಂಶಾದಿಕಂ ಸರ್ವಂ ಶ್ರಾವಯೇದ್ಬ್ರಾಹ್ಮಣೋ ವರಃ ।
ಸೌಪರ್ಣಿಕಮಥಾಖ್ಯಾನಂ ಭಾರತಾಖ್ಯಾನಮೇವ ಚ ॥ ೪೭ ॥

ವ್ಯಾಖ್ಯಾನಕುಶಲಾಃ ಕೇಚಿಚ್ಛ್ರಾವಯೇಯುರತಂದ್ರಿತಾಃ ।
ಅನೇನ ವಿಧಿನಾ ಸರ್ವಾಂ ತಾಂ ರಾತ್ರಿಂ ಪ್ರೀತಿವರ್ಧಿನೀಂ ॥ ೪೮ ॥

ಯಜಮಾನೋ ನಯೇದ್ಧೀಮಾನ್ಯಾವತ್ಸೂರ್ಯೋದಯೋ ಭವೇತ್ ।
ಬ್ರಾಹ್ಮಣಾಶ್ಚಾಪಿ ತಾಂ ರಾತ್ರೀಂ ಜುಹ್ವತೋ ಜಾತವೇದಸಂ ॥ ೪೯ ॥

---

೪೫–೪೬. ಮತ್ತು ಮಂಗಳವಾದ್ಯಘೋಷ, ಶಂಖಧ್ವನಿ, ಸಂಗೀತ, ಧ್ವನಿ ಪುಣ್ಯಾಹ ಮಂತ್ರ ಶಬ್ದ ಜಯಶಬ್ದ ವೇದಘೋಷ ಇವುಗಳಿಂದಲೂ ಮಂಗಳ ಕರವಾದ ವಿಷ್ಣುಸ್ತೋತ್ರಪಾಠ, ಶ್ರೀಮಹಾವಿಷ್ಣುಕಥಾಶ್ರವಣ ಇತ್ಯಾದಿಗಳಿಂದ ಆ ಮಹೋತ್ಸವವನ್ನು ಮಾಡಿಸಬೇಕು.

೪೭. ಶ್ರೇಷ್ಠನಾದ ಬ್ರಾಹ್ಮಣನು ಹರಿವಂಶಾದಿ ಪುರಾಣಗಳನ್ನು ಶ್ರವಣ ಮಾಡಿಸಬೇಕು. ಗಾರುಡಾಖ್ಯಾನ, ಭಾರತಕಥೆ ಇವುಗಳನ್ನೂ ಶ್ರವಣಮಾಡಿಸ ಬೇಕು.

೪೮. ವಾಗ್ಮಿಗಳೂ ವ್ಯಾಖ್ಯಾನಚತುರರೂ ಆದ ಕೆಲವು ಬ್ರಾಹ್ಮಣರು ನಿದ್ರಾಲಸ್ಯಾದಿ ತೊಂದರೆಗಳನ್ನು ಲಕ್ಷಿಸದೆ, ಹರಿವಂಶಾದಿಗಳನ್ನು ಪಠಣ ಮಾಡುತ್ತಾ ಯಜಮಾನನಿಗೆ ಶ್ರವಣ ಮಾಡಿರಬೇಕು.

೪೯. ಯಜಮಾನನು ಈ ಕ್ರಮದಲ್ಲಿ ಆ ರಾತ್ರಿಯೆಲ್ಲವನ್ನೂ ಎಂದರೆ ಮರುದಿನ ಸೂರ್ಯೋದಯವಾಗುವವರೆಗೂ ಸಂತೋಷವಾಗಿ ಕಳೆಯಬೇಕು. ಬ್ರಾಹ್ಮಣರೂ ಕೂಡ ಆ ರಾತ್ರಿಯಲ್ಲಿ ದಿವ್ಯಗಳಾದ ವಿಷ್ಣುಸ್ತೋತ್ರ ಮಂತ್ರ ಗಳನ್ನು ಹೇಳುತ್ತಲೂ

ಮಂತ್ರೈಸ್ತು ವೈಷ್ಣವೈರ್ದಿವ್ಯೈಃ ಕ್ಷಪಯೇಯುರ್ಮಹೀಪತೇ ।
ವಾಸುದೇವಸ್ಯ ಶಿರಸಿ ವಸೋರ್ಧಾರಾಂ ಪ್ರಪಾತಯೇತ್ ॥ ೫೦ ॥

ಕ್ಷೀರೇಣಾಜ್ಯೇನ ವಾ ರಾಜನ್ಸರ್ವಸಿದ್ಧಿಪ್ರದಾಯಿನೀಂ ।
ತತಃ ಪ್ರಭಾತಸಮಯೇ ಯಜಮಾನೋ ದ್ವಿಜೈಃ ಸಹ ॥ ೫೧ ॥

ಸ್ನಾನಂ ಕುರ್ಯಾನ್ನೃಪಶ್ರೇಷ್ಠ ನದ್ಯಾಂ ಸರಸಿ ವಾ ಪುನಃ ।
ಅಥ ವಾ ಶಕ್ತಿಹೀನಸ್ತು ಯಜಮಾನೋಷ್ಣವಾರಿಣಾ ॥ ೫೨ ॥

ತತಃ ಶುಕ್ಲಾನಿ ವಸ್ತ್ರಾಣಿ ಪರಿಧಾಯ ಯತವ್ರತಃ ।
ಅರ್ಘ್ಯಂ ದತ್ವಾ ಭಾಸ್ಕರಾಯ ಸವಿಧಾನಂ ಪ್ರಸನ್ನಧೀಃ ॥ ೫೩ ॥

ಪುಷ್ಪೈರ್ಧೂಪೈಃ ಸನೈವೇದ್ಯೈಃ ಪೂಜಯೇತ್ಪುರುಷೋತ್ತಮಂ ।
ಹುತ್ವಾ ಹುತಾಶನಂ ಭಕ್ತ್ಯಾ ದತ್ವಾ ಪೂರ್ಣಾಹುತಿಂ ತತಃ ॥ ೫೪ ॥

---

೫೦. ಮತ್ತು ಮಂತ್ರವತ್ತಾಗಿ ಅಗ್ನಿಯಲ್ಲಿ ಹೋಮಮಾಡುತ್ತಲೂ ಕಾಲ ಕಳೆಯಬೇಕು. ಅಯ್ಯಾ ರಾಜನೇ ! ಅನಂತರ ಶ್ರೀ ವಾಸುವೇವನ ಶಿರಸ್ಸಿನಲ್ಲಿ ವಸುಧಾರೆಯನ್ನು ಹನಿಸಬೇಕು.

೫೧. ಅಯ್ಯಾ ರಾಜನೇ ! ಸರ್ವಪ್ರಯೋಜನದಾಯಕವಾದ ಆ ವಸು ಧಾರೆಯನ್ನು ಹಾಲಿನಿಂದಲೋ ಅಥವಾ ತುಪ್ಪದಿಂದಲೋ ದೇವನ ಶಿರಸ್ಸಿನಲ್ಲಿ ಅಭಿಷೇಕಿಸಬೇಕು.

೫೨. ಅಯ್ಯಾ ನೃಪೋತ್ತಮನೇ! ಬೆಳಗಾಗುತ್ತಲೆ ಯಜಮಾನನು ಬ್ರಾಹ್ಮ ಣರ ಜತೆಗೂಡಿ ನದಿಯಲ್ಲಿ ಅಥವಾ ತಟಾಕದಲ್ಲಿ ಸ್ನಾನ ಮಾಡಬೇಕು. ಒಂದು ವೇಳೆ ಯಜಮಾನನು ಅಶಕ್ತನಾದರೆ ಬಿಸಿನೀರಿನಲ್ಲಿ ಸ್ನಾನ ಮಾಡಬಹುದು.

೫೩. ಅನಂತರ ಯಜಮಾನನು ಮಡಿಯ ಬಟ್ಟೆಯನ್ನುಟ್ಟು ನಿಯಮವಿಶಿ ಷ್ಟನೂ ಪ್ರಸನ್ನಮನಸ್ಸುಳ್ಳವನೂ ಆಗಿ, ಸೂರ್ಯನಿಗೆ ಅರ್ಘ್ಯಪ್ರದಾನಮಾಡಬೇಕು.

೫೪. ಅನಂತರ ಪುಷ್ಪ, ಧೂಪ, ನೈವೈದ್ಯಾದಿಗಳಿಂದ ಪುರುಷೋತ್ತಮ ನಾದ ಶ್ರೀ ಹರಿಯನ್ನು ಪೂಜೆಮಾಡಿ ಭಕ್ತಿಯಿಂದ ಅಗ್ನಿಯಲ್ಲಿ ಹೋಮಮಾಡಿ ಆ ಮೇಲೆ ಪೂರ್ಣಾಹುತಿಯನ್ನು ಸಮರ್ಪಣಮಾಡಬೇಕು.

ಪೂಜಯೇದ್ಬ್ರಾಹ್ಮಣಾನ್ಸರ್ವಾನ್ಹೋತಾರೋ ಯಜ್ಞಕಲ್ಪಿತಾಃ ।
ಶಯ್ಯಾಭೋಜನಗೋದಾನೈರ್ವಸ್ತ್ರೈರಾಭರಣೈಸ್ತಥಾ ॥ ೫೫ ॥

ಆಚಾರ್ಯಃ ಪೂಜನೀಯೋಽತ್ರ ಸರ್ವಸ್ವೇನಾಪಿ ಭಾರತ ।
ಯೇನ ವಾ ತಸ್ಯ ಸಂತುಷ್ಟಿರ್ದೇವತುಲ್ಯೋ ಗುರುರ್ಯತಃ ॥ ೫೬ ॥

ವಿತ್ತಶಾಠ್ಯವಿಹೀನಸ್ತು ಭಕ್ತಿಶಕ್ತಿಸಮನ್ವಿತಃ ।
ದೀನಾನಾಥವಿಶಿಷ್ಟಾಂಶ್ಚ ಬಂದಿನಶ್ಚ ಸಮಾಗತಾಃ ॥ ೫೭ ॥

ತೇಷಾಮನ್ನಂ ಹಿರಣ್ಯಂ ಚ ದದ್ಯಾಚ್ಛುದ್ಧೇನ ಚೇತಸಾ ।
ಏವಂ ಸಂಪೂಜ್ಯ ವಿಪ್ರಾಯ ಭೋಜಯಿತ್ವಾ ಯಥೇಪ್ಸಿತಂ ॥ ೫೮ ॥

---

೫೫. ಅನಂತರ ಆ ಯಜ್ಞದಲ್ಲಿ ಋತ್ವಿಜರಾಗಿ ಹೋಮಮಾಡಿರುವ ಎಲ್ಲಾ ಬ್ರಾಹ್ಮಣರಿಗೂ ಶಯ್ಯಾದಾನ, ಅನ್ನದಾನ, ಗೋದಾನ, ವಸ್ತ್ರದಾನ, ಆಭರಣದಾನಾದಿಗಳನ್ನಿತ್ತು ಪೂಜೆ ಮಾಡಬೇಕು.

೫೬. ಅಯ್ಯಾ ಭರತವಂಶಜನೇ ! ಈ ವ್ರತದಲ್ಲಿ ಆಚಾರ್ಯನಿಗೆ ಸಮೃದ್ಧಿಯಾಗಿ ಸಂಭಾವನೆಯನ್ನು ಕೊಟ್ಟು ಸತ್ಕಾರ ಮಾಡಬೇಕು. ಅಥವಾ ಏನನ್ನು ದಾನಮಾಡಿದರೆ ಅವನು ಸಂತುಷ್ಟನಾಗುವನೋ ಅದನ್ನೇ ಕೊಡಬೇಕು. ಏತಕ್ಕೆಂದರೆ ಗುರುವು ದೇವರಿಗೆ ಸಮಾನನು.

೫೭. ಈ ವ್ರತಾನುಷ್ಠಾತೃವು ಧನಲೋಭಮಾಡದೆ ಈ ವ್ರತ ಸಂದರ್ಶನಾರ್ಥವಾಗಿ ಬಂದಿರುವ ದರಿದ್ರರು, ಅನಾಥರು, ಶಾಸ್ತ್ರಾಧ್ಯಯನವಿಶಿಷ್ಟರು, ಮುಂತಾದ ಎಲ್ಲರಿಗೂ ಸತ್ಕಾರ ಮಾಡಬೇಕು.

೫೮. ಆಗ ಶುದ್ಧಾಂತಃಕರಣವುಳ್ಳವನಾಗಿ ಅವರಿಗೆ ಅನ್ನದಾನ, ಹಿರಣ್ಯದಾನಾದಿಗಳನ್ನು ಮಾಡಬೇಕು. ಈರೀತಿ ತನ್ನ ಸಂಪತ್ತಿಗನುಸಾರವಾಗಿ ಯಥೇಷ್ಟವಾಗಿ ಬ್ರಾಹ್ಮಣ ಪೂಜೆ, ಸತ್ಕಾರಗಳನ್ನೂ,

ಯಥಾವಿಭವಸಾರೇಣ ಪಶ್ಚಾದ್ಭುಂಜೀತ ವಾಗ್ಯತಃ ।
ಹವಿಷ್ಯಮನ್ನಂ ಯಜ್ಞೇನ ಹವಿಷ್ಯಾಃ ಸಲಿಲಾಸ್ತಥಾ ॥ ೫೯ ॥

ಏವಂ ಯಜ್ಞೋ ಮಹಾರಾಜಂಶ್ಚೋಕ್ತಸ್ತೇ ಸಂಪ್ರಕೀರ್ತಿತಃ ।
ಪಾಪಿಷ್ಠಾಃ ಸರ್ವಪಾಪೇಭ್ಯೋ ಮುಚ್ಯಂತೇ ನಾತ್ರ ಸಂಶಯಃ ॥ ೬೦ ॥

ವಾಜಪೇಯಾತಿರಾತ್ರಾಭ್ಯಾಂ ಯೇ ಯಜಂತಿ ಶತಂ ಸಮಾಃ ।
ಸರ್ವೇ ತೇ ವಿಷ್ಣುಯಾಗಸ್ಯ ಕಲಾಂ ನಾರ್ಹಂತಿ ಷೋಡಶೀಂ ॥ ೬೧ ॥

ಸಪ್ತ ಜನ್ಮಾನಿ ಸೌಭಾಗ್ಯಮಾಯುರಾರೋಗ್ಯಸಂಪದಃ ।
ಪ್ರಾಪ್ನೋತಿ ದ್ವಾದಶೀಮೇತಾಂ ತಾಮುಪೋಷ್ಯ ವಿಧಾನತಃ ॥ ೬೨ ॥

---

೫೯. ಮತ್ತು ಭೋಜನ ಸಮಾರಂಭಾದಿಗಳನ್ನೂ ನೆರವೇರಿಸಿ, ಅನಂತರ ಯಜ್ಞದಲ್ಲಿ ಹವಿಸ್ಸಾಗಿ ಉಪಯೋಗಿಸಿ ಉಳಿದಿರುವ ಅನ್ನ, ತಿಲ, ಇವುಗಳನ್ನು ಮೌನದಿಂದ ತಾನು ಭುಂಜಿಸಬೇಕು.

೬೦. ಅಯ್ಯಾ ಮಹಾರಾಜನೇ ! ಈ ರೀತಿಯಾಗಿ ಪುಲಸ್ತ್ಯನು ಹೇಳಿದ ಈ ಮಹಾಯಜ್ಞವನ್ನು ನಿನಗೆ ನಾನು ಚೆನ್ನಾಗಿ ವಿವರಿಸಿ ಹೇಳಿದೆನು. ಇದನ್ನು ಆಚರಿಸಿ, ಪಾಪಿಗಳು ತಮ್ಮ ಸರ್ವಪಾಪಗಳಿಂದಲೂ ಮುಕ್ತರಾಗುತ್ತಾರೆ. ಈ ವಿಷಯದಲ್ಲಿ ಸಂಶಯವಿಲ್ಲ.

೬೧. ಯಾರು ವಾಜಪೇಯ, ಅತಿರಾತ್ರಗಳೆಂಬ ಎರಡು ಯಾಗಗಳನ್ನು ನೂರುವರ್ಷ ಕಾಲದಲ್ಲಿ ಆಚರಿಸಿದರೂ ವಿಷ್ಣು ಸಂಬಂಧಿಯಾದ ಈ ಯಾಗದ ಹದಿನಾರನೇ ಒಂದು ಅಂಶ ಫಲವನ್ನು ಪಡೆಯಲಾರರು.

೬೨. ಶಾಸ್ತ್ರೋಕ್ತರೀತಿಯಲ್ಲಿ ಈ ದ್ವಾದಶಿಯಲ್ಲಿ ಉಪವಾಸಮಾಡಿ ಈ ವ್ರತವನ್ನಾಚರಿಸಿದವನು, ಏಳು ಜನ್ಮಗಳಲ್ಲಿ ಸೌಭಾಗ್ಯ, ಆರೋಗ್ಯ, ಆಯುಷ್ಯ, ಐಶ್ವರ್ಯ ಇವುಗಳನ್ನೆಲ್ಲಾ ಪಡೆಯುತ್ತಾನೆ.

ಮೃತೋ ವಿಷ್ಣುಪುರಂ ಯಾತಿ ವಿಷ್ಣುನಾ ಸಹ ಮೋದತೇ ।
ಚತುರ್ಯುಗಾನಿ ದ್ವಾತ್ರಿಂಶದ್ವಿಷ್ಣುರೂಪಧರಃ ಸ್ಥಿತಃ || ೬೩ ||

ರುದ್ರಲೋಕೇ ತಥಾ ರಾಜನ್ಯುಗಾನಿ ದ್ವಾದಶೈವ ತು ।
ಬ್ರಹ್ಮಲೋಕೇ ತಥಾ ತ್ರೀಣಿ ಸೂರ್ಯಲೋಕೇ ಯುಗಾನಿ ಚ || ೬೪ ||

ಪುಣ್ಯಕ್ಷಯಾದಿಹಾಭ್ಯೇತ್ಯ ರಾಜಾ ಭವತಿ ಧಾರ್ಮಿಕಃ ।
ಪೃಥಿವ್ಯಧಿಪತಿಃ ಶ್ರೀಮಾನ್ನಿಜಿತಾರಿಃ ಪ್ರತಾಪವಾನ್ || ೬೫ ||

ವ್ರತಮೇತತ್ಪುರಾ ಚೀರ್ಣಂ ಸಗರೇಣ ಮಹಾತ್ಮನಾ ।
ಅಜೇನ ಧುಂಧುಮಾರೇಣ ದಿಲೀಪೇನ ಯಯಾತಿನಾ || ೬೬ ||

ಅನ್ಯೈಶ್ಚ ಪೃಥಿವೀಪಾಲೈಃ ಪಾಲಿತಾಶೇಷಭೂತಲೈಃ ।
ಸ್ತ್ರೀಭಿರ್ವೈಶ್ಯೈಸ್ತಥಾ ಶೂದ್ರೈರ್ಧರ್ಮಕಾಮೈಃ ಸದಾ ನೃಪ || ೬೭ ||

---

೬೩. ಅವನು ದೇಹಾವಸಾನಾನಂತರ ವಿಷ್ಣುಲೋಕಕ್ಕೆ ಹೋಗಿ, ಅಲ್ಲಿ ವಿಷ್ಣುಸಾರೂಪ್ಯವನ್ನು ಪಡೆದು, ವಿಷ್ಣುವಿನ ಜೊತೆಯಲ್ಲ ಮೂವತ್ತೆರಡು ಚತುರ್ಯುಗಗಳು ಕಳೆಯುವವರೆಗೂ ಸಂತೋಷವಾಗಿರುತ್ತಾನೆ.

೬೪. ಅಯ್ಯಾ ರಾಜನೇ ! ಬಳಿಕ ರುದ್ರಲೋಕಕ್ಕೆ ಹೋಗಿ, ಹನ್ನೆರಡು ಚತುರ್ಯುಗಳವರೆಗೆ ಇರುವನು. ಬಳಿಕ ಬ್ರಹ್ಮಲೋಕಕ್ಕೆ ಹೋಗಿ, ಅಲ್ಲಿ ಮೂರು ಚತುರ್ಯುಗಗಳು ಕಳೆಯುವವರೆಗೂ ಇದ್ದು, ಬಳಿಕ ಸೂರ್ಯಲೋಕದಲ್ಲಿ ಮೂರು ಯುಗಗಳಕಾಲ ಸಂತೋಷದಿಂದಿರುವನು.

೬೫. ಅನಂತರ ಪುಣ್ಯಕ್ಷಯವಾದ ಮೇಲೆ ಈ ಭೂಲೋಕಕ್ಕೆ ಮತ್ತೆ ಬಂದು ಜನಿಸಿ ಧಾರ್ಮಿಕನೂ, ಭೂಮಂಡಲಾಧಿಪತಿಯೂ, ಸಂಪತ್‌ಸಮೃದ್ಧನೂ, ಶತ್ರುಂಜಯನೂ, ಪ್ರತಾಪಶಾಲಿಯೂ ಆದ ರಾಜನಾಗುತ್ತಾನೆ.

೬೬. ಈ ವ್ರತವನ್ನು ಪೂರ್ವದಲ್ಲಿ ಮಹಾತ್ಮನಾದ ಸಗರಚಕ್ರವರ್ತಿ, ಅಜರಾಜ, ಧುಂಧುಮಾರ, ದೀಪಲಿಚಕ್ರವರ್ತಿ, ಯಯಾತಿ ಇವರುಗಳು ಆಚರಿಸಿರುತ್ತಾರೆ.

೬೭. ಅಯ್ಯಾ ರಾಜನೇ ! ಈ ಭೂಮಂಡಲವನ್ನು ಸಂಪೂರ್ಣವಾಗಿ ಆಳಿದ ಎಷ್ಟೋ ಮಂದಿ ಪ್ರಾಚೀನರಾಜರುಗಳೂ, ಸ್ತ್ರೀಯರೂ, ವೈಶ್ಯರೂ, ಇದನ್ನು ಆಚರಿಸಿ ಧರ್ಮಶ್ರದ್ಧೆಯುಳ್ಳವರಾಗಿರುತ್ತಾರೆ.

ಭೃಗ್ವಾದ್ಯೈರ್ಮುನಿಭಿಃ ಸರ್ವೈರ್ಬ್ರಾಹ್ಮಣೈರ್ವೇದಪಾರಗೈಃ ।
ತ್ವಯಾ ಚ ಪೃಷ್ಟೇನ ಮಯಾ ಕಥಿತಂ ತೇ ನರಾಧಿಪ ॥ ೬೮ ॥

ಅದ್ಯಪ್ರಭೃತಿಚೈವೇಯಂ ಖ್ಯಾತಿಂ ಯಾಸ್ಯತಿ ಭೂತಲೇ ।
ಭೀಮಾಖ್ಯಾ ದ್ವಾದಶೀ ಚೇತಿ ಕೃತಕೃತ್ಯಾ ಚ ಭಾರತ ॥ ೬೯ ॥

ಏಷಾ ಪುಲಸ್ತ್ಯಮುನಿನಾ ಕಥಿತಾ ಕುರುನಂದನ ।
ಯಶ್ಚೈನಾಂ ಕಥಿತಾಂ ಧ್ಯಾತ್ವಾ ಕುರ್ಯಾದ್ವಾ ಭಕ್ತಿಭಾವತಃ ॥ ೭೦ ॥

ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕೇ ಮಹೀಯತೆ ।
ದರಿದ್ರಶ್ಚಾಪಿ ಭೋಃ ಪಾರ್ಥ ವಿತ್ತಶಾಠ್ಯಂ ವಿವರ್ಜಯೇತ್ ।
ವಿಷ್ಣುಭಕ್ತೇನ ಕರ್ತವ್ಯಾ ಸಂಸಾರಭಯಭೀರುಣಾ ॥ ೭೧ ॥

---

೬೮. ಅಯ್ಯಾ ರಾಜನೇ ! ಭೃಗ್ವಾದಿ ಮುನಿಗಳೂ, ವೇದಪಾರಂಗತರಾದ ಎಲ್ಲಾ ಬ್ರಾಹ್ಮಣರುಗಳೂ, ಈ ವ್ರತವನ್ನು ನಿಯಮಪೂರ್ವಕವಾಗಿ ಮಾಡಿರುತ್ತಾರೆ. ನೀನು ಪ್ರಶ್ನೆ ಮಾಡಿದ್ದರಿಂದ ನಿನಗೆ ನಾನು ಇದನ್ನೆಲ್ಲಾ ಉಪದೇಶ ಮಾಡಿರುತ್ತೇನೆ.

೬೯. ಅಯ್ಯಾ ಭರತವಂಶಜನೇ ! ಈ ಹೊತ್ತಿನಿಂದ ಮೊದಲ್ಗೊಂಡು ಕೃತಕೃತ್ಯತಾ ಸಂಪಾದಕವಾದ ಈ ದ್ವಾದಶೀವ್ರತವು ಭೂಲೋಕದಲ್ಲಿ ಭೀಮದ್ವಾದಶೀವ್ರತವೆಂಬ ನಾಮಧೇಯದಿಂದ ಪ್ರಸಿದ್ಧಿಗೆ ಬರುವುದು.

೭೦. ಅಯ್ಯಾ ಕುರುನಂದನನೇ ! ಹೀಗೆಂದು ಈ ವ್ರತವನ್ನು ಪುಲಸ್ತ್ಯಮುನಿಯು ವಿಧರ್ಭಾಧಿಪತಿಯಾದ ಭೀಮಭೂಪತಿಗೆ ಉಪದೇಶಮಾಡಿದನು. ಮುನಿಯಿಂದ ಉಕ್ತವಾದ ಈ ವ್ರತಪನ್ನು ಯಾವನು ಮನಸ್ಸಿನಲ್ಲಿ ನೆನೆಸುವನೋ ಅಥವಾ ಭಕ್ತಿಯಿಂದ ಆಚರಿಸುವನೋ,

೭೧. ಅವನು ಸರ್ವಪಾಪಗಳಿಂದಲೂ ವಿನಿರ್ಮುಕ್ತನಾಗಿ ವಿಷ್ಣುಲೋಕಕ್ಕೆ ಹೋಗಿ ಅಲ್ಲಿ ಪೂಜಿತನಾಗುತ್ತಾನೆ. ಅಯ್ಯಾ ಪಾರ್ಥನೇ ! ದರಿದ್ರನಾದರೂ ಧನಲೋಭವನ್ನು ತ್ಯಜಿಸಿ, ಯಥಾಶಕ್ತಿ ಇದನ್ನು ಆಚರಿಸಬೇಕು. ಹಾಗೆಯೇ ವಿಷ್ಣುಭಕ್ತನೂ, ಸಂಸಾರ ಭಯಭೀತನೂ ಈ ವ್ರತವನ್ನು ಆಚರಿಸಬೇಕಾದುದು ಅಗತ್ಯ.

ಭೀಮೇನ ಯಾ ಕಿಲ ಪುರಾ ಸಮುಪೋಷಿತಾ ಚ ।
ರಾತ್ರೌ ಘಟಸ್ಥಿತ ಸುಶೀತಲವಾರಿಧಾರಾ ।
ತಾಂ ದ್ವಾದಶೀಂ ದಶಮುಖಾರಿಮುಖಾಚ್ಛ್ರುತಾಂ ಚ ।
ಸಮ್ಯಗ್ವ್ರತೀ ಚರತಿ ಯಾತಿ ಸ ವಿಷ್ಣುಲೋಕೇ ॥ ೭೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಭೀಮದ್ವಾದಶೀ ವ್ರತವರ್ಣನಂ
ನಾಮ ಚತುಃಸಪ್ತತಿತಮೋಽಧ್ಯಾಯಃ.



೭೨. ಪೂರ್ವಕಾಲದಲ್ಲಿ ಭೀಮರಾಜನು ಈ ದ್ವಾದಶಿಯಲ್ಲಿ ಉಪವಾಸವನ್ನಾಚರಿಸಿ, ರಾತ್ರಿಯಲ್ಲಿ ಸಚ್ಛಿದ್ರಘಟಸ್ಥವಾದ ಶೀತಲ ಜಲಧಾರೆಯನ್ನು ಶಿರಸ್ಸಿನಲ್ಲಿ ಧಾರಣೆಮಾಡಿ ಈ ವ್ರತವನ್ನು ಆಚರಿಸಿರುವನು. ಅಂತಹ ರಾವಣಾರಿ ಎನಿಸಿದ ಶ್ರೀ ಮಹಾವಿಷ್ಣುವಿನ ವದನಾರವಿಂದದಿಂದ ಸಾಕ್ಷಾತ್ ಉಪದಿಷ್ಟವಾದ ಈ ವ್ರತವನ್ನು ಯಾವನು ಚೆನ್ನಾಗಿ ಆಚರಿಸುವನೋ ಅವನು ವಿಷ್ಣುಲೋಕಕ್ಕೆ ಹೋಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಭೀಮ
ದ್ವಾದಶೀ ವ್ರತವರ್ಣನೆಯೆಂಬ ಎಪ್ಪತ್ತನಾಲ್ಕನೆಯ
ಅಧ್ಯಾಯವು ಮುಗಿದುದು.



|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಪಂಚಸಪ್ತತಿತಮೋಽಧ್ಯಾಯಃ

---

|| ಯುಧಿಷ್ಠಿರ ಉವಾಚ ||

ಉಪವಾಸಾಸಮರ್ಥಾನಾಂ ಸದೈವ ಪುರುಷೋತ್ತಮ ।
ಏಕಾ ಯಾ ದ್ವಾದಶೀ ಪುಣ್ಯಾ ತಾಂ ವದಸ್ವ ಮಮಾನಘ || ೧ ||

|| ಶ್ರೀ ಕೃಷ್ಣ ಉವಾಚ ||

ಮಾಸಿ ಭಾದ್ರಪದೇ ಶುಕ್ಲಾ ದ್ವಾದಶೀ ಶ್ರವಣಾನ್ವಿತಾ ।
ಸರ್ವಕಾಮಪ್ರದಾ ಪುಣ್ಯಾ ಚೋಪವಾಸೇ ಮಹಾಫಲಾ ।|| ೨ ||

---

## ಎಪ್ಪತ್ತೈದನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಓ ಪುರುಷೋತ್ತಮನೇ ! ಯಾವ ಸಂದರ್ಭದಲ್ಲೂ ಉಪವಾಸವನ್ನಾಚರಿಸುವುದಕ್ಕೆ ಅಸಮರ್ಥರಾದವರಿಗೆ ಪುಣ್ಯ ದಾಯಕವಾದ ಯಾವುದಾದರೂ ದ್ವಾದಶೀ ವ್ರತವಿದ್ದರೆ ಆ ವ್ರತವನ್ನು ನನಗೆ ಹೇಳು ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ ! ಭಾದ್ರಪದ ಮಾಸದ ಶುಕ್ಲಪಕ್ಷ ದ್ವಾದಶಿಯು ಶ್ರವಣನಕ್ಷತ್ರ ಯುತವಾದರೆ ಅದು ಸರ್ವಾರ್ಥ ಸಾಧಕವೂ ಪುಣ್ಯಪ್ರದವೂ ಎನಿಸುವುದು. ಆ ತಿಥಿಯಲ್ಲಿ ಉಪವಾಸವನ್ನಾಚರಿ ಸಿದರೆ ಅದು ಮಹಾಫಲದಾಯಕವಾಗುವುದು.

ಸಂಗಮೇ ಸರಿತಾಂ ಸ್ನಾತ್ವಾ ದ್ವಾದಶ್ಯಾಂ ಸಮುಪೋಷಿತಃ ।
ಅಯತ್ನಾತ್ಸಮವಾಪ್ನೋತಿ ದ್ವಾದಶದ್ವಾದಶೀಫಲಂ ॥ ೩ ॥

ಬುಧಶ್ರವಣದ್ವಾದಶ್ಯಾಮೇವಂ ವೈ ಸಂಯತೋ ಭವೇತ್ ।
ಅತೀವ ಮಹತೀ ತಸ್ಯಾಂ ಕೃತಂ ಸರ್ವಮಥಾಕ್ಷಯಂ ॥ ೪ ॥

ದ್ವಾದಶೀ ಶ್ರವಣೋಪೇತಾ ಯದಾ ಭವತಿ ಭಾರತ ।
ಸಂಗಮೇ ಸರಿತಾಂ ಸ್ನಾತ್ವಾ ಗಂಗಾದಿಸ್ನಾನಜಂ ಫಲಂ ॥ ೫ ॥

ಸೋಪವಾಸಃ ಸಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಜಲಪೂರ್ಣೇ ತಥಾ ಕುಂಭೇ ಸ್ಥಾಪಯಿತ್ವಾ ವಿಚಕ್ಷಣಃ ।
ಪಂಚರತ್ನಸಮೋಪೇತಂ ಸೋಪವೀತಂ ಸುಪೂಜಿತಂ ॥ ೬ ॥

---

೩. ಆ ದ್ವಾದಶೀ ತಿಥಿಯಲ್ಲಿ ನದೀಸಂಗಮಸ್ಥಳದಲ್ಲಿ ಸ್ನಾನಮಾಡಿ ಉಪವಾಸವನ್ನಾಚರಿಸಿದರೆ, ಅವನು ಸ್ವಲ್ಪಾಯಾಸವಾದ ಇದೊಂದರಿಂದಲೇ ಹನ್ನೆರಡು ದ್ವಾದಶಿಯಲ್ಲಿ ಉಪವಾಸವನ್ನಾಚರಿಸಿದುದರಿಂದ ಹೊಂದುವ ಪ್ರಯೋಜನವನ್ನು ಹೊಂದುತ್ತಾನೆ.

೪. ಬುಧವಾರ ಶ್ರವಣನಕ್ಷತ್ರ ಇವುಗಳಿಂದ ಕೂಡಿದ ದ್ವಾದಶಿಯಲ್ಲಿ ಜಿತೇಂದ್ರಿಯನಾಗಿ ಉಪವಾಸವನ್ನಾಚರಿಸಬೇಕು. ಆ ದಿನದಲ್ಲಿ ಮಾಡಿದ ದಾನಧರ್ಮಾದಿಗಳೆಲ್ಲವೂ ಅತಿ ಮಹತ್ವವುಳ್ಳದ್ದಾಗಿ ಅಕ್ಷಯ ಫಲದಾಯಕಗಳಾಗುವುವು.

೫. ಅಯ್ಯಾ ಭರತವಂಶಜನೇ ! ಶ್ರವಣ ನಕ್ಷತ್ರಯುತವಾದ ದ್ವಾದಶಿಯು ಯಾವಾಗ ಬರುವುದೋ, ಆ ದಿನದಲ್ಲಿ ಉಪವಾಸವಿದ್ದು, ನದೀ ಸಂಗಮಸ್ಥಳದಲ್ಲಿ ಸ್ನಾನಮಾಡಿದವನು, ಗಂಗಾಸ್ನಾನದಿಂದ ಲಭಿಸುವ ಫಲವನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ಯಾವ ಸಂಶಯವೂ ಬೇಡ.

೬. ಈ ವ್ರತವನ್ನು ಆಚರಿಸುವ ಪಂಡಿತನು, ಆ ದಿನ ಸ್ನಾನಮಾಡಿದ ಮೇಲೆ ಪಂಚರತ್ನಸಮನ್ವಿತವೂ, ಉಪವೀತಸಹಿತವೂ ಶಂಖ, ಶಾರ್ಙ್ಗ ಮೊದಲಾದುವುಗಳಿಂದ ಅಲಂಕೃತವೂ ಆದ ಪ್ರತಿಮೆ ಮಾಡಿಸಬೇಕು.

ತಸ್ಯ ಸ್ಕಂಧೇ ಸುಘಟಿತಂ ಸ್ಥಾಪಯಿತ್ವಾ ಜನಾರ್ದನಂ ।
ಯಥಾಶಕ್ತಿ ಸ್ವರ್ಣಮಯಂ ಶಂಖಶಾರ್ಙ್ಗವಿಭೂಷಿತಂ ॥ ೭ ॥

ಸ್ನಾಪಯಿತ್ವಾ ವಿಧಾನೇನ ಸಿತಚಂದನಚರ್ಚಿತಂ ।
ಸಿತವಸ್ತ್ರಯುಗಚ್ಛನ್ನಂ ಛತ್ರೋಪಾನದ್ಯುಗಾನ್ವಿತಂ ॥ ೮ ॥

ಓಂ ನಮೋ ವಾಸುದೇವಾಯೇತಿ ಶಿರಃ ಸಂಪೂಜಯೇದ್ಧರೇಃ ।
ಶ್ರೀಧರಾಯ ಮುಖಂ ತದ್ವತ್ಕಂಠಂ ಕೃಷ್ಣಾಯ ವೈ ಪುನಃ ॥ ೯ ॥

ಓಂ ನಮಃ ಶ್ರೀಮತೇ ವಕ್ಷೋ ಭುಜೌ ಸರ್ವಾಸ್ತ್ರಧಾರಿಣೇ ।
ವ್ಯಾಪಕಾಯ ನಮಃ ಕುಕ್ಷೀ ಕೇಶವಾಯೋದರಂ ನಮಃ ॥ ೧೦ ॥

ತ್ರೈಲೋಕ್ಯಜನಕಾಯೇತಿ ಜಾನುಂ ಸಂಪೂಜಯೇದ್ಧರೇಃ ।
ಸರ್ವಾಧಿಪತಯೇ ಜಂಘೇ ಪಾದೌ ಸರ್ವಾತ್ಮನೇ ನಮಃ ॥ ೧೧ ॥

---

೭. ಸ್ವಶಕ್ತಿಯಿದ್ದಷ್ಟರಲ್ಲಿ ಈ ಪ್ರಕಾರ ಇರುವಂತೆ ಭಂಗಾರದಿಂದ ಶ್ರೀ ಜನಾರ್ದನನ ಪ್ರತಿಮೆಮಾಡಿಸಿ ತಂದು, ಆ ಮುಂಚೆ ಜಲಪೂರ್ಣವಾದ ಕಲಶ ವನ್ನು ಸ್ಥಾಪನೆಮಾಡಿದ್ದು ಅದರ ಮೇಲೆ ಈ ಪ್ರತಿಮೆಯನ್ನು ಇರಿಸಬೇಕು.

೮. ಆಗ ವಿಧಿಪ್ರಕಾರವಾಗಿ ಶ್ರೀ ಹರಿಗೆ ಅಮೃತಾಭಿಷೇಕವನ್ನು ಮಾಡಿ ಒರಸಿ, ಶ್ರೀ ಗಂಧವನ್ನು ಲೇಪಿಸಿ, ಶುಕ್ಲವಸ್ತ್ರಯುಗ್ಮವನ್ನು ಹೊದ್ದಿಸಿ; ಛತ್ರಿ, ಪಾದುಕಾಯುಗಳ ಇತ್ಯಾದಿಗಳನ್ನು ಸಮರ್ಪಿಸಿ, ರಾಜೋಪಚಾರ ಮಾಡಬೇಕು.

೯. ಅನಂತರ ಓಂ ನಮೋ ವಾಸುದೇವಾಯ ನಮಃ ಎಂದು ಹೇಳಿ ಶ್ರೀ ಹರಿಯ ಶಿರಸ್ಸನ್ನು ಪೂಜೆ ಮಾಡಬೇಕು. ಶ್ರೀಧರಾಯ ನಮಃ ಎಂದು ಮುಖ ವನ್ನೂ ಕೃಷ್ಣಾಯ ನಮಃ ಎಂದು ಕಂಠವನ್ನೂ ಅರ್ಚಿಸಬೇಕು.

೧೦. ಮತ್ತು ಓಂ ಶ್ರೀಮತೇ ನಮಃ ಎಂದು ವಕ್ಷಸ್ಥಳವನ್ನೂ, ನವಾಸ್ತ್ರ ಧಾರಿಣೇ ನಮಃ ಎಂದು ಹೇಳಿ ಭುಜಗಳನ್ನೂ, ವ್ಯಾಪಕಾಯ ನಮಃ ಎಂದು ಕುಕ್ಷಿಯನ್ನೂ, ಕೇಶವಾಯ ನಮಃ ಎಂದು ಉದರವನ್ನೂ ಅರ್ಚಿಸಬೇಕು.

೧೧. ತ್ರೈಲೋಕ್ಯಜನಕಾಯ ನಮಃ ಎಂದು ಹೇಳಿ ಶ್ರೀಹರಿಯ ಜಾನುಗಳನ್ನೂ, ಸರ್ವಾಧಿಪತಯೇ ನಮಃ ಎಂದು ಶ್ರೀಹರಿಯ ಜಂಘೆಗಳನ್ನೂ ಸರ್ವಾತ್ಮನೇ ನಮಃ ಎಂದು ಹೇಳಿ ಪಾದಗಳನ್ನೂ ಪೂಜಿಸಬೇಕು.

ಅನೇನ ವಿಧಿನಾ ರಾಜನ್ಪುಷ್ಪೈರ್ಧೂಪೈಃ ಸಮರ್ಚಯೇತ್ ।
ತತಸ್ತಸ್ಯಾಗ್ರತೋ ದೇಯಂ ನೈವೇದ್ಯಂ ಘೃತಪಾಚಿತಂ ॥ ೧೨ ॥

ಸೋದಕಾಂಶ್ಚ ನವಾನ್ಕುಂಭಾಞ್ಛಕ್ತ್ಯಾ ದದ್ಯಾದ್ವಿಚಕ್ಷಣಃ ।
ಏವಂ ಸಂಪೂಜ್ಯ ಗೋವಿಂದಂ ಜಾಗರಂ ತತ್ರ ಕಾರಯೇತ್ ॥ ೧೩ ॥

ಪ್ರಭಾತೇ ವಿಮಲೇ ಸ್ನಾತ್ವಾ ಸಂಪೂಜ್ಯ ಗರುಡಧ್ವಜಂ ।
ಪುಷ್ಪಧೂಪಾದಿನೈವೇದ್ಯೈಃ ಫಲೈರ್ವಸ್ತ್ರೈಃ ಸುಶೋಭನೈಃ ।
ತತಃ ಪುಷ್ಪಾಂಜಲಿಂ ಬದ್ಧ್ವಾ ಮಂತ್ರಮೇತಮುದೀರಯೇತ್ ॥ ೧೪ ॥

ನಮೋ ನಮಸ್ತೇ ಗೋವಿಂದ ಬುಧಶ್ರವಣಸಂಜ್ಞಕ ।
ಅಘೌಘಸಂಕ್ಷಯಂ ಕೃತ್ವಾ ಸರ್ವಸೌಖ್ಯಪ್ರದೋ ಭವ ॥ ೧೫ ॥

---

೧೨. ಅಯ್ಯಾ ರಾಜನೇ ! ವಿಧಿಯನ್ನನುಸರಿಸಿ ಪುಷ್ಪಧೂಪಾದಿಗಳಿಂದ ಶ್ರೀ ಹರಿಯನ್ನು ಅರ್ಚಿಸಿ, ಅನಂತರ ಆ ದೇವನ ಮುಂಭಾಗದಲ್ಲಿ ಘೃತಪಕ್ವಗಳಾದ ಭಕ್ಷ್ಯಗಳನ್ನು ನೈವೇದ್ಯವಾಗಿ ಸಮರ್ಪಿಸಬೇಕು.

೧೩. ಈ ವ್ರತವನ್ನಾಚರಿಸುವ ವಿದ್ವಾಂಸನು ಸ್ವಶಕ್ತ್ಯನುಸಾರವಾಗಿ ಉದಕಪೂರಿತಗಳಾದ ನೂತನಕಲಶಗಳನ್ನು ದಾನಮಾಡಬೇಕು. ಈರೀತಿಯಾಗಿ ಶ್ರೀ ಗೋವಿಂದನ ಪೂಜೆಯನ್ನು ಮಾಡಿ ಆ ದಿನ ರಾತ್ರಿಯಲ್ಲಿ ದೇವತಾಸನ್ನಿಧಿಯಲ್ಲಿ ಜಾಗರಣೆಯನ್ನು ಆಚರಿಸಬೇಕು.

೧೪. ಮರುದಿನ ಬೆಳಗಾದ ಮೇಲೆ ನಿರ್ಮಲವಾದ ನೀರಿನಲ್ಲಿ ಸ್ನಾನ ಮಾಡಿ; ಪುಷ್ಪ, ಧೂಪ, ಶುಭವಸ್ತ್ರ ಇತ್ಯಾದಿಗಳಿಂದ ಗರುಡಧ್ವಜನಾದ ಶ್ರೀ ಮಹಾವಿಷ್ಣುವನ್ನು ಪೂಜೆಮಾಡಿ ಮಹಾನೈವೇದ್ಯ, ಫಲ ಇವುಗಳನ್ನು ಸಮರ್ಪಿಸಿ, ಅನಂತರ ಬದ್ಧಾಂಜಲಿಯಾಗಿ ಆ ಅಂಜಲಿಯಲ್ಲಿ ಪುಷ್ಪಗಳನ್ನಿಟ್ಟುಕೊಂಡು ಈ ಮಂತ್ರಪುಷ್ಪಮಂತ್ರವನ್ನು ಪಠಿಸಬೇಕು.

೧೫. ಓ ಬುಧಶ್ರವಣ ಎಂಬ ನಾಮಧೇಯವುಳ್ಳ, ಗೋವಿಂದನೇ ! ನಿನಗೆ ಪುನಃ ಪುನಃ ವಂದಿಸುತ್ತೇನೆ. ಅಂತಹ ನೀನು ನನ್ನ ಪಾಪಸಮುದಾಯವನ್ನು ನಾಶಮಾಡಿ, ಸರ್ವಸೌಖ್ಯಗಳನ್ನೂ ಕೊಡುವವನಾಗು. ಎಂದು ಪುಷ್ಪಾಂಜಲಿ ಸಮರ್ಪಣೆಯ ಮಂತ್ರದ ಭಾವ.

ಏವಂ ಸಂಪೂಜ್ಯ ಗೋವಿಂದಂ ಬ್ರಾಹ್ಮಣಂ ಪೂಜಯೇತ್ತತಃ ।
ಅನಂತರಂ ಬ್ರಾಹ್ಮಣೇ ವೈ ವೇದವೇದಾಂತಪಾರಗೇ ।
ಪುರಾಣಜ್ಞೇ ವಿಶೇಷೇಣ ವಿಧಿವತ್ಸಂಪ್ರದಾಪಯೇತ್ ॥ ೧೬ ॥

ದ್ವಾದಶ್ಯಾಂ ಶ್ರವಣೇ ಯುಕ್ತೇ ಅಶೇಷಾಹಸ್ಕರಾನ್ವಿತೇ ।
ಕರಕಂ ಸಂಗಮೇ ಸ್ನಾತ್ವಾ ಪ್ರೀಯತಾಂ ಮೇ ಜನಾರ್ದನಃ ॥ ೧೭ ॥

॥ ಶ್ರೀ ಕೃಷ್ಣ ಉವಾಚ ॥
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ।
ಮಹತ್ಯರಣ್ಯೇ ಯದ್ವೃತ್ತಂ ಭೂಮಿಪಾಲ ಶೃಣುಷ್ವ ತತ್ ॥ ೧೮ ॥

ದೇಶೋ ದಶಾರ್ಣಕೋ ನಾಮ ತಸ್ಯ ಭಾಗೇ ತು ಪಶ್ಚಿಮೇ ।
ಅಸ್ತಿ ಕಶ್ಚಿನ್ಮರೂದೇಶಃ ಸರ್ವಸತ್ವಭಯಂಕರಃ ॥ ೧೯ ॥

---

೧೬. ಈರೀತಿಯಾಗಿ ಶ್ರೀ ಗೋವಿಂದನಿಗೆ ಪೂಜೆಮಾಡಿ, ಅನಂತರ ಬ್ರಾಹ್ಮಣನಿಗೂ ಪೂಜೆಮಾಡಬೇಕು. ಬ್ರಾಹ್ಮಣ ಪೂಜಾನಂತರದಲ್ಲಿ ವೇದ ವೇದಾಂತ ಪಾರಂಗತನಾಗಿಯೂ, ವಿಶೇಷತಃ ಪುರಾಣಜ್ಞನಾಗಿಯೂ ಇರುವ ಬ್ರಾಹ್ಮಣನನ್ನು ಪೂಜಿಸಬೇಕು.

೧೭. ವಿಧಿವತ್ತಾಗಿ ಪೂರ್ಣತಿಥಿಯುಳ್ಳದ್ದೂ, ಶ್ರವಣಯುಕ್ತವೂ ಆಗಿರುವ ದ್ವಾದಶೀ ದಿನದಲ್ಲಿ, ನದೀ ಸಂಗಮಸ್ಥಳದಲ್ಲಿ ಸ್ನಾನಮಾಡಿ, "ಮೇ ಜನಾರ್ದನಃ ಪ್ರೀಯತಾಂ" ಎಂದು ಹೇಳಿ ಕಮಂಡಲುವನ್ನು ದಾನಮಾಡಬೇಕು.

೧೮. ಪುನಃ ಶ್ರೀ ಕೃಷ್ಣನು ಮುಂದುವರಿಸಿ ಹೇಳುತ್ತಾನೆ—ಅಯ್ಯಾ ಭೂಪತಿಯೇ ! ಘೋರಾರಣ್ಯದಲ್ಲಿ ಹಿಂದೆ ನಡೆದ ಪುರಾತನವಾದ ಒಂದು ಇತಿಹಾಸವನ್ನು ಈ ವಿಷಯದಲ್ಲಿ ಪ್ರಾಜ್ಞರು ಉದಾಹರಿಸುತ್ತಾರೆ. ಅದನ್ನು ಹೇಳುತ್ತೇನೆ ಶ್ರವಣಮಾಡು.

೧೯. ದಶಾರ್ಣ ಎಂಬ ದೇಶದ ಪಶ್ಚಿಮ ಭಾಗದಲ್ಲಿ ಸರ್ವಪ್ರಾಣಿಗಳಿಗೂ ಭಯಜನಕವಾದ ಒಂದು ಮರುಭೂಮಿಯು ಇದೆ.

ಸುತಪ್ತಸಿಕತಾ ಭೂಮಿರ್ಯತ್ರ ದುಷ್ಟಾ ಮಹೋರಗಾಃ ।
ಅಲ್ಪಚ್ಛಾಯದ್ರುಮಾಕೀರ್ಣೋ ಮೃತಪ್ರಾಣಿಸಮಾಕುಲಃ    ॥ ೨೦ ॥

ಶಮೀಖದಿರಪಾಲಾಶಕರೀರೈಃ ಪೀಲುಭಿಃ ಸಹ ।
ತತ್ರ ಭೀಮಾ ದ್ರುಮಾಃ ಪಾರ್ಥ ಕಂಟಕೈಃ ಶಬಲಾ ದೃಢೈಃ    ॥ ೨೧ ॥

ದಗ್ಧಪ್ರಾಣಿಗಣಾಕೀರ್ಣಾ ಯತ್ರ ಭೂರ್ದೃಶ್ಯತೇಽಕ್ವಚಿತ್ ।
ಅನ್ನೋದಕಂ ನೋ ಲಭಂತೇ ರಾಜಂಸ್ತತ್ರಬಲಾಪಕಾಃ    ॥ ೨೨ ॥

ಕದಾಚಿದಪಿ ದೃಶ್ಯಂತೇ ಭ್ರಾಮ್ಯಂತೋ ಹಿ ವಿಹಂಗಮಾಃ ।
ವೃಕ್ಷಾಂತರಗತೈರ್ನಿತ್ಯಂ ಶಿಶುಭಿಸ್ತೃಷಿತೈಃ ಸಮಂ ।
ಉತ್ಕೃತ್ತಜೀವಿತಾ ರಾಜನ್ದೃಶ್ಯಂತೆ ವಿಹಗೋತ್ತಮಾಃ    ॥ ೨೩ ॥

---

೨೦. ಆ ಮರುಭೂಮಿಯು ಬಿಸಿಲಿನಿಂದ ಚೆನ್ನಾಗಿ ಕಾಯ್ದು, ಸುಡುತ್ತಿರುವ ಮರಳುಗಳುಳ್ಳದ್ದಾಗಿಯೂ, ಕ್ರೂರವಿಷಭರಿತವಾದ ಮಹಾಸರ್ಪಸಮನ್ವಿತವಾಗಿಯೂ, ಅಲ್ಪ ಛಾಯೆಗಳುಳ್ಳ ವೃಕ್ಷಗಳುಳ್ಳದ್ದಾಗಿಯೂ, ಅಲ್ಲಲ್ಲಿ ಮೃತಪ್ರಾಣಿ ಸಮನ್ವಿತವಾಗಿಯೂ ಇರುತ್ತಿತ್ತು.

೨೧. ಅಯ್ಯಾ ಧರ್ಮಸೂನುವೇ ! ಮತ್ತು ಆ ಮರುಭೂಮಿಯಲ್ಲಿ ಶಮೀ, ಖದಿರ, ಪಾಲಾಶ, ಸಾರೇಬಿದಿರು, ಗೋನುಮರ(ಪೀಲುವೃಕ್ಷ) ಇತ್ಯಾದಿ ಭಯಂಕರವಾದ ಅದ್ಭುತವೃಕ್ಷಗಳು, ಮೊನಚೂ ದೃಢವೂ ಆದ ಮುಳ್ಳುಗಳು, ಇವುಗಳಿಂದ ಸಂಕೀರ್ಣಗಳಾದ ಪ್ರದೇಶಗಳೇ ಹೇರಳವಾಗಿ ಇದ್ದುವು.

೨೨. ಅಯ್ಯಾ ರಾಜನೇ ! ಆ ಮರುಭೂಮಿಯಲ್ಲಿ ಪ್ರಾಣಿಗಳು ದಹಿಸಿ ಹೋದ ಪ್ರದೇಶಗಳೇ ಕಾಣಬರುತ್ತಿದ್ದುದರಿಂದ ಎಲ್ಲೂ ಸಹಜವಾದ ಭೂಮಿಯು ಕಾಣಿಸುತ್ತಿರಲಿಲ್ಲ. ಅಲ್ಲಿ ಪಕ್ಷಿಗಳಿಗೆ ತಿಂಡಿ ತೀರ್ಥಗಳಾವುವೂ ಸಿಕ್ಕುವುದಿಲ್ಲ.

೨೩. ಅಯ್ಯಾ ರಾಜನೇ ! ಆ ಮರುಭೂಮಿಯಲ್ಲಿ ಯಾವಾಗಲೂ ಯಾವ ಕಾಲದಲ್ಲೂ, ಸಂಚರಿಸುತ್ತಿರುವ ಪಕ್ಷಿಗಳನ್ನು ಕಾಣುವುದೇ ಅಸಾಧ್ಯವಾಗಿತ್ತು. ಇದ್ದ ಕೆಲವು ಶ್ರೇಷ್ಠಪಕ್ಷಿಗಳು ಅಲ್ಲಿರುವ ವೃಕ್ಷಮಧ್ಯದಲ್ಲಿ ನಿತ್ಯವೂ ಬಾಯಾರಿಕೆಯಿಂದ ಕೂಡಿದ ತಮ್ಮ ಮರಿಗಳೊಡಗೂಡಿ ಪ್ರಾಣಪರಿತ್ಯಾಗಮಾಡುವ ಹಾಗೆ ಕಾಣಿಸುತ್ತಿದ್ದವು.

ತೃಷಾತುರಾಶ್ಚ ಸಹಸಾ ಮೃಗಾಃ ಸೈಕತಮಾಗತಾಃ ।
ಸೈಕತೇಷ್ವೇವ ನಶ್ಯಂತಿ ಜಲಂ ಸೈಕತಸೇತುವತ್ ॥ ೨೪ ॥

ತಸ್ಮಿಂಸ್ತಥಾವಿಧೇ ದೇಶೇ ಕಶ್ಚಿದ್ದೈವವಶಾದ್ವಣಿಕ್ ।
ನಿಜಸಾರ್ಥಪರಿಭ್ರಷ್ಟಃ ಪ್ರವಿಷ್ಟೋ ಮರುಜಾಂಗಲೇ ॥ ೨೫ ॥

ಪಿಶಾಚಾನ್ಮಲಿನಾಂಸ್ತೀಕ್ಷ್ಣಾನ್ನಿರ್ಮಾಂಸಾನ್ಭೀಮದರ್ಶನಾನ್ ।
ಇತಸ್ತತಃ ಸಂಚರತೋ ದದರ್ಶ ವಣಿಗುತ್ತಮಃ ॥ ೨೬ ॥

ಬಭ್ರಾಮೋದ್ಭ್ರಾಂತಹೃದಯಃ ಕ್ಷುತ್ತೃಷಾಭ್ರಮಕರ್ಷಿತಃ ।
ಕ್ವ ಗ್ರಾಮಃ ಕ್ವ ಜಲಂ ಕ್ವಾಹಂ ಯಾಸ್ಯಾಮಿ ನ ಬುಬೋಧ ಸಃ ॥೨೭॥

---

೨೪. ಹಾಗೆಯೇ ಮರಳುಗಳ ಸೇತುವೆಯ ಆಕಾರವುಳ್ಳ ದಿಣ್ಣೆಗಳಲ್ಲಿ ಕಾಣುವ ಮರುಮರೀಚಿಕೆಯಲ್ಲಿ ಜಲಭ್ರಾಂತಿಯಿಂದ ಬಾಯಾರಿದ ಮೃಗಗಳು ಆತುರಪಟ್ಟು ಸೈಕತಪ್ರದೇಶಕ್ಕೆ ಓಡಿ ಬಂದು, ನೀರನ್ನು ಕಾಣದೆ ಆ ಮರುಳು ದಿಣ್ಣೆಯಲ್ಲೇ ಬಳಲಿ ಸಾಯುತ್ತವೆ.

೨೫. ಒಂದುಸಲ ಒಬ್ಬ ವ್ಯಾಪಾರಿಯು ತಮ್ಮವರ ಗುಂಪಿನಿಂದ ತಪ್ಪಿಸಿ ಕೊಂಡು ದುರದೃಷ್ಟದ ದೆಸೆಯಿಂದ ಆ ಪ್ರಕಾರ ಬಿರುಗಾಳಿಯಿಂದ ಕೂಡಿದ ಆ ಮರುಭೂಮಿಯಲ್ಲಿ ಪ್ರವೇಶಮಾಡಿದನು.

೨೬. ಮಲಿನಸ್ವರೂಪಿಗಳೂ, ಕ್ರೂರಿಗಳೂ, ಭಯಂಕರಗಳೂ, ಶರೀರದಲ್ಲಿ ಮಾಂಸರಹಿತಗಳೂ, ಆಗಿರುವ ಪಿಶಾಚಗಳು ಆ ಮರುಭೂಮಿಯಲ್ಲಿ ಅತ್ತಿತ್ತ ಸಂಚರಿಸುತ್ತಿರುವುದನ್ನು ಆ ವೈಶ್ಯೋತ್ತಮನು ಕಂಡನು.

೨೭. ಆಗ ಆ ವೈಶ್ಯನು ಚಿತ್ತಭ್ರಮೆಯುಳ್ಳವನಾಗಿ ಹಸಿವು ಬಾಯಾರಿಕೆ ಇವುಗಳಿಂದ ಪೀಡಿತನಾಗಿ, ಅಲ್ಲಿ ತಾನೂ ಸಂಚರಿಸುತ್ತಿದ್ದನು. ಅವನು ಎಲ್ಲಿ ಊರು ಇದೆ ? ಎಲ್ಲಿ ನೀರಿದೆ ? ತಾನು ಎಲ್ಲಿಗೆ ಹೋಗುತ್ತಿದ್ದೇನೆ ಎಂಬ ಯಾವು ದನ್ನೂ ಅರಿಯಲಿಲ್ಲ.

ಅಥ ಪ್ರೇತಾನ್ದದರ್ಶಾಸೌ ತೃಷ್ಣಾವ್ಯಾಕುಲಿತೇಂದ್ರಿಯಾನ್ ।
ಸ್ನಾಯುಬದ್ಧಾಸ್ಥಿಚರಣಾನ್ಪ್ರೇಕ್ಷಮಾಣಾನಿತಸ್ತತಃ　　|| ೨೮ ||

ಪ್ರೇತಸ್ಕಂಧಸಮಾರೂಢಮೇಕಂ ಪ್ರೇತಂ ದದರ್ಶ ಹ ।
ಅಪಶ್ಯದ್ಬಹುಭಿಃ ಪ್ರೇತೈಃ ಸಮಂತಾತ್ಪರಿವಾರಿತಂ　　|| ೨೯ ||

ಆಗಚ್ಛಂತಂ ತಮವ್ಯಗ್ರಂ ಸೃಣಿಶಬ್ದಪುರಸ್ಸರಂ ।
ಪ್ರೇತಸ್ಕಂಧಾನ್ಮಹೀಂ ಗತ್ವಾ ತಸ್ಯಾಂತಿಕಮುಪಾಗಮತ್　　|| ೩೦ ||

ಸ ದೃಷ್ಟ್ವಾಽಥ ವಣಿಕ್ಛ್ರೇಷ್ಠಮಿದಂ ವಚನಮಬ್ರವೀತ್ ।
ಅಸ್ಮಿನ್ವೈ ನಿರ್ಜಲೇ ದೇಶೇ ಗಮನಂ ಭವತಃ ಕಥಂ　　|| ೩೧ ||

---

೨೮. ಅನಂತರ ಬಾಯಾರಿಕೆಯಿಂದ ಸಕಲೇಂದ್ರಿಯಗಳ ವ್ಯಾಕುಲತೆ ಹೊಂದಿದ ಈ ವೈಶ್ಯನು ಅಲ್ಲಿ ಸಂಚರಿಸುತ್ತಾ, ನರಗಳಿಂದ ಕಟ್ಟಲ್ಪಟ್ಟ ಅಸ್ಥಿಚರಣಗಳು ಮಾತ್ರ ಉಳ್ಳವುಗಳಾಗಿಯೂ, ಅತ್ತಿತ್ತ ನೋಡುತ್ತಿರುವವುಗಳಾಗಿಯೂ ಇರುವ ಪ್ರೇತಗಳನ್ನು ಕಂಡನು.

೨೯. ಮತ್ತು ಸುತ್ತಲೂ ಅನೇಕ ಪ್ರೇತಗಳಿಂದ ಪರಿವೃತನಾಗಿಯೂ, ಪ್ರೇತಗಳ ಹೆಗಲುಗಳ ಮೇಲೆ ಆರೂಢನಾಗಿಯೂ ಇರುವ ಒಬ್ಬ ಪ್ರೇತರಾಜನನ್ನು ನೋಡಿದನು.

೩೦. ಆ ಪ್ರೇತರಾಜನು ಬಹಳ ವ್ಯಾಕುಲನಾಗಿ ಅಂಕುಶದ ಶಬ್ದವನ್ನು ಮಾಡುತ್ತಾ ಬರುತ್ತಿದ್ದವನು ಕೂಡಲೆ ಆ ಪ್ರೇತಗಳ ಹೆಗಲಿನಿಂದ ಭೂಮಿಗಿಳಿದು ಆ ವೈಶ್ಯನ ಹತ್ತಿರಕ್ಕೆ ಬಂದನು.

೩೧. ಅನಂತರ ಆ ಪ್ರೇತರಾಜನು ಆ ವೈಶ್ಯನನ್ನು ನೋಡಿ "ಅಯ್ಯಾ ವೈಶ್ಯನೇ ! ಈ ನಿರ್ಜಲಪ್ರದೇಶಕ್ಕೆ ನಿನ್ನ ಆಗಮನವು ಹೇಗೆ ಸಂಭವಿಸಿತು ?" ಎಂಬದಾಗಿ ಪ್ರಶ್ನೆ ಮಾಡಿದನು.

**ತಮುವಾಚ ವಣಿಗ್ಧೀಮಾನ್ಸಾರ್ಥಭ್ರಷ್ಟಸ್ಯ ಚೈವ ಮೇ ।**
**ಪ್ರವೇಶೋ ದೈವಯೋಗೇನ ಪೂರ್ವಕರ್ಮಕೃತೇನ ತು ॥ ೩೨ ॥**

**ತೃಷ್ಣಾ ಮಾಂ ಬಾಧತೇಽತ್ಯರ್ಥಂ ಕ್ಷುದ್ಧುನೋತಿ ಭೃಶಂ ತಥಾ ।**
**ಪ್ರಾಣಾಃ ಕಂಠಮನುಪ್ರಾಪ್ತಾ ವಚನಂ ನಶ್ಯತೀವ ಮೇ ।**
**ಅತ್ರೋಪಾಯಂ ನ ಪಶ್ಯಾಮಿ ಜೀವೇಯಂ ಯೇನ ಕೇನ ಚಿತ್ ॥೩೩॥**

**॥ ಕೃಷ್ಣ ಉವಾಚ ॥**
**ಇತ್ಯೇವಮುಕ್ತೇ ಪ್ರೇತಸ್ತಂ ವಣಿಜಂ ವಾಕ್ಯಮಬ್ರವೀತ್ ।**
**ಪುಂನಾಗಮಿಮಮಾಶ್ರಿತ್ಯ ಪ್ರತೀಕ್ಷಸ್ವ ಮುಹೂರ್ತಕಂ ॥ ೩೪ ॥**

**ಕೃತಾತಿಥ್ಯೋ ಯಥಾಲಾಭಂ ಗಮಿಷ್ಯಸಿ ಯಥಾಸುಖಂ ।**
**ಏವಮುಕ್ತಸ್ತಥಾ ಚಕ್ರೇ ಸ ವಣಿಕ್ತೃಷ್ಣಯಾರ್ದಿತಃ ॥ ೩೫ ॥**

---

೩೨. ಆಗ ಆ ಪ್ರೇತರಾಜನನ್ನು ಕುರಿತು ಆ ಬುದ್ಧಿಶಾಲಿಯಾದ ವೈಶ್ಯನು ಪೂರ್ವಜನ್ಮದ ಕರ್ಮಗಳಿಂದ ಉಂಟಾದ ದುರದೃಷ್ಟವಶದಿಂದ ನಾನು ವ್ಯಾಪಾರಿಗಳ ಗುಂಪಿನಿಂದ ಅಗಲಿಹೋಗಿ ಈ ಪ್ರದೇಶಕ್ಕೆ ಪ್ರವೇಶಿಸಿದೆನು.

೩೩. ಬಾಯಾರಿಕೆಯು ನನ್ನನ್ನು ಹೆಚ್ಚಾಗಿ ಪೀಡಿಸುತ್ತಿದೆ. ಮತ್ತು ಹಸಿವೂ ಬಹಳವಾಗಿ ಪೀಡಿಸುತ್ತಿದೆ. ನನ್ನ ಪ್ರಾಣಗಳು ಕಂಠಗತಗಳಾಗಿವೆ. ಮಾತನಾಡುವುದಕ್ಕೂ ಸಹ ಸಾಧ್ಯವಿಲ್ಲ. ಈ ಸಂದರ್ಭದಲ್ಲಿ ಯಾವ ಉಪಾಯವೂ ನನಗೆ ತೋಚುವುದಿಲ್ಲ. ಏನು ಮಾಡಿದರೆ ನಾನು ಬದುಕಬಹುದು ? ಎಂದು ಆ ಪ್ರೇತರಾಜನಿಗೆ ಹೇಳಿದನು.

೩೪. ಈ ರೀತಿಯಾಗಿ ಆ ವೈಶ್ಯನು ಹೇಳಿದ ಮೇಲೆ ಆ ಪ್ರೇತರಾಜನು ಆ ವೈಶ್ಯನನ್ನು ಕುರಿತು ಅಯ್ಯಾ " ವೈಶ್ಯಶ್ರೇಷ್ಠನೇ ! ಇಲ್ಲಿ ಕಾಣುವ ಪುನ್ನಾಗ ವೃಕ್ಷದ ಮೂಲದಲ್ಲಿ ನೀನು ಒಂದು ಮುಹೂರ್ತದವರೆಗೂ ನಿರೀಕ್ಷಿಸುತ್ತಿರು.

೩೫. ನಮಗೆ ಸಿಕ್ಕಿದಷ್ಟು ತಿಂಡಿ ತೀರ್ಥಗಳಿಂದ ನಾವು ನಿನಗೆ ಆತಿಥ್ಯ ಮಾಡುತ್ತೇವೆ. ಅದನ್ನು ಸ್ವೀಕರಿಸಿ ಸುಖವಾಗಿ ಪ್ರಯಾಣಮಾಡು " ಎಂದು ಹೇಳಿದನು. ಈರೀತಿ ಆ ಪ್ರೇತರಾಜನು ಹೇಳಿದ ಮೇಲೆ ಬಾಯಾರಿಕೆಯಿಂದ ಪೀಡಿತನಾದ ಆ ವೈಶ್ಯನು ಅದೇ ರೀತಿ ನಿರೀಕ್ಷಿಸುತ್ತಿದ್ದನು.

ಮಧ್ಯಾಹ್ನಸಮಯೇ ಪ್ರಾಪ್ತೇ ತತಸ್ತಂ ದೇಶಮಾಗತಃ ।
ಪುನ್ನಾಗವೃಕ್ಷಾತ್ಕರಕೋ ವಾರಿಧಾರಾಮನೋರಮಃ ।
ದಧ್ಯೋದನಸಮಾಯುಕ್ತೋ ವರ್ಧಮಾನೇನ ಸಂಯುತಃ ॥ ೩೬ ॥

ಆಗತೇ ಕರಕೇ ತಸ್ಮಿನ್ಪ್ರಾದಾದತಿಥಯೇ ತದಾ ।
ಭುಕ್ತ್ವಾನ್ನಂ ಚ ಜಲಂ ಪೀತ್ವಾ ವಣಿಕ್ತುಷ್ಟಿಮುಪಾಗತಃ ।
ವಿತೃಷ್ಣೋ ವಿಜ್ವರಶ್ಚೈವ ಕ್ಷಣೇನ ಸಮಪದ್ಯತ ॥ ೩೭ ॥

ತತಸ್ತು ಪ್ರೇತಸಂಘಸ್ಯ ಭೋಕ್ತುಕಾಮಸ್ಯ ವೈ ದದೌ ।
ದಧ್ಯೋದನಂ ಸಪಾನೀಯಂ ಪ್ರೇತಾಸ್ತೃಪ್ತಿಂ ಪರಾಂ ಗತಾಃ ॥ ೩೮ ॥

ಅತಿಥಿಂ ತರ್ಪಯಿತ್ವಾ ಚ ಪ್ರೇತಲೋಕಂ ಚ ಸರ್ವಶಃ ।
ತತಃ ಸ್ವಯಂ ಸ ಬುಭುಜೇ ಭುಕ್ತಶೇಷಂ ಯಥಾಸುಖಂ ॥ ೩೯ ॥

---

೩೬. ಅನಂತರ ಮಧ್ಯಾಹ್ನದ ಸಮಯವಾಗಲು, ಆ ಪುನ್ನಾಗವೃಕ್ಷದಿಂದ ಜಲಧಾರೆಗಳಿಂದು ಕೂಡಿದ ಒಂದು ಸುಂದರ ಕಮಂಡಲುವು ಮೊಸರನ್ನದಿಂದ ತುಂಬಿದ ಒಂದು ಪಾತ್ರೆಯ ಸಮೇತವಾಗಿ ಆ ಪ್ರದೇಶಕ್ಕೆ ಇಳಿದು ಬಂದಿತು.

೩೭. ಅಂತಹ ಜಲಕಮಂಡಲುವು ಬಂದೊಡನೆಯೇ ಆ ಪ್ರೇತರಾಜನು ಅತಿಥಿಯಾದ ಆ ವೈಶ್ಯನಿಗೆ ಅನ್ನೋದಕಗಳನ್ನು ದಾನಮಾಡಿದನು. ಆ ವೈಶ್ಯನು ಆ ದಧ್ಯೋದನವನ್ನು ತಿಂದು, ಜಲಪಾನಮಾಡಿ ತೃಪ್ತನಾದನು. ಒಂದು ಕ್ಷಣಮಾತ್ರದಲ್ಲಿ ಆ ವೈಶ್ಯನಿಗೆ ಬಾಯಾರಿಕೆ ಪರಿಹಾರವಾಯಿತು. ಕ್ಷುದ್ಬಾಧೆಯೂ ಅಡಗಿತು.

೩೮. ಅನಂತರ ಆ ಪ್ರೇತರಾಜನು ಭೋಜನಾಭಿಲಾಷೆಯುಳ್ಳ ಆ ಪ್ರೇತ ಸಂಘಕ್ಕೂ ದಧ್ಯೋದನವನ್ನೂ ಪಾನೀಯವನ್ನೂ ದಾನಮಾಡಿದನು. ಆ ಪ್ರೇತಗಳೂ ಭೋಜನಮಾಡಿ ಜಲಪಾನಮಾಡಿ ಪರಮತೃಪ್ತಿಯನ್ನು ಹೊಂದಿದುವು.

೩೯. ಈರೀತಿ ಆ ಪ್ರೇತರಾಜನು ಮೊದಲು ಅತಿಥಿಯನ್ನು ತೃಪ್ತಿಪಡಿಸಿ ಅನಂತರ ಎಲ್ಲಾ ಪ್ರೇತ ಸಮುದಾಯಕ್ಕೂ ಸಂಪೂರ್ಣವಾಗಿ ತೃಪ್ತಿಯಾಗುವಂತೆ ಮಾಡಿ, ಕೊನೆಗೆ ತಾನು ಆ ಭುಕ್ತಶೇಷವಾದ ಅನ್ನವನ್ನು ಸುಖವಾಗಿ ಭುಂಜಿಸಿದನು.

ತಸ್ಯ ಭುಕ್ತವತಶ್ಚಾನ್ನಂ ಪಾನೀಯಂ ಚ ಕ್ಷಯಂ ಯಯೌ ।
ಪ್ರೇತಾಧಿಪಂ ತತಸ್ತೃಪ್ತೋ ವಣಿಗ್ವಚವಮಬ್ರವೀತ್ ॥ ೪೦ ॥

ಆಶ್ಚರ್ಯಮೇತತ್ಪರಮಂ ವನೇಽಸ್ಮಿನ್ಪ್ರತಿಭಾತಿ ಮೇ ।
ಅನ್ನಪಾನಸ್ಯ ಸಂಪ್ರಾಪ್ತಿಃ ಪರಮಸ್ಯ ಕುತಸ್ತವ ॥ ೪೧ ॥

ಸ್ತೋಕೇನ ಚ ತಥಾನ್ನೇನ ಬಿಭರ್ಷಿ ಸುಬಹೂನ್ಪೃಥಕ್ ।
ತೃಪ್ತಾಃ ಪರಂ ಕಥಂ ತ್ವೇತೇ ನಿರ್ಮಾಂಸಾ ಭಿನ್ನಕುಕ್ಷಯಃ ॥ ೪೨ ॥

ಅಪರಂ ಚ ಕಥಂ ಚೇಹ ಮಮ ಪಾಪಪರಿಕ್ಷಯಃ ।
ಹಸ್ತಾವಲಂಬನಕಸ್ತ್ವಂ ಸಂಪ್ರಾಪ್ತೋ ನಿರ್ಜನೇ ವನೇ ।
ತೃಪ್ತಶ್ಚಾಸಿ ಕಥಂ ಗ್ರಾಸಮಾತ್ರೇಣ ಚ ಶುಭವ್ರತ ॥ ೪೩ ॥

---

೪೦. ಆ ಪ್ರೇತರಾಜನು ಭೋಜನ ಮಾಡಿದ ಮೇಲೆ, ಅನ್ನ ಪಾನೀಯ ಈ ಎರಡೂ ನಿಶ್ಶೇಷವಾಗಿ ಮುಗಿಯಿತು. ಅನಂತರ ಅನ್ನೋದಕಗಳಿಂದ ತೃಪ್ತನಾದ ಆ ವೈಶ್ಯನು ಆ ಪ್ರೇತರಾಜನನ್ನು ಕುರಿತು ಈರೀತಿ ಹೇಳಿದನು.

೪೧. "ಅಯ್ಯಾ ಪ್ರೇತರಾಜನೇ ! ಈ ವಿಷಯಗಳೆಲ್ಲಾ ನನಗೆ ಪರಮಾಶ್ಚರ್ಯವಾಗಿ ಕಾಣಿಸುತ್ತದೆ. ಈ ಮರಳು ಕಾಡಿನಲ್ಲಿ ಉತ್ಕೃಷ್ಟವಾದ ಈ ಅನ್ನೋದಕಗಳು ಎಲ್ಲಿಂದ ನಿನಗೆ ಲಭಿಸಿದುವು ?

೪೨. ಹಾಗೆಯೇ ಅಲ್ಪಪರಿಮಾಣದ ಈ ಅನ್ನದಿಂದ ಬಹು ಮಂದಿಯನ್ನು ಪೃಥಕ್ಕಾಗಿ ಪೋಷಿಸುತ್ತಿರುವೆಯಲ್ಲಾ ? ನಿರ್ಮಾಂಸಗಳಾದ ಉದರಗಳಿಂದ ಕೂಡಿದ ಈ ಪ್ರಾಣಿಗಳು ಇಷ್ಟು ಅಲ್ಪಾನ್ನದಿಂದ ಹೇಗೆ ತೃಪ್ತಗಳಾದುವು ?

೪೩. ಇನ್ನೊಂದು ವಿಷಯವನ್ನು ಕೇಳಬೇಕೆನಿಸುತ್ತದೆ. ಇಲ್ಲಿ ಏನು ಮಾಡಿದರೆ ನನ್ನ ಸಮಸ್ತ ಪಾಪಗಳೂ ನಾಶವಾಗಬಹುದು ? ಈ ನಿರ್ಜನವಾದ ಕಾಡಿನಲ್ಲಿ ನೀನೇ ನನಗೆ ಹಸ್ತಾವಲಂಬನವಾಗಿ ಲಭಿಸಿರುವೆ. ಓ ಪುಣ್ಯಶಾಲಿಯೇ ! ನೀನು ಒಂದು ಕವಳಪ್ರಮಾಣ ಅನ್ನ ಮಾತ್ರದಿಂದ ಹೇಗೆ ತೃಪ್ತನಾದೆ ?

ಕಸ್ತ್ವಮಸ್ಯಾಂ ಸುಘೋರಾಯಾಮಟವ್ಯಾಂ ತು ಕೃತಾಲಯಃ ।
ತನ್ಮೇ ತಂ ಸಂಶಯಂ ಛಿಂಧಿ ಪರಂ ಕೌತೂಹಲಂ ಮಮ ॥ ೪೪ ॥

ಏವಮುಕ್ತಃ ಸ ವಾಣಿಜ್ಯಾ ಪ್ರೇತೋ ವಚನಮಬ್ರವೀತ್ ।
ಶೃಣು ಭದ್ರ ಪ್ರವಕ್ಷ್ಯಾಮಿ ದುಷ್ಕೃತಂ ಕರ್ಮ ಚಾತ್ಮನಃ ॥ ೪೫ ॥

ಶಾಕಲೇ ನಗರೇ ರಮ್ಯೇ ಅಹಮಾಸಂ ಸುದುರ್ಮತಿಃ ।
ವಾಣಿಜ್ಯಾಸಕ್ತಿತಃ ಪೂರ್ವಂ ಕಾಲೋ ನೀತೋ ಮಯಾನಘ ॥ ೪೬ ॥

ಧನಲೋಭಾನ್ಮಯಾ ತತ್ರ ಕದಾಚಿಚ್ಚ ಪ್ರಮಾದಿನಾ ।
ನ ದತ್ತಾ ಭಿಕ್ಷವೇ ಭಿಕ್ಷಾ ತೃಷ್ಣಯಾ ಪೀಡಿತಾಯ ಚ ॥ ೪೭ ॥

ಪ್ರತಿವೇಶೇ ಚ ತತ್ರಾಸೀದ್ಬ್ರಾಹ್ಮಣೋ ಗುಣವಾನ್ಮಮ ।
ಶ್ರವಣದ್ವಾದಶೀಯೋಗೇ ಮಾಸಿ ಭಾದ್ರಪದೇ ತಥಾ ॥ ೪೮ ॥

---

೪೪. ಈ ಘೋರಾರಣ್ಯದಲ್ಲಿ ಮನೆ ಮಾಡಿಕೊಂಡು ವಾಸವಾಗಿರುವ ನೀನು ಯಾರು? ಈ ವಿಷಯಗಳಿಗೆ ಉತ್ತರ ಹೇಳಿ ನನ್ನ ಸಂಶಯವನ್ನು ನಿವೃತ್ತಿಮಾಡು. ನನಗೆ ಇದನ್ನು ತಿಳಿದುಕೊಳ್ಳಬೇಕೆಂದು ಬಹಳ ಕುತೂಹಲವಾಗಿದೆ ಎಂದನು.

೪೫. ಈರೀತಿ ಆ ವೈಶ್ಯನು ಕೇಳಲಾಗಿ ಪ್ರೇತರಾಜನು ಉತ್ತರ ಹೇಳುತ್ತಾನೆ. ಅಯ್ಯಾ ಮಂಗಳಕರನೇ! ನನ್ನ ಪೂರ್ವಜನ್ಮದ ದುಷ್ಕರ್ಮವನ್ನು ಹೇಳುತ್ತೇನೆ ಕೇಳು.

೪೬. ಅಯ್ಯಾ ನಿಷ್ಕಲ್ಮಷ ಹೃದಯನೇ! ಪೂರ್ವಜನ್ಮದಲ್ಲಿ ಸುಂದರವಾದ ಶಾಕಲವೆಂಬ ನಗರದಲ್ಲಿ ನಾನು ಬಹಳ ದುಷ್ಟಬುದ್ಧಿಯುಳ್ಳವನಾಗಿದ್ದೆನು. ಆಗ ನಾನು ವ್ಯಾಪಾರದಲ್ಲಿ ಆಸಕ್ತಿಯುಳ್ಳವನಾಗಿ ಕಾಲಕಳೆದೆನು.

೪೭. ಆ ಜನ್ಮದಲ್ಲಿ ನಾನು ಹಣದಾಶೆಯಿಂದ ಮೈಮರೆತಿದ್ದೆ. ಆದ್ದರಿಂದ ಕದಾಚಿತ್ ಹಸಿವುತೃಷೆಗಳಿಂದ ಪೀಡಿತನಾಗಿ ಬಂದ ಸಂನ್ಯಾಸಿಯೋರ್ವನಿಗೆ ಭಿಕ್ಷೆಯನ್ನು ಕೊಡಲಿಲ್ಲ.

೪೮. ನನ್ನ ನೆರೆಮನೆ (ಪಕ್ಕದಮನೆ) ಯಲ್ಲಿ ಗುಣಶಾಲಿಯಾದ ಒಬ್ಬ ಬ್ರಾಹ್ಮಣನು ವಾಸವಾಗಿದ್ದನು. ಕದಾಚಿತ್ ಭಾದ್ರಪದಮಾಸದ ಶುಕ್ಲಪಕ್ಷದ ದ್ವಾದಶಿಯು ಶ್ರವಣನಕ್ಷತ್ರಯುತವಾಗಿ ಬಂದಾಗ, ನಾನೂ ಆ ವಿಪ್ರನೂ ಜೊತೆಯಲ್ಲಿ ತೋಷಾ ಎಂಬ ನದಿಗೆ ಹೊರಟೆವು.

ಸ ಕದಾಚಿನ್ಮಯಾ ಸಾರ್ಧಂ ತೋಷಾಂ ನಾಮ ನದೀಂ ಯಯೌ ।
ತಸ್ಯಾಶ್ಚ ಸಂಗಮಃ ಪುಣ್ಯೇ ಯತ್ರಾಸೀಚ್ಚಂದ್ರಭಾಗಯಾ ॥ ೪೯ ॥

ಚಂದ್ರಭಾಗಾ ಸೋಮಸುತಾ ತೋಷಾ ಚೈವಾರ್ಕನಂದಿನೀ ।
ತಯೋಃ ಶೀತೋಷ್ಣಸಲಿಲಸಂಗಮಃ ಸುಮನೋಹರಃ ॥ ೫೦ ॥

ತತ್ತೀರ್ಥವರಮಾಸಾದ್ಯ ಪ್ರತಿವೇಶ್ಯಃ ಸ ಚ ದ್ವಿಜಃ ।
ಶ್ರವಣದ್ವಾದಶೀಯೋಗೇ ಸ್ನಾತಶ್ಚೈವಮುಪೋಷಿತಃ ॥ ೫೧ ॥

ಚಂದ್ರಭಾಗಾತೋಷಯೋಶ್ಚ ವಾರಿಧಾನ್ಯೈರ್ನವೈರ್ಘಟೈಃ ।
ದಧ್ಯೋದನಯುತೈಃ ಸಾರ್ಧಂ ಸಂಪೂರ್ಣೈರ್ನರ್ಥಮಾನಕೈಃ ॥ ೫೨ ॥

ಛತ್ರೋಪಾನದ್ಯುಗಂ ವಸ್ತ್ರಂ ಪ್ರತಿಮಾಂ ವಿಧಿವದ್ಧರೇಃ ।
ಚಂದ್ರಭಾಗಾಜೀವನೇನ ದಧ್ಯೋದನಯುತಂ ತದಾ ॥ ೫೩ ॥

---

೪೯. ಆ ತೋಷಾ ನದಿಯೂ ಶುಭಕರವಾದ ಚಂದ್ರಭಾಗಾ ಎಂಬ ನದಿಯೂ ಸಂಗಮವಾಗುವ ಬಳಿಗೆ ನಾವು ಹೋಗಿ ಸೇರಿದೆವು.

೫೦. ಚಂದ್ರಭಾಗಾ ನದಿಯು ಚಂದ್ರನ ಪುತ್ರಿ; ತೋಷಾ ನದಿಯು ಸೂರ್ಯಪುತ್ರಿಯು. ಆದುದರಿಂದ ಶೀತೋಷ್ಣಜಲಗಳಿಂದ ಕೂಡಿದ ಆ ನದಿಗಳ ಸಂಗಮವು ಅತಿ ಸುಂದರವಾಗಿತ್ತು.

೫೧. ಉತ್ತಮವಾದ ಆ ಸಂಗಮಕ್ಕೆ ಹೋಗಿ ಸೇರಿದ ಮೇಲೆ ನನ್ನ ನೆರೆಮನೆಯವನಾದ ಆ ಬ್ರಾಹ್ಮಣನು, ಆ ಶ್ರವಣನಕ್ಷತ್ರಯುಕ್ತ ದ್ವಾದಶೀ ಮಹಾ ಯೋಗಕಾಲದಲ್ಲಿ, ಆ ತೀರ್ಥದಲ್ಲಿ ಸ್ನಾನಮಾಡಿ ಉಪವಾಸವನ್ನು ಆಚರಿಸಿದನು.

೫೨. ಅಲ್ಲದೆ ವಿಧಿವತ್ತಾಗಿ ಶ್ರೀ ಹರಿಯ ಪ್ರತಿಮೆಯನ್ನು ಸ್ಥಾಪಿಸಿ ಆ ಪ್ರತಿಮೆಯಲ್ಲಿ ಆವಾಹಿತನಾದ ಶ್ರೀಹರಿಗೆ ಚಂದ್ರಭಾಗಾ ತೋಷಾ ನದಿಗಳ ಜಲದಿಂದ ಅಭಿಷೇಕ ಮಾಡಿದನು.

೫೩. ಹೊಸಧಾನ್ಯ, ಪಾತ್ರೆಗಳಲ್ಲಿ ತುಂಬಿಸಿದ ದಧ್ಯೋಧನ, ಛತ್ರಿ, ಪಾದುಕೆ, ವಸ್ತ್ರಯುಗ್ಮ, ಇತ್ಯಾದಿಗಳ ಸಮರ್ಪಣದಿಂದ ಪೂಜೆಮಾಡಿ, ಅನಂತರ ದಧ್ಯೋದನವನ್ನೂ ಶ್ರೀ ಹರಿಯ ಪ್ರತಿಮೆಯನ್ನೂ ಚಂದ್ರಭಾಗಾನದಿಯ ಜಲ ಸಹಿತವಾಗಿ ದಾನಕೊಟ್ಟನು.

ಏತತ್ಕೃತ್ವಾ ಗೃಹಂ ಪ್ರಾಪ್ತಸ್ತತಃ ಕಾಲೇನ ಕೇನಚಿತ್ ।
ಪಂಚತ್ವಮುಪಮಾಸಾದ್ಯ ನಾಸ್ತಿಕ್ಯಾತ್ಪ್ರೇತತಾಂ ಗತಃ ।
ಅಸ್ಯಾಮಟವ್ಯಾಂ ಘೋರಾಯಾಂ ಯಥಾ ದೃಷ್ಟಸ್ತ್ವಯಾನಘ॥ ೫೪ ॥

ಬ್ರಹ್ಮಸ್ವಹಾರಿಣಸ್ತ್ವೇತೇ ಪಾಪಾಃ ಪ್ರೇತತ್ವಮಾಗತಾಃ ।
ಪರದಾರರತಾಃ ಕೇಚಿತ್ಸ್ವಾಮಿದ್ರೋಹರತಾಃ ಪರೇ ॥ ೫೫ ॥

ಮಿತ್ರದ್ರೋಹರತಾಃ ಕೇಚಿದ್ದೇಶೇಸ್ಮಿಂಸ್ತು ಸುದಾರುಣೇ ।
ಮಮೈತೇ ಭೃತ್ಯತಾಂ ಯಾತಾ ಅನ್ನಪಾನಕೃತೇನ ಚ ॥ ೫೬ ॥

ಅಕ್ಷಯ್ಯೋ ಭಗವಾನ್ಕೃಷ್ಣಃ ಪರಮಾತ್ಮಾ ಸನಾತನಃ ।
ಯದ್ದೀಯತೇ ತಮುದ್ದಿಶ್ಯ ಅಕ್ಷಯ್ಯಂ ತತ್ಪ್ರಕೀರ್ತಿತಂ ॥ ೫೭ ॥

---

೫೪. ಈರೀತಿ ಈ ವ್ರತವನ್ನಾಚರಿಸಿದ ಬಳಿಕ ಮನೆಗೆ ಬಂದನು. ಅನಂತರ ಕೆಲವು ಕಾಲದ ಮೇಲೆ ನಾನು ಮರಣಹೊಂದಿ ನಾಸ್ತಿಕತೆಯಿಂದ ಪ್ರೇತ ಜನ್ಮವನ್ನು ಪಡೆದೆನು. ಅಯ್ಯಾ ನಿಷ್ಕಲ್ಮಷನೇ! ಈ ಘೋರಾರಣ್ಯದಲ್ಲಿ ಯಾವ ಪ್ರೇತಸ್ವರೂಪನಾಗಿ ನಿನಗೆ ಕಾಣಿಸಿಕೊಂಡೆನೋ ಅಂತಹ ಪ್ರೇತಜನ್ಮವು ನನಗೆ ಪ್ರಾಪ್ತವಾಯಿತು.

೫೫. ಇಲ್ಲಿ ಕಾಣುವ ಇತರ ಪ್ರೇತಗಳು ಬ್ರಹ್ಮಸ್ವತ್ತನ್ನು ಅಪಹರಿಸಿ ಈ ಪ್ರೇತಜನ್ಮವನ್ನು ಪಡೆದುವು. ಈ ಪ್ರೇತಗಳಲ್ಲಿ ಇನ್ನು ಕೆಲವು ಪರಸ್ತ್ರೀರತಗಳು. ಮತ್ತೆ ಕೆಲವು ಸ್ವಾಮಿದ್ರೋಹಿಗಳು.

೫೬. ಇನ್ನು ಕೆಲವು ಮಿತ್ರದ್ರೋಹಿಗಳು. ಆ ಪಾತಕದಿಂದ ಅವರು ಪ್ರೇತಜನ್ಮವನ್ನು ಪಡೆದು ಭಯಂಕರವಾದ ಈ ಮರುಭೂಮಿಯಲ್ಲಿ ವಾಸಿಸುತ್ತಿದ್ದಾರೆ. ಇವರೆಲ್ಲರೂ ಅನ್ನಪಾನದ ಉದ್ದಿಶ್ಯವಾಗಿ ನನ್ನ ಭೃತ್ಯರಾಗಿದ್ದಾರೆ.

೫೭. ಅನಾದಿಯೂ, ಷಡ್ಗುಣೈಶ್ವರ್ಯಸಂಪನ್ನನೂ, ಭಕ್ತದುಃಖಾಪಹಾರಿಯೂ ಆಗಿರುವ ಶ್ರೀ ಪರಮಾತ್ಮನು, ನಾಶರಹಿತನಾಗಿರುವುದರಿಂದ ಅಕ್ಷಯ್ಯನೆಂದು ಹೇಳಲ್ಪಡುತ್ತಾನೆ. ಆದುದರಿಂದ ಆ ಪರಮಾತ್ಮಪ್ರೀತ್ಯರ್ಥವಾಗಿ ಯಾವುದನ್ನು ದಾನಮಾಡಿದರೂ ಅದು ಅಕ್ಷಯ ಫಲದಾಯಕವಾಗುವುದು.

ಮಯಾ ವಿಹೀನಾಃ ಕಿಂ ತ್ವೇತೇ ವನೇಽಸ್ಮಿನ್ಭೃಶದಾರುಣೇ ।
ಪೀಡಾಮನುಭವಿಷ್ಯಂತಿ ದಾರುಣಾಂ ಕರ್ಮಯೋನಿಜಾಂ ॥ ೫೮ ॥

ಏತೇಷಾಂ ತ್ವಂ ಮಹಾಭಾಗ ಮಮಾನುಗ್ರಹಕಾಮ್ಯಯಾ ।
ಅನೇಕನಾಮಗೋತ್ರಾಣಿ ಗೃಹಾಣ ಲೇಖನೇನ ಚ ॥ ೫೯ ॥

ಅಸ್ತು ಕಕ್ಷಾಗತಾ ಚೈವ ತವ ಸಂಪುಟಿಕಾ ಶುಭಾ ।
ಹಿಮವತ್ಯಾಂ ತಥಾಸಾದ್ಯ ತತ್ರ ತ್ವಂ ಲಪ್ಸ್ಯಸೇ ನಿಧಿಂ ॥ ೬೦ ॥

ಗಯಾಶೀರ್ಷೇ ತತೋ ಗತ್ವಾ ಶ್ರಾದ್ಧಂ ಕುರು ಮಹಾಮತೇ ।
ಏಕಮೇಕಮಥೋದ್ದಿಶ್ಯ ಪ್ರೇತಂಪ್ರೇತಂ ಯಥಾಸುಖಂ ॥ ೬೧ ॥

ಏವಂ ಸಂಭಾಷಮಾಣೋಽಸೌ ತಪ್ತಜಾಂಬೂನದಪ್ರಭಃ ।
ವಿಮಾನವರಮಾರುಹ್ಯ ಸ್ವರ್ಗಲೋಕಮಿತೋ ಗತಃ ॥ ೬೨ ॥

---

೫೮. ಜತೆಗೆ ನಾನಿಲ್ಲದಿದ್ದರೆ ಈ ಪ್ರೇತಗಳು ಅತಿಕಠಿಣವಾದ ಈ ಘೋರಾರಣ್ಯದಲ್ಲಿ ತಮ್ಮ ಪೂರ್ವಾರ್ಜಿತದುಷ್ಕರ್ಮಾನುಸಾರವಾಗಿ ಕಠಿಣವಾದ ಪೀಡೆಯನ್ನು ಅನುಭವಿಸುತ್ತವೆ.

೫೯. ಅಯ್ಯಾ ಪುಣ್ಯಶಾಲಿಯೇ ! ಆದುದರಿಂದ ನೀನು ನನಗೆ ಅನುಗ್ರಹ ಮಾಡಬೇಕೆಂಬ ಅಭಿಲಾಷೆಯುಳ್ಳವನಾಗಿ, ಈ ಅನೇಕ ಪ್ರೇತಗಳ ನಾಮ ಮತ್ತು ಗೋತ್ರಾದಿಗಳನ್ನು ಬರೆದುಕೊಂಡು ಸಂಗ್ರಹಿಸು.

೬೦. ಆ ನಾಮಗೋತ್ರಗಳನ್ನು ಬರೆದ ಪತ್ರವನ್ನು ನಿನ್ನ ಶುಭಸಂಪುಟದಲ್ಲಿ ಹಾಕಿಕೊಂಡು ಕಕ್ಷದಲ್ಲಿ (ಕಂಕುಳು) ಇಟ್ಟರು. ನೀನು ಹಿಮವತ್ಪರ್ವತದ ಸಮೀಪಕ್ಕೆ ಹೋದರೆ ಅಲ್ಲಿ ನಿನಗೆ ನಿಧಿಲಾಭವಾಗುವುದು.

೬೧. ಅಯ್ಯಾ ಬುದ್ಧಿಶಾಲಿಯೇ ! ಅನಂತರ ನೀನು ಆ ನಿಧಿ ವ್ಯಯಮಾಡಿ ಗಯೆಗೆ ಹೋಗಿ, ಗಯಾಶೀರ್ಷದಲ್ಲಿ ಒಂದೊಂದು ಪ್ರೇತದ ನಾಮಗೋತ್ರಗಳನ್ನೂ ಹೇಳಿಕೊಂಡು ಬೇರೆಬೇರೆಯಾಗಿ ಅವುಗಳಿಗೆ ಶ್ರಾದ್ಧಕರ್ಮವನ್ನು ಮಾಡು" ಎಂದಿತು.

೬೨. ಈರೀತಿ ವೈಶ್ಯನ ಜತೆಯಲ್ಲಿ ಮಾತನಾಡುತ್ತಿರುವಾಗಲೇ ಆ ಪ್ರೇತರಾಜನು ಪುಟಪಾಕಮಾಡಿದ ಸುವರ್ಣದಂತೆ ಶರೀರದ ಪ್ರಭೆಯುಳ್ಳವನಾಗಿ, ಉತ್ತಮವಾದ ವಿಮಾನಾರೂಢನಾಗಿ ಅಲ್ಲಿಂದ ಸ್ವರ್ಗಲೋಕಕ್ಕೆ ಹೋದನು.

**ಸ್ವರ್ಗತೇ ಪ್ರೇತನಾಥೇ ತು ಪ್ರಭಾವಾತ್ಸ ವಣಿಕ್ಸುಮಾನ್ ।**
**ನಾಮಗೋತ್ರಾಣಿ ಸಂಗೃಹ್ಯ ಪ್ರಯಾತಃ ಸ ಹಿಮಾಚಲಂ ॥ ೬೩ ॥**

**ತತ್ರ ಪ್ರಾಪ್ಯ ನಿಧಿಂ ಗತ್ವಾ ವಿನಿಕ್ಷಿಪ್ಯ ಸ್ವಕೇ ಗೃಹೇ ।**
**ಧನಭಾಗಮುಪಾದಾಯ ಗಯಾಶೀರ್ಷವಟಂ ಯಯೌ ।**
**ಪ್ರೇತಾನಾಂ ಕ್ರಮಶಸ್ತತ್ರ ಚಕ್ರೇ ಶ್ರಾದ್ಧಂ ದಿನೇ ದಿನೇ ॥ ೬೪ ॥**

**ಯಸ್ಯ ಯಸ್ಯ ಗಯಾಶ್ರಾದಂ ಸ ಕರೋತಿ ದಿನೇ ವಣಿಕ್ ।**
**ಸ ಚ ತಸ್ಯ ಸದಾ ಸ್ವಪ್ನೇ ದರ್ಶಯತ್ಯಾತ್ಮನಸ್ತನುಂ ॥ ೬೫ ॥**

**ಬ್ರವೀತಿ ಚ ಮಹಾಭಾಗ ಪ್ರಸಾದೇನ ತವಾನಘ ।**
**ಪ್ರೇತಭಾವೋ ಮಯಾ ತ್ಯಕ್ತಃ ಪ್ರಾಪ್ತೋಽಸ್ಮಿ ಪರಮಾಂ ಗತಿಂ ॥ ೬೬ ॥**

---

೬೩. ಆ ಪ್ರೇತರಾಜನು ಸ್ವರ್ಗಕ್ಕೆ ತೆರಳಿದ ಮೇಲೆ ಆ ವೈಶ್ಯನು ಅವನ ಪ್ರಭಾವದಿಂದ ಆ ಪ್ರೇತಗಳ ನಾಮಗೋತ್ರಗಳನ್ನು ಸಂಗ್ರಹಿಸಿ, ಅನಂತರ ಹಿಮವತ್‌ಪರ್ವತಕ್ಕೆ ಹೊರಟು ಹೋದನು.

೬೪. ಆ ಪರ್ವತದಲ್ಲಿ ಪ್ರೇತರಾಜನ ವಚನಪ್ರಕಾರವಾಗಿ ನಿಧಿಯನ್ನು ಪಡೆದು, ತನ್ನ ಮನೆಗೆಹೋಗಿ ಅಲ್ಲಿ ಆ ನಿಧಿಯನ್ನಿಟ್ಟು, ಆ ಧನದ ಒಂದು ಅಂಶವನ್ನು ತೆಗೆದುಕೊಂಡು, ಗಯಾಶೀರ್ಷದ ವಟವೃಕ್ಷದಮೂಲಕ್ಕೆ ಹೋದನು. ಅಲ್ಲಿಗೆ ಹೋಗಿ ಕ್ರಮವಾಗಿ ದಿನೇದಿನೇ ಒಂದೊಂದು ಪ್ರೇತಕ್ಕೆ ಶ್ರಾದ್ಧಕರ್ಮವನ್ನು ನೆರವೇರಿಸಿದನು.

೬೫. ಆ ವೈಶ್ಯನು ಯಾವ ಯಾವ ದಿನದಲ್ಲಿ ಯಾವ ಯಾವ ಪ್ರೇತಕ್ಕೆ ಗಯಾಶ್ರಾದ್ಧವನ್ನು ಮಾಡುವನೋ, ಆಯಾ ಪ್ರೇತವು ಆ ದಿನದಲ್ಲಿ ಆ ವೈಶ್ಯನಿಗೆ ಸ್ವಪ್ನದಲ್ಲಿ ತನ್ನ ಶರೀರವನ್ನು ತೋರಿಸುತ್ತಿತ್ತು.

೬೬. ಹೀಗೆ ಸ್ವಪ್ನದಲ್ಲಿ ಅವನಿಗೆ ಕಾಣಿಸಿಕೊಂಡು “ ಓ ಮಹಾಭಾಗ್ಯಶಾಲಿಯೇ ! ನಿನ್ನ ಅನುಗ್ರಹದಿಂದ ನಾನು ಪ್ರೇತಜನ್ಮದಿಂದ ಮುಕ್ತನಾಗಿ ಪರಮಗತಿಯನ್ನು ಹೊಂದಿದ್ದೇನೆ ” ಎಂದು ಹೇಳುತ್ತಿತ್ತು.

ಸ ಕೃತ್ವಾ ಧನಲೋಭಾಚ್ಚ ಪ್ರೇತಾನಾಂ ಸತ್ಕೃತಿಂ ವಣಿಕ್ ।
ಜಗಾಮ ಸ್ವಗೃಹಂ ತತ್ರ ಮಾಸಿ ಭಾದ್ರಪದೇ ತಥಾ ॥ ೬೭ ॥

ಶ್ರವಣದ್ವಾದಶೀಯೋಗೇ ಪೂಜಯಿತ್ವಾ ಜನಾರ್ದನಂ ।
ದಾನಂ ಚ ದತ್ವಾ ವಿಪ್ರೇಭ್ಯಃ ಸೋಪವಾಸೋ ಜಿತೇಂದ್ರಿಯಃ ॥ ೬೮ ॥

ಮಹಾನದೀಸಂಗಮೇಷು ಪ್ರತಿವರ್ಷಂ ಯುಧಿಷ್ಠಿರ ।
ಚಕಾರ ವಿಧಿವದ್ದಾನಂ ತತೋ ದಿಷ್ಟಾಂತಮಾಗತಃ ॥ ೬೯ ॥

ಅವಾಪ ಪರಮಂ ಸ್ಥಾನಂ ದುರ್ಲಭಂ ಚಾತ್ರ ಮಾನವೈಃ ।
ಯತ್ರ ಕಾಮಫಲಾ ವೃಕ್ಷಾ ನದ್ಯಃ ಪಾಯಸಕರ್ದಮಾಃ ।
ಶೀತಲಾಮಲಪಾನೀಯಾಃ ಪುಷ್ಕರಿಣ್ಯೋ ಮನೋಹರಾಃ ॥ ೭೦ ॥

---

೬೭. ಆ ವೈಶ್ಯನು ನಿಧಿಪ್ರಾಪ್ತಿಯಾಗುವುದೆಂಬ ಹಣದಾಶೆಯಿಂದ ಯುಕ್ತನಾಗಿ, ನಿಧಿ ಸಿಕ್ಕುತ್ತಲೆ ಆ ಪ್ರೇತಗಳಿಗೆ ಸದ್ಗತಿಪ್ರದವಾದ ಶ್ರಾದ್ಧವನ್ನು ಮಾಡಿ ಸ್ವಗೃಹಕ್ಕೆ ಹಿಂದಿರುಗಿ ಬಂದನು.

೬೮. ಅಲ್ಲದೆ ಭಾದ್ರಪದಮಾಸದಲ್ಲಿ ಶ್ರವಣದ್ವಾದಶಿಯು ಬಂದಾಗ ಉಪವಾಸವನ್ನಾಚರಿಸಿ ಜಿತೇಂದ್ರಿಯನಾಗಿ ಶ್ರೀ ಜನಾರ್ದನನನ್ನರ್ಚಿಸಿ ಬ್ರಾಹ್ಮಣರಿಗೆ ದಾನವನ್ನೂ ಕೊಟ್ಟನು.

೬೯. ಅಯ್ಯಾ ಯುಧಿಷ್ಠಿರನೇ ! ಆತನು ಪ್ರತಿವರ್ಷದಲ್ಲೂ ಮಹಾನದೀ ಸಂಗಮಸ್ಥಳದಲ್ಲಿ ವಿಧಿವತ್ತಾಗಿ ಈ ವ್ರತವನ್ನಾಚರಿಸಿ, ದಾನಮಾಡುತ್ತಿದ್ದನು. ಅದರಿಂದ ಅವನು ಆ ಪುಣ್ಯಫಲವನ್ನು ಹೊಂದಿದನು.

೭೦. ಈ ಲೋಕದಲ್ಲಿ ವಾಸಿಸುವವರಿಗೆ ದುರ್ಲಭವಾದ ಪರಮಪದವನ್ನು ಆ ವೈಶ್ಯನು ಈ ವ್ರತಾಚರಣದಿಂದ ಹೊಂದಿದನು. ಅವನು ಪಡೆದ ಆ ಲೋಕದಲ್ಲಿ ಎಲ್ಲಾ ವೃಕ್ಷಗಳೂ ಅಲ್ಲಿನ ನಿವಾಸಿಗಳಿಗೆ ಸಕಲ ಇಷ್ಟಫಲಗಳನ್ನೂ ಕೊಡುತ್ತವೆ. ಆ ಲೋಕದ ನದಿಗಳಲ್ಲಿ ಪಾಯಸವೇ ಕೆಸರಿನರೂಪವಾಗಿದ್ದು ಶೀತಲವೂ, ನಿರ್ಮಲವೂ ಆಗಿರುವ ಪಾನೀಯಗಳಿಂದ ಮನೋಹರಗಳಾದ ತಟಾಕಗಳಿವೆ.

ತಂ ದೇಶಮಾಸಾದ್ಯ ವಣಿಙ್ಮಹಾತ್ಮಾ ।
ಸುತಪ್ತಜಾಂಬೂನದಭೂಷಿತಾಂಗಃ ।
ಕಲ್ಪಂ ಸಮಗ್ರಂ ಸಹ ಸುಂದರೀಭಿಃ ।
ಸ್ವರ್ಗೇ ಸ ರೇಮೇ ಮುದಿತಃ ಸದೈವ　　　॥ ೭೧ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಶ್ರವಣದ್ವಾದಶೀವ್ರತವರ್ಣನಂ
ನಾಮ ಪಂಚಸಪ್ತತಿತಮೋಽಧ್ಯಾಯಃ.



---

೭೧. ಆ ಮಹಾತ್ಮನಾದ ವೈಶ್ಯನು ಅಂತಹ ಸ್ವರ್ಗಲೋಕವನ್ನು ಪಡೆದು, ಚೆನ್ನಾಗಿ ಪುಟಹಾಕಿದ ಸುವರ್ಣದಿಂದಮಾಡಿದ ಆಭರಣಗಳಿಂದ ಅಲಂಕೃತವಾದ ಅವಯವಗಳುಳ್ಳವನಾಗಿ, ಅಲ್ಲಿ ಒಂದು ಕಲ್ಪಪೂರ್ತಿಯಾಗುವರೆಗೂ ಸುಂದರಿಯರಾದ ಸ್ತ್ರೀಯರೊಡನೆ ಯಾವಾಗಲೂ ಸಂತೋಷದಿಂದ ಕ್ರೀಡಿಸುತ್ತಿದ್ದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರವಣ
ದ್ವಾದಶೀ ವ್ರತವರ್ಣನೆಯೆಂಬ ಎಪ್ಪತ್ತೈದನೆಯ
ಅಧ್ಯಾಯವು ಮುಗಿದುದು.



|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಷಟ್‌ಸಪ್ತತಿತಮೋಽಧ್ಯಾಯಃ

---

|| ಶ್ರೀ ಕೃಷ್ಣ ಉವಾಚ ||
ದ್ವಾದಶ್ಯಾಸ್ತೇ ವಿಧಿಃ ಪ್ರೋಕ್ತಃ ಶ್ರಾವಣೇ ಯೋ ಯುಧಿಷ್ಠಿರ ।
ಸರ್ವಪಾಪಪ್ರಶಮನಃ ಸರ್ವಸೌಖ್ಯಪ್ರದಾಯಕಃ || ೧ ||

ಏಕಾದಶೀ ಯದಾ ಸಾ ಸ್ಯಾಚ್ಛ್ರವಣೇನ ಸಮನ್ವಿತಾ ।
ವಿಜಯಾ ಸಾ ತಿಥಿಃ ಪ್ರೋಕ್ತಾ ಭಕ್ತಾನಾಂ ವಿಜಯಪ್ರದಾ || ೨ ||

ಬಲವಾನಜಿತೋ ದೈತ್ಯೋ ಬಲಿರ್ನಾಮ ಮಹಾಬಲಃ ।
ತೇನ ದೇವಗಣಾಸ್ಸರ್ವೇ ತ್ಯಾಜಿತಾಃ ಸುರಮಂದಿರಂ || ೩ ||

---

## ಎಪ್ಪತ್ತಾರನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ ! ಸರ್ವಪಾಪ ನಾಶಕವಾಗಿಯೂ, ಸರ್ವಸೌಖ್ಯದಾಯಕವಾಗಿಯೂ ಇರುವ ಶ್ರವಣನಕ್ಷತ್ರ ಯುಕ್ತವಾದ ದ್ವಾದಶಿಯಲ್ಲಿ ಆಚರಿಸಬೇಕಾದ ಶ್ರವಣದ್ವಾದಶೀ ವ್ರತಾನುಷ್ಠಾನ ಕ್ರಮವನ್ನು ನಿನಗೆ ನಾನು ಹೇಳಿದೆನು.

೨. ಏಕಾದಶೀ ತಿಥಿಯಲ್ಲಿ ಆ ಶ್ರವಣನಕ್ಷತ್ರಯುಕ್ತವಾಗಿ ಬಂದರೆ ಅದಕ್ಕೆ ವಿಜಯೈಕಾದಶೀಯೆಂದು ಹೆಸರು. ಅದು ಭಕ್ತರಿಗೆ ವಿಜಯಪ್ರದ ವಾದುದು.

೩. ಪೂರ್ವದಲ್ಲಿ ಮಹಾಬಲಶಾಲಿಗಳ್ಯಾರಿಗೂ ಸೋಲದೆ ವಿಜಯವನ್ನು ಗಳಿಸಿ, ಮಹಾಬಲಶಾಲಿಯಾದ ಬಲಿ ಎಂಬ ದೈತ್ಯನಿದ್ದನು. ಆ ಬಲಿಯು ಎಲ್ಲಾ ದೇವತೆಗಳನ್ನೂ ಸ್ವರ್ಗದಿಂದ ಓಡಿಸಿದನು.

ತತೋ ದೇವಾ ಮಹಾವಿಷ್ಣುಂ ಗತ್ವಾ ವಚನಮೂಚಿರೆ ।
ತ್ವಂ ಗತಿಃ ಸರ್ವದೇವಾನಾಂ ಶೀಘ್ರಂ ಕಷ್ಟಾತ್ಸಮುದ್ಧರ || ೪ ||

ಜಹಿ ದೈತ್ಯಂ ಮಹಾಬಾಹೋ ಬಲಿಂ ಬಲನಿಷೂದನ ।
ಶ್ರುತ್ವಾ ವಿಷ್ಣುಸ್ತದಾ ವಾಕ್ಯಂ ದೇವಾನಾಂ ಕರುಣೋದಯಂ || ೫ ||

ಉವಾಚ ವಾಕ್ಯಂ ಕಾಲಜ್ಞೋ ದೇವಾನಾಂ ಹಿತಕಾಮ್ಯಯಾ ।
ಜಾನೇ ವೈರೋಚನಿಂ ದೈತ್ಯಂ ಬಲಿಂ ತ್ರೈಲೋಕ್ಯಕಂಟಕಂ || ೬ ||

ತಪಸಾ ಭಾವಿತಾತ್ಮಾನಂ ಶಾಂತಂ ದಾಂತಂ ಜಿತೇಂದ್ರಿಯಂ ।
ಮದ್ಭಕ್ತಂ ಮದ್ಗತಪ್ರಾಣಂ ಸತ್ಯಸಂಧಂ ಮಹಾಬಲಂ ।
ತಪಸೋಂತಃ ಸುಬಹುನಾ ಕಾಲೇನಾಸ್ಯ ಭವಿಷ್ಯತಿ || ೭ ||

---

೪. ಹೀಗೆ ಬಲಿಯಿಂದ ಪರಾಜಿತರಾದ ಆ ದೇವತೆಗಳು ಶ್ರೀ ಮಹಾವಿಷ್ಣುವಿದ್ದಲ್ಲಿಗೆ ಹೋಗಿ "ಓ ದೇವನೇ ! ನೀನೇ ಸರ್ವದೇವತೆಗಳಿಗೂ ಗತಿ. ಈಗ ಕಷ್ಟಕ್ಕೆ ಸಿಕ್ಕಿರುವ ನಮ್ಮನ್ನು ಶೀಘ್ರವಾಗಿ ಉದ್ಧರಿಸು.

೫. ಮಹಾಬಲಶಾಲಿಯಾದ ಬಲನೆಂಬ ದೈತ್ಯನನ್ನು ಸಂಹರಿಸಿದ ಶ್ರೀ ವಿಷ್ಣುವೇ ! ಈ ಬಲಿದೈತ್ಯನನ್ನೂ ಸಂಹಾರಮಾಡು" ಎಂದು ಪ್ರಾರ್ಥಿಸಿದರು. ಕಾಲಾಕಾಲ ಪರಿಜ್ಞಾನವುಳ್ಳ ಶ್ರೀ ಹರಿಯು, ಕಠಿಣಹೃದಯರಿಗೂ ಕರುಣೆಯನ್ನು ಹುಟ್ಟಿಸತಕ್ಕಂತಹ ದೇವತೆಗಳ ಆ ದೈನ್ಯವಚನವನ್ನು ಆಲಿಸಿದನು.

೬. ಅಂತಹ ದೇವತೆಗಳಿಗೆ ಹಿತವುಂಟುಮಾಡುವುದರಲ್ಲಿ ಅಭಿಲಾಷೆಯುಳ್ಳವನಾಗಿ, ಅವರನ್ನು ಕುರಿತು " ಓ ದೇವತೆಗಳಿರಾ ! ವಿರೋಚನನ ಪುತ್ರನಾದ ಬಲಿ ಎಂಬ ದೈತ್ಯನು, ಮೂರುಲೋಕಗಳಿಗೂ ಕಂಟಕಪ್ರಾಯನಾಗಿದ್ದಾನೆ ಎಂಬುದನ್ನು ನಾನು ತಿಳಿದಿರುತ್ತೇನೆ.

೭. ಆ ಬಲಿಯು ತಪಸ್ಸನ್ನು ಆಚರಿಸಿ ಪರಮಾತ್ಮನನ್ನು ಧ್ಯಾನಿಸಿ, ಅಂತರಿಂದ್ರಿಯ ಮತ್ತು ಬಹಿರಿಂದ್ರಿಯಗಳನ್ನು ನಿಗ್ರಹಿಸಿದ ಜಿತೇಂದ್ರಿಯನೂ, ನನ್ನಲ್ಲಿ ಭಕ್ತಿಯುಳ್ಳವನೂ, ನನ್ನಲ್ಲೇ ಸಮರ್ಪಿಸಿದ ಪ್ರಾಣಗಳುಳ್ಳವನೂ, ಸತ್ಯವಾದಿಯೂ, ಮಹಾಬಲಶಾಲಿಯೂ ಆಗಿದ್ದಾನೆ ಎಂಬುವನ್ನು ನಾನು ತಿಳಿದಿದ್ದೇನೆ. ಇಂತಹ ಬಲಿಚಕ್ರವರ್ತಿಯ ತಪೋನುಷ್ಠಾನದ ಪುಣ್ಯಫಲವು ಇನ್ನೂ ಬಹುಕಾಲ ಪರ್ಯಂತ ನಡೆದು ಆಮೇಲೆ ಮುಕ್ತಾಯವಾಗುವುದು" ಎಂದನು.

ಯದಾ ವಿನಯಸಂಪನ್ನಂ ಜ್ಞಾಸ್ಯೇ ಕಾಲೇನ ಕೇನಚಿತ್ ।
ಸಮಾಹೃತ್ಯ ಪ್ರಿಯಂ ತಸ್ಯ ತದಾ ದಾಸ್ಯೇ ದಿವೌಕಸಾಂ ॥ ೮ ॥

ಅದಿತಿರ್ಮಾಂ ಪ್ರಪನ್ನಾ ವೈ ಪುತ್ರಾರ್ಥೇ ಪುತ್ರಲೋಭಿನೀ ।
ತಸ್ಯಾಮತಿಹಿತಂ ದೇವಾಃ ಕರಿಷ್ಯೇ ನಾತ್ರ ಸಂಶಯಃ ॥ ೯ ॥

ತದ್ದೇವಾನಾಂ ಹಿತಂ ಸರ್ವೇ ಚಾಹಿತಂ ತು ಸುರದ್ವಿಷಾಂ ।
ತದ್ಗಚ್ಛಧ್ವಂ ನಿರುದ್ವಿಗ್ನಾಃ ಕಾಲಃ ಕಶ್ಚಿತ್ಪ್ರತೀಕ್ಷ್ಯತಾಂ ॥ ೧೦ ॥

ಏವಮುಕ್ತ್ವಾ ಗತಾ ದೇವಾಃ ಕಾರ್ಯಂ ವಿಷ್ಣುರಚಿಂತಯತ್ ।
ಸ ಚಿಂತಯಿತ್ವಾ ಸುಚಿರಂ ದೇವ್ಯಾ ಗರ್ಭಾವತಾರಣಂ ॥ ೧೧ ॥

---

೮. ಕೆಲವುಕಾಲ ಕಳೆದಮೇಲೆ ಅವನು ವಿನಯಸಂಪನ್ನನಾಗಿರುವ ಸಮಯವನ್ನರಿತು ಅವನಿಗೆ ಅತಿ ಪ್ರಿಯವಾದ ದೇವರಾಜ್ಯಾಧಿಪತ್ಯವನ್ನು ಅವನಿಂದ ಸೆಳೆದು ಅದನ್ನು ದೇವತೆಗಳಿಗೆ ಕೊಡುವೆನು.

೯. ಹೇ ದೇವತೆಗಳಿರಾ ! ಪುತ್ರಾಭಿಲಾಷೆಯುಳ್ಳವಳಾದ ಅದಿತಿಯು ಪುತ್ರಾರ್ಥವಾಗಿ ನನ್ನನ್ನು ಆಶ್ರಯಿಸಿರುತ್ತಾಳೆ. ಆದುದರಿಂದ ನಾನು ಅವಳಲ್ಲಿ ಪುತ್ರನಾಗಿ ಜನಿಸಿ, ನಿಮಗೆ ಸಂಪೂರ್ಣ ಹಿತವನ್ನೇ ಮಾಡುವೆನು. ಈ ವಿಷಯದಲ್ಲಿ ಸಂದೇಹಪಡಬೇಕಾಗಿಲ್ಲ.

೧೦. ಆ ಸನ್ನಿವೇಶದಲ್ಲಿ ದೇವತೆಗಳಿಗೆ ಸಮಸ್ತವಾದ ಹಿತವನ್ನೂ ಮಾಡುತ್ತೇನೆ. ದೇವದ್ವೇಷಿಗಳಾದ ದೈತ್ಯರಿಗೆ ಅಹಿತವನ್ನೇ ಮಾಡುತ್ತೇನೆ. ಆದುದರಿಂದ ನೀವು ಮನೋದ್ವೇಗವನ್ನು ತ್ಯಜಿಸಿ, ಸ್ವಸ್ಥಾನಕ್ಕೆ ಹೋಗಿ ಕೆಲವುಕಾಲ ನಿರೀಕ್ಷಿಸುತ್ತಿರಿ ” ಎಂದನು.

೧೧. ಶ್ರೀ ಮಹಾವಿಷ್ಣುವಿನಿಂದ ಈರೀತಿ ಅಭಯಪ್ರದಾನ ಹೊಂದಿದ ದೇವತೆಗಳು ಅಲ್ಲಿಂದ ಹೊರಟರು. ಅನಂತರ ಶ್ರೀ ಮಹಾವಿಷ್ಣುವು ಈ ವಿಚಾರಕ್ಕಾಗಿ ಮುಂದೆ ಏನು ಮಾಡಬೇಕೆಂಬುದನ್ನು ಕುರಿತು ಬಹುಕಾಲ ಯೋಚಿಸಿ, ಕೊನೆಗೆ ಅದಿತಿದೇವಿಯ ಗರ್ಭದಲ್ಲಿ ತಾನೇ ಅವತರಿಸಬೇಕೆಂದು ನಿಶ್ಚಯಿಸಿದನು.

**ಅದಿತಿರ್ಗಣಯಾಮಾಸ ವಾಂಛಿತಂ ಮೇ ಭವಿಷ್ಯತಿ |**
**ಅಥ ಕಾಲೇ ಬಹುತಿಥೇ ಗತೇ ಸಾ ಗರ್ಭಿಣೀ ಹ್ಯಭೂತ್ || ೧೨ ||**

**ಸುಷುವೇ ನವಮೇ ಮಾಸಿ ಪುತ್ರಂ ಸಾ ವಾಮನಂ ಹರಿಂ |**
**ಹ್ರಸ್ವಪಾದಂ ಹ್ರಸ್ವಕಾಯಂ ಮಹಚ್ಛಿರಸಮರ್ಭಕಂ || ೧೩ ||**

**ಪಾಣಿಪಾದೋದರಕೃಶಂ ಸ್ವಯಂ ನಾರಾಯಣಂ ಹರಿಂ |**
**ದೃಷ್ಟ್ವಾ ತು ವಾಮನಂ ಜಾತಂ ಯದಿ ಸಾ ವಕ್ತುಮುದ್ಯತಾ |**
**ನಿರುದ್ಧವಾಕ್ಯಾ ಹ್ಯಭವದ್ವಕ್ತುಂ ಕಿಂಚಿನ್ನ ಪಾರಿತಂ || ೧೪ ||**

**ಏಕಾದಶ್ಯಾಂ ಭಾದ್ರಪದೇ ಶ್ರವಣೇನ ನರೋತ್ತಮ |**
**ಸಂಚಚಾಲ ಮಹೀ ಜಾತೇ ವಾಮನೇ ತು ತ್ರಿವಿಕ್ರಮೇ || ೧೫ ||**

---

೧೨. ಆಗ ಅದಿತಿಯು ಈ ವಿಷಯವನ್ನು ತಿಳಿದು, ತನ್ನ ಮನೋರಥವು ಸಿದ್ಧಿಸುವುದೆಂದು ಎಣಿಸಿದಳು. ಹೀಗೆ ಕೆಲವುಕಾಲ ಕಳೆದಮೇಲೆ ಅದಿತಿಯು ಗರ್ಭವತಿಯಾದಳು. ಒಂಭತ್ತನೆಯ ತಿಂಗಳಿನಲ್ಲಿ ಅವಳು ವಾಮನನೆಂಬ ನಾಮಧೇಯವುಳ್ಳ ಶ್ರೀಹರಿಯನ್ನು ಪುತ್ರನನ್ನಾಗಿ ಪ್ರಸುವಿಸಿದಳು.

೧೩. ಆ ಪುತ್ರನು ಹ್ರಸ್ವಕಾಯವುಳ್ಳವನೂ, ಹ್ರಸ್ವಪಾದಗಳುಳ್ಳವನೂ, ಮಹಾಶಿರಸ್ಸುಳ್ಳವನೂ, ಕೃಶವಾದ ಕೈಕಾಲು ಹೊಟ್ಟೆ ಇವುಗಳುಳ್ಳವನೂ, ನಾರಾಯಣ ಸ್ವರೂಪನೂ ಆಗಿದ್ದನು.

೧೪. ಈ ರೀತಿಯಾದ ವಾಮನಮೂರ್ತಿಯು ಜನಿಸಿರುವುದನ್ನು ನೋಡಿ, ಅದಿತಿಯು ಮಾತನಾಡಬೇಕೆಂದು ಉದ್ಯುಕ್ತಳಾದರೂ ಕಂಠವು ರುದ್ಧವಾಗಿ ಏನನ್ನು ಹೇಳುವುದಕ್ಕೂ ಸಮರ್ಥಳಾಗದೆ ಇದ್ದಳು.

೧೫. ಅಯ್ಯಾ ರಾಜನೇ! ತನ್ನ ಮೂರು ಹೆಜ್ಜೆಯಿಂದ ಮೂರು ಲೋಕಗಳನ್ನೂ ಆಕ್ರಮಿಸಿ, ತ್ರಿವಿಕ್ರಮನೆಂದು ಪ್ರಸಿದ್ಧನಾಗುವ ಆ ವಾಮನಮೂರ್ತಿಯು ಭಾದ್ರಪದ ಮಾಸದಲ್ಲಿ ಶ್ರವಣನಕ್ಷತ್ರಯುಕ್ತವಾದ ಏಕಾದಶಿಯದಿನ ಜನಿಸಿದನು. ಆ ಕಾಲದಲ್ಲಿ ಭೂಮಿಯು ಕಂಪಿಸಿತು.

ಭಯಂ ಬಭೂವ ದೈತ್ಯಾನಾಂ ದೇವಾನಾಂ ತೋಷ ಅಭವತ್ ।
ಜಾತಕರ್ಮಾದಿಕಾಂಸ್ತಸ್ಯ ಸಂಸ್ಕಾರಾನ್ಸ್ವಯಮೇವ ಹಿ ॥ ೧೬ ॥

ಚಕಾರ ಕಶ್ಯಪೋ ಧೀಮಾನ್ಪ್ರಜಾಪತಿರನುದ್ಯತಃ ।
ಆಬದ್ಧಮೇಖಲೋ ದಂಡೀ ಧೃತ್ವಾ ಯಜ್ಞೋಪವೀತಕಂ ॥ ೧೭ ॥

ಕುಶಸ್ವಚ್ಛೋದಕಧರಃ ಕಮಂಡಲುವಿಭೂಷಿತಃ ।
ಬಲೇರ್ಬಲವತೋ ಯಜ್ಞಂ ಜಗಾಮ ಬಹುವಿಸ್ತರಂ ॥ ೧೮ ॥

ದೃಷ್ಟ್ವಾ ಬಲಿಮುಖೋವಾಚ ವಾಮನೋsಭ್ಯೇತ್ಯ ತತ್ಕ್ಷಣಂ ।
ಅಥ ಚಾಹ ಯಜ್ಞಪತೇ ದೀಯತಾಂ ಮಮ ಮೇದಿನೀ ॥ ೧೯ ॥

---

೧೬. ಆಗ ದೈತ್ಯರಿಗೆ ಭಯವುಂಟಾಯಿತು. ದೇವತೆಗಳಿಗೆ ಸಂತೋಷವಾಯಿತು. ಬುದ್ಧಿಶಾಲಿಯಾದ ಕಶ್ಯಪ ಪ್ರಜಾಪತಿಯು, ತನ್ನ ಪುತ್ರನಾದ ವಾಮನನಿಗೆ ಜಾತಕರ್ಮಾದಿ ಸಂಸ್ಕಾರಗಳನ್ನು ತಾನೇ ಮಾಡಿದನು.

೧೭. ಆಗ ವಾಮನನು ಸೊಂಟದಲ್ಲಿ ಮೇಖಲೆಯನ್ನು ಕಟ್ಟಿಕೊಂಡು, ಕೈಯಲ್ಲಿ ಪಾಲಾಶದಂಡವನ್ನು ಧರಿಸಿ, ಯಜ್ಞೋಪವೀತವನ್ನು ಧಾರಣಮಾಡಿ, ದರ್ಭೆ, ಸ್ವಚ್ಛವಾದ ಉದಕಪೂರಿತ ಕಮಂಡಲು, ಇವುಗಳನ್ನು ಕೈಯಲ್ಲಿ ಹಿಡಿದುಕೊಂಡು ಇದ್ದನು.

೧೮. ಈ ರೀತಿ ಬ್ರಹ್ಮಚಾರಿ ವೇಷವನ್ನು ಧರಿಸಿವ ಆ ವಾಮನನು ಮಹಾಬಲಶಾಲಿಯಾದ ಬಲಿಚಕ್ರವರ್ತಿಯು ಆಚರಿಸುತ್ತಿರುವ, ಬಹು ಸಂಪದ್ವಿಸ್ತೃತವಾದ ಯಾಗಶಾಲೆಗೆ ಹೋದನು.

೧೯. ಆ ವಾಮನನು ತತ್‌ಕ್ಷಣದಲ್ಲಿ ಬಲಿಯ ಸಮೀಪಕ್ಕೆ ಹೋಗಿ, ಅವನನ್ನು ಕಂಡು, ಯಜ್ಞಪತಿಯಾದ ಓ ಬಲಿಚಕ್ರವರ್ತಿಯೇ ! ನನಗೆ ಮೂರು ಹೆಜ್ಜೆಗಳಷ್ಟು ಭೂಮಿಯನ್ನು ದಾನವಾಗಿ ಕೊಡು. ನಾನು ಅಲ್ಲಿ ಮಂತ್ರ ಪಠಣಮಾಡುತ್ತಾ ಸತ್ಕರ್ಮನಿರತನಾಗಿರುವೆನು.''

ಪಾದತ್ರಯಪ್ರಮಾಣೇನ ಪಠನಾರ್ಥೇ ಸ್ಥಿತೋ ಹ್ಯಸಿ ।
ದತ್ತಾದತ್ತಾ ತವ ಮಯಾ ಬಲಿಃ ಪ್ರಾಹ ದ್ವಿಜೋತ್ತಮಂ ॥ ೨೦ ॥

ತತೋ ವರ್ಧಿತುಮಾರಬ್ಧೋ ವಾಮನೋಽನಂತವಿಕ್ರಮಃ ।
ಪಾದೌ ಭೂಮೌ ಪ್ರತಿಷ್ಠಾಪ್ಯ ಶಿರಸಾವೃತ್ಯ ರೋದಸೀ ॥ ೨೧ ॥

ತಾಭ್ಯಾಮಿಂದ್ರಾದಿಕಾನ್ಲೋಕಾನ್ಲಲಾಟೇ ಬ್ರಹ್ಮಣಃ ಪದಂ ।
ನ ತೃತೀಯಂ ಪದಂ ಲೇಭೇ ತತೋ ನೇದುರ್ದಿವೌಕಸಃ ॥ ೨೨ ॥

ತದ್ದೃಷ್ಟ್ವಾ ಮಹದಾಶ್ಚರ್ಯಂ ಸಿದ್ಧಾ ದೇವರ್ಷಯಸ್ತಥಾ ।
ಸಾಧುಸಾಧ್ವಿತಿ ದೇವೇಶಂ ಪ್ರಶಶಂಸುರ್ಮುದಾನ್ವಿತಾಃ ॥ ೨೩ ॥

---

೨೦. ನನ್ನ ಪ್ರಾರ್ಥನೆಯನ್ನು ನಿರಾಕರಿಸಬಾರದೆಂದು ನನ್ನ ಆಶಯ" ಎಂದನು. ಆ ಮಾತನ್ನು ಕೇಳಿ ಬಲಿಚಕ್ರವರ್ತಿಯು ವಾಮನರೂಪದ ಬ್ರಹ್ಮಚಾರಿಯಾದ ನನ್ನನ್ನು ಕುರಿತು "ಓ ವಿಪ್ರಶ್ರೇಷ್ಠನೇ ! ನಿನಗೆ ನಾನು ಮೂರಡಿ ಭೂಮಿಯನ್ನು ಕೊಟ್ಟೆನು ! ಕೊಟ್ಟೆನು" ಎಂದು ವಾಗ್ದಾನ ಮಾಡಿದನು.

೨೧. ಅಪರಿಮಿತ ಪರಾಕ್ರಮಶಾಲಿಯಾದ ಆ ವಾಮನರೂಪಿನ ನಾನು, ಅನಂತರ ಆಕಾರದಲ್ಲಿ ವೃದ್ಧಿಹೊಂದುವುದಕ್ಕೆ ಪ್ರಾರಂಭಿಸಿದೆನು. ಪೂರ್ತಿಯಾಗಿ ಎರಡು ಕಾಲುಗಳನ್ನು ಭೂಮಿಯಲ್ಲಿರಿಸಿ ಶಿರಸ್ಸಿನಿಂದ ದ್ಯಾವಾಪೃಥಿವಿಗಳ ಮಧ್ಯಪ್ರದೇಶವನ್ನೆಲ್ಲಾ ವ್ಯಾಪಿಸುವಂತೆ ಬೆಳೆದೆನು.

೨೨. ಆ ಎರಡು ಅಡಿಗಳಿಂದ ಇಂದ್ರಾದಿ ಸಕಲ ಲೋಕಗಳನ್ನೂ ಆಕ್ರಮಿಸಿ, ಬ್ರಹ್ಮನ ಲಲಾಟಪರ್ಯಂತ ವ್ಯಾಪಿಸುವಂತೆ ಅಡಿಗಳನ್ನಿಟ್ಟೆನು. ಮೂರನೆಯ ಅಡಿ ಇಡಲು ಯಾವ ಲೋಕವೂ ಉಳಿಯಲಿಲ್ಲ. ಬಲಿಯ ಇಷ್ಟವಂತೆ ಅವನ ತಲೆಯಮೇಲೇ ಇಟ್ಟೆನು. ಆಗ ದೇವತೆಗಳು ಹರ್ಷಧ್ವನಿಗೈದರು.

೨೩. ಆ ಮಹಾಶ್ಚರ್ಯಕರವಾದ ಕಾರ್ಯವನ್ನು ಸಿದ್ಧಪುರುಷರೂ ದೇವತೆಗಳೂ ಋಷಿಗಳೂ ನೋಡಿ ಸಂತೋಷಪಟ್ಟು, ದೇವಾಧೀಶನಾದ ಶ್ರೀ ವಾಮನಮೂರ್ತಿಯನ್ನು ಸಾಧು, ಸಾಧು ಎಂದು ಹೇಳಿ ಹೊಗಳಿದರು.

ತತೋ ದೈತ್ಯಗಣಾನ್ಸರ್ವಾಞ್ಜಿತ್ವಾ ತ್ರಿಭುವನಂ ವಶೀ ।
ಬಲಿಮಾಹ ತತೋ ಗಚ್ಛ ಸುತಲಂ ಸ್ವಬಲಾನುಗಃ ॥ ೨೪ ॥

ತತ್ರ ತ್ವಮೀಪ್ಸಿತಾನ್ಭೋಗಾನ್ಭುಕ್ತ್ವಾ ಮದ್ಬಾಹುಪಾಲಿತಃ ।
ಅಸ್ಯೇಂದ್ರಸ್ಯಾವಸಾನೇ ತು ತ್ವಮೇವೇಂದ್ರೋ ಭವಿಷ್ಯಸಿ ॥ ೨೫ ॥

ಏವಮುಕ್ತೋ ಬಲಿಃ ಪ್ರಾಯಾನ್ನಮಸ್ಕೃತ್ಯ ನರೋತ್ತಮಂ ।
ವಿಸೃಜ್ಯೇಮಂ ಬಲಿಂ ದೇವಾನ್ಸಕಲಾನ್ಸ ಉವಾಚ ಹ ॥ ೨೬ ॥

ಸ್ವಾನಿ ಧಿಷ್ಣ್ಯಾನಿ ಗಚ್ಛಧ್ವಂ ತಿಷ್ಠಧ್ವಂ ವಿಗತಜ್ವರಾಃ ।
ದೇವೇನೋಕ್ತಾ ಗತಾ ದೇವಾ ಹೃಷ್ಟಾಃ ಸಂಪೂಜ್ಯ ವಾಮನಂ ॥ ೨೭ ॥

---

೨೪. ಅನಂತರ ಆ ವಾಮನನು ಈ ರೀತಿ ಪಾದವಿಕ್ಷೇಪದಿಂದ ಮೂರು ಲೋಕವನ್ನೂ ವಶಮಾಡಿಕೊಂಡು, ಅದಕ್ಕೆ ವಿರೋಧಿಗಳಾಗಿದ್ದ ಎಲ್ಲ ದೈತ್ಯರನ್ನೂ ಗೆದ್ದು, ಬಲಿಚಕ್ರವರ್ತಿಯನ್ನು ಕುರಿತು “ಓ ಬಲಿಯೇ ! ಈ ಲೋಕಗಳನ್ನೆಲ್ಲಾ ನೀನು ದಾನಮಾಡಿದ್ದರಿಂದ ನಿನ್ನ ದೈತ್ಯಬಲಸಹಿತನಾಗಿ ಪಾತಾಳಕ್ಕೆ ಹೋಗು.

೨೫. ಆ ಪಾತಾಳದಲ್ಲಿ ನೀನು ನನ್ನ ಬಾಹುಬಲದಿಂದ ರಕ್ಷಿತನಾಗಿ, ಅಭಿಲಷಿತಭೋಗಗಳನ್ನೆಲ್ಲಾ ಭೋಗಿಸಿ, ಅನಂತರ ಈಗಿರುವ ಇಂದ್ರನ ಅಧಿಕಾರಾವಸಾನವಾದನಂತರ ನೀನೇ ಆ ಸ್ಥಾನದಲ್ಲಿ ಇಂದ್ರನಾಗಿ ಬರುವೆ” ಎಂದು ಹೇಳಿದನು.

೨೬. ಈರೀತಿ ಶ್ರೀ ವಾಮನಮೂರ್ತಿಯು ಹೇಳಲಾಗಿ, ಬಲಿಚಕ್ರವರ್ತಿಯು ಆ ಪುರುಷೋತ್ತಮನಿಗೆ ನಮಸ್ಕಾರಮಾಡಿ, ಪಾತಾಳಕ್ಕೆ ಹೊರಟು ಹೋದನು. ವಾಮನನು ಆ ಬಲಿಯನ್ನು ಕಳುಹಿಸಿಬಿಟ್ಟು ಅನಂತರ ಸರ್ವದೇವತೆಗಳನ್ನೂ ಕರೆದು ಅವರನ್ನು ಕುರಿತು,

೨೭. “ ಎಲೈ ದೇವತೆಗಳಿರಾ ! ನೀವು ನಿಮ್ಮ ನಿಮ್ಮ ಸ್ಥಾನಕ್ಕೆ ಹೋಗಿ ನಿರುಪದ್ರವರಾಗಿ ಮೊದಲಿನಂತೆ ಅಧಿಕಾರವನ್ನು ನಿರ್ವಹಿಸಿ ” ಎಂದು ಹೇಳಿದನು. ಹೀಗೆ ವಾಮನಮೂರ್ತಿಯಿಂದ ಅಪ್ಪಣೆ ಪಡೆದ ದೇವತೆಗಳು, ಸಂತೋಷದಿಂದ ಆ ಶ್ರೀ ವಾಮನಮೂರ್ತಿಗೆ ಪೂಜೆಮಾಡಿ ಹೊರಟು ಹೋದರು.

ದೇವಃ ಕೃತ್ವಾ ಜಗತ್ಕಾರ್ಯಂ ತತ್ರೈವಾಂತರ್ಧಿಮಾಗತಂ ।
ಏತತ್ಸರ್ವಂ ಸಮಭವದೇಕಾದಶ್ಯಾಂ ನರಾಧಿಪ ।
ತೇನೇಷ್ಟಾ ದೇವದೇವಸ್ಯ ಸರ್ವದಾ ವಿಜಯಾ ತಿಥಿಃ || ೨೮ ||

ಏಷ ವೈ ಫಾಲ್ಗುನೇ ಮಾಸಿ ಪುಷ್ಯೇಣ ಸಹಿತಾ ನೃಪ ।
ವಿಜಯಾ ಪ್ರೋಚ್ಯತೇ ಸದ್ಭಿಃ ಕೋಟಿಕೋಟಿಗುಣೋತ್ತರಾ || ೨೯ ||

ಏಕಾದಶ್ಯಾಂ ಸೋಪವಾಸೋ ರಾತ್ರೌ ಸಂಪೂಜಯೇದ್ಧರಿಂ ।
ರೌಪ್ಯೇ ಸೌವರ್ಣಪಾತ್ರೇ ವಾ ದಾರುವಂಶಮಯೇಽಪಿ ವಾ || ೩೦ ||

ಕುಂಡಿಕಾಂ ಸ್ಥಾಪಯೇತ್ಪಾರ್ಶ್ವೇ ಛತ್ರಂ ಸ್ವೈ ಪಾದುಕೇ ತಥಾ ।
ಶುಭಾಂ ಚ ವೈಷ್ಣವೀಂ ಯಷ್ಟಿಂ ತಥಾ ಸೂತ್ರಕಮಂಡಲೂ || ೩೧ ||

---

೨೮. ಅಯ್ಯಾ ರಾಜನೇ ! ಶ್ರೀ ಹರಿಯು ಜಗತ್ತಿಗೆ ಹಿತವಾದ ಈ ಕಾರ್ಯವನ್ನು ಪೂರಯಿಸಿ, ಅಲ್ಲೇ ಅಂತರ್ಧಾನನಾದನು. ಈ ಕಾರ್ಯಗಳೆಲ್ಲಾ ಏಕಾದಶಿಯದಿನ ನಡೆಯಿತು. ಆದುದರಿಂದ ದೇವದೇವನಾದ ಶ್ರೀ ಹರಿಗೆ ಈ ವಿಜಯೈಕಾದಶೀತಿಥಿಯು ಯಾವಾಗಲೂ ಪ್ರೀತ್ಯಾಸ್ಪದವಾಗಿದೆ.

೨೯. ಅಯ್ಯಾ ರಾಜನೇ ! ಏಕಾದಶೀತಿಥಿಯು ಫಾಲ್ಗುಣಮಾಸದಲ್ಲಿ ಪುಷ್ಯನಕ್ಷತ್ರಯುಕ್ತವಾಗಿ ಬಂದರೂ, ಆಗ ಆ ತಿಥಿಯನ್ನೂ ವಿದ್ವಾಂಸರು ವಿಜಯಾ ಎಂಬ ನಾಮಧೇಯದಿಂದಲೇ ವ್ಯವಹರಿಸುವರು. ಆ ವಿಜಯೈಕಾದಶಿಯೂ ಕೋಟಿಕೋಟಿ ಗುಣಿತಫಲದಾಯಕವಾಗಿ ಶ್ರೇಷ್ಠವಾದುದು ಎಂದು ಉಕ್ತವಾಗಿದೆ.

೩೦. ವಿಜಯೈಕಾದಶಿಯ ದಿನದಲ್ಲಿ ಉಪವಾಸವನ್ನಾಚರಿಸಿ, ಆದಿನ ರಾತ್ರೆ, ಭಂಗಾರ ಅಥವಾ ಬೆಳ್ಳಿ, ಇಲ್ಲವೇ ಮರ, ಬಿದುರು ಇವುಗಳಲ್ಲಾವುದರಿಂದ ಲಾದರೂ ನಿರ್ಮಿಸಿದ ಪಾತ್ರೆಯಲ್ಲಿ ಶ್ರೀ ಹರಿಯನ್ನು ಸ್ಥಾಪಿಸಿ ಅರ್ಚಿಸಬೇಕು.

೩೧. ಆ ಮೂರ್ತಿಯ ಪಾರ್ಶ್ವದಲ್ಲಿ ಜಲಪೂರ್ಣಕುಂಭವನ್ನು ಛತ್ರಿ, ಪಾದುಕೆಗಳು, ಶುಭವೈಷ್ಣವದಂಡ, ಸೂತ್ರವೇಷ್ಟಿತವಾದ ಕಮಂಡಲು ಇವುಗಳೊಡನೆ ಸ್ಥಾಪನೆಮಾಡಬೇಕು.

ಆಚ್ಛಾದ್ಯ ಪಾತ್ರಂ ವಾಸೋಭಿಃ ಫಲೈಶ್ಚಾಪಿ ಸುಶೋಭನೈಃ ।
ಮಾರ್ಗಚಾಮರಗಂಧೈಶ್ಚ ಭಕ್ತ್ಯಾ ವಾ ಮೃಗಚರ್ಮಣಾ ॥ ೩೨ ॥

ತಿಲಾಢಕೇನ ವಿತ್ತಾಢ್ಯಃ ಪ್ರಸ್ಥೇನ ಕುಡವೇನ ವಾ ।
ವ್ರೀಹಿಭಿರ್ವಾಥ ಗೋಧೂಮೈಃ ಫಲೈಃ ಶುಕ್ಲತಿಲೈರ್ಭವೇತ್ ॥ ೩೩ ॥

ಪುಷ್ಪೈರ್ಗಂಧೈರ್ಧೂಪದೀಪೈಃ ಪಕ್ವಾನ್ನೈರರ್ಚಯೇದ್ಧರಿಂ ।
ನಾನಾವಿಧೈಶ್ಚ ನೈವೇದ್ಯೈರ್ಭಕ್ಷ್ಯಭೋಜ್ಯೈರ್ಗುಡೋದನೈಃ ॥ ೩೪ ॥

ಸ್ವಸ್ವವಿತ್ತಾನುಸಾರೇಣ ಸಹಿರಣ್ಯಂ ಚ ಕಾರಯೇತ್ ।
ಮಂತ್ರೈಃ ಶತಗುಣಂ ಚೈವ ಭಕ್ತ್ಯಾ ಲಕ್ಷಗುಣೋತ್ತರಂ ।
ಭಕ್ತಿಮಾಂಶ್ಚ ಗುಣೋಪೇತಂ ಕೋಟಿಕೋಟಿಗುಣೋತ್ತರಂ ॥ ೩೫ ॥

---

೩೨. ಶ್ರೀ ಹರಿಪ್ರತಿಮೆಯನ್ನು ಸ್ಥಾಪಿಸಿದ ಪಾತ್ರೆಗೆ ವಸ್ತ್ರಯುಗ್ಮಗಳನ್ನು ಹೊದ್ದಿಸಿ,-ಶ್ರೀ ಹರಿಗೆ ಉತ್ತಮ ಫಲಗಳನ್ನು ನಿವೇದಿಸಿ, ಚಾಮರ, ಗಂಧ, ಕೃಷ್ಣ ಮೃಗಚರ್ಮ ಇವುಗಳನ್ನೂ ಸಮರ್ಪಿಸಿ, ಭಕ್ತಿಯಿಂದ ಉಪಚರಿಸಬೇಕು.

೩೩. ಮತ್ತು ಪೂಜಾವೇಳೆಯಲ್ಲಿ ಶ್ರೀಮಂತನು ಒಂದು ಖಂಡುಗ ಅಥವಾ ಒಂದುಸೇರು ಅಥವಾ ಒಂದುಪಾವು ತಿಲವನ್ನಾಗಲಿ, ಇಲ್ಲವೇ ಇದೇ ಪರಿಮಾಣದ ಗೋಧಿ ಅಥವಾ ವ್ರೀಹಿ ಇವುಗಳನ್ನಾಗಲಿ, ಶ್ರೀ ಹರಿಗೆ ಸಮರ್ಪಿಸಬೇಕು. ಎಳ್ಳು ಬಿಳಿಯದಾಗಿರಬೇಕು ಜೊತೆಗೆ ಫಲಸಮರ್ಪಣೆಯನ್ನೂ ಮಾಡಬೇಕು.

೩೪. ಪುಷ್ಪ, ಗಂಧ, ಧೂಪ, ದೀಪ, ಇವುಗಳಿಂದ ಶ್ರೀ ಹರಿಗೆ ಅರ್ಚನೆ ಮಾಡಿ, ನೈವೇದ್ಯಕ್ಕೆ ಪಕ್ವಾನ್ನ, ನಾನಾವಿಧ ಭಕ್ಷ್ಯಭೋಜ್ಯ, ಗುಡೋದನ ಇತ್ಯಾದಿಗಳನ್ನು ಸಮರ್ಪಿಸಬೇಕು.

೩೫. ಈ ವ್ರತಾನುಷ್ಠಾತೃಗಳು ತಮ್ಮತಮ್ಮ ಧನಸಂಪತ್ತಿಯನ್ನು ಅನುಸರಿಸಿ ಸುವರ್ಣಪ್ರತಿಮಾದಿಗಳನ್ನುಮಾಡಿಸಿ, ಮಂತ್ರವತ್ತಾಗಿ ಈ ವ್ರತವನ್ನು ಆಚರಿಸುವುದರಿಂದ ಶತಗುಣಿತ ಫಲಲಾಭವಾಗುವುದು. ದೃಢಭಕ್ತಿಪೂರ್ವಕವಾಗಿ ಮಾಡಿದರೆ ಲಕ್ಷಗುಣೋತ್ತರ ಫಲಪ್ರಾಪ್ತಿಯಾಗುವುದು. ಭಕ್ತಿ, ಮಂತ್ರ, ಇವೆರಡೂ ಯುಕ್ತವಾಗಿ ಮಾಡಿದರೆ ಕೋಟಿಕೋಟಿ ಗುಣಿತ ಲಾಭದಾಯಕವಾಗುವುದು.

ಏಭಿರ್ಮಂತ್ರಪದೈಸ್ತತ್ರ ಪೂಜಯೇದ್ಗರುಡಧ್ವಜಂ ।
ಉಪಹಾರೈರ್ನರಶ್ರೇಷ್ಠ ಶುಚಿರ್ಭೂತ್ವಾ ಸಮಾಹಿತಃ ॥ ೩೬ ॥

ಓಂ ಜಲಜೋಪಮದೇಹಾಯ ಜಲದಾಸ್ಯಾಯ ಶಂಖಿನೇ ।
ಜಲರಾಶಿಸ್ವರೂಪಾಯ ನಮಸ್ತೇ ಪುರುಷೋತ್ತಮ ॥ ೩೭ ॥

ನಮಃ ಕಮಲನಾಭಾಯ ನಮಸ್ತೇ ಜಲಶಾಯಿನೇ ।
ನಮಸ್ತೇ ಕೇಶವಾನಂತ ವಾಸುದೇವ ನಮೋಽಸ್ತು ತೇ ॥ ೩೮ ॥

(ಇತಿ ಸ್ನಾನಮಂತ್ರಃ)

ಮಲಯೇಷು ಸಮುತ್ಪನ್ನಂ ಗಂಧಾಢ್ಯಂ ಸುಮನೋಹರಂ ।
ಮಯಾ ನಿವೇದಿತಂ ತುಭ್ಯಂ ಗೃಹಾಣ ಪರಮೇಶ್ವರ ॥ ೩೯ ॥

(ಇತಿ ಚಂದನಮಂತ್ರ)

---

೩೬. ಅಯ್ಯಾ ರಾಜನೇ ! ಈ ವ್ರತದಲ್ಲಿ ಶುಚಿಯಾಗಿ ಚಿತ್ತೈಕಾಗ್ರತೆಯುಳ್ಳವನಾಗಿ, ನೈವೇದ್ಯ ಸಮರ್ಪಣಾಪೂರ್ವಕವಾಗಿ, ಯಥೋಕ್ತವಾದ ಮಂತ್ರಗಳನ್ನು ಪಠಿಸಿ, ಗರುಡಧ್ವಜನಾದ ಶ್ರೀ ಹರಿಗೆ ಅರ್ಚನೆಮಾಡಬೇಕು.

೩೭–೩೮. ಇದು ಶ್ರೀ ಹರಿಯ ಸ್ನಾನಮಂತ್ರ. (ಓ ಪುರುಷೋತ್ತಮನೇ ! ಕಮಲಗಳಿಗೆ ಸಮಾನವಾದ ಶರೀರವುಳ್ಳವನೂ, ಕಮಲಸದೃಶವಾದ ವದನವುಳ್ಳವನೂ, ಶಂಖಹಸ್ತನೂ, ಜಲರಾಶಿಯಂತೆ ಕಪ್ಪಾದ ಮೈಬಣ್ಣವುಳ್ಳವನೂ, ಆಗಿರುವ ನಿನಗೆ ಅನೇಕ ನಮಸ್ಕಾರಗಳು. ಮತ್ತು ಕಮಲನಾಭನಾದ ನಿನಗೆ ನಮಸ್ಕಾರ. ಜಲದಲ್ಲಿ ಶಯನಮಾಡುವ ನಿನಗೆ ನಮಸ್ಕಾರ. ಅಪರಿಚ್ಛಿನ್ನನಾಗಿಯೂ, ವ್ಯಾಪಕನಾಗಿಯೂ, ಸ್ವಪ್ರಕಾಶಸ್ವರೂಪನಾಗಿಯೂ ಇರುವ ನಿನಗೆ ವಂದಿಸುವೆನು. ಇದು ಶ್ರೀ ಹರಿಗೆ ಅಭಿಷೇಕಕಾಲದಲ್ಲಿ ಹೇಳುವ ಶ್ಲೋಕದ್ವಯಗಳ ಅರ್ಥ).

೩೯. ಓ ಪರಮೇಶ್ವರನೇ ! ಮಲಯಪರ್ವತದಲ್ಲಿ ಉತ್ಪನ್ನವಾದುದೂ, ಸುವಾಸನೆಯುಳ್ಳುದೂ, ಅತಿ ಮನೋಹರವೂ ಆಗಿರುವ ಈ ಗಂಧವನ್ನು ನಾನು ನಿನಗೆ ಸಮರ್ಪಿಸುತ್ತೇನೆ ಸ್ವೀಕರಿಸು. ಎಂಬ ಅರ್ಥವುಳ್ಳ ಶ್ಲೋಕವನ್ನು ಹೇಳಿ ಚಂದನವನ್ನು ಲೇಪಿಸಬೇಕು.

ವನಸ್ಪತಿಸಮುತ್ಪನ್ನಂ ಗಂಧಾಢ್ಯಂ ಸುಮನೋಹರಂ ।
ಮಯಾ ನಿವೇದಿತಂ ಪುಷ್ಪಂ ಗೃಹಾಣ ಪುರುಷೋತ್ತಮ ॥ ೪೦ ॥
(ಇತಿ ಪುಷ್ಪಮಂತ್ರಃ)

ನಮಃ ಕಮಲಕಿಂಜಲ್ಕಪೀತನಿರ್ಮಲವಾಸಸೇ ।
ಮನೋಹರವಪುಃ ಸ್ಕನ್ಧಧೃತಚಕ್ರಾಯ ಶಾರ್ಙ್ಗಿಣೇ ॥ ೪೧ ॥
(ಇತಿ ಪೂಜಾಮಂತ್ರಃ)

ಮತ್ಸ್ಯಃ ಕೂರ್ಮೋ ವರಾಹಶ್ಚ ನಾರಸಿಂಹಶ್ಚ ವಾಮನಃ ।
ರಾಮೋ ರಾಮಶ್ಚ ಕೃಷ್ಣಶ್ಚ ನಾಮಭಿರ್ವಾಮನಾಯ ತೇ ।
ಪಾದಾದ್ಯೇಕೈಕಾಂಗಸ್ಯ ಪೂಜನಂ ಶೀರ್ಷಗಂ ತತಃ ॥ ೪೨ ॥
(ಇತಿ ಸರ್ವಾಂಗಪೂಜಾ)

---

೪೦. ಓ ಪುರುಷೋತ್ತಮನೇ ! ವನಸ್ಪತಿಗಳಲ್ಲಿ ಜನಿಸಿದುದೂ, ಸುಗಂಧ ಭರಿತವೂ, ಸುಮನೋಹರವೂ, ಆಗಿರುವ ಈ ಪುಷ್ಪಗಳನ್ನು ನಿನಗೆ ಅರ್ಪಿಸುತ್ತೇನೆ. ಈ ಪುಷ್ಪವನ್ನು ಸ್ವೀಕರಿಸು ಎಂದು ಅರ್ಥವುಳ್ಳ ಶ್ಲೋಕ ಹೇಳಿ, ಪುಷ್ಪವನ್ನು ಪೂಜೆಮಾಡಬೇಕು.

೪೧. ಕಮಲಪುಷ್ಪದ ಒಳಗಿರುವ ಕೇಸರದಂತೆ ಬಣ್ಣವುಳ್ಳ ನಿರ್ಮಲ ಪೀತಾಂಬರವನ್ನು ಧರಿಸಿದವನೂ, ಮನೋಹರವಾದ ಶರೀರದ ಬಾಹುಗಳಲ್ಲಿ ಚಕ್ರಾಯುಧ ಶಾರ್ಙ್ಗವೆಂಬ ಧನುಸ್ಸು ಇವನ್ನು ಧರಿಸಿದವನೂ, ಆಗಿರುವ ಶ್ರೀ ಹರಿಗೆ ನಮಸ್ಕಾರಗಳು ಎಂಬ ಅರ್ಥವುಳ್ಳ ಶ್ಲೋಕ ಹೇಳಿ ಅಂಗಗಳನ್ನು ಪೂಜಿಸಬೇಕು.

೪೨. ಅನಂತರ ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ರಾಮ, ಬಲರಾಮ, ಕೃಷ್ಣ ಎಂಬ ಈ ನಾಮಗಳನ್ನು ಪಠಿಸಿ, ಶ್ರೀ ವಾಮನ ಮೂರ್ತಿಯ ಪಾದಾದಿಶಿರಃಪರ್ಯಂತವಾಗಿ ಪ್ರತ್ಯಂಗಗಳನ್ನೂ ಪೂಜಿಸಬೇಕು. ಓಂ ಮತ್ಸ್ಯಾಯನಮಃ ಪಾದೌಪೂಜಯಾಮಿ ಇತ್ಯಾದಿ ಕ್ರಮದಲ್ಲಿ ಪೂಜಿಸ ತಕ್ಕುದ್ದು.

**ಧೂಪೋಽಯಂ ದೇವದೇವೇಶ ಶಂಖಚಕ್ರಗದಾಧರ ।**
**ಅಚ್ಯುತಾನಂತ ಗೋವಿಂದ ವಾಸುದೇವ ನಮೋಽಸ್ತು ತೇ || ೪೩ ||**
**(ಇತಿ ಧೂಪಮಂತ್ರಃ)**

**ತ್ವಮೇವ ಪೃಥಿವೀಜ್ಯೋತಿರ್ವಾಯುರಾಕಾಶಮೇವ ಚ ।**
**ತ್ವಮೇವ ಜ್ಯೋತಿಷಾಂ ಜ್ಯೋತಿರ್ದೀಪೋಽಯಂ ಪ್ರತಿಗೃಹ್ಯತಾಂ ||**
**(ಇತಿ ದೀಪಮಂತ್ರಃ)**

**ಅನ್ನಂ ಚತುರ್ವಿಧಂ ಸ್ವಾದು ರಸೈಃ ಷಡ್ಭಿಸ್ಸಮನ್ವಿತಂ ।**
**ಭಕ್ಷ್ಯಭೋಜ್ಯಸಮಾಯುಕ್ತಂ ಪ್ರಸೀದ ಪರಮೇಶ್ವರ || ೪೫ ||**

**ಅನ್ನಂ ಪ್ರಜಾಪತಿರ್ವಿಷ್ಣೂ ರುದ್ರೇಂದ್ರಶಶಿಭಾಸ್ಕರಾಃ ।**
**ಅನ್ನಂ ತ್ವಷ್ಟಾ ಯಮೋಽಗ್ನಿಶ್ಚ ಪಾಪಂ ಹರತು ಮೇಽವ್ಯಯಃ ||೪೬||**
**(ಇತಿ ನೈವೇದ್ಯಮಂತ್ರಃ)**

---

೪೩. ಶಂಖಚಕ್ರಗದಾಧಾರಿ, ಅಚ್ಯುತ, ಅನಂತ ಇತ್ಯಾದಿ ನಾಮಗಳಿಂದ ಸ್ತುತಿಸಲ್ಪಡುವವನೂ, ಸಮಸ್ತ ದೇವತೆಗಳಿಗೂ ದೇವನೂ, ಸರ್ವೇಶ್ವರನೂ ಆಗಿರುವ ಶ್ರೀ ಹರಿಯೇ! ನಿನಗೆ ಈ ಧೂಪವನ್ನು ಸಮರ್ಪಿಸಿರುತ್ತೇನೆ. ಮತ್ತು ನಮಸ್ಕರಿಸುತ್ತೇನೆ ಎಂಬ ಅರ್ಥವುಳ್ಳ ಈ ಶ್ಲೋಕವನ್ನು ಹೇಳಿ ಧೂಪವನ್ನು ಬೆಳಗಬೇಕು.

೪೪. ಓ ಶ್ರೀ ಹರಿಯೇ ! ನೀನೇ ಭೂಮಿಗೆಲ್ಲಾ ಜ್ಯೋತಿಸ್ವರೂಪನಾದ ಪ್ರಕಾಶಕನು. ವಾಯು ಮತ್ತು ಆಕಾಶ ಸ್ವರೂಪನೂ ನೀನೇ. ಸೂರ್ಯ ಚಂದ್ರ ನಕ್ಷತ್ರ ಅಗ್ನಿ ಮುಂತಾದ ಜ್ಯೋತಿಸ್ಸುಗಳಿಗೂ ನೀನು ಪ್ರಕಾಶಪ್ರದನು. ಅಂಥ ನೀನು, ನಾನು ಸಮರ್ಪಿಸುವ ಈ ದೀಪವನ್ನು ಸ್ವೀಕರಿಸು. ಎಂಬ ಅರ್ಥವುಳ್ಳ ಈ ಶ್ಲೋಕವನ್ನು ಹೇಳಿ ದೀಪಾರತಿಯನ್ನು ಬೆಳಗಬೇಕು.

೪೫. ಹೇ ಪರಮೇಶ್ವರನೇ ! ರುಚಿಕರವಾಗಿಯೂ, ಷಡ್ರಸೋಪೇತವಾಗಿಯೂ, ಇರುವ ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯವೆಂಬ ಚತುರ್ವಿಧದ ಅನ್ನವನ್ನೂ ಸಮರ್ಪಿಸಿರುತ್ತೇನೆ. ಇದನ್ನು ಸ್ವೀಕರಿಸಿ ಪ್ರಸನ್ನನಾಗು.

೪೬. ಅನ್ನವು; ಬ್ರಹ್ಮ, ವಿಷ್ಣು, ರುದ್ರ, ಇಂದ್ರ, ಸೂರ್ಯ, ಚಂದ್ರ, ತ್ವಷ್ಟೃ, ಯಮ, ಅಗ್ನಿ ಈ ಎಲ್ಲ ಸ್ವರೂಪವು. ನಿರ್ವಿಕಾರನಾದ ಶ್ರೀ ಹರಿಯು ಇದರಿಂದ ತುಷ್ಟನಾಗಿ ನನ್ನ ಪಾಪವನ್ನು ನಾಶಮಾಡಲಿ; ಎಂಬ ಅರ್ಥವುಳ್ಳ ಈ ಶ್ಲೋಕದ್ವಯವನ್ನು ಹೇಳಿ ನೈವೇದ್ಯಸಮರ್ಪಣ ಮಾಡಬೇಕು.

ಜಗದಾದಿರ್ಜಗದ್ರೂಪಮನಾದಿರ್ಜಗದಂತಕೃತ್ ।
ಜಲಾಶಯೋ ಜಗದ್ಯೋನಿಃ ಪ್ರೀಯತಾಂ ಮೇ ಜನಾರ್ದನಃ ॥ ೪೭ ॥
(ಇತಿ ಪ್ರೀಣನಮಂತ್ರಃ)

ಅನೇಕ ಕರ್ಮನಿರ್ಬಂಧಧ್ವಂಸಿನಂ ಜಲಶಾಯಿನಂ ।
ನತೋಽಸ್ಮಿ ಮಧುರಾವಾಸಂ ಮಾಧವಂ ಮಧುಸೂದನಂ ॥ ೪೮ ॥

ನಮೋ ವಾಮನರೂಪಾಯ ನಮಸ್ತೇಽಸ್ತು ತ್ರಿವಿಕ್ರಮ ।
ನಮಸ್ತೇ ಮಣಿಬಂಧಾಯ ವಾಸುದೇವ ನಮೋಽಸ್ತು ತೇ ॥ ೪೯ ॥
(ಇತಿ ನಮಸ್ಕಾರಮಂತ್ರಃ)

ನಮೋ ನಮಸ್ತೇ ಗೋವಿಂದ ವಾಮನೇಶತ್ರಿವಿಕ್ರಮ ॥ ೫೦ ॥

---

೪೭. ಪ್ರಪಂಚದ ಸೃಷ್ಟಿ ಲಯಗಳ ಕರ್ತೃವೂ, ಪ್ರಪಂಚಸ್ವರೂಪಿಯೂ, ಅನಾದಿಯೂ, ಜಲಶಾಯಿಯೂ, ಪ್ರಪಂಚಕ್ಕೆ ವಿವರ್ತೋಪಾದಾನನೂ ಆಗಿರುವ ಶ್ರೀ ಜನಾರ್ದನನು ನನ್ನ ವಿಷಯದಲ್ಲಿ ಪ್ರೀತನಾಗಲಿ ಎಂಬ ಅರ್ಥವುಳ್ಳ ಈ ಶ್ಲೋಕ ಹೇಳಿ ಹರಿಪ್ರೀಣನಮಾಡಬೇಕು.

೪೮. ಅನೇಕ ಪುಣ್ಯ ಪಾಪ ಕರ್ಮಗಳೆಂಬ ಸಂಸಾರಿಯ ದೃಢಬಂಧನ ವನ್ನು ನಾಶಮಾಡುವವನೂ, ಜಲಶಾಯಿಯೂ, ಮಧುರಾಪುರೀನಿವಾಸಿಯೂ, ಲಕ್ಷ್ಮೀಪತಿಯೂ, ಮಧುನಾಮಕ ದೈತ್ಯನನ್ನು ಸಂಹರಿಸಿದವನೂ ಆಗಿರುವ ಶ್ರೀ ಹರಿಗೆ ನಮಸ್ಕರಿಸುತ್ತೇನೆ.

೪೯. ಓ ಶ್ರೀ ಹರಿಯೇ ! ವಾಮನಸ್ವರೂಪಿಯಾದ ನಿನಗೆ ವಂದನೆ. ಮೂರಡಿಗಳನ್ನಿಟ್ಟು ಮೂರುಲೋಕಗಳನ್ನೂ ಆಕ್ರಮಿಸಿದ ನಿನಗೆ ನಮಸ್ಕಾರ ಗಳು. ಬಲಿಚಕ್ರವರ್ತಿಗೆ ಬಂಧಕನಾದ ನಿನಗೆ ನಮಸ್ಕಾರ. ವ್ಯಾಪಕನೂ ಪ್ರಕಾಶ ಸ್ವರೂಪನೂ ಆಗಿರುವ ಶ್ರೀ ಹರಿಯೇ ! ನಿನಗೆ ಅನಂತ ವಂದನೆಗಳು. ಎಂಬ ಅರ್ಥವುಳ್ಳ ಈ ಎರಡು ಶ್ಲೋಕಗಳನ್ನೂ ಹೇಳಿ ನಮಸ್ಕಾರಮಾಡಬೇಕು.

೫೦–೫೧. ಗೋವಿಂದ, ವಾಮನ, ಇತ್ಯಾದಿ ನಾಮಧೇಯಗಳಿಂದ ಸ್ತುತ್ಯನಾದ ಶ್ರೀ ಹರಿಯೇ ! ನಿನಗೆ ಅನಂತನಮಸ್ಕಾರಗಳು. ನೀನು ಪಾಮರ

ಅಘೌಘಸಂಕ್ಷಯಂ ಕೃತ್ವಾ ಸರ್ವಕಾಮಪ್ರದೋ ಭವ　　|| ೫೦ ||

(ಇತಿ ಪ್ರಾರ್ಥನಾಮಂತ್ರಃ)

ಸರ್ವಗಃ ಸರ್ವದೇವೇಶಃ ಶ್ರೀಧರಃ ಶ್ರೀನಿಕೇತನಃ |
ವಿಶ್ವೇಶ್ವರಶ್ಚ ವಿಷ್ಣುಶ್ಚ ಶ್ರೀಶಾಯೀ ಚ ನಮೋನಮಃ　　|| ೫೨ ||

(ಇತಿ ಶಯನಮಂತ್ರಃ)

ಏವಂ ಸಂಪೂಜ್ಯ ಯೋ ರಾತ್ರಾವೇಕಾದಶ್ಯಾಂ ನೃಪೋತ್ತಮ |
ಜಾಗರಂ ತತ್ರ ಕುರ್ವೀತ ಗೀತವಾದಿತ್ರನಿಸ್ವನೈಃ　　|| ೫೩ ||

ಯಾ ಚ ಶ್ರವಣಸಂಯುಕ್ತಾ ದ್ವಾದಶೀ ಪರಮಾ ತಿಥಿಃ |
ತಸ್ಯಾಂ ಚ ಸಂಗಮೇ ಸ್ನಾತ್ವಾ ಸರ್ವಪಾಪೈಃ ಪ್ರಮುಚ್ಯತೆ　　|| ೫೪ ||

---

ನಾದ ನನ್ನ ಪಾಪಸಮುದಾಯವನ್ನು ನಾಶಮಾಡಿ, ಸರ್ವಕಾಮಪ್ರದಾಯಕ ನಾಗು ಎಂಬ ಅರ್ಥವುಳ್ಳ ಈ ಶ್ಲೋಕವನ್ನು ಪಠಿಸಿ ಕ್ಷಮಾಪ್ರಾರ್ಥನೆಮಾಡ ಬೇಕು).

೫೨. ಸರ್ವತ್ರಗಮನವುಳ್ಳವನೂ, ಸರ್ವದೇವಾಧಿಪತಿಯೂ, ಲಕ್ಷ್ಮೀಧರನೂ, ಶ್ರೀ ಲಕ್ಷ್ಮಿಗೆ ಆವಾಸಸ್ಥಾನನೂ, ಪ್ರಪಂಚಾಧೀಶನೂ, ವ್ಯಾಪಕನೂ, ಲಕ್ಷ್ಮಿಯೊಡನೆ ಶಯನಮಾಡುವವನೂ ಆಗಿರುವ ಶ್ರೀ ಹರಿಗೆ ಅನಂತ ವಂದನೆಗಳು, ಎಂಬ ಅರ್ಥವುಳ್ಳ ಈ ಶ್ಲೋಕವನ್ನು ಪಠಿಸಿ ಶಯನೋತ್ಸವಮಾಡಬೇಕು.

೫೩. ಅಯ್ಯಾ ನೃಪಶ್ರೇಷ್ಠನೇ ! ಏಕಾದಶೀದಿನದ ರಾತ್ರಿಯಲ್ಲಿ ಈ ಕ್ರಮದಿಂದ ಶ್ರೀ ಹರಿಗೆ ಪೂಜೆಮಾಡಿ, ಅನಂತರ ಆ ರಾತ್ರಿ ಸಂಗೀತ, ಮಂಗಳ ವಾದ್ಯಾದಿಗಳು ಕೀರ್ತನ ಭಜನೆ ಇತ್ಯಾದಿಗಳಿಂದ ಜಾಗರಣವನ್ನು ಆಚರಿಸಬೇಕು.

೫೪. ಶ್ರವಣ ನಕ್ಷತ್ರಯುತವಾದ ದ್ವಾದಶೀತಿಥಿಯು ಅತ್ಯುತ್ತಮವಾದುದು. ಆ ಶ್ರೇಷ್ಠದಿನದಲ್ಲಿ ನದೀಸಂಗಮದಲ್ಲಿ ಸ್ನಾನಮಾಡಿದವನು ತನ್ನ ಸರ್ವಪಾಪಗಳಿಂದಲೂ ಮುಕ್ತನಾಗುತ್ತಾನೆ.

ಏವಂ ಸಂಪೂಜ್ಯ ಯತ್ನೇನ ಪ್ರಭಾತೇ ವಿಮಲೇ ಸತಿ ।
ಪ್ರದೇಯಂ ಶಾಸ್ತ್ರವಿದುಷೇ ಬ್ರಾಹ್ಮಣಾಯ ಚ ಮಂತ್ರತಃ ॥ ೫೫ ॥

ಬ್ರಾಹ್ಮಣಶ್ಚಾಪಿ ಮಂತ್ರೇಣ ಪ್ರತಿಗೃಹ್ಣೀತ ಮಂತ್ರವಿತ್ ।
ವಾಮನೋಽಸ್ಯ ಪ್ರತಿಗ್ರಾಹೀ ವಾಮನಾಯ ನಮೋನಮಃ ॥ ೫೬ ॥

ಓಂ ಗುಹ್ಯೇ । ಓಂ ಶಿರಸಿ । ಓಂ ಪಾದಯೋಃ । ಓಂ ನಾಭೌ ।
ಓಂ ಭುಜಯೋಃ । ಓಂ ಸರ್ವಾಂಗೇ । ಸರ್ವಾತ್ಮನೇ ನಮಃ ।
ಪುಷ್ಪಂ ಫಲಂ ಚ ನೈವೇದ್ಯಂ ಸರ್ವಮೇತದ್ಯಥಾವಿಧಿ ।
ನರೋ ದದ್ಯಾದುಪೋಷ್ಯೈವಮೇಕಾದಶ್ಯಾಂ ಸಮಂತ್ರಕಂ ॥ ೫೭ ॥

ಪೂರ್ವೋಕ್ತವಿಧಿನಾ ಪ್ರಾತರ್ಭೋಜನಂ ಪೃಷದಾಜ್ಯಕಂ ।
ಪೂರ್ವಂ ದತ್ವಾ ಬ್ರಾಹ್ಮಣೇಭ್ಯಃ ಪಶ್ಚಾದ್ಭುಂಜೀತ ವಾಗ್ಯತಃ ॥ ೫೮ ॥

---

೫೫. ಈರೀತಿ ಸ್ನಾನಮಾಡಿ, ಪ್ರಯತ್ನಪೂರ್ವಕವಾಗಿ ಶ್ರೀ ಹರಿಯನ್ನು ಪೂಜೆಮಾಡಿ, ಜಾಗರಣೆಯನ್ನು ಆಚರಿಸಿ, ಆದಿನ ರಾತ್ರಿ ಕಳೆದು ಬೆಳಗಾಗಿ ನಭಸ್ಥಲವು ನಿರ್ಮಲವಾದ ಮೇಲೆ, ಆವಾಹಿತವಾದ ವಾಮನಪ್ರತಿಮೆಯನ್ನು ಶಾಸ್ತ್ರಜ್ಞನಾದ ಬ್ರಾಹ್ಮಣನಿಗೆ ಮಂತ್ರಪೂರ್ವಕವಾಗಿ ದಾನಮಾಡಬೇಕು.

೫೬. ಮಂತ್ರಜ್ಞನಾದ ಪ್ರತಿಗೃಹೀತೃ ಬ್ರಾಹ್ಮಣನು ಮಂತ್ರಪೂರ್ವಕವಾಗಿ ಅದನ್ನು ಪ್ರತಿಗ್ರಹಿಸಬೇಕು. ಇದನ್ನು ಪ್ರತಿಗ್ರಹಿಸುವವನು ವಾಮನಸ್ವರೂಪನು. ಅಂತಹ ವಾಮನನಿಗೆ ಅನಂತ ವಂದನೆಗಳು ಎಂಬುದು ಈ ಶ್ಲೋಕದ ಅರ್ಥ.

೫೭. ಈ ವ್ರತಾನುಷ್ಠಾತೃವು ಏಕಾದಶೀದಿನ ಉಪವಾಸವನ್ನಾಚರಿಸಿ ಪುಷ್ಪಾದಿಗಳಿಂದ ಶ್ರೀ ಹರಿಗೆ ಈ ಅಂಗಗಳ ಪೂಜೆಮಾಡಿ; ಫಲ, ನೈವೇದ್ಯ ಇವೆಲ್ಲವನ್ನೂ ಶಾಸ್ತ್ರಪ್ರಕಾರವಾಗಿ ಸಮರ್ಪಿಸಿ, ಸಾಂಗವಾಗಿ ಪೂಜಿಸಿ, ಜಾಗರಣಮಾಡಬೇಕು.

೫೮. ಪೂರ್ವೋಕ್ತರೀತಿಯಾಗಿ ಎಲ್ಲವನ್ನೂ ಆಚರಿಸಿದ ಮೇಲೆ, ಮರುದಿನ ಪ್ರಾತಃಕಾಲದಲ್ಲಿ ದಾನಮಾಡಿ, ಬಳಿಕ ಬ್ರಾಹ್ಮಣರಿಗೆ ತುಪ್ಪ, ಮೊಸರು ಇತ್ಯಾದಿಗಳಿಂದ ಭೋಜನಮಾಡಿಸಿ, ಅನಂತರ ತಾನೂ ಮೌನದಿಂದ ಭುಂಜಿಸಬೇಕು.

ಭೂಯೋಭೂಯೋಽಪಿ ರಾಜೇಂದ್ರ ಸರ್ವತ್ರೈವಂ ವಿಧಿಃ ಸ್ಮೃತಃ ।
ಸಮಾಪ್ತೇ ತು ವ್ರತೇ ರಾಜನ್ಯತ್ಪುಣ್ಯಂ ತನ್ನಿಬೋಧ ಮೇ ॥ ೫೯ ॥

ಚತುರ್ಯುಗಾನಿ ರಾಜೇಂದ್ರ ಏಕಸಪ್ತತಿಸಂಖ್ಯಯಾ ।
ಪ್ರಾಪ್ಯ ವಿಷ್ಣುಪುರೇ ರಾಜನ್ ಕ್ರೀಡತೇ ಕಾಲಮಕ್ಷಯಂ ॥ ೬೦ ॥

ಇಹಾಗತ್ಯ ಭವೇದ್ರಾಜಾ ಪ್ರತಿಪಕ್ಷಕ್ಷಯಂಕರಃ ।
ಹಸ್ತ್ಯಶ್ವರಥಪತ್ತೀನಾಂ ದಾತಾ ಭೋಕ್ತಾ ವಿಮತ್ಸರೀ ॥ ೬೧ ॥

ರೂಪಸೌಭಾಗ್ಯಸಂಪನ್ನೋ ದೀರ್ಘಾಯುರ್ನೀರುಜೋ ಭವೇತ್ ।
ಪುತ್ರೈಃ ಪರಿವೃತೋ ಜೀವೋ ಜೀವೇಚ್ಚ ಶರದಃ ಶತಂ ॥ ೬೨ ॥

---

೫೯. ಅಯ್ಯಾ ರಾಜೇಂದ್ರನೇ ! ಈ ವ್ರತವನ್ನು ಅನೇಕಸಾರಿ ಆಚರಿಸಬೇಕು. ಯಾವಾಗಲೂ ಹಿಂದೆ ಅನುಷ್ಠಾನಮಾಡಿದಂತೆಯೇ ನಡಸಬೇಕು. ಅಯ್ಯಾ ರಾಜನೇ ! ಈ ವ್ರತಸಮಾಪ್ತಿಯಾದ ಮೇಲೆ ಆ ಅನುಷ್ಠಾತೃವಿಗೆ ಬರುವ ಪುಣ್ಯಫಲವನ್ನು ಹೇಳುತ್ತೇನೆ ಕೇಳು.

೬೦. ಎಲೈ ರಾಜೇಂದ್ರನೇ ! ಈ ವ್ರತವನ್ನು ಆಚರಿಸಿದವನು ವಿಷ್ಣು ಲೋಕವಾದ ವೈಕುಂಠಕ್ಕೆ ಹೋಗಿ ಎಪ್ಪತ್ತೊಂದು ಚತುರ್ಯುಗಗಳು ಕಳೆಯುವ ವರೆಗೂ ಅಲ್ಲಿ ಕ್ರೀಡಿಸುತ್ತಿರುತ್ತಾನೆ.

೬೧. ಅನಂತರ ಈ ಭೂಲೋಕದಲ್ಲಿ ಜನಿಸಿ ರಾಜನಾಗಿ, ಪರರಾಜರಿಗೆ ಭಯಂಕರನೂ, ಆನೆ, ಕುದುರೆ, ರಥ, ಕಾಲಾಳು, ಈ ಚತುರಂಗ ಸೇನೆಗೆ ಅಧಿಪತಿಯೂ, ದಾನಶೀಲನೂ, ಅಸೂಯಾರಹಿತನೂ ಆಗುತ್ತಾನೆ.

೬೨. ಮತ್ತು ಆಗ ಸೌಂದರ್ಯ ಸೌಭಾಗ್ಯಸಂಪನ್ನನೂ, ದೀರ್ಘಾಯುಷ್ಮಂತನೂ, ನೀರೋಗಿಯೂ, ಪುತ್ರಪರಿವೃತನೂ ಆಗಿ, ನೂರುವರ್ಷಗಳಕಾಲ ಜೀವಿಸುತ್ತಾನೆ.

ಏತಸ್ಯಾಃ ಫಲಮಾಖ್ಯಾತಮೇಕಾದಶ್ಯಾ ಮಯಾ ತವ ।
ಪೂರ್ವಮೇವ ಸಮಾಖ್ಯಾತಾ ದ್ವಾದಶೀ ಶ್ರವಣಾನ್ವಿತಾ ॥ ೬೩ ॥

ಉಪೋಷ್ಯೈಕಾದಶೀಂ ಪಶ್ಚಾದ್ದ್ವಾದಶೀಮುಪ್ಯುಪೋಷಯೇತ್ ।
ನ ಚಾತ್ರ ವಿಧಿಲೋಪಃ ಸ್ಯಾದುಭಯೋರ್ದೇವತಾ ಹರಿಃ ॥ ೬೪ ॥

ಗದ್ಯ

(ಏಕಾದಶೀ ದ್ವಾದಶ್ಯೋರನ್ಯತರಸ್ಯಾಂ ಶ್ರವಣಯುಕ್ತಾಯಾಂ
ಶ್ರವಣಯುಕ್ತೋಪವಾಸೇನೈವ ವ್ರತದ್ವಯಸಿದ್ಧಿಃ ।
ಏಕಸ್ಮಿನ್ವ್ರತೇ ಪೂರ್ವಮನ್ಯಾಂ ತಿಥಿಮುಪೋಷ್ಯ
ಪಶ್ಚಾದಪಾರಯಿತ್ವೈವಾನ್ಯೋಪೋಷ್ಯತ ಇತಿ ಯೋ
ವಿಧಿಲೋಪಃ ಸ ಏಕದೇವತಾಕತ್ವೇನ ಭವತೀತ್ಯರ್ಥಃ । )

ಬುಧಶ್ರವಣಸಂಯುಕ್ತಾ ದ್ವಾದಶೀ ಸಂಗಮೋದಕಂ ।
ದಾನಂ ದಧ್ಯೋದನಂ ಸತ್ಯಮುಪವಾಸಃ ಪರೋ ವಿಧಿಃ ॥ ೬೫ ॥

---

೬೩. ಅಯ್ಯಾ ರಾಜನೇ! ಈ ಶ್ರವಣೈಕಾದಶಿ ತಿಥಿಯ ಫಲವನ್ನು ನಾನು ನಿನಗೆ ಹೇಳಿದೆನು. ಶ್ರವಣದ್ವಾದಶೀವ್ರತದ ಫಲವನ್ನು ಈ ಮೊದಲೇ ನಾನು ನಿನಗೆ ಹೇಳಿರುತ್ತೇನೆ.

೬೪. ಏಕಾದಶೀ ತಿಥಿಯಲ್ಲಿ ಉಪವಾಸವನ್ನಾಚರಿಸಿದುದಲ್ಲದೆ ಶ್ರವಣ ದ್ವಾದಶಿಯಲ್ಲೂ ಉಪವಾಸವನ್ನಾಚರಿಸಬೇಕು. ಏಕಾದಶೀ ದ್ವಾದಶೀ ಈ ಎರಡು ತಿಥಿಗಳಲ್ಲಿ ಆಚರಿಸುವ ವ್ರತಗಳಿಗೂ ಶ್ರೀ ಹರಿಯೇ ದೇವತೆಯಾದುದರಿಂದ ಏಕಾದಶೀ ವ್ರತಕ್ಕೆ ಪಾರಣೆ ಲೋಪವಾಯಿತು ಎಂಬ ದೋಷವಿಲ್ಲ. ಏಕಾದಶೀ ದ್ವಾದಶೀ ಈ ಎರಡು ತಿಥಿಗಳಲ್ಲಿ ಯಾವ ತಿಥಿಯು ಶ್ರವಣನಕ್ಷತ್ರ ಯುಕ್ತವಾಗಿದೆಯೋ ಆ ತಿಥಿಯಲ್ಲಿ ಉಪವಾಸ ಮಾಡಿದ್ದರಿಂದಲೇ ಈ ವ್ರತದ್ವಯಗಳೂ ಸಿದ್ಧಿಸುವುವು. ಈರೀತಿ ಏಕದೇವತಾಕಗಳಾದ ಆ ಎರಡು ವ್ರತಗಳಿಗೆ ಒಂದೇ ಪಾರಣೆಯಿಂದ ಸಾಂಗತ್ಯವು ಬರುವುದು.

೬೫. ದ್ವಾದಶಿ ಬುಧವಾರ, ಶ್ರವಣನಕ್ಷತ್ರ ಇವು ಕೂಡಿದ ದಿನದಲ್ಲಿ ನದಿಯಲ್ಲೋ ಸಂಗಮ ಸ್ಥಳದಲ್ಲಿಯೋ ಸ್ನಾನ ಉಪವಾಸ ಇವುಗಳನ್ನು ಆಚರಿಸಿ; ಉದಕುಂಭ, ದಧ್ಯೋದನ ಇವುಗಳನ್ನು ದಾನಮಾಡುವ ಮೂಲಕ ವ್ರತವನ್ನು ಆಚರಿಸುವುದು ಎಂಬುದು ಕೆಲವರ ಮತ.

**ಸಗರೇಣ ಕಕುತ್ಸ್ಥೇನ ಧುಂಧುಮಾರೇಣ ಗಾಧಿನಾ ।**
**ಏತೈಶ್ಚಾನ್ಯೈಶ್ಚ ರಾಜೇಂದ್ರ ಕೃತಂ ವೈ ದ್ವಾದಶೀವ್ರತಂ ॥ ೭೬ ॥**

**ಸಾ ದ್ವಾದಶೀ ಬುಧಯುತಾ ಶ್ರವಣೇನ ಸಾಕಂ ।**
**ಸ್ಯಾದ್ವೈ ಜಯಾಯ ಕಥಿತಾ ಋಷಿಭಿರ್ನಭಸ್ಯೇ ।**
**ತಾಮಾದರೇಣ ಸಮುಪೋಷ್ಯ ನರೋಽಮರತ್ವಂ ।**
**ಪ್ರಾಪ್ನೋತಿ ಪಾರ್ಥ ಅಣಿಮಾದಿಗುಣೋಪಪನ್ನಂ ॥ ೭೭ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ವಿಜಯಶ್ರವಣದ್ವಾದಶೀವ್ರತ ವರ್ಣನಂ ನಾಮ ಷಟ್ಸಪ್ತತಿತಮೋಽಧ್ಯಾಯಃ.**



---

೭೬. ಅಯ್ಯಾ ರಾಜೇಂದ್ರನೇ ! ಪೂರ್ವದಲ್ಲಿ ಸಗರ, ಕಕುತ್ಸ್ಥ ಧುಂಧುಮಾರ, ಗಾಧಿ ಈ ರಾಜರೂ ಇತರ ಕೆಲವು ರಾಜರೂ ಈ ದ್ವಾದಶೀ ವ್ರತವನ್ನು ಆಚರಿಸಿರುತ್ತಾರೆ.

೭೭. ಅಯ್ಯಾ ಪಾರ್ಥ ಸಹೋದರನೇ ! ಭಾದ್ರಪದ ಮಾಸದಲ್ಲಿ ದ್ವಾದಶಿಯು ಬುಧವಾರ ಮತ್ತು ಶ್ರವಣ ನಕ್ಷತ್ರ ಇವು ಕೂಡಿ ಬಂದರೆ, ಅದು ವಿಜಯಪ್ರದವೆಂದು ಪೂರ್ವದ ಋಷಿಗಳು ಹೇಳಿರುತ್ತಾರೆ. ಆ ದ್ವಾದಶಿಯಲ್ಲಿ ಭಕ್ತಿಪೂರ್ವಕವಾಗಿ ಉಪವಾಸವನ್ನಾಚರಿಸಿ, ಈ ವ್ರತವನ್ನಾಚರಿಸಿದ ಪುರುಷನು ಅಣಿಮಾದಿ ಅಷ್ಟೈಶ್ವರ್ಯಯುಕ್ತವಾದ ದೇವತ್ವವನ್ನು ಪಡೆಯುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ವಿಜಯ ಶ್ರವಣದ್ವಾದಶೀ ವ್ರತವರ್ಣನೆಯೆಂಬ ಎಪ್ಪತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಸಪ್ತಸಪ್ತತಿತಮೋಽಧ್ಯಾಯಃ

---

॥ ಶ್ರೀಕೃಷ್ಣ ಉವಾಚ ॥

ಕೃಷ್ಣಪಕ್ಷೇ ತು ಪೌಷಸ್ಯ ಸಂಪ್ರಾಪ್ತದ್ವಾದಶೀವ್ರತಂ ।
ಪೌಷಾದಿಪಾರಣಂ ಮಾಸೈಃ ಷಡ್ಭಿರ್ಜ್ಯೈಷ್ಠಾಂತಿಕಂ ಸ್ಮೃತಂ ॥ ೧ ॥

ಪ್ರಥಮಂ ಪುಂಡರೀಕಾಕ್ಷಂ ನಾಮ ಕೃಷ್ಣಸ್ಯ ಗೀಯತೇ ।
ದ್ವಿತೀಯೇ ಮಾಧವಾಖ್ಯಂ ತು ವಿಶ್ವರೂಪಂ ತು ಫಾಲ್ಗುನೇ ॥ ೨ ॥

---

## ಎಪ್ಪತ್ತೇಳನೆಯ ಅಧ್ಯಾಯ

೧. ಶ್ರೀ ಕೃಷ್ಣಪರಮಾತ್ಮನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ! ಪುಷ್ಯ ಮಾಸದ ಕೃಷ್ಣಪಕ್ಷದ ದ್ವಾದಶಿಯದಿನ ಮೊದಲ್ಗೊಂಡು, ಸಂಪ್ರಾಪ್ತ ದ್ವಾದಶೀ ವ್ರತವನ್ನು ಆಚರಿಸಬೇಕು. ಈ ವ್ರತವನ್ನು ಪುಷ್ಯ ಮೊದಲ್ಗೊಂಡು ಜ್ಯೇಷ್ಠಮಾಸ ಪರ್ಯಂತ ಆರು ಮಾಸಗಳಲ್ಲಿ ವ್ರತಾಂಗವಾದ ಪಾರಣಾ ಪೂರ್ವಕವಾಗಿ ಆಚರಿಸಬೇಕು.

೨. ಮೊದಲನೆಯದಾದ ಪುಷ್ಯಮಾಸದಲ್ಲಿ ಶ್ರೀ ಕೃಷ್ಣನನ್ನು "ಪುಂಡರೀಕಾಕ್ಷ" ಎಂದು ಹೇಳಿ ಅರ್ಚಿಸಬೇಕು. ಎರಡನೆಯದಾದ ಮಾಘಮಾಸದಲ್ಲಿ "ಮಾಧವ" ಎಂಬ ನಾಮಧೇಯದಿಂದಲೂ, ಮೂರನೆಯದಾದ ಫಾಲ್ಗುನ ಮಾಸದಲ್ಲಿ ವಿಶ್ವರೂಪ ಎಂಬ ನಾಮದಿಂದಲೂ ಅರ್ಚಿಸಬೇಕು.

ಪುರುಷೋತ್ತಮಾಖ್ಯಂ ತು ತತಃ ಪಂಚಮೇಽಚ್ಯುತಸಂಜ್ಞಕಂ ।
ಷಷ್ಠೇ ಜಯೇತಿ ದೇವೇಶಗುಹ್ಯನಾಮ ಪ್ರಕೀರ್ತಿತಂ ॥ ೩ ॥

ಪೂರ್ವೋಕ್ತೇಷು ಚ ಮಾಸೇಷು ಸ್ನಾನಪ್ರಾಶನಯೋಸ್ತಿಲಾಃ ।
ಆಷಾಢಾದಿಷು ಮಾಸೇಷು ಪಂಚಗವ್ಯಮುದಾಹೃತಂ ॥ ೪ ॥

ಸ್ನಾನೇ ಚ ಪ್ರಾಶನೇ ಚೈವ ಪಂಚಗವ್ಯಂ ಸದೇಷ್ಯತೇ ।
ಪೂಜಯೇತ್ಪುಂಡರೀಕಾಕ್ಷಂ ತೈಸ್ತೈರೇವ ಚ ನಾಮಭಿಃ ॥ ೫ ॥

ಪ್ರತಿಮಾಸಂ ಚ ದೇವೇಶೇ ಕೃತ್ವಾ ಪೂಜಾಂ ಯಥಾವಿಧಿ ।
ವಿಪ್ರಾಯ ದಕ್ಷಿಣಾಂ ದದ್ಯಾಚ್ಛ್ರದ್ಧಧಾನಶ್ಚ ಭಕ್ತಿತಃ ॥ ೬ ॥

---

೩. ಅನಂತರ ನಾಲ್ಕನೆಯದಾದ ಚೈತ್ರಮಾಸದಲ್ಲಿ ಪುರುಷೋತ್ತಮ ಎಂಬ ನಾಮವನ್ನೂ, ಐದನೆಯದಾದ ವೈಶಾಖಮಾಸದಲ್ಲಿ "ಅಚ್ಯುತ" ಎಂಬ ನಾಮವನ್ನೂ ಆರನೆಯದಾದ ಜ್ಯೇಷ್ಠಮಾಸದಲ್ಲಿ "ಜಯ" ಎಂಬ ನಾಮವನ್ನೂ ಹೇಳಿ ಅರ್ಚಿಸಿ, ಈ ವ್ರತವನ್ನು ಆಚರಿಸಬೇಕು. ಈ ಆರೂ ದೇವೇಶನಾದ ಶ್ರೀ ಹರಿಯ ರಹಸ್ಯನಾಮಗಳೆಂದು ಉಕ್ತವಾಗಿವೆ.

೪. ಪೂರ್ವೋಕ್ತಗಳಾದ ಪುಷ್ಯಾದಿ ಮಾಸಗಳಲ್ಲಿ ಸ್ನಾನಕ್ಕೂ, ಪ್ರಾಶನಕ್ಕೂ ತಿಲವನ್ನುಪಯೋಗಿಸಬೇಕು. ಅಂದರೆ ಸ್ನಾನಕ್ಕೆ ತಿಲತೈಲವನ್ನೂ, ಪ್ರಾಶನಕ್ಕೆ ತಿಲವಿಕಾರವಾದ ಚಿಗುಳಿಯನ್ನೂ, ಉಪಯೋಗಿಸಬೇಕು. ಮಿಕ್ಕ ಆಷಾಢಾದಿ ಮಾಸಗಳಲ್ಲಿ ಈ ಸ್ನಾನ ಪ್ರಾಶನಗಳಿಗೆ ಪಂಚಗವ್ಯವು ಉಕ್ತವಾಗಿದೆ.

೫. ವ್ರತಾಂಗವಾದ ಸ್ನಾನ ಮತ್ತು ಪ್ರಾಶನಗಳಿಗೆ ಪಂಚಗವ್ಯವು ಯಾವಾಗಲೂ ಶಾಸ್ತ್ರಸಮ್ಮತವಾಗಿದೆ. ಪೂರ್ವೋಕ್ತಪ್ರಕಾರವಾಗಿ ಆಯಾಯ ಮಾಸಗಳಲ್ಲಿ ತತ್ತನ್ನಾಮಗಳನ್ನು ಹೇಳಿ ಶ್ರೀಹರಿಯನ್ನು ಅರ್ಚಿಸಬೇಕು.

೬. ಪ್ರತಿಮಾಸದಲ್ಲೂ ಶಾಸ್ತ್ರೋಕ್ತವಾಗಿ (ವಿಧ್ಯುಕ್ತರೀತಿಯಲ್ಲಿ) ದೇವಾಧೀಶನಾದ ಶ್ರೀ ಹರಿಗೆ ಪೂಜೆಮಾಡಿ, ಭಕ್ತಿಶ್ರದ್ಧಾಪೂರ್ವಕವಾಗಿ ಬ್ರಾಹ್ಮಣನಿಗೆ ದಾನದಕ್ಷಿಣೆಗಳನ್ನು ಕೊಡಬೇಕು.

ಪಾರಣಂ ಚೈವ ದೇವೇಶಪ್ರೀಣನಂ ಭಕ್ತಿಪೂರ್ವಕಂ ।
ಕುರ್ವೀತ ಭಕ್ತ್ಯಾ ಗೋವಿಂದಸದ್ಭಾವೇನಾರ್ಚನಂ ಯತಃ ॥ ೭ ॥

ನಕ್ತಂ ಭುಂಜೀತ ಸತತಂ ತೈಲಕ್ಷಾರವಿವರ್ಜಿತಂ ।
ಏಕಾದಶ್ಯಾಮುಪೋಷ್ಯೈವಂ ದ್ವಾದಶ್ಯಾಮಥ ವಾ ದಿನೇ ॥ ೮ ॥

ಏವಂ ಸಂವತ್ಸರಸ್ಯಾಂತೇ ಯದಭಿಪ್ರೇತಮಾತ್ಮನಃ ।
ಧನಂ ವಸು ಹಿರಣ್ಯಂ ಚ ಧಾನ್ಯಂ ಭಾಜನಮಾಸನಂ ।
ಶಯ್ಯಾಂ ವಾ ಬ್ರಾಹ್ಮಣೇ ದದ್ಯಾತ್ಕೇಶವಃ ಪ್ರತಿಗೃಹ್ಯತಾಂ ॥ ೯ ॥

ಏತಾಮುಪೋಷ್ಯ ವಿಧಿನಾ ವಿಷ್ಣುಪ್ರೀತೌ ಚ ತತ್ಪರಃ ।
ಸರ್ವಾನ್ಕಾಮಾನವಾಪ್ನೋತಿ ಯದ್ಯದಿಚ್ಛತಿ ಚೇತಸಾ ।
ತತೋ ಲೋಕೇಷು ವಿಖ್ಯಾತಂ ಸಂಪ್ರಾಪ್ತದ್ವಾದಶೀತಿ ವೈ ॥ ೧೦ ॥

---

೭. ಶ್ರೀ ಹರಿಯಲ್ಲಿ ಭಕ್ತಿಯನ್ನಿಟ್ಟು ವ್ರತಾಂಗವಾದ ಪಾರಣೆಯನ್ನು ಶ್ರೀ ಹರಿಗೆ ಪ್ರೀಣನಮಾಡಬೇಕು. ಶ್ರೀ ಹರಿಭಕ್ತಿ, ಸದ್ಭಾವನೆ ಇವೆರಡೂ ಶ್ರೀ ಗೋವಿಂದನ ಪೂಜೆಗೆ ಮುಖ್ಯ ಉಪಕರಣವೆಂದು ಶಾಸ್ತ್ರದಲ್ಲಿ ಹೇಳಿರುವುದರಿಂದ ಭಕ್ತಿಯಿಂದ ಅರ್ಚಿಸಬೇಕು.

೮. ಈರೀತಿ ಪ್ರತಿಮಾಸದಲ್ಲೂ ಏಕಾದಶಿಯ ತಿಥಿಯಲ್ಲಿ ಉಪವಾಸಮಾಡಿ, ದ್ವಾದಶೀದಿನ ರಾತ್ರಿ, ಲವಣವರ್ಜಿತವಾಗಿ ಭೋಜನಮಾಡಬೇಕು. ಅಥವಾ ದ್ವಾದಶೀದಿನ ಹಗಲಿನಲ್ಲೂ ಭೋಜನಮಾಡಬಹುದು.

೯. ಈರೀತಿ ಈ ವ್ರತವನ್ನು ಒಂದುವರ್ಷ ಆಚರಿಸಿ, ತನಗೆ ಅಭಿಪ್ರೇತ ವಾದ ವಸ್ತು, ಧನ, ಹಿರಣ್ಯ, ಧಾನ್ಯ, ಪಕ್ವಾನ್ನ, ಪೀಠ, ಶಯ್ಯಾ ಇವುಗಳನ್ನೆಲ್ಲಾ "ಕೇಶವಃ ಪ್ರತಿಗೃಹ್ಯತಾ" ಎಂದು ಹೇಳಿ ಬ್ರಾಹ್ಮಣನಿಗೆ ದಾನಮಾಡಬೇಕು.

೧೦. ಈ ತಿಥಿಯಲ್ಲಿ ಉಪವಾಸವನ್ನಾಚರಿಸಿ ವಿಷ್ಣುವಿನ ಅನುಗ್ರಹ ಸಂಪಾದನೆಯಲ್ಲಿ ಆಶೆಯುಳ್ಳವನಾಗಿ, ವಿಧ್ಯುಕ್ತರೀತಿಯಲ್ಲಿ ಈ ವ್ರತವನ್ನು ಆಚರಿಸಿದ ಪುರುಷನು, ಮನಸ್ಸಿನಲ್ಲಿ ಯಾವ ಯಾವ ಪ್ರಯೋಜನವಾಗಬೇಕೆಂದು ಸಂಕಲ್ಪಿಸುವನೋ ಆ ಎಲ್ಲಾ ಮನೋರಥಗಳನ್ನೂ ಪಡೆಯುತ್ತಾನೆ. ಆದರಿಂದ ಸರ್ವಕಾಮಪ್ರದವಾದ ಈ ವ್ರತಕ್ಕೆ ಲೋಕದಲ್ಲಿ ಸಂಪ್ರಾಪ್ತದ್ವಾದಶೀ ವ್ರತವೆಂಬ ಹೆಸರು ಪ್ರಖ್ಯಾತವಾಗಿದೆ.

ಕೃತಾಭಿಲಷಿತಾ ದೃಷ್ಟ್ವಾ ಪ್ರಾರಬ್ಧಾ ಧರ್ಮತತ್ಪರೈಃ ।
ಪೂರಯೇದಖಿಲಾನ್ಕಾಮಾನ್ಸಂಸ್ಮೃತಾ ವಾ ದಿನೇದಿನೇ ॥ ೧೧ ॥

ಸಂಪ್ರಾಪ್ತಿಕಾಮುಪವಸಂತಿ ಸಮೀಹಿತಾರ್ಥಾ ।
ಯೇ ಮಾನವಾ ಮನುಜಪುಂಗವ ವಿಷ್ಣುಭಕ್ತಾಃ ।
ತೇಷಾಂ ಸಮೀಹಿತಫಲಾನಿ ದದಾತಿ ಶಶ್ವ ।
ದ್ವಾಸಃ ಸುರೇಶಭವನೇ ಭಗವತ್ಪ್ರಸಾದಾತ್ ॥ ೧೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಸಂಪ್ರಾಪ್ತಿದ್ವಾದಶೀವ್ರತಂ
ನಾಮ ಸಪ್ತಸಪ್ತತಿತಮೋಽಧ್ಯಾಯಃ.



---

೧೧. ಧರ್ಮಾನುಷ್ಠಾನಪರರಾದ ಪ್ರಾಚೀನ ಸತ್ಪುರುಷರು ಈ ವ್ರತವನ್ನು ದಿವ್ಯದೃಷ್ಟಿಯಿಂದ, ಕಂಡುಹಿಡಿದು ಅಭಿಲಷಿತಫಲಪ್ರಾಪ್ತಿಗಾಗಿ ಇದನ್ನು ಅನುಷ್ಠಾನಮಾಡಿರುತ್ತಾರೆ. ತತ್ತದ್ದಿನಗಳಲ್ಲಿ ಈ ವ್ರತವನ್ನು ಸ್ಮರಿಸಿಕೊಂಡಮಾತ್ರದಿಂದ, ಹಾಗೆ ಸ್ಮರಿಸಿಕೊಂಡವರ ಅಖಿಲ ಮನೋರಥಗಳನ್ನೂ ಪೂರ್ತಿ ಮಾಡುವುದು.

೧೨. ಅಯ್ಯಾ ನರೋತ್ತಮನೇ! ಅಭಿಲಷಿತಾರ್ಥಸಿದ್ಧಿಗಾಗಿ, ಉಪವಾಸಪೂರ್ವಕವಾಗಿ ಈ ಸಂಪ್ರಾಪ್ತಿದ್ವಾದಶೀ ವ್ರತವನ್ನಾಚರಿಸುವ ವಿಷ್ಣುಭಕ್ತಿಪರರಿಗೆ, ಶ್ರೀ ಮಹಾವಿಷ್ಣುವು ಯಾವಾಗಲೂ ಇಷ್ಟವಾದ ಫಲಗಳನ್ನು ಕೊಡುವನು. ಮತ್ತು ದೇಹಾವಸಾನವಾದ ಮೇಲೆ ಅವರಿಗೆ ಶ್ರೀ ಭಗವಂತನ ಪ್ರಸಾದದಿಂದ ಇಂದ್ರಲೋಕವಾಸವು ಲಭಿಸುವುದು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಸಂಪ್ರಾಪ್ತಿ
ದ್ವಾದಶೀ ವ್ರತವರ್ಣನೆಯೆಂಬ ಎಪ್ಪತ್ತೇಳನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಅಷ್ಟಸಪ್ತತಿತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ತಥಾನ್ಯಾಮಪಿ ತೇ ವಚ್ಮಿ ಗೋವಿಂದದ್ವಾದಶೀಂ ಶೃಣು ।
ತಸ್ಯಾಃ ಸಮ್ಯಗನುಷ್ಠಾನಾತ್ಪ್ರಾಪ್ನೋತ್ಯಭಿಮತಂ ಫಲಂ ॥ ೧ ॥

ಪೌಷೇ ಮಾಸೇ ಸಿತೇ ಪಕ್ಷೇ ದ್ವಾದಶ್ಯಾಂ ಸಮುಪೋಷಿತಃ ।
ಸಮ್ಯಕ್ಸಂಪೂಜ್ಯ ಗೋವಿಂದನಾಮ್ನಾ ದೇವಮಧೋಕ್ಷಜಂ ॥ ೨ ॥

ಧೂಪಪುಷ್ಪೋಪಚಾರೈಶ್ಚ ನೈವೇದ್ಯೈಶ್ಚ ಸಮಾಹಿತಃ ।
ಗೋವಿಂದೇತಿ ಜಪೇನ್ನಾಮ ಪುನಸ್ತದ್ಗತಮಾನಸಃ ॥ ೩ ॥

---

## ಎಪ್ಪತ್ತೆಂಟನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ–ಅಯ್ಯಾ ಯುಧಿಷ್ಠಿರನೇ! ಗೋವಿಂದ ದ್ವಾದಶೀ ಎಂಬ ಇನ್ನೊಂದು ವ್ರತವನ್ನು ನಿನಗೆ ಹೇಳುತ್ತೇನೆ ಶ್ರವಣಮಾಡು. ಆ ವ್ರತವನ್ನು ಚೆನ್ನಾಗಿ ಅನುಷ್ಠಾನಮಾಡುವುದರಿಂದ ಅಭಿಮತಫಲಪ್ರಾಪ್ತಿಯು ಖಂಡಿತವಾಗಿ ಉಂಟಾಗುತ್ತದೆ.

೨. ಪುಷ್ಯಮಾಸದ ಶುಕ್ಲಪಕ್ಷದ ದ್ವಾದಶಿಯಲ್ಲಿ ಉಪವಾಸನಿಯಮವನ್ನು ಪರಿಗ್ರಹಿಸಿ, ಶ್ರೀಹರಿಯನ್ನು ಗೋವಿಂದ ಎಂಬ ನಾಮಧೇಯದಿಂದ ಚೆನ್ನಾಗಿ ಅರ್ಚಿಸಬೇಕು.

೩. ಏಕಾಗ್ರತೆಯುಳ್ಳವನಾಗಿ ಪುಷ್ಪ ಧೂಪಾದ್ಯುಪಚಾರಗಳಿಂದ ಅರ್ಚಿಸಿ, ನೈವೇದ್ಯಗಳನ್ನು ಸಮರ್ಪಿಸಿ, ಪುನಃ ಶ್ರೀಹರಿಯಲ್ಲೇ ಮನಸ್ಸನ್ನು ನೆಲೆಯಾಗಿ ನಿಲ್ಲಿಸಿ, ಶ್ರೀ ಹರೇ ಗೋವಿಂದ ಎಂಬ ನಾಮವನ್ನು ಜಪಮಾಡಬೇಕು.

ವಿಪ್ರಾಯ ದಕ್ಷಿಣಾಂ ದದ್ಯಾದ್ಯಥಾಶಕ್ತ್ಯಾ ನರಾಧಿಪ ।
ಸ್ವಯಂ ವಿಬುದ್ಧಸ್ತ್ವಲಿತೋ ಗೋವಿಂದೇತಿ ಚ ಕೀರ್ತಯೇತ್ ॥ ೪ ॥

ಪಾಖಂಡಿಭಿರ್ವಿಕರ್ಮಸ್ಥೈರಾಲಾಪಾಂಶ್ಚ ವಿವರ್ಜಯೇತ್ ।
ಗೋಮೂತ್ರಂ ಗೋಮಯಂ ವಾಪಿ ದಧಿಕ್ಷೀರಮಥಾಪಿ ವಾ ॥ ೫ ॥

ಗೋದೋಹತಃ ಸಮುದ್ಭೂತಂ ಪ್ರಾಶ್ನೀಯಾದಾತ್ಮಶುದ್ಧಯೇ ।
ದ್ವಿತೀಯೇಽಹ್ನಿ ಪುನಃ ಸ್ನಾನಂ ತಥೈವಾಭ್ಯರ್ಚ್ಯ ಕೇಶವಂ ॥ ೬ ॥

ತೇನೈವ ನಾಮ್ನಾ ಸಂಪೂಜ್ಯ ದತ್ವಾ ವಿಪ್ರಾಯ ದಕ್ಷಿಣಾಂ ।
ತತೋ ಭುಂಜೀತ ಗೋದೋಹಸಂಭೂತೇನ ಸಮುದ್ಭವಂ ॥ ೭ ॥

---

೪. ಅಯ್ಯಾ ರಾಜನೇ ! ಸ್ವಶಕ್ತ್ಯನುಸಾರವಾಗಿ ಬ್ರಾಹ್ಮಣನಿಗೆ ದಕ್ಷಿಣೆಯನ್ನು ಕೊಡಬೇಕು. ಆದಿನ ಭಕ್ತಿಯಿಂದ ಜಾಗರಣೆಯನ್ನು ಆಚರಿಸಿ ಸದಾ ಗೋವಿಂದ ನಾಮಸ್ಮರಣೆಯನ್ನು ಮಾಡಬೇಕು.

೫. ನಿಷಿದ್ಧಕರ್ಮಗಳನ್ನು ಆಚರಿಸುತ್ತಾ ವೇದನಿಂದೆಯನ್ನು ಮಾಡುವ ಪಾಷಂಡಿಗಳ ಜತೆಯಲ್ಲಿ.ಈ ವ್ರತಿಯು ಸಂಭಾಷಣೆಯನ್ನು ಸಹ ಮಾಡಬಾರದು. ಮತ್ತು ಶರೀರಶುದ್ಧ್ಯರ್ಥವಾಗಿ ಗೋಮೂತ್ರ ಅಥವಾ ಗೋಮಯ,

೬. ಅಥವಾ ಗೋದೋಹನದಿಂದ ಲಬ್ಧವಾಗುವ ದಧಿ, ಕ್ಷೀರಾದಿಗಳಲ್ಲಿ ಯಾವುದನ್ನಾದರೂ ಪ್ರಾಶನೆಮಾಡಬೇಕು. ಎರಡನೆಯದಿನ ಸ್ನಾನಮಾಡಿ ಮೊದಲಿನಂತೆಯೇ ಶ್ರೀಹರಿಯನ್ನು ಪೂಜೆಮಾಡಬೇಕು.

೭. ಎರಡನೆಯದಿನ ಪೂಜೆಯ ಕಾಲದಲ್ಲಿ ಪೂರ್ವದಂತೆಯೇ ಗೋವಿಂದ ಎಂಬ ನಾಮಧೇಯವನ್ನು ಹೇಳಿ ಅರ್ಚಿಸಬೇಕು. ಅನಂತರ ಬ್ರಾಹ್ಮಣನಿಗೆ ದಕ್ಷಿಣೆಯನ್ನು ಕೊಟ್ಟು, ಆಮೇಲೆ ಗೋ ದೋಹನದಿಂದ ಪ್ರಾಪ್ತವಾಗುವ ಕ್ಷೀರ, ದಧಿ, ಘೃತ ಇತ್ಯಾದಿಗಳಿಂದ ಭೋಜನವನ್ನು ಮಾಡಬೇಕು.

ಏವಮೇವಾಖಿಲಾನ್ಮಾಸಾನುಪೋಷ್ಯ ಪ್ರಯತಃ ಶುಚಿಃ ।
ದದ್ಯಾದ್ಗವಾಹ್ನಿಕಂ ವಿದ್ವಾನ್ಪ್ರತಿಮಾಸಂ ತು ಶಕ್ತಿತಃ ॥ ೮ ॥

ಪಾರಿತೇ ಚ ಪುನರ್ವರ್ಷೇ ಗೋವಿಂದಂ ಪದ್ಮಯಾ ಸಹ ।
ಗೋವಿಂದಃ ಪ್ರೀತಿಮಾಯಾತು ವ್ರತೇನಾನೇನ ಮೇ ಸದಾ ॥ ೯ ॥

ವಿಶೇಷತಃ ಪುನರ್ದದ್ಯಾತ್ತಸ್ಮಿನ್ನಹ್ನಿ ಗವಾಹ್ನಿಕಂ ।
ಭಕ್ತ್ಯಾ ಪರಮಯಾ ರಾಜಞ್ಛೃಣು ಯತ್ಫಲಮಾಪ್ನುಯಾತ್ ॥ ೧೦ ॥

ಸ್ವರ್ಣಶೃಂಗಂ ರೌಪ್ಯಖುರಂ ಗೋಶತೈರ್ವೃಷಭಂ ವರಂ ।
ಇತಿ ಮಾಸಂ ದ್ವಿಜಾತಿಭ್ಯೋ ದತ್ವಾ ಯತ್ಫಲಮಶ್ನುತೆ ॥ ೧೧ ॥

---

೮. ಇದೇ ರೀತಿಯಾಗಿ ಎಲ್ಲಾ ತಿಂಗಳುಗಳಲ್ಲೂ ಉಪವಾಸವನ್ನಾಚರಿಸಿ ನಿಷ್ಕಲ್ಮಷನಾಗಿಯೂ, ಶುಚಿಯಾಗಿಯೂ, ಈ ಅರ್ಚನೆಯನ್ನು ಮಾಡಿ, ಗೋವುಗಳಿಗೆ ಸ್ವಶಕ್ತ್ಯನುಸಾರವಾಗಿ ಪ್ರತಿ ತಿಂಗಳಲ್ಲೂ ಅರ್ಚನೆ, ಗ್ರಾಸಾದಿ ಸಮರ್ಪಣೆ ಇವುಗಳನ್ನು ಮಾಡಬೇಕು.

೯. ಅಯ್ಯಾ ರಾಜನೇ! ಈರೀತಿ ಆಚರಿಸಿ, ಒಂದುವರ್ಷ ಪೂರ್ತಿಯಾದ ಮೇಲೆ, ಶ್ರೀ ಲಕ್ಷ್ಮೀಸಹಿತನಾದ ಗೋವಿಂದನನ್ನು ಪೂಜಿಸಿ ಪರಮಭಕ್ತಿಯುತನಾಗಿ ವಂದಿಸಬೇಕು.

೧೦. ಈ ವ್ರತಾಚರಣೆಯಿಂದ ಯಾವಾಗಲೂ ಗೋವಿಂದನು ನನ್ನ ವಿಷಯದಲ್ಲಿ ಸುಪ್ರೀತನಾಗಲಿ ಎಂದು ಪ್ರಾರ್ಥಿಸಿ, ಗೋಪೂಜೆ ಗೋಗ್ರಾಸ ನಿವೇದನ, ಇತ್ಯಾದಿ ಗವಾಹ್ನಿಕವನ್ನು ಮಾಡಬೇಕು. ಆ ರೀತಿಯಾದ ಅನುಷ್ಠಾನದಿಂದ ಬರುವ ಫಲವನ್ನು ಹೇಳುತ್ತೇನೆ ಶ್ರವಣಮಾಡು.

೧೧-೧೨. ಉಪವಾಸವನ್ನಾಚರಿಸಿ ಶಾಸ್ತ್ರೋಕ್ತ ರೀತಿಯಲ್ಲಿ ಚೆನ್ನಾಗಿ ಈ ವ್ರತವನ್ನು ಆಚರಿಸಿದವನು; ಸುವರ್ಣದ ಕೊಂಬು, ಬೆಳ್ಳಿಯ ಗೊರಸು, ಇವುಗಳನ್ನುಳ್ಳ ಉತ್ತಮ ವೃಷಭ ಸಹಿತವಾಗಿ, ನೂರು ಗೋವುಗಳನ್ನು ಪ್ರತಿಮಾಸದಲ್ಲೂ ಬ್ರಾಹ್ಮಣರಿಗೆ ದಾನ ಮಾಡಿದವನು; ಯಾವ ಪುಣ್ಯಪಡೆಯುವನೋ

ತದಾಪ್ನೋತ್ಯಖಿಲಂ ಸಮ್ಯಗ್ವ್ರತಮೇತದುಪೋಷಿತಃ ।
ತಂ ಚ ಲೋಕಮವಾಪ್ನೋತಿ ಗೋವಿಂದೋ ಯತ್ರ ತಿಷ್ಠತಿ　|| ೧೨ ||

ಗೋವಿಂದದ್ವಾದಶೀಮೇತಾಂ ಸಮುಪೋಷ್ಯ ವಿಧಾನತಃ ।
ವಿದ್ಯೋತಮಾನಾ ದೃಶ್ಯಂತೆ ಲೋಕೇದ್ಯಾಪಿ ಶಶಾಂಕವತ್　|| ೧೩ ||

ಗೋವಿಂದಮರ್ಚಯತಿ ಗೋರಸಭೋಜನಸ್ತು ।
ಗಾ ವೈ ವಿನೋದಯತಿ ತದ್ವದ್ಗವಾಹ್ನಿಕಶ್ಚ ।
ಯೋ ದ್ವಾದಶೀಷು ಕುರುರಾಜ ಕೃತೋಪವಾಸಃ ।
ಪ್ರಾಪ್ನೋತ್ಯಸೌ ಸುರಭಿಲೋಕಮಪೇತಶೋಕಂ　|| ೧೪ ||

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಗೋವಿಂದೆದ್ವಾದಶೀ ವ್ರತವರ್ಣನಂ ನಾಮಾಷ್ಟಸಪ್ತತಿತಮೋಽಧ್ಯಾಯಃ.

---

ಅಂತಹ ಫಲವನ್ನು ಇವನೂ ಹೊಂದುತ್ತಾನೆ. ಮತ್ತು ಶ್ರೀಗೋವಿಂದನು ವಾಸವಾಗಿ ಇರುವ ಲೋಕಕ್ಕೆ ಹೋಗುತ್ತಾನೆ.

೧೩. ಉಪವಾಸ ಪೂರ್ವಕವಾಗಿ ಈ ಗೋವಿಂದ ದ್ವಾದಶೀ ವ್ರತವನ್ನು ವಿಧಿಗನುಸಾರವಾಗಿ ಅನುಷ್ಠಾನ ಮಾಡಿದವರು ವಿಷ್ಣುಲೋಕದಲ್ಲಿ ಚಂದ್ರನಂತೆ ಪ್ರಕಾಶಮಾನರಾಗಿ ಈಗಲೂ ಕಾಣಿಸುತ್ತಾರೆ.

೧೪. ಅಯ್ಯಾ ಕುರುರಾಜನೇ ! ದ್ವಾದಶೀ ತಿಥಿಗಳಲ್ಲಿ ಉಪವಾಸವನ್ನಾಚರಿಸಿ ಯಾವ ಪುರುಷನು ಶ್ರೀ ಗೋವಿಂದನನ್ನು ಅರ್ಚಿಸಿ,. ಪೂಜೆ ಮತ್ತು ಗೋಗ್ರಾಸ ಸಮರ್ಪಣೆ ಇವುಗಳಿಂದ ಗೋವುಗಳಿಗೆ ಸಂತೋಷವನ್ನು ಹುಟ್ಟಿಸಿ, ಗೋರಸವನ್ನು ಭುಂಜಿಸುವನೋ ಅಂತಹವನು ಶೋಕರಹಿತವಾದ ಗೋಲೋಕವನ್ನು ಪಡೆಯುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಗೋವಿಂದ ದ್ವಾದಶೀ ವ್ರತವರ್ಣನೆಯೆಂಬ ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಏಕೋನಾಶೀತಿತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥
ಉಪವಾಸವ್ರತಾನಾಂ ತು ವೈಕಲ್ಯಂ ಯಸ್ಯ ಮಹಾಮತೇ ।
ದಾನಧರ್ಮೇ ಕೃತಂ ಯಸ್ಯ ವಿಪಾಕಂ ವದ ಯಾದೃಶಃ ॥ ೧ ॥

॥ ಶ್ರೀ ಕೃಷ್ಣ ಉವಾಚ ॥
ಯಜ್ಞಾನಾಮುಪವಾಸಾನಾಂ ವ್ರತಾನಾಂ ಚ ನರೇಶ್ವರ ।
ವೈಕಲ್ಯಾತ್ಫಲವೈಕಲ್ಯಂ ಯಾದೃಶಂ ತಚ್ಛೃಣುಷ್ವ ಮೇ ॥ ೨ ॥

---

## ಎಪ್ಪತ್ತೊಂಭತ್ತನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ಸರ್ವಜ್ಞನಾದ ಶ್ರೀ ಕೃಷ್ಣನೇ ! ಯಾವ ಪುರುಷನು ತಾನು ಆಚರಿಸುವ ಉಪವಾಸ, ವ್ರತ ಮತ್ತು ದಾನ ಧರ್ಮ ಇವುಗಳಲ್ಲಿ ವೈಕಲ್ಯವೂ (ಪ್ರಮಾದಾದಿಗಳಿಂದ ಶಾಸ್ತ್ರೀಯವಾಗಿ ಅನುಷ್ಠಾನವಿಲ್ಲದೆ ವೈರೂಪ್ಯವೂ ಅಂಗವೈಕಲ್ಯವೂ) ಪ್ರಾಪ್ತವಾದರೆ ಆ ವೈಕಲ್ಯದಿಂದ ಬರುವ ವಿಪಾಕವು (ವಿರುದ್ಧಫಲ) ಎಂತಹುದು ? ಎಂಬುದನ್ನು ಹೇಳು ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ರಾಜನೇ ! ಯಜ್ಞ, ಉಪವಾಸ, ವ್ರತ ಇವುಗಳಲ್ಲಿ ಯಥೋಕ್ತ ಕ್ರಮವನ್ನನುಸರಿಸದೆ ಇರುವುದರಿಂದ ಫಲದಲ್ಲಿ ಯಾವ ವೈಕಲ್ಯವು ಬರುವುದೆಂಬುದನ್ನು ನಾನು ಹೇಳುತ್ತೇನೆ ತಿಳಿದುಕೊ.

ಉಪವಾಸಾನ್ವಿತೋ ಖಂಡಂ ಪ್ರಾಪ್ನುವಂತ್ಯೇವ ತಾಞ್ಛೃಣು ।
ಭ್ರಷ್ಟೈ ೃಶ್ವರ್ಯಾ ನಿರ್ಧನಾಶ್ಚ ವಸಂತಿ ಪುರುಷಾಃ ಪುನಃ　　॥ ೩ ॥

ರೂಪಂ ತಥೋತ್ತರಂ ಪ್ರಾಪ್ಯ ವ್ರತವೈಕಲ್ಯದೋಷತಃ ।
ಕಾಣಾಃ ಕುಬ್ಜಾಶ್ಚ ಷಂಡಾಶ್ಚ ಭವಂತ್ಯಂಧಾಶ್ಚ ಮಾನವಾಃ　　॥ ೪ ॥

ಉಪವಾಸೀ ನರಃ ಪತ್ನೀಂ ನಾರೀ ಪ್ರಾಪ್ಯ ತಥಾ ಪತಿಂ ।
ವಿಯೋಗಂ ವ್ರತವೈಕಲ್ಯೇ ದುರ್ಭಗಶ್ಚಮವಾಪ್ನುಯಾತ್　　॥ ೫ ॥

ಯೇ ದ್ರವ್ಯೇ ಸತ್ಯದಾತಾರಸ್ತಥಾನ್ನೇ ಸತ್ಯನಗ್ನಯಃ ।
ಕುಲೇ ವಸಂತಿ ದುಃಶೀಲಾ ದುಷ್ಕುಲಾಃ ಶೀಲನಿಶ್ಚಯೇ　　॥ ೬ ॥

---

೩. ಅಯ್ಯಾ ರಾಜನೇ ! ಶ್ರವಣಮಾಡು. ಪುಣ್ಯಫಲದಿಂದ ಮೊದಲು ಭೂಖಂಡವನ್ನು ಹೊಂದಿ ರಾಜರಾದವರು, ಉಪವಾಸ ವೈಕಲ್ಯದಿಂದ ಪುನಃ ಐಶ್ವರ್ಯ ಭ್ರಷ್ಟರಾಗಿ ನಿರ್ಧನರಾಗಿ ಈ ಲೋಕದಲ್ಲಿ ವಾಸಿಸುವರು.

೪. ಹಾಗೆಯೇ ಉತ್ಕೃಷ್ಟವಾದ ಸೌಂದರ್ಯವನ್ನು ಹೊಂದಿದ್ದವರು, ವ್ರತ ವೈಕಲ್ಯ ದೋಷವಶದಿಂದ ಒಂದು ಕಣ್ಣಿಲ್ಲದವರು, ಕುಂಟರು, ನಪುಂಸಕರು ಎರಡು ಕಣ್ಣುಗಳೂ ಕಾಣಿಸದ ಕುರುಡರು ಈ ಪ್ರಕಾರ ಆಗುತ್ತಾರೆ.

೫. ಉಪವಾಸವನ್ನಾಚರಿಸಿ ವ್ರತಾನುಷ್ಠಾನ ಮಾಡುವ ಗಂಡಸರಿಗೆ ಅಥವಾ ಹೆಂಗಸರಿಗೆ ಮಧ್ಯೆ ವ್ರತವೈಕಲ್ಯವು ಸಂಭವಿಸಿದರೆ, ಗಂಡಸಾದವನಿಗೆ ಪತ್ನೀವಿಯೋಗಾದಿ ದೌರ್ಭಾಗ್ಯಗಳು ಪ್ರಾಪ್ತವಾಗುವುವು. ಹೆಂಗಸಾದರೆ ಅವಳಿಗೆ ಪತಿವಿಯೋಗಾದಿ ದೌರ್ಭಾಗ್ಯಗಳುಂಟಾಗುತ್ತವೆ.

೬. ಧನವಿದ್ದರೂ ದಾನಮಾಡದೆ ಇರುವವರೂ, ಪ್ರಭೂತವಾದ ಭೂಮಿ ಯಿದ್ದೂ ಅನ್ನವಿದ್ದರೂ ಅಗ್ನಿಪರಿರಕ್ಷಣಮಾಡದೆ ಅನಗ್ನಿಗಳಾಗುವವರೂ, ಸತ್ಕುಲ ಸದಾಚಾರ ಸಂಪನ್ನರಾಗಿದ್ದರೂ ಈ ದಾನವೈಕಲ್ಯದಿಂದ ದುರಾಚಾರಿ ಗಳೂ ದುಷ್ಕುಲರೂ ಆಗುತ್ತಾರೆ.

ವಸ್ತ್ರಾನುಲೇಪನೈರ್ಹೀನಾ ಭೂಷಣೈಶ್ಚಾತಿರೂಪಿಣಃ ।
ವಿರೂಪರೂಪಾಶ್ಚ ತಥಾ ಪ್ರಸಾಧಕಗುಣಾನ್ವಿತಾಃ ॥ ೭ ॥

ತೇ ಸರ್ವೇ ವ್ರತವೈಕಲ್ಯಾತ್ಫಲವೈಕಲ್ಯಮಾಗತಾಃ ।
ತಸ್ಮಾತ್ತದ್ವ್ರತವೈಕಲ್ಯಂ ಯಜ್ಞವೈಕಲ್ಯಮೇವ ಚ ।
ಉಪವಾಸೇನ ಕರ್ತವ್ಯಂ ವೈಕಲ್ಯಾದ್ವಿಕಲಂ ಫಲಂ ॥ ೮ ॥

॥ ಯುಧಿಷ್ಠಿರ ಉವಾಚ ॥
ಕಥಂಚಿದ್ಯದಿವೈಕಲ್ಯಮುಪವಾಸಾದಿಕೇ ಭವೇತ್ ।
ಕಿಂ ತತ್ರ ವದ ಕರ್ತವ್ಯಮಚ್ಛಿದ್ರಂ ಯೇನ ಜಾಯತೆ ॥ ೯ ॥

॥ ಶ್ರೀ ಕೃಷ್ಣ ಉವಾಚ ॥
ಅಖಂಡದ್ವಾದಶೀ ಹ್ಯೇಷಾ ಸಮಸ್ತೇಷ್ವೇ ವ ಕರ್ಮಸು
ವೈಕಲ್ಯಂ ಪ್ರಶಮಂ ಯಾತಿ ಶೃಣುಷ್ವ ಗದತೋ ಮಮ । ॥ ೧೦ ॥

---

೭. ಮತ್ತು ಅವರು ವಸ್ತ್ರ ಅನುಲೇಪನ ಇವುಗಳಿಲ್ಲದೆ ದಾರಿದ್ರ್ಯಪೀಡಿತರೂ ಭೂಷಣರಹಿತರೂ ಆಗುವರು. ಮೊದಲು ಅತಿಸುರೂಪಿಗಳಾಗಿದ್ದವರು ವಿರೂಪಿಗಳೂ, ಪರರಿಗೆ ಅಲಂಕಾರಮಾಡುವುದೇ ಮೊದಲಾದ ಹೀನವಾದ ಸೇವಾವೃತ್ತಿಯನ್ನವಲಂಬಿಸಿದವರೂ ಆಗುತ್ತಾರೆ.

೮. ಅವರುಗಳು ವ್ರತಕ್ರಮ ವೈಕಲ್ಯದಿಂದ ಈರೀತಿ ಫಲವೈಕಲ್ಯವನ್ನು ಪಡೆವರು. ಆದುದರಿಂದ ವ್ರತವೈಕಲ್ಯ, ಯಜ್ಞವೈಕಲ್ಯ, ಉಪವಾಸವೈಕಲ್ಯ ಇವುಗಳನ್ನು ಅಗತ್ಯವಾಗಿ ಪರಿಹರಿಸಬೇಕು. ಅವುಗಳ ವೈಕಲ್ಯದಿಂದ ಫಲವೈಕಲ್ಯವು ತಪ್ಪದೆ ಒದಗುವುದು ಎಂದನು.

೯. ಯುಧಿಷ್ಠಿರನು ಹೇಳುತ್ತಾನೆ—ಅಯ್ಯಾ ಶ್ರೀಕೃಷ್ಣನೇ ! ಆ ಉಪವಾಸಾದಿಗಳಲ್ಲಿ ಕಥಂಚಿತ್ ವೈಕಲ್ಯವು ಸಂಭವಿಸಿದರೆ ಆಗ ಏನು ಮಾಡಬೇಕು. ಹೇಗೆ ಮಾಡಿದರೆ ಆ ವ್ರತಾದಿಗಳಿಗೆ ಅಚ್ಛಿದ್ರತ್ವವು (ಲೋಪ ನಿವಾರಣೆಯು) ಲಭಿಸುವುದು ಎಂಬುದನ್ನು ಹೇಳು ಎಂದನು.

೧೦. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ರಾಜನೇ ! ಸಾಮಾನ್ಯವಾಗಿ ಯಾವ ಕರ್ಮಗಳಲ್ಲಿ ವೈಕಲ್ಯವು ಸಂಭವಿಸಿದರೂ ಈ ಮುಂದೆ ಹೇಳುವ ಅಖಂಡದ್ವಾದಶೀ ವ್ರತವನ್ನು ಆಚರಿಸಿದರೆ ಆ ವೈಕಲ್ಯವು ನಿವಾರಣೆಯಾಗುವುದು ಆ ವ್ರತಾನುಷ್ಠಾನದ ರೀತಿಯನ್ನು ನಾನು ಹೇಳುತ್ತೇನೆ ಶ್ರವಣಮಾಡು.

ಮಾರ್ಗಶೀರ್ಷೇ ಸಿತೇ ಪಕ್ಷೇ ದ್ವಾದಶ್ಯಾಂ ನಿಯತಃ ಶುಚಿಃ ।
ಕೃತೋಪವಾಸೋ ದೇವೇಶಂ ಸಮಭ್ಯರ್ಚ್ಯ ಜನಾರ್ದನಂ ॥ ೧೧ ॥

ಸ್ನಾತೋ ನಾರಾಯಣಂ ಬ್ರೂಯಾದ್ಭುಂಜನ್ನಾರಾಯಣಂ ತಥಾ ।
ಗಚ್ಛನ್ನಾರಾಯಣಂ ದೇವಂ ಸ್ವಪನ್ನಾರಾಯಣಂ ಪುನಃ ॥ ೧೨ ॥

ಪಂಚಗವ್ಯಜಲಸ್ನಾತೋ ವಿಶುದ್ಧಾತ್ಮಾ ಜಿತೇಂದ್ರಿಯಃ ।
ಯವವ್ರೀಹಿಮಯಂ ಪಾತ್ರಂ ದತ್ವಾ ವಿಪ್ರಾಯ ಭಕ್ತಿತಃ ।
ಇದಮುಚ್ಚಾರಯೇತ್ಪಶ್ಚಾದ್ದೇವಸ್ಯ ಪುರತೋ ಹರೇಃ ॥ ೧೩ ॥

ಸಪ್ತಜನ್ಮನಿ ಯತ್ಕಿಂಚಿನ್ಮಯಾ ಖಂಡವ್ರತಂ ಕೃತಂ ।
ಭಗವಂಸ್ತ್ವತ್ಪ್ರಸಾದೇನ ತದಖಂಡಮಿಹಾಸ್ತು ಮೇ ॥ ೧೪ ॥

---

೧೧. ಮಾರ್ಗಶೀರ್ಷ ಶುಕ್ಲಪಕ್ಷದ ದ್ವಾದಶಿಯಲ್ಲಿ ಸ್ನಾನಮಾಡಿ ಉಪವಾಸವನ್ನಾಚರಿಸಿ ಸರ್ವದೇವಾಧೀಶ್ವರನಾದ ಶ್ರೀಹರಿಯನ್ನು ಅರ್ಚಿಸಬೇಕು.

೧೨. ಈ ವ್ರತಾನುಷ್ಠಾತೃವು ಸ್ನಾನಮಾಡಿದ ಮೇಲೆ ನಾರಾಯಣ ಸ್ಮರಣೆಯನ್ನು ಮಾಡಬೇಕು. ಹಾಗೆಯೇ ಭೋಜನಕಾಲದಲ್ಲೂ ನಾರಾಯಣ ನಾಮವನ್ನು ಪಠಿಸಬೇಕು. ಅಲ್ಲದೆ ಗಮನಕಾಲದಲ್ಲೂ ಶ್ರೀಮನ್ನಾರಾಯಣ ನಾಮಜಪವನ್ನಾಚರಿಸಬೇಕು. ನಿದ್ರೆಗೆ ಮುಂಚೆಯೂ ನಾರಾಯಣನನ್ನೇ ಧ್ಯಾನಿಸಬೇಕು.

೧೩. ಮತ್ತು ಅವನು ಪಂಚಗವ್ಯ ಸೇವನೆಮಾಡಿ ಶುದ್ಧ ಜಲದಲ್ಲಿ ಸ್ನಾನ ಮಾಡಿ; ಶುಚಿ, ಶುದ್ಧಾಂತಃಕರಣ, ಜಿತೇಂದ್ರಿಯತೆ ಇವುಗಳುಳ್ಳವನಾಗಿ, ಯವ ಮತ್ತು ವ್ರೀಹಿ ಇವು ತುಂಬಿದ ಪಾತ್ರೆಯನ್ನು ಭಕ್ತಿಪೂರ್ವಕವಾಗಿ ಬ್ರಾಹ್ಮಣನಿಗೆ ದಾನಮಾಡಿ, ಅನಂತರ ದೇವದೇವನಾದ ಶ್ರೀಹರಿಯ ಪುರೋಭಾಗದಲ್ಲಿ ಈ ಅರ್ಥವುಳ್ಳ ಮಂತ್ರಪೂರ್ವಕವಾಗಿ ಪ್ರಾರ್ಥಿಸಬೇಕು.

೧೪. ಓ ಭಗವಂತನೇ ! ಇದುವರೆಗೆ ಏಳು ಜನ್ಮಗಳಲ್ಲಿ ಯಾವ ವ್ರತವನ್ನಾದರೂ ನಾನು ವಿಕಲವಾಗಿ ಆಚರಿಸಿದ್ದಿದ್ದರೆ, ಅದು ನಿನ್ನ ಅನುಗ್ರಹದಿಂದ ಈಗ ಅಖಂಡವಾಗಲಿ ಎಂದು ಈ ಪ್ರಾರ್ಥನಾ ಶ್ಲೋಕದ ಅರ್ಥ.

ಯಥಾಖಂಡಂ ಜಗತ್ಸರ್ವಂ ತ್ವಮೇವ ಪುರುಷೋತ್ತಮ ।
ತಥಾಖಿಲಾನ್ಯಖಂಡಾನಿ ವ್ರತಾನಿ ಮಮ ಸಂತು ವೈ ॥ ೧೫ ॥

ಚತುರ್ಭಿರಪಿ ಮಾಸೈಸ್ತು ಪಾರಣಂ ಪ್ರಥಮಂ ಸ್ಮೃತಂ ।
ಪ್ರೀಣನಂ ಚ ಹರೇಃ ಕುರ್ಯಾತ್ಪಾರಿತೇ ಪಾರಣೇ ತತಃ ॥ ೧೬ ॥

ಚೈತ್ರಾದಿಷು ಚ ಮಾಸೇಷು ಚತುರ್ಗುಣ್ಯಂ ತು ಪಾರಣಂ ।
ತತ್ರಾಪಿ ಸಕ್ತುಪಾತ್ರಾಣಿ ದದ್ಯಾಚ್ಛ್ರದ್ಧಾಸಮನ್ವಿತಃ ॥ ೧೭ ॥

ಶ್ರಾವಣಾದಿಷು ಮಾಸೇಷು ಕಾರ್ತಿಕಾಂತೇಷು ಪಾರಣಂ ।
ತತ್ರಾಪಿ ಘೃತಪಾತ್ರಾಣಿ ದದ್ಯಾದ್ವಿಪ್ರಾಯ ದಕ್ಷಿಣಾಃ ॥ ೧೮ ॥

---

೧೫. ಎಲೈ ಪುರುಷೋತ್ತಮನೇ ! ನೀನು ಯಾವ ಪ್ರಕಾರ ಈ ಅಖಂಡ ಜಗತ್‌ಸ್ವರೂಪನಾಗಿರುವೆಯೋ, ಹಾಗೆಯೇ ನನ್ನ ಎಲ್ಲಾ ವ್ರತಗಳೂ ಅಖಂಡವಾಗಲಿ ಎಂಬುದು ಈ ಪ್ರಾರ್ಥನಾ ಶ್ಲೋಕದ ಅರ್ಥ.

೧೬. ಈ ವ್ರತವನ್ನು ಆಚರಿಸುವಾಗ ಮಾರ್ಗಶೀರ್ಷಾದಿ ನಾಲ್ಕು ಮಾಸಗಳಲ್ಲಿ ಪ್ರಥಮತಃ ಪಾರಣೆಮಾಡಬೇಕು. ಪ್ರಥಮ ಮಾಸದಲ್ಲಿ ಪಾರಣೆಯನ್ನು ಆಚರಿಸಿದ ಮೇಲೆ ಉಳಿದ ಮಾಸಗಳಲ್ಲಿ ಶ್ರೀಹರಿಗೆ ಪೂಜೆಮಾಡಿ ಶ್ರೀಹರಿ ಪ್ರೀಣನ ಮಾಡಬೇಕು. ವ್ರತಾಂಗವಾದ ಪಾರಣೆಯನ್ನು ಮಾಡಬೇಕಾಗಿಲ್ಲ.

೧೭. ಹಾಗೆಯೇ ಚೈತ್ರಾದಿ ನಾಲ್ಕು ಮಾಸಗಳಲ್ಲಿ ಇದನ್ನು ಆಚರಿಸುವಾಗ ನಾಲ್ಕು ಸಾರಿಯ ಪಾರಣೆಯೂ ಪೃಥಕ್ಕಾಗಿ ಆಚರಿಸಲ್ಪಡಬೇಕು. ಆಗ ಶ್ರದ್ಧಾಯುಕ್ತನಾಗಿ ಹಿಟ್ಟುತುಂಬಿದ ಪಾತ್ರೆಗಳನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು.

೧೮. ಶ್ರಾವಣಮಾಸ ಮೊದಲ್ಗೊಂಡು ನಾಲ್ಕು ತಿಂಗಳುಗಳಲ್ಲಿ ಆಚರಿಸುವಾಗ ಕೊನೆಯದಾದ ಕಾರ್ತಿಕಮಾಸದಲ್ಲಿ ವ್ರತಾಂಗವಾದ ಪಾರಣೆಯನ್ನು ಮಾಡಬೇಕು. ಅದರಲ್ಲಿ ಘೃತಪೂರ್ಣಪಾತ್ರೆಗಳನ್ನು ಬ್ರಾಹ್ಮಣನಿಗೆ ದಕ್ಷಿಣಾ ಸಹಿತವಾಗಿ ಕೊಡಬೇಕು.

ಸೌವರ್ಣರೌಪ್ಯತಾಮ್ರಂ ಚ ಮೃನ್ಮಯಂ ಪಾತ್ರಮಿಷ್ಯತೇ ।
ಸ್ವಶಕ್ತ್ಯಪೇಕ್ಷಯಾ ರಾಜನ್ಪಾಲಾಶಂ ವಾಪಿ ಕಾರಯೇತ್ ॥ ೧೯ ॥

ಏವಂ ಸಂವತ್ಸರಸ್ಯಾಂತೇ ಬ್ರಾಹ್ಮಣಾನ್ಸಜಿತೇಂದ್ರಿಯಃ ।
ದ್ವಾದಶಾಮಂತ್ರ್ಯ ವಿಪ್ರಾಂಶ್ಚ ಭೋಜಯೇದ್ಘೃತಪಾಯಸೈಃ ॥ ೨೦ ॥

ವಸ್ತ್ರಾಭರಣದಾನೈಶ್ಚ ಪ್ರಣಿಪತ್ಯ ಕ್ಷಮಾಪಯೇತ್ ।
ಉಪದೇಷ್ಟಾರಮಪ್ಯತ್ರ ಪೂಜಯೇದ್ವಿಧಿವದ್ಗುರುಂ ॥ ೨೧ ॥

ಏವಂ ಸಮ್ಯಗ್ಯಥಾನ್ಯಾಯ್ಯಮಖಂಡದ್ವಾದಶೀಂ ನರಃ ।
ಸಮುಪೋಷ್ಯ ಅಖಂಡಸ್ಯ ವ್ರತಸ್ಯ ಫಲಮಶ್ನುತೇ ॥ ೨೨ ॥

ಸಪ್ತಜನ್ಮಸು ವೈಕಲ್ಯಂ ಯದ್ವ್ರತಸ್ಯ ಕ್ವಚಿತ್ಕೃತಂ ।
ಕರೋತ್ಯವಿಕಲಂ ಸರ್ವಮಖಂಡದ್ವಾದಶೀ ತು ತತ್ ॥ ೨೩ ॥

---

೧೯. ಅಯ್ಯಾ ರಾಜನೇ ! ಈ ವ್ರತಾನುಷ್ಠಾತೃವು ತನ್ನ ಶಕ್ತಿಯನ್ನನುಸರಿಸಿ, ದಾನದ ಪಾತ್ರೆಗಳನ್ನು ಭಂಗಾರ, ಬೆಳ್ಳಿ, ತಾಮ್ರ, ಮಣ್ಣು ಅಥವಾ ಪಲಾಶದ ಮರ ಇವುಗಳಲ್ಲಿ ಯಾವುದರಿಂದಲಾದರೂ ಮಾಡಿಸಬಹುದು.

೨೦. ಈರೀತಿ ಈ ವ್ರತವನ್ನಾಚರಿಸಿ ಒಂದು ವರ್ಷದ ಕೊನೆಯಲ್ಲಿ ಈ ವ್ರತಾನುಷ್ಠಾತೃವು ಜಿತೇಂದ್ರಿಯನಾಗಿ ಹನ್ನೆರಡು ಮಂದಿ ಬ್ರಾಹ್ಮಣರನ್ನು ಆಮಂತ್ರಿಸಿ ಅವರಿಗೆ ಘೃತ, ಪಾಯಸ ಇತ್ಯಾದಿಗಳಿಂದ ಭೋಜನಮಾಡಿಸಬೇಕು.

೨೧. ಅನಂತರ ಆ ಬ್ರಾಹ್ಮಣರಿಗೆ ವಸ್ತ್ರಾಭರಣಗಳನ್ನು ದಾನಮಾಡಿ ನಮಸ್ಕಾರಮಾಡಿ, ಕ್ಷಮೆಯನ್ನು ಬೇಡಬೇಕು. ಈ ವ್ರತದಲ್ಲಿ ಉಪದೇಷ್ಟೃವಾದ ಗುರುವನ್ನು ವಿಧಿವತ್ತಾಗಿ ಪೂಜಿಸಬೇಕು.

೨೨. ಈರೀತಿ ವಿಧಿಯನ್ನನುಸರಿಸಿ ಉಪವಾಸಮಾಡಿ, ಈ ಅಖಂಡ ದ್ವಾದಶೀ ವ್ರತವನ್ನು ಸಾಂಗವಾಗಿ ಆಚರಿಸಿದ ಪುರುಷನು, ಈ ವ್ರತದ ಸಮಗ್ರ ಫಲವನ್ನು ಪಡೆಯುತ್ತಾನೆ.

೨೩. ಹಿಂದಿನ ಏಳು ಜನ್ಮಗಳಲ್ಲಿ ಯಾವಾಗಲಾದರೂ ಯಾವ ವ್ರತದಲ್ಲಾದರೂ ವೈಕಲ್ಯವು ಸಂಭವಿಸಿದ್ದರೆ, ಅಖಂಡ ದ್ವಾದಶೀ ವ್ರತಾಚರಣದಿಂದ ಆ ಎಲ್ಲಾ ವೈಕಲ್ಯವೂ ನಾಶಹೊಂದಿ ಹಿಂದೆ ಆಚರಿಸಿದ ವ್ರತಗಳಿಗೆಲ್ಲಾ ಸಾದ್ಗುಣ್ಯವು ಉಂಟಾಗುವುದು.

ತಸ್ಮಾದೇಷಾ ಪ್ರಯತ್ನೇನ ನರ್ಯೈಃ ಸ್ತ್ರೀಭಿಶ್ಚ ಸುವ್ರತ ।
ಅಖಂಡದ್ವಾದಶೀ ಸಮ್ಯಗುಪೋಷ್ಯಾ ಫಲಕಾಂಕ್ಷಯಾ ॥ ೨೪ ॥

ಯೋ ದ್ವಾದಶೀವ್ರತಮಖಂಡಮಿತಿ ಪ್ರಸಿದ್ಧಂ ।
ಮಾರ್ಗೋತ್ತಮಾಂಗಮಧಿಕೃತ್ಯ ಕೃತೇನ ಯೇನ ।
ಖಂಡವ್ರತಾನಿ ಪುರುಷೈಃ ಸುಕೃತಾನಿ ಯಾನಿ ।
ಸಂಪೂರ್ಣತಾಂ ಸಮುಪಯಾಂತಿ ಹರೇಃ ಪ್ರಸಾದಾತ್ ॥ ೨೫ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಅಖಂಡದ್ವಾದಶೀ ವ್ರತವರ್ಣನಂ ನಾಮೈಕೋನಾಶೀತಿತಮೋಽಧ್ಯಾಯಃ.



---

೨೪. ಅಯ್ಯಾ ಸುವ್ರತಿಯೇ ! ಆಚರಿಸಿದ ಕರ್ಮಗಳಿಗೆ ಅನುರೂಪ ಫಲಪಡೆಯಬೇಕೆಂಬ ಅಭಿಲಾಷೆಯುಳ್ಳ ಗಂಡಸರೂ ಹೆಂಗಸರೂ ಉಪವಾಸವನ್ನಾಚರಿಸಿ ಈ ಅಖಂಡ ದ್ವಾದಶೀ ವ್ರತವನ್ನು ಸರ್ವಪ್ರಯತ್ನದಿಂದಲೂ ಚೆನ್ನಾಗಿ ನೆರವೇರಿಸಬೇಕು.

೨೫. ಮಾರ್ಗಶೀರ್ಷ ಮಾಸ ಮೊದಲ್ಗೊಂಡು ಕಾರ್ತೀಕಮಾಸ ಪರ್ಯಂತವಾಗಿ, ಒಂದು ವರ್ಷ ಆಚರಿಸಬೇಕಾಗಿಯೂ, ಲೋಕಗಳಲ್ಲಿ ಅಖಂಡ ದ್ವಾದಶೀ ವ್ರತವೆಂದು ಪ್ರಸಿದ್ಧವಾಗಿಯೂ ಇರುವ, ಈ ವ್ರತವನ್ನು ಆಚರಿಸಿದರೆ ಆ ಪುರುಷರು ಪೂರ್ವದಲ್ಲಿ ಕ್ರಮವೈಕಲ್ಯದಿಂದ ಆಚರಿಸಿದ ಖಂಡ ವ್ರತಗಳೆಲ್ಲಾ ಶ್ರೀ ಹರಿ ಪ್ರಸಾದದಿಂದ ಸಾಂಗಗಳಾಗಿ ಸಂಪೂರ್ಣತೆಯನ್ನು ಹೊಂದುವುವು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಅಖಂಡ ದ್ವಾದಶೀ ವ್ರತವರ್ಣನೆಯೆಂಬ ಎಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಅಶೀತಿತಮೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಫಾಲ್ಗುನೇಮಲಪಕ್ಷಸ್ಯ ಏಕಾದಶ್ಯಾಮುಪೋಷಿತಃ ।
ನರೋ ವಾ ಯದಿ ವಾ ನಾರೀ ಸಮಭ್ಯರ್ಚ್ಯ ಜಗತ್ಪತಿಂ ॥ ೧ ॥

ಹರೇರ್ನಾಮ ವದನ್ಭಕ್ತ್ಯಾ ಭಾವಯುಕ್ತೋ ಯುಧಿಷ್ಠಿರ ।
ಉತ್ತಿಷ್ಠನ್ಪ್ರಸ್ವಪಂಶ್ಚೈವ ಹರಿನಾಮಾನುಕೀರ್ತಯೇತ್ ॥ ೨ ॥

ತತೋಽನ್ಯಸ್ಮಿನ್ದಿನೇ ಪ್ರಾಪ್ತೇ ದ್ವಾದಶ್ಯಾಂ ನಿಯತೋ ಹರಿಂ ।
ಸ್ನಾತ್ವಾ ಸಮ್ಯಕ್ಸಮಭ್ಯರ್ಚ್ಯ ದತ್ವಾ ವಿಪ್ರಾಯ ದಕ್ಷಿಣಾಂ ॥ ೩ ॥

---

## ಎಂಬತ್ತನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ ! ಫಾಲ್ಗುಣ ಮಾಸದ ಶುಕ್ಲಪಕ್ಷದ ಏಕಾದಶಿಯಲ್ಲಿ, ಗಂಡಸಾಗಲಿ ಹೆಂಗಸಾಗಲಿ ಉಪವಾಸವನ್ನಾಚರಿಸಿ, ಜಗತ್ಪತಿಯಾದ ಶ್ರೀಹರಿಯನ್ನು ಚೆನ್ನಾಗಿ ಪೂಜಿಸಬೇಕು.

೨. ಈ ವ್ರತಾನುಷ್ಠಾತೃವು ಶ್ರೀಹರಿಯಲ್ಲೇ ಸ್ಥಿರವಾದ ಮನಸ್ಸುಳ್ಳವನಾಗಿ, ಭಕ್ತಿಪೂರ್ವಕವಾಗಿ ಹರಿನಾಮವನ್ನು ಭಜಿಸುತ್ತಾ, ಹಾಸಿಗೆಯಿಂದ ಏಳುವಾಗಲೂ ಮಲಗುವಾಗಲೂ ಶ್ರೀಹರಿನಾಮ ಸಂಕೀರ್ತನವನ್ನೇ ಮಾಡಬೇಕು.

೩. ಅನಂತರ ಏಕಾದಶಿಯು ಕಳೆದು ದ್ವಾದಶಿಯು ಪ್ರಾಪ್ತವಾಗುತ್ತಿರಲು ಜಿತೇಂದ್ರಿಯತೆಯಿಂದ ಕೂಡಿದವನಾಗಿ ಸ್ನಾನಮಾಡಿ ಪುನಃ ಶ್ರೀಹರಿಯನ್ನು ಚೆನ್ನಾಗಿ ಪೂಜಿಸಿ, ಬ್ರಾಹ್ಮಣನಿಗೆ ದಕ್ಷಿಣೆಯನ್ನು ಕೊಡಬೇಕು.

ಹರಿಮುದ್ದಿಶ್ಯ ಚೈವಾಗ್ನೌ ಘೃತಹೋಮಕೃತಕ್ರಿಯಃ ।
ಪ್ರಣಿಪತ್ಯ ಜಗನ್ನಾಥಮಿತಿ ವಾಣೀಮುದೀರಯೇತ್ ॥ ೪ ॥

ಪಾತಾಲಸಂಸ್ಥಾಂ ವಸುಧಾಂ ಯಥಾ ಪ್ರಸಾದ್ಯ ಮನೋರಥಾನ್ ।
ಅವಾಪ ವಾಸುದೇವೋಽಸೌ ಪ್ರದದ್ಯಾತ್ತು ಮನೋರಥಾನ್ ॥ ೫ ॥

ಯಮಭ್ಯರ್ಚ್ಯ ದಿವಿ ಪ್ರಾಪ್ತಃ ಸಕಲಾಂಶ್ಚ ಮನೋರಥಾನ್ ।
ಭ್ರಷ್ಟರಾಜ್ಯಶ್ಚ ದೇವೇಂದ್ರೋ ಯಮಭ್ಯರ್ಚ್ಯ ಜಗತ್ಪತಿಂ ॥ ೬ ॥

ಮನೋರಥಾನಭಿನವಾನ್ಪ್ರಾಪ್ನುವಂತಿ ಮನೋಹರಾನ್ ।
ಏವಮಭ್ಯರ್ಚ್ಯ ಪೂಜಾಂ ಚ ನಿಷ್ಪಾದ್ಯ ಚ ಹರೇಸ್ತತಃ ।
ಭುಂಜೀತ ಪ್ರಯತಃ ಸಮ್ಯಗ್ಭವಿಷ್ಯಂ ಪಾಂಡುನಂದನ ॥ ೭ ॥

---

೪. ಮತ್ತು ಆದಿನ ಶ್ರೀಹರಿಯನ್ನುದ್ದೇಶಿಸಿ ಅಗ್ನಿಯಲ್ಲಿ ಘೃತದಿಂದ ಹೋಮವನ್ನು ಮಾಡಿ, ಶ್ರೀಹರಿಗೆ ನಮಸ್ಕಾರಮಾಡಿ ಆ ಜಗದೊಡೆಯನಾದ ಶ್ರೀಹರಿ ಪ್ರಾರ್ಥನೆಯ ಈ ಮಂತ್ರವನ್ನು ಪಠಣಮಾಡಬೇಕು.

೫. ಪಾತಾಳಲೋಕಸ್ಥಳಾಗಿದ್ದ ಭೂದೇವಿಯನ್ನು ಪ್ರಸನ್ನಳನ್ನಾಗಿ ಮಾಡಿ, ತನ್ನ ಮನೋರಥಗಳನ್ನು ಪೂರ್ತಿಮಾಡಿಕೊಂಡ ವಾಸುದೇವನು, ನನ್ನ ಮನೋರಥಗಳನ್ನೂ ಸಾಧಿಸಿಕೊಡಲಿ ಎಂಬುದು ಈ ಮಂತ್ರದ ಅರ್ಥ.

೬-೭. ರಾಜ್ಯಭ್ರಷ್ಟನಾಗಿ ತಿರುಗುತ್ತಿದ್ದ ದೇವೇಂದ್ರನು ಜಗತ್ಪತಿಯಾದ ಶ್ರೀಹರಿಯನ್ನು ಪೂಜಿಸಿ, ಅವನ ಅನುಗ್ರಹದಿಂದ ಸ್ವರ್ಗದಲ್ಲಿ ತನ್ನ ಸಕಲಮನೋರಥಗಳನ್ನೂ ಪಡೆದನಷ್ಟೇ ಅಂತಹ ಶ್ರೀಹರಿಯನ್ನು ನಾನೂ ಪೂಜಿಸಿ, ಮನೋಹರವೂ ನೂತನವೂ ಆದ ಮನೋರಥಗಳನ್ನು ಪಡೆಯಬೇಕು ಎಂದು ಪ್ರಾರ್ಥನಾಶ್ಲೋಕದ ಸಾರ. ಅಯ್ಯಾ ಪಾಂಡುಪುತ್ರನೇ ! ಈರೀತಿ ಪ್ರಾರ್ಥಿಸಿ ಅನಂತರ ಶ್ರೀಹರಿಗೆ ಪುನಃ ಪೂಜೆಮಾಡಿ ಶುಚಿಯಾಗಿ, ದೇವರಿಗೆ ನಿವೇದಿಸಿದ ಪವಿತ್ರವಾದ ಅನ್ನವನ್ನು ತಾನು ಭುಂಜಿಸಬೇಕು.

ಫಾಲ್ಗುನೇ ಚೈತ್ರೇ ವೈಶಾಖೇ ಜ್ಯೇಷ್ಠೇ ಮಾಸಿ ಚ ಸತ್ತಮ ।
ಚತುರ್ಭಿಃ ಪಾರಣಂ ಮಾಸೈರೇಭಿರ್ನಿಷ್ಪಾದಿತಂ ಭವೇತ್ ॥ ೮ ॥

ರಕ್ತಪುಷ್ಪೈಶ್ಚ ಚತುರೋ ಮಾಸಾನ್ಕುರ್ವೀತ ಚಾರ್ಚನಂ ।
ದಹೇತ್ತು ಗುಗ್ಗುಲುಂ ಪ್ರಾಶ್ಯ ಗೋಶೃಂಗಕ್ಷಾಲನಂ ಜಲಂ ॥ ೯ ॥

ಹವಿಷ್ಯಾನ್ನಂ ಚ ನೈವೇದ್ಯಮಾತ್ಮನಶ್ಚಾಪಿ ಭೋಜನಂ ।
ತತಶ್ಚ ಶ್ರೂಯತಾಂ ಪಾರ್ಥ ಆಷಾಢಾದೌ ತು ಯಾ ಕ್ರಿಯಾ ॥ ೧೦ ॥

ಜಾತೀಪುಷ್ಪಾಣಿ ಧೂಪಶ್ಚ ಶಸ್ತಃ ಸಾರ್ಜರಸೋ ನೃಪ ।
ಪ್ರಾಶ್ಯ ದರ್ಭೋದಕಂ ಚಾಸ್ಯ ಶಾಲ್ಯನ್ನಂ ಚ ನಿವೇದನಂ ॥ ೧೧ ॥

---

೮. ಅಯ್ಯಾ ರಾಜನೇ ! ಫಾಲ್ಗುಣ, ಚೈತ್ರ, ವೈಶಾಖ, ಜ್ಯೇಷ್ಠ ಈ ನಾಲ್ಕು ತಿಂಗಳುಗಳಲ್ಲಿ ಪೂಜೆಮಾಡಿ, ವ್ರತಾಂಗವಾದ ಪಾರಣೆಯನ್ನು ಮಾಡಿದರೆ, ಈ ನಾಲ್ಕು ತಿಂಗಳಿನ ಒಂದು ಆವರ್ತವು ಸಾಂಗವಾಗಿ ಸಿದ್ಧಿಸಿದಹಾಗಾಗುವುದು.

೯. ಈ ನಾಲ್ಕು ತಿಂಗಳುಗಳಲ್ಲಿ ರಕ್ತಪುಷ್ಪಗಳಿಂದ ದೇವಾರ್ಚನೆಯನ್ನು ಮಾಡಬೇಕು. ಅಲ್ಲದೆ ಗುಗ್ಗುಲ ಧೂಪವನ್ನು ಬೆಳಗಬೇಕು. ಮತ್ತು ಗೋಶೃಂಗೋದಕವನ್ನು ಪ್ರಾಶನ ಮಾಡಬೇಕು

೧೦. ಹೋಮಕ್ಕೂ ಮತ್ತು ನೈವೇದ್ಯಕ್ಕೂ ಉಪಯೋಗಿಸಿ ಮಿಕ್ಕ ಘೃತ ಅನ್ನ ಇತ್ಯಾದಿ ಹೋಮಶೇಷವನ್ನು ತನ್ನ ಭೋಜನಕ್ಕೆ ಉಪಯೋಗಿಸಬೇಕು. ಅಯ್ಯಾ ಧರ್ಮಜನೇ ! ಈರೀತಿ ಫಾಲ್ಗುಣಮಾಸ ಮೊದಲುಗೊಂಡು ಜ್ಯೇಷ್ಠಾಂತವಾಗಿ ಈ ವ್ರತದ ಒಂದು ಆವರ್ತವನ್ನು ಅನುಷ್ಠಾನಮಾಡಿ ಮುಗಿಸಿದ ಮೇಲೆ, ಆಷಾಢಾದಿ ಮಾಸಗಳಲ್ಲಿ ಈ ವ್ರತಪ್ರಯೋಗ ಕ್ರಮವನ್ನು ಹೇಳುತ್ತೇನೆ ಶ್ರವಣಮಾಡು.

೧೧. ಅಯ್ಯಾ ರಾಜನೇ ! ಆಷಾಢಾದಿ ನಾಲ್ಕು ತಿಂಗಳಿನಲ್ಲಿ ಪೂಜೆಗೆ ಜಾಜಿಯ ಹೂವುಗಳನ್ನು ಉಪಯೋಗಿಸಬೇಕು. ಸರ್ಜವೃಕ್ಷದ ಧೂಪವು ಈ ಮಾಸದ ಪೂಜೆಗೆ ಪ್ರಶಸ್ತ. ಮತ್ತು ಶಾಲ್ಯನ್ನವನ್ನು ನಿವೇದಿಸಬೇಕು. ಪ್ರಾಶನೆಗೆ ದರ್ಭೋದಕವನ್ನು ಉಪಯೋಗಿಸಬೇಕು.

ಸ್ವಯಂ ತದೇವ ಚಾಶ್ನೀಯಾಚ್ಛೇಷಂ ಪೂರ್ವವದಾಚರೇತ್ ।
ಕಾರ್ತಿಕಾದಿಷು ಮಾಸೇಷು ಗೋಮೂತ್ರಂ ಕಾಯಶೋಧನಂ॥ ೧೨ ॥

ಸುಗಂಧಿಶ್ಚೇಚ್ಛಯಾ ಧೂಪಂ ಪೂಜಾ ಭೃಂಗಾರಕೇನ ಚ ।
ಕಾಂಸಾರಂ ಚಾತ್ರ ನೈವೇದ್ಯಮಶ್ನೀಯಾತ್ತಚ್ಚ ವೈ ಸ್ವಯಂ ॥ ೧೩ ॥

ಪ್ರತಿಮಾಸಂ ಚ ವಿಪ್ರಾಯ ದಾತವ್ಯಾ ದಕ್ಷಿಣಾ ತಥಾ ।
ಪಾರಣಂ ಚೇಚ್ಛಯಾ ವಿಷ್ಣೋಃ ಪಾರಣೇ ಪಾವನೇ ಮತೇ ॥ ೧೪ ॥

ಯಥಾಶಕ್ತ್ಯಾ ಯಥಾಪ್ರೀತ್ಯಾ ವಿತ್ತಶಾಠ್ಯಂ ವಿವರ್ಜಯೇತ್ ।
ಸದ್ಭಾವೇನೈವ ಗೋವಿಂದಃ ಪೂಜಿತಃ ಪ್ರೀಯತೇ ಯತಃ ॥ ೧೫ ॥

---

೧೨. ಶ್ರೀಹರಿಗೆ ಸಮರ್ಪಿಸಿದ ಶಾಲ್ಯನ್ನವನ್ನೇ ತಾನು ಭುಂಜಿಸಬೇಕು. ಉಳಿದ ವಿಚಾರಗಳೆಲ್ಲಾ ಫಾಲ್ಗುಣಾದಿ ನಾಲ್ಕುಮಾಸದ ಪೂಜೆಗೆ ಹೇಳಿದಂತೆಯೇ ಆಚರಿಸಬೇಕು. ಕಾರ್ತಿಕಾದಿ ನಾಲ್ಕು ಮಾಸಗಳ ಈ ವ್ರತ ಪ್ರಯೋಗದಲ್ಲಿ ಕಾಯಶೋಧಕವಾಗಿ ಗೋಮೂತ್ರವನ್ನು ಪ್ರಾಶನಮಾಡಬೇಕು.

೧೩. ಈ ನಾಲ್ಕು ಮಾಸಗಳ ಆವರ್ತಪ್ರಯೋಗದಲ್ಲಿ ಸ್ವೇಚ್ಛಾನುಸಾರವಾಗಿ ಸುಗಂಧವುಳ್ಳ ಧೂಪವನ್ನು ಉಪಯೋಗಿಸಿ ಭೃಂಗಾರಕ ಪುಷ್ಪದಿಂದ ಪೂಜೆ ಮಾಡಬೇಕು. ಈ ಪ್ರಯೋಗದಲ್ಲಿ ಕಾಂಸಾರವೆಂಬ ಭಕ್ಷ್ಯವಿಶೇಷವನ್ನು ನೈವೇದ್ಯಮಾಡಿ ತಾನೂ ಅದನ್ನೇ ಭುಂಜಿಸಬೇಕು.

೧೪. ಪ್ರತಿ ಮಾಸದಲ್ಲೂ ಬ್ರಾಹ್ಮಣನಿಗೆ ದಕ್ಷಿಣೆಯನ್ನು ಕೊಡಬೇಕು. ಮತ್ತು ಪಾರಣೆಮಾಡಬೇಕು. ಏತಕ್ಕೆಂದರೆ ಶ್ರೀ ವಿಷ್ಣುವಿಗೆ ಪಾರಣೆಯು ಪರಮಪವಿತ್ರವೆಂದು ಹೇಳಲ್ಪಟ್ಟಿದೆ.

೧೫. ಮತ್ತು ಈ ವ್ರತವನ್ನು ತನ್ನ ಶಕ್ತಿ, ಪ್ರೀತಿ ಇವುಗಳಿಗೆ ಅನುಸಾರವಾಗಿ ಮಾಡಬೇಕು. ಧನಲೋಭ ಮಾಡಬಾರದು. ಏತಕ್ಕೆಂದರೆ ನಿಷ್ಕಪಟವಾಗಿ ಸಾಧುಭಾವನೆಯಿಂದ ಮಾಡುವ ಪೂಜೆಗೆ ಶ್ರೀಗೋವಿಂದನು ಸುಪ್ರೀತನಾಗುವನು.

ಪಾರಣಾಂತೇ ಯಥಾಶಕ್ತಿ ಸ್ನಾಪಿತಃ ಪೂಜಿತೋ ಹರಿಃ ।
ಪ್ರೀಣಿತಶ್ಚೇಪ್ಸಿತಾನ್ಕಾಮಾಂಸ್ತಾನ್ದದಾತ್ಯವ್ಯಯಾನ್ನೃಪ ॥ ೧೬ ॥

ವರ್ಷಾಂತೇ ಪ್ರತಿಮಾಮಿಷ್ಟಾಂ ಕಾರಯಿತ್ವಾ ಸುಶೋಭನಾಂ ।
ಸ್ವರ್ಣಕೇನ ಯಥಾಶಕ್ತ್ಯಾ ಶಂಖಶಾರ್ಙ್ಗವಿಭೂಷಿತಾಂ ॥ ೧೭ ॥

ಪುಷ್ಪವಸ್ತ್ರಯುಗಚ್ಛನ್ನಾಂ ಬ್ರಾಹ್ಮಣಾಯ ನಿವೇದಯೇತ್ ।
ದ್ವಾದಶಬ್ರಾಹ್ಮಣಾಂಸ್ತತ್ರ ಭೋಜಯಿತ್ವಾ ಕ್ಷಮಾಪಯೇತ್ ॥ ೧೮ ॥

ದ್ವಾದಶಾತ್ರ ಪ್ರದಾತವ್ಯಾಃ ಕುಂಭಾಃ ಸಾನ್ನಜಲಾಕ್ಷತಾಃ ।
ಛತ್ರೋಪಾನದ್ಯುಗೈಃ ಸಾರ್ಧಂ ದಕ್ಷಿಣಾಭಿಶ್ಚ ಭಾರತ ॥ ೧೯ ॥

---

೧೬. ಅಯ್ಯಾ ರಾಜನೇ ! ಕೊನೆಯಲ್ಲಿ ವ್ರತಾಂಗವಾದ ಪಾರಣೆಯ ಕಾಲದಲ್ಲಿ ಯಥಾಶಕ್ತಿ ಶ್ರೀಹರಿಗೆ ಅಭಿಷೇಕ, ಪುಷ್ಪಾದಿಪೂಜೆ, ಇವುಗಳನ್ನು ಮಾಡಿದರೆ ಅದರಿಂದ ಸುಪ್ರೀತನಾದ ಹರಿಯು ಅಕ್ಷಯ್ಯಗಳಾದ ಈಪ್ಸಿತಾರ್ಥವನ್ನು ಕೊಡುವನು.

೧೭. ವರ್ಷಾಂತದಲ್ಲಿ ಶ್ರೀಹರಿಗೆ ಇಷ್ಟವಾದ ಶಂಖ, ಶಾರ್ಙ್ಗ ಇವುಗಳಿಂದ ಅಲಂಕೃತವಾಗಿಯೂ ಮನೋಹರವಾಗಿಯೂ ಇರುವ ಪ್ರತಿಮೆಯನ್ನು ತನ್ನ ಶಕ್ತಿಯಿದ್ದಷ್ಟರಲ್ಲಿ ಭಂಗಾರದಿಂದ ಮಾಡಿಸಿ ಆ ಪ್ರತಿಮೆಗೆ ಪುಷ್ಪಗಳಿಂದ ಅಲಂಕಾರಮಾಡಿ ವಸ್ತ್ರಯುಗ್ಮಗಳನ್ನು ಹೊದ್ದಿಸಬೇಕು.

೧೮. ಅನಂತರ ಅದನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಆ ವ್ರತದ ಕೊನೆಯಲ್ಲಿ ಹನ್ನೆರಡುಮಂದಿ ಬ್ರಾಹ್ಮಣರನ್ನು ಆಮಂತ್ರಿಸಿ, ಅವರಿಗೆ ಭೋಜನ ಮಾಡಿಸಿ ಅನಂತರ ಕ್ಷಮೆ ಬೇಡಬೇಕು.

೧೯. ಅಯ್ಯಾ ಭರತವಂಶಜನೇ ! ಅನ್ನ, ಜಲ, ಅಕ್ಷತೆ ಇವುಗಳ ಸಮೇತವಾಗಿ ಹನ್ನೆರಡು ಕುಂಭಗಳು ಮತ್ತು ಛತ್ರಿ, ಪಾದುಕೆ, ದಕ್ಷಿಣೆ ಇವನ್ನು ದಾನ ಮಾಡಬೇಕು.

ಏಷಾ ಪುಣ್ಯಾ ಪಾಪಹರಾ ದ್ವಾದಶೀ ಫಲಮಿಚ್ಛತಾಂ ।
ಯಥಾಭಿಲಷಿತಾನ್ಕಾಮಾನ್ದದಾತಿ ನೃಪಸತ್ತಮ ॥ ೨೦ ॥

ಪೂರಯತ್ಯಖಿಲಾನ್ಭಕ್ತ್ಯಾ ಯತಶ್ಚೈಷಾಂ ಮನೋರಥಾನ್ ।
ಮನೋರಥಾ ದ್ವಾದಶೀಯಂ ತತೋ ಲೋಕೇಷು ವಿಶ್ರುತಾಃ ॥ ೨೧ ॥

ಉಪೋಷ್ಯೈತಾಂ ತ್ರಿಭುವನಂ ಲಬ್ಧಮಿಂದ್ರೇಣ ವೈ ಪುರಾ ।
ಅದಿತ್ಯಾಚೇಷ್ಟಿತಾಃ ಪುತ್ರಾ ಧನಮೌಶನಸಾ ತಥಾ ॥ ೨೨ ॥

ಧೌಮ್ಯೇನಾಧ್ಯಯನಂ ಪ್ರಾಪ್ತಮನ್ಯೈಶ್ಚಾಭಿಮತಂ ಫಲಂ ।
ರಾಜರ್ಷಿಭಿಸ್ತಥಾ ವಿಪ್ರೈಃ ಸ್ತ್ರೀವಿಟ್‌ಶೂದ್ರೈಶ್ಚ ಭೂತಲೇ ॥ ೨೩ ॥

---

೨೦. ಅಯ್ಯಾ ರಾಜಶ್ರೇಷ್ಠನೇ ! ಈ ದ್ವಾದಶಿಯು ಪುಣ್ಯದಾಯಕವೂ, ಪಾಪನಿವಾರಕವೂ ಆಗಿ, ಫಲಾಭಿಲಾಷೆಯಿಂದ ಅರ್ಚಿಸುವವರಿಗೆ ಅವರ ಅಭಿಲಾಷೆಗನುಸಾರವಾಗಿ ಎಲ್ಲಾ ಇಷ್ಟಾರ್ಥಗಳನ್ನೂ ಕೊಡುವುದು.

೨೧. ಭಕ್ತಿಪೂರ್ವಕವಾಗಿ ಈ ವ್ರತವನ್ನು ಆಚರಿಸಿದವರ ಸಕಲ ಮನೋರಥವನ್ನೂ ಪೂರ್ತಿ ಮಾಡುವುದರಿಂದ ಲೋಕದಲ್ಲಿ ಈ ವ್ರತಕ್ಕೆ ಮನೋರಥ ದ್ವಾದಶೀ ಎಂಬ ಹೆಸರು ಪ್ರಸಿದ್ಧವಾಯಿತು.

೨೨. ಪೂರ್ವದಲ್ಲಿ ಇಂದ್ರನು ಈ ದ್ವಾದಶಿಯದಿನ ಉಪವಾಸ ಪೂರ್ವಕವಾಗಿ ಈ ವ್ರತವನ್ನಾಚರಿಸಿ ತ್ರಿಲೋಕಾಧಿಪತ್ಯವನ್ನು ಹೊಂದಿದನು. ಮತ್ತು ಅದಿತಿದೇವಿಯು ಈ ವ್ರತಾಚರಣೆಯಿಂದ ತನಗೆ ಇಷ್ಟರಾದ ಸತ್ಪುತ್ರರನ್ನು ಪಡೆದಳು. ಹಾಗೆಯೇ ಔಶನಸನು ಇದರಿಂದಲೇ ಧನವನ್ನು ಪಡೆದನು.

೨೩. ಮತ್ತು ಧೌಮ್ಯನೆಂಬ ಬ್ರಾಹ್ಮಣೋತ್ತಮನು ಈ ವ್ರತಾಚರಣದಿಂದ ಅಧ್ಯಯನ ಸಂಪನ್ನನಾದನು. ಇತರರೂ ಹೀಗೆಯೇ ಇದರಿಂದ ತಮತಮಗಭಿಮತವಾದ ಪ್ರಯೋಜನವನ್ನು ಪಡೆದಿರುತ್ತಾರೆ. ಹಾಗೆಯೇ ಭೂಲೋಕದಲ್ಲಿ ಇದನ್ನು ಆಚರಿಸಿದ ರಾಜರ್ಷಿಗಳೂ, ಬ್ರಾಹ್ಮಣರೂ, ಸ್ತ್ರೀಯರೂ, ವೈಶ್ಯರೂ ಮತ್ತು ಶೂದ್ರರೂ ತಮಗೆ ಇಷ್ಟವಾದ ಫಲವನ್ನು ಹೊಂದಿರುತ್ತಾರೆ.

ಯಂಯಂ ಕಾಮಮಭಿಧ್ಯಾಯ ವ್ರತಮೇತದುಪೋಷಿತಂ ।
ತತ್ತದಾಪ್ನೋತ್ಯಸಂದಿಗ್ಧಂ ವಿಷ್ಣೋರಾರಾಧನೋದ್ಯತಃ ॥ ೨೪ ॥

ಅಪುತ್ರೋ ಲಭತೇ ಪುತ್ರಮಧನೋ ಲಭತೇ ಧನಂ ।
ರೋಗಾಭಿಭೂತಶ್ಚಾರೋಗ್ಯಂ ಕನ್ಯಾ ಪ್ರಾಪ್ನೋತಿ ಸತ್ಪತಿಂ ॥ ೨೫ ॥

ಸಮಾಗಮಂ ಪ್ರವಸನ್ನೈರುಪೋಷ್ಯೈತಾಮವಾಪ್ಯತೆ ।
ಸರ್ವಾನ್ಕಾಮಾನವಾಪ್ನೋತಿ ಮೃತಃ ಸ್ವರ್ಗೇ ಚ ಮೋದತೆ ॥ ೨೬ ॥

ನಾಪುತ್ರೋ ನಾಧನೋಽಜ್ಯೇಷ್ಠೋ ವಿಯೋಗೀ ನ ಚ ನಿರ್ಗುಣಃ ।
ಉಪೋಷ್ಯೈತದ್ವ್ರತಂ ಮರ್ತ್ಯಃ ಸ್ತ್ರೀಶೂದ್ರೋ ವಾಪಿ ಜಾಯತೆ ॥

---

೨೪. ಶ್ರೀ ಮಹಾವಿಷ್ಣುವಿನ ಆರಾಧನೆಯಲ್ಲಿ ಉದ್ಯುಕ್ತನಾದ ಪುರುಷನು, ಯಾವ ಯಾವ ಪ್ರಯೋಜನವನ್ನು ಹೊಂದಬೇಕೆಂದು ಸಂಕಲ್ಪಿಸಿ, ಉಪವಾಸ ಪೂರ್ವಕವಾಗಿ ಈ ವ್ರತವನ್ನು ಆಚರಿಸುವನೋ, ಅವನು ನಿಸ್ಸಂಶಯವಾಗಿ ಆ ಪ್ರಯೋಜನವನ್ನು ಹೊಂದುತ್ತಾನೆ.

೨೫. ಈ ವ್ರತಾಚರಣೆಯಿಂದ ಅಪುತ್ರವಂತನಿಗೆ ಪುತ್ರಪ್ರಾಪ್ತಿಯೂ, ದರಿದ್ರನಿಗೆ ಧನಾಗಮವೂ, ರೋಗಾಭಿಭೂತನಿಗೆ ಆರೋಗ್ಯವೂ, ಅವಿವಾಹಿತಳಾದ ಕನ್ಯೆಗೆ ಸತ್ಪತಿಲಾಭವೂ ಆಗುವುದು.

೨೬. ಮತ್ತು ಪರದೇಶ ಪ್ರವಾಸಮಾಡಿ ವಿಯೋಗಹೊಂದಿರುವವನಿಗೆ ಈ ದ್ವಾದಶೀ ಉಪವಾಸದಿಂದ ಪುನಃ ಪ್ರಿಯಜನ ಸಮಾಗಮವಾಗುತ್ತದೆ. ಮತ್ತು ಈ ಲೋಕದಲ್ಲಿ ಸರ್ವಕಾಮಾವಾಪ್ತಿಯಾಗಿ ಮರಣಾನಂತರ ಸ್ವರ್ಗಕ್ಕೆ ಹೋಗಿ ಅಲ್ಲಿ ಸಂತೋಷದಿಂದಿರುತ್ತಾನೆ.

೨೭. ಈ ವ್ರತಾಚರಣಾಂಗವಾದ ಉಪವಾಸವನ್ನು ಮಾಡಿದ ಮನುಷ್ಯನು ಅಪುತ್ರನೂ, ದರಿದ್ರನೂ, ನಿಕೃಷ್ಟನೂ, ಬಂಧುವಿಯೋಗಿಯೂ, ನಿರ್ಗುಣನೂ ಎಂದೂ ಆಗುವುದಿಲ್ಲ. ಮತ್ತು ಸ್ತ್ರೀಜನ್ಮ ಶೂದ್ರಜನ್ಮಾದಿಗಳನ್ನೂ ಹೊಂದುವುದಿಲ್ಲ.

ಸ್ವರ್ಗಲೋಕೇ ಸಹಸ್ರಾಣಿ ವರ್ಷಾಣಾಮಯುತಾನಿ ಚ ।
ಭೋಗಾನಭಿಮತಾನ್ಭುಕ್ತ್ವಾ ತತ್ರತತ್ರ ಯಥೇಚ್ಛಯಾ ॥ ೨೮ ॥

ಇಹ ಪುಣ್ಯವತಾಂ ನೃಣಾಂ ಧನಿನಾಂ ಬುದ್ಧಿಶಾಲಿನಾಂ ।
ಗೃಹೇ ಪ್ರಜಾಯತೇ ರಾಜನ್ಸರ್ವವ್ಯಾಧಿವಿವರ್ಜಿತಃ ॥ ೨೯ ॥

ನ ದ್ವಾದಶೀಮುಪವಸಂತಿ ಮನೋರಥಾಖ್ಯಾಂ ।
ನೈವಾರ್ಚಯಂತಿ ಪುರುಷೋತ್ತಮಮಾದಿದೇವಂ ।
ಗೋಬ್ರಾಹ್ಮಣಾಂಶ್ಚ ನ ನಮಂತಿ ನ ಪೂಜಯಂತಿ ।
ಯೇ ತೇ ಮನೋಭಿಲಷಿತಂ ಕಥಮಾಪ್ನುವಂತಿ ॥ ೩೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಮನೋರಥ ದ್ವಾದಶೀ ವ್ರತ ವರ್ಣನಂ ನಾಮಾಶೀತಿತಮೋಽಧ್ಯಾಯಃ.

---

೨೮. ಹಾಗೆಯೇ ಮರಣಾನಂತರದಲ್ಲಿ ಸ್ವರ್ಗಲೋಕಕ್ಕೆ ಹೋಗಿ, ಅಲ್ಲಿ ಅಯುತ ಸಹಸ್ರಸಂವತ್ಸರಗಳಕಾಲ ವಾಸಮಾಡುತ್ತಾ, ಅಲ್ಲಿ ಅಭಿಮತಗಳಾದ ಸಕಲ ಭೋಗಗಳನ್ನೂ ಅನುಭವಿಸುವನು.

೨೯. ಅಯ್ಯಾ ರಾಜನೇ ! ಅನಂತರ ಅವನು ಈ ಮನುಷ್ಯಲೋಕದಲ್ಲಿ ಪುಣ್ಯಶಾಲಿಗಳೂ, ಧನಿಕರೂ, ವಿದ್ವಾಂಸರೂ ಆಗಿರುವವರ ಮನೆಯಲ್ಲಿ ಜನಿಸಿ, ಸರ್ವವ್ಯಾಧಿವಿವರ್ಜಿತನಾಗಿ ಆರೋಗ್ಯದಿಂದಿರುವನು.

೩೦. ಮನೋರಥ ದ್ವಾದಶಿ ಎಂಬ ನಾಮಧೇಯವುಳ್ಳ ಈ ವ್ರತದಲ್ಲಿ ಯಾವನು ಉಪವಾಸ ಮಾಡುವುದಿಲ್ಲವೋ, ಮತ್ತು ಆದಿದೇವನಾದ ಶ್ರೀಮನ್ನಾರಾಯಣನನ್ನು ಯಾರು ಭಕ್ತಿಪೂರ್ವಕವಾಗಿ ಪೂಜೆಯನ್ನು ಮಾಡುವುದಿಲ್ಲವೋ, ಮತ್ತು ಗೋಬ್ರಾಹ್ಮಣರಿಗೆ ಪೂಜೆ, ನಮಸ್ಕಾರ ಇತ್ಯಾದಿಗಳನ್ನು ಯಾರು ಮಾಡುವುದಿಲ್ಲವೋ ಅಂತಹವರು ತಮ್ಮ ಮನೋಭಿಲಷಿತವಾದ ಪ್ರಯೋಜನವನ್ನು ಅಂದರೆ ಪುರುಷಾರ್ಥಗಳನ್ನು ಪಡೆಯಲಾರರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಮನೋರಥ ದ್ವಾದಶೀ ವ್ರತವರ್ಣನೆಯೆಂಬ ಎಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಏಕಾಶೀತಿತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಅಲ್ಪಾಯಾಸೇನ ಭಗವನ್ಧನೇನಾಲ್ಪೇನ ವಾ ವಿಭೋ ।
ಪಾಪಂ ಪ್ರಶಮಮಾಯಾತಿ ಯೇನ ತದ್ವಕ್ತುಮರ್ಹಸಿ ॥ ೧ ॥

॥ ಶ್ರೀ ಕೃಷ್ಣ ಉವಾಚ ॥

ಶೃಣು ಪಾರ್ಥ ಪರಾಂ ಪುಣ್ಯಾಂ ದ್ವಾದಶೀಂ ಪಾಪನಾಶಿನೀಂ ।
ಯಾಮುಪೋಷ್ಯ ಪರಂ ಪುಣ್ಯಮಾಪ್ನುಯಾಚ್ಛ್ರದ್ಧಯಾನ್ವಿತಃ ॥ ೨ ॥

---

## ಎಂಭತ್ತೊಂದನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಓ ಭಗವಂತನೇ ! ಅಲ್ಪಾಯಾಸ, ಅಲ್ಪಧನವ್ಯಯ ಇಷ್ಟುಮಾತ್ರದಿಂದ ಹೇಗೆ ಪಾಪನಾಶವಾಗಬಹುದೋ ಅಂತಹ ಕರ್ಮವನ್ನು ಹೇಳು ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಪಾರ್ಥನೇ ! ಪರಮಪುಣ್ಯದಾಯಕವೂ, ಪಾಪನಾಶಕವೂ, ಆಗಿರುವ ಒಂದು ದ್ವಾದಶೀ ವ್ರತವನ್ನು ಹೇಳುತ್ತೇನೆ ಶ್ರವಣಮಾಡು. ದ್ವಾದಶಿಯಲ್ಲಿ ಶ್ರದ್ಧಾಸಮನ್ವಿತನಾಗಿ ಉಪವಾಸವಿದ್ದು ಈ ವ್ರತವನ್ನಾಚರಿಸಿದರೆ ಪರಮಪುಣ್ಯಪ್ರಾಪ್ತಿಯಾಗುವುದು.

ಮಾಘಮಾಸೇ ಚ ಸಂಪ್ರಾಪ್ತೇ ಆಷಾಢರ್ಕ್ಷಂ ಭವೇದ್ಯದಿ ।
ಮೂಲಂ ವಾ ಕೃಷ್ಣಪಕ್ಷಸ್ಯ ದ್ವಾದಶ್ಯಾಂ ನಿಯತವ್ರತಃ ॥ ೩ ॥

ಗೃಹ್ಣೀಯಾತ್ಪುಣ್ಯಫಲದಂ ವಿಧಾನಂ ತಸ್ಯ ಮೇ ಶೃಣು ।
ದೇವದೇವಂ ಸಮಭ್ಯರ್ಚ್ಯ ಸುಸ್ನಾತಃ ಪ್ರಯತಃ ಶುಚಿಃ ॥ ೪ ॥

ಕೃಷ್ಣನಾಮ್ನಾ ಚ ಸಂಪೂಜ್ಯ ಏಕಾದಶ್ಯಾಂ ಮಹಾಮತೇ ।
ಉಪೋಷಿತೋ ದ್ವಿತೀಯೇಽಹ್ನಿ ಪುನಃ ಸಂಪೂಜ್ಯ ಕೇಶವಂ ॥ ೫ ॥

ಸಂಸ್ತೂಯ ನಾಮ್ನಾ ತೇನೈವ ಕೃಷ್ಣಾಖ್ಯೇನ ಪುನಃಪುನಃ ।
ದದ್ಯಾತ್ತಿಲಾಂಶ್ಚ ವಿಪ್ರಾಯ ಕೃಷ್ಣೋ ಮೇ ಪ್ರೀಯತಾಮಿತಿ ॥ ೬ ॥

ತತಶ್ಚ ಪ್ರಾಶಯೇಚ್ಛಸ್ತಾಂಸ್ತಥಾ ಕೃಷ್ಣತಿಲಾನ್ನೃಪ ।
ವಿಷ್ಣುಪ್ರೀಣನಮಂತ್ರೋಕ್ತೇ ಸಮಾಪ್ತೇ ವರ್ಷಪಾರಣೇ ॥ ೭ ॥

---

೩. ಮಾಘಮಾಸದ ಕೃಷ್ಣಪಕ್ಷದ ದ್ವಾದಶಿಯಲ್ಲಿ ಪೂರ್ವಾಷಾಢ ನಕ್ಷತ್ರವಾಗಲಿ, ಮೂಲಾನಕ್ಷತ್ರವಾಗಲಿ, ಕೂಡಿ ಬಂದರೆ ಆಗ ಪ್ರತಿಯು ಫಲದಾಯಕವಾದ ಈ ವ್ರತವನ್ನು ಪ್ರಾರಂಭಿಸಬೇಕು.

೪. ಅದರ ಅನುಷ್ಠಾನಕ್ರಮವನ್ನು ಹೇಳುತ್ತೇನೆ ಶ್ರವಣಮಾಡು. ಆ ದಿನ ವಿಧ್ಯುಕ್ತವಾಗಿ ಸ್ನಾನಮಾಡಿ ಶುಚಿಯಾಗಿ ದೇವದೇವನಾದ ಶ್ರೀಹರಿಯನ್ನು ಪೂಜಿಸಬೇಕು.

೫. ಅಯ್ಯಾ ಬುದ್ಧಿಶಾಲಿಯೇ ! ಏಕಾದಶೀದಿನ ಉಪವಾಸದಿಂದಿದ್ದು, ಕೃಷ್ಣನಾಮೋಚ್ಚಾರಣಪೂರ್ವಕವಾಗಿ ಶ್ರೀಹರಿಪೂಜೆಯನ್ನು ಮಾಡಿ, ಮಾರನೆಯ ದಿನವಾದ ದ್ವಾದಶಿಯಲ್ಲಿ ಶ್ರೀಹರಿಯನ್ನು ಪುನಃ ಅರ್ಚನೆ ಮಾಡಬೇಕು.

೬. ಮತ್ತು ಆ ಕೃಷ್ಣನಾಮದಿಂದಲೇ ಪುನಃ ಪುನಃ ಶ್ರೀಹರಿಯನ್ನು ಸ್ತೋತ್ರಮಾಡಿ "ಶ್ರೀ ಕೃಷ್ಣೋ ಮೇ ಪ್ರೀಯತಾಂ'' ಎಂದು ಹೇಳಿ ಬ್ರಾಹ್ಮಣನಿಗೆ ತಿಲದಾನ ಮಾಡಬೇಕು.

೭. ಅಯ್ಯಾ ರಾಜನೇ ! ಅನಂತರ ಪ್ರಶಸ್ತವಾದ ಆ ಕರಿಯ ಎಳ್ಳನ್ನೇ ಪ್ರಾಶನೆಮಾಡಬೇಕು. ಮಂತ್ರವತ್ತಾಗಿ ಪೂಜೆ, ಶ್ರೀ ವಿಷ್ಣುಪ್ರೀಣನ, ವ್ರತಾಂಗವಾದ ಪಾರಣೆ, ಇವು ಸಹಿತವಾಗಿ ಒಂದುವರ್ಷ ಆ ವ್ರತವನ್ನು ಆಚರಿಸಬೇಕು.

ಕೃಷ್ಣಕುಂಭಾಸ್ತಿಲೈಃ ಸಾರ್ಧಂ ಪಕ್ವಾನ್ನೇನ ಚ ಸಂಯುತಾಃ ।
ಛತ್ರೋಪಾನದ್ಯುಗೈರ್ವಸ್ತ್ರೈಃ ಸಹಿತಾ ಅನ್ನಗರ್ಭಿಣಃ ।
ಬ್ರಾಹ್ಮಣೇಭ್ಯಃ ಪ್ರದೇಯಾಸ್ತೇ ಯಥಾವನ್ಮಾಸಸಂಖ್ಯಯಾ ॥ ೮ ॥

ತಿಲಪ್ರರೋಹಾಜ್ಜಾಯಂತೇ ಯಾವತ್ಸಂಖ್ಯಾಸ್ತಿಲಾ ನೃಪ ।
ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ।
ಅರೋಗೋ ಜಾಯತೇ ನಿತ್ಯಂ ನರೋ ಜನ್ಮನಿಜನ್ಮನಿ ॥ ೯ ॥

ಅಂಧೋ ನ ಬಧಿರಶ್ಚೈವ ನ ಕುಷ್ಠೀ ನ ಚ ಕುತ್ಸಿತಃ ।
ಭವತ್ಯೇತಾಮುಷಿತ್ವಾ ತು ತಿಲಾಖ್ಯಾಂ ದ್ವಾದಶೀಂ ನರಃ ॥ ೧೦ ॥

ಅನೇನ ಪಾರ್ಥ ವಿಧಿನಾ ತಿಲದಾತಾ ನ ಸಂಶಯಃ ।
ಮುಚ್ಯತೇ ಪಾತಕೈಃ ಸರ್ವೈರನಾಯಾಸೇನ ಮಾನವಃ ॥ ೧೧ ॥

---

೮. ಈ ರೀತಿ ಒಂದುವರ್ಷ ಪೂರ್ತಿಯಾದ ಮೇಲೆ, ಒಂದುವರ್ಷದ ತಿಂಗಳುಗಳ ಸಂಖ್ಯೆಯ ಮೇರೆಗೆ, ಅಂದರೆ ಹನ್ನೆರಡು ಸಂಖ್ಯೆಯ ಕೃಷ್ಣಕುಂಭಗಳಲ್ಲಿ, ಎಳ್ಳು ಮತ್ತು ಅನ್ನ ಇವುಗಳನ್ನು ತುಂಬಿಸಿ, ಛತ್ರಿ, ಪಾದುಕಾಯುಗಳ, ವಸ್ತ್ರ, ಇವುಗಳ ಸಮೇತವಾಗಿ ಪಕ್ವಾನ್ನಯುತವಾದ ಆ ಹನ್ನೆರಡು ಕುಂಭಗಳನ್ನು ಬ್ರಾಹ್ಮಣರಿಗೆ ದಾನಮಾಡಬೇಕು.

೯. ಅಯ್ಯಾ ರಾಜನೇ! ಈ ವ್ರತಾನುಷ್ಠಾತೃವು, ಈ ತಿಲದಾನ ಮಾಡಿದ್ದರಿಂದ ಎಳ್ಳುಕಾಳುಗಳು ಅಂಕುರಿಸಿ ಬೆಳೆದ, ಆ ತಿಲಸಸ್ಯಗಳಿಂದ ಎಷ್ಟು ಸಂಖ್ಯಾಕಗಳಾದ ಎಳ್ಳು ಆಗುವುದೋ ಅಷ್ಟು ಸಹಸ್ರವರ್ಷಗಳಕಾಲ ಅವನು ಸ್ವರ್ಗಲೋಕದಲ್ಲಿ ಪೂಜಿತನಾಗುವನು. ಮತ್ತು ಪ್ರತಿಜನ್ಮದಲ್ಲೂ ಅವನು ಯಾವಾಗಲೂ ರೋಗರಹಿತನಾಗುವನು.

೧೦. ಮತ್ತು ತಿಲನಾಮಧೇಯದ ಈ ದ್ವಾದಶಿಯಲ್ಲಿ ಉಪವಾಸವನ್ನು ಆಚರಿಸಿದ ಪುರುಷರು ಅಂಧರು, (ಕುರುಡ) ಕಿವುಡರು, ಕುಷ್ಠರೋಗಿಗಳು, ಕುತ್ಸಿತರು ಮುಂತಾದವರಾಗಿ ಆಗುವುದಿಲ್ಲ.

೧೧. ಅಯ್ಯಾ ಧರ್ಮಜನೇ! ಈ ಪ್ರಕಾರವಾಗಿ ತಿಲದಾನಮಾಡಿದ ಪುರುಷನು, ಅನಾಯಾಸವಾಗಿ ಸರ್ವಪಾತಕಗಳಿಂದಲೂ ಮುಕ್ತನಾಗುವನು. ಈ ವಿಷಯದಲ್ಲಿ ಸಂಶಯವಿಲ್ಲ.

ದಾನಂ ವಿಧಿಸ್ತಥಾ ಶ್ರಾದ್ಧಂ ಸರ್ವಪಾತಕಶಾಂತಯೇ ।
ನಾರ್ಥಃ ಪ್ರಭೂತೋ ನಾಯಾಸಃ ಶರೀರೇ ನೃಪಸತ್ತಮ ॥ ೧೨ ॥

ಸರ್ವೋಽಪಭೋಗವಿರತೇಽಹ್ನಿ ಪರೇ ದಶಮ್ಯಾಂ ।
ಸ್ನಾನಂ ತಿಲೈಸ್ತಿಲನಿವೇದನಕೃತ್ತಿಲಾಶೀ ।
ದತ್ವಾ ತಿಲಾನ್ದ್ವಿಜವರಾಯ ವಿರಾಜಕೇತುಂ ।
ಸಂಪೂಜ್ಯ ವಿಷ್ಣುಪದವೀಂ ಸಮುಪೈತಿ ಮರ್ತ್ಯಃ ॥ ೧೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ತಿಲದ್ವಾದಶೀ ವ್ರತವರ್ಣನಂ
ನಾಮ್ನೈಕಾಶೀತಿತಮೋಽಧ್ಯಾಯಃ.



---

೧೨. ಅಯ್ಯಾ ನೃಪೋತ್ತಮನೇ ! ದಾನ, ಸತ್ಕರ್ಮ, ಶ್ರಾದ್ಧ ಇವುಗಳು ಸರ್ವಪಾತಕನಾಶಕಗಳು. ಇವುಗಳಿಗಾಗಿ ಬಹು ಧನವೇನೂ ವ್ಯಯವಾಗುವುದಿಲ್ಲ. ಮತ್ತು ಇದರ ಆಚರಣೆಯಿಂದ ಶರೀರಕ್ಕೆ ಅತ್ಯಾಯಾಸವೂ ಸಂಭವಿಸುವುದಿಲ್ಲ.

೧೩. ಈ ವ್ರತವನ್ನು ಅನುಷ್ಠಾನಮಾಡುವ ಪುರುಷನು, ಪೂರ್ವದಿನವಾದ ದಶಮಿಯಲ್ಲಿ ಸರ್ವಭೋಗ್ಯವಸ್ತುಗಳನ್ನೂ ಪರಿತ್ಯಜಿಸಿ, ನಿಯಮದಿಂದಿದ್ದು ಮರುದಿನ ತಿಲದಿಂದ ಸ್ನಾನಮಾಡಿ, ಪಕ್ಷಿರಾಜನಾದ ಗರುಡನೇ ಧ್ವಜದ ಚಿಹ್ನೆಯಾಗಿ ಉಳ್ಳ ಶ್ರೀ ಹರಿಯನ್ನು ಚೆನ್ನಾಗಿ ಪೂಜೆಮಾಡಿ ಶ್ರೀ ಹರಿಗೆ ತಿಲಸಮರ್ಪಣೆಮಾಡಿ, ಬ್ರಾಹ್ಮಣೋತ್ತಮನಿಗೆ ತಿಲದಾನವನ್ನು ಕೊಟ್ಟು ತಾನೂ ತಿಲಪ್ರಾಶನೆಮಾಡಿ, ಈ ವ್ರತವನ್ನು ಆಚರಿಸಿದರೆ ಅಂತಹವನು ಶ್ರೀ ವಿಷ್ಣು ಪದವಿಯನ್ನು ಪಡೆಯುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ
ತಿಲದ್ವಾದಶೀ ವ್ರತವರ್ಣನೆಯೆಂಬ ಎಂಭತ್ತೊಂದನೆಯ
ಅಧ್ಯಾಯ ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ದ್ವ್ಯಶೀತಿತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಯನ್ನ ತಾಪಾಯ ವೈ ಪುಂಸಾಂ ಭವತ್ಯಾಮುಷ್ಮಿಕಂ ಕೃತಂ ।
ತದಪಾಪಾಯ ಭವತಿ ತದಾಚಕ್ಷ್ವ ಯದೂತ್ತಮ ॥ ೧ ॥

ಉಪವಾಸಪ್ರಭಾವಂ ವೈ ಕೃಷ್ಣಾರಾಧನಕಾಂಕ್ಷಿಣಾಂ ।
ಕಥಯೇಹ ಮಹಾಬಾಹೋ ನೈವ ತೃಪ್ಯಾಮಿ ಜಲ್ಪತಃ ॥ ೨ ॥

॥ ಶ್ರೀ ಕೃಷ್ಣ ಉವಾಚ ॥

ಶ್ರೂಯತಾಂ ಪಾರ್ಥ ಯತ್ಪೃಷ್ಟಾಃ ಕೌತುಕಾದ್ಭವತಾ ವಯಂ ।
ಆಮುಷ್ಮಿಕಂ ನ ತಾಪಾಯ ವಿಪಾಪಾಯ ಚ ಜಾಯತೇ ॥ ೩ ॥

---

### ಎಂಭತ್ತೆರಡನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ಯಾದವೋತ್ತಮನೇ! ಯಾವುದನ್ನು ಆಚರಿಸಿದರೆ ಪ್ರತಿಗೆ ಆಮುಷ್ಮಿಕತಾಪನಿವೃತ್ತಿಯೂ ಮತ್ತು ಪಾಪನಾಶನವೂ ಲಭಿಸುವುದೋ ಆ ಕರ್ಮವನ್ನು ನನಗೆ ಹೇಳು.

೨. ಓ ಮಹಾಬಾಹುಶಾಲಿಯೇ! ಶ್ರೀ ಕೃಷ್ಣಾರಾಧನೆಯನ್ನು ಮಾಡುವವರು ಆಚರಿಸುವ ಉಪವಾಸದ ಪ್ರಭಾವವನ್ನು ಈಗ ತಿಳಿಸು. ನೀನು ಎಷ್ಟು ಹೇಳಿದರೂ ನನಗೆ ಅದರಿಂದ ತೃಪ್ತಿಯಾಗಲಿಲ್ಲ ಎಂದನು.

೩. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಪಾರ್ಥನೇ! ನೀನು ಪರಲೋಕದಲ್ಲಿ ಸಂತಾಪನಿವೃತ್ತಿಗಾಗಿಯೂ, ಪಾಪನಿವಾರಣೆಗಾಗಿಯೂ, ಯಾವ ಕರ್ಮವನ್ನು ಆಚರಿಸಬೇಕೆಂದು ಕುತೂಹಲದಿಂದ ಪ್ರಶ್ನೆಮಾಡಿರುವೆ. ಅದಕ್ಕೆ ಉತ್ತರ ಹೇಳುತ್ತೇನೆ ಶ್ರವಣಮಾಡು.

ಉಪೋಷಿತಪ್ರಭಾವಂ ಚ ಕೃಷ್ಣಾರಾಧನಕಾಂಕ್ಷಿಣಾಂ ।
ಕಥಯಾಮಿ ಯಥಾವೃತ್ತಂ ಪೂರ್ವಮೇವ ನರೋತ್ತಮ ॥ ೪ ॥

ವೈದಿಶಂ ನಾಮ ನಗರಂ ಪ್ರಖ್ಯಾತಂ ನೃಪಸತ್ತಮ ।
ತತ್ರ ವೈಶ್ಯೋಽಭವತ್ಪೂರ್ವಂ ಸೀರಭದ್ರ ಇತಿ ಶ್ರುತಃ ॥ ೫ ॥

ಭಾರ್ಯಯಾ ಮಾತೃದುಹಿತಾ ಪುತ್ರಪೌತ್ರೈಃ ಸಮನ್ವಿತಃ ।
ಪ್ರಭೂತಭೃತ್ಯವರ್ಗಶ್ಚ ಬಹುವ್ಯಾಪಾರಕಾರಕಃ ॥ ೬ ॥

ಪುತ್ರಪೌತ್ರಾದಿಭರಣೇ ವ್ಯಾಸಕ್ತಮತಿರೇವ ಚ ।
ಪರಲೋಕಂ ಪ್ರತಿಮತಿಸ್ತಸ್ಯ ನಾಸೀತ್ಕದಾಚನ ॥ ೭ ॥

ಚಕಾರಾನುದಿನಂ ಸೋಽಥ ನ್ಯಾಯಾನ್ಯಾಯೈರ್ಧನಾರ್ಜನಂ ।
ಸರ್ವತ್ರಾನ್ಯತ್ರ ನಿಃಸ್ನೇಹಃ ಪುತ್ರಸ್ನೇಹಪರಿಪ್ಲುತಃ ॥ ೮ ॥

---

೪. ಅಯ್ಯಾ ಪುರುಷಶ್ರೇಷ್ಠನೇ ! ಶ್ರೀ ಕೃಷ್ಣಾರಾಧನಾಕಾಂಕ್ಷೆಯುಳ್ಳವರ ಉಪವಾಸದ ಪ್ರಭಾವವಿಷಯವಾಗಿ, ಪೂರ್ವದಲ್ಲಿ ನಡೆದ ಚರಿತ್ರೆಯನ್ನು ಉದಾಹರಿಸಿ ಹೇಳುತ್ತೇನೆ.

೫. ಅಯ್ಯಾ ನೃಪೋತ್ತಮನೇ ! ವಿದಿಶಾ ಎಂಬ ಹೆಸರುಳ್ಳ ಪ್ರಖ್ಯಾತವಾದ ಒಂದು ನಗರವಿದ್ದಿತು. ಆ ನಗರಿಯಲ್ಲಿ ಪೂರ್ವದಲ್ಲಿ ಸೀರಭದ್ರನೆಂಬ ಪ್ರಸಿದ್ಧನಾದ ಒಬ್ಬ ವೈಶ್ಯನಿದ್ದನು.

೬. ಆ ವೈಶ್ಯನು ಹೆಂಡತಿ, ಮಕ್ಕಳು, ಮೊಮ್ಮಕ್ಕಳು, ತಾಯಿ, ಇವರುಗಳಿಂದ ಕೂಡಿದವನೂ, ಬಹು ಭೃತ್ಯವರ್ಗಸಹಿತನೂ, ಅನೇಕ ವ್ಯಾಪಾರಗಳನ್ನು ನಡೆಯಿಸುವವನೂ ಆಗಿದ್ದನು.

೭. ಅವನಿಗೆ ಪುತ್ರಪೌತ್ರಾದಿಗಳನ್ನು ಪೋಷಿಸುವುದರಲ್ಲೇ ಯಾವಾಗಲೂ ಅತ್ಯಾಸಕ್ತವಾದ ಬುದ್ಧಿ ಇದ್ದಿತೇ ಹೊರತು, ಯಾವಕಾಲದಲ್ಲೂ ಅವನಿಗೆ ಪರಲೋಕದ ಆಲೋಚನೆಯೇ ಇರಲಿಲ್ಲ.

೮. ಇದರಿಂದ ಆ ವೈಶ್ಯನು ನ್ಯಾಯಾನ್ಯಾಯಗಳನ್ನು ಗಮನಿಸದೆ ಪ್ರತಿದಿನವೂ ಧನಾರ್ಜನೆಯನ್ನು ಮಾಡುತ್ತಾ ತನ್ನ ಪುತ್ರರಲ್ಲೇ ಅತಿ ಸ್ನೇಹವುಳ್ಳವನಾಗಿ, ಇತರ ಎಲ್ಲಾ ಪ್ರಾಣಿಗಳಲ್ಲೂ ದಯಾರಹಿತನಾಗಿ ಇದ್ದನು.

ನ ಜುಹೋತ್ಯುದಿತೇ ಕಾಲೇ ನ ದದಾತ್ಯತಿತೃಷ್ಣಯಾ ।
ಬಭೂವ ಚೋದ್ಯಮಸ್ತಸ್ಯ ಪುತ್ರಾದಿಭರಣೇ ಪರಃ ॥ ೯ ॥

ನಿತ್ಯನೈಮಿತ್ತಿಕಾನಾಂ ಚ ಹಾನಿಂ ಚಕ್ರೇ ಸ್ವಕರ್ಮಣಾ ।
ತೃಷ್ಣಾಭಿಭೂತೋ ರಾಜೇಂದ್ರ ಸ್ವವರ್ಗಭರಣೋದ್ಯತಃ ॥ ೧೦ ॥

ಕಾಲೇನಾಗಚ್ಛತಾಸೋಽಥ ಮೃತೋ ವಿಂಧ್ಯಾಟವೀತಟೇ ।
ಯಾತನಾದೇಹಭೃತ್ಪ್ರೇತೋ ಗ್ರೀಷ್ಮಕಾಲೇಭವನ್ನೃಪ ॥ ೧೧ ॥

ತಂ ದದರ್ಶ ಮಹಾಭಾಗೋ ದಿವ್ಯಯಾನಸಮನ್ವಿತಃ ।
ವೇದವೇದಾಂಗವಿದ್ವೇಷೀ ವಿಪೀತೋ ನಾಮ ವೈ ದ್ವಿಜಃ ।
ಭಾಸ್ಕರಸ್ಯಾಂಶುಭಿರ್ದೀಪ್ತೈರ್ದಹಂತಮತಿದಾರುಣೈಃ ॥ ೧೨ ॥

---

೯. ಹೋಮಾದಿಗಳನ್ನು ಅವಶ್ಯವಾಗಿ ಮಾಡಬೇಕಾದ ಕಾಲವು ಸಂಪ್ರಾಪ್ತವಾದಾಗಲೂ ಅವನು ಅದನ್ನು ಮಾಡುತ್ತಿರಲಿಲ್ಲ. ಅತ್ಯಾಶಾಯುಕ್ತನಾದುದರಿಂದ ಧನಲೋಭವಶನಾಗಿ ಇತರರಿಗೆ ದಾನಮಾಡುತ್ತಲೂ ಇರಲಿಲ್ಲ. ಆ ವೈಶ್ಯನ ಉದ್ಯೋಗವೆಲ್ಲಾ ಪುತ್ರಾದಿ ಕುಟುಂಬಭರಣದಲ್ಲಿಮಾತ್ರ ವ್ಯಾಪಕವಾಗಿದ್ದಿತು.

೧೦. ಅಯ್ಯಾ ರಾಜೇಂದ್ರನೇ ! ಈ ರೀತಿ ಆ ವೈಶ್ಯನು ಆಶಾಪಿಶಾಚದಿಂದ ಅಭಿಭೂತನಾಗಿ ಸ್ವಕುಟುಂಬಪೋಷಣೆಯಲ್ಲಿ ಮಾತ್ರ ಉದ್ಯುಕ್ತನೂ, ತನ್ನ ವಾಣಿಜ್ಯಕರ್ಮದಲ್ಲಿ ವ್ಯಾಪೃತನೂ, ಅವಶ್ಯಾನುಷ್ಠೇಯಗಳಾದ ನಿತ್ಯನೈಮಿತ್ತಿಕ ವಿಹಿತಕರ್ಮಗಳನ್ನು ಕೂಡ ಆಚರಿಸದನೂ ಆಗಿದ್ದನು.

೧೧. ಅಯ್ಯಾ ರಾಜನೇ ! ಅವನು ಹೀಗೆ ಕಾಲಕಳೆಯುತ್ತಿರುವಾಗ ಮರಣಹೊಂದಿ ಯಾತನಾಮಯವಾದ ಪ್ರೇತಶರೀರವನ್ನು ಧರಿಸಿ, ಬೇಸಿಗೆ ಕಾಲದಲ್ಲಿ ವಿಂಧ್ಯಪರ್ವತದ ಅರಣ್ಯ ತಟಪ್ರದೇಶದಲ್ಲಿರುತ್ತಿದ್ದನು.

೧೨. ಪ್ರೇತಭಾವವನ್ನು ಹೊಂದಿದ ಆ ವೈಶ್ಯನು, ಬೇಸಿಗೆಕಾಲದ ಸೂರ್ಯನ ಅತಿಕಠೋರವಾದ ಕಿರಣಗಳಿಂದ ತಪಿಸಲ್ಪಡುತ್ತಿರುವಾಗ, ಮಹಾಮಹಿಮೆಯುಳ್ಳವನೂ, ದಿವ್ಯವಿಮಾನಾರೂಢನೂ, ವೇದವೇದಾಂಗತತ್ವಜ್ಞನೂ, ಆಗಿರುವ ವಿಪೀತನೆಂಬೊಬ್ಬ ಬ್ರಾಹ್ಮಣನು ಅವನನ್ನು ನೋಡಿದನು.

ಪ್ರತಪ್ತವಾಲುಕಾಮಧ್ಯೇ ತೃಷ್ಣಾರ್ತಂ ಚಾತಿಪೀಡಿತಂ ।
ಕ್ಷುತ್ಕ್ಷಾಮಕಂಠಂ ಶುಷ್ಕಾಸ್ಯಂ ತಥೋದ್ವೃತ್ತವಿಲೋಚನಂ ।
ನಿಷ್ಕ್ರಾಂತಜಿಹ್ವಮಂಗೇಷು ವಿಸ್ಫೋಟೈಃ ಸರ್ವತಶ್ಚಿತಂ ॥ ೧೩ ॥

ನಿಶ್ವಾಸಾಯಾಸಖೇದೇನ ವಿಹ್ವಲಂ ಪೀಡಿತೋದರಂ ।
ನಿಜೇನ ಕರ್ಮಣಾ ಬದ್ಧಮಸಮರ್ಥಂ ಪ್ರಸರ್ಪಣೇ ॥ ೧೪ ॥

ತಥಾದೃಶಮಥೋ ದೃಷ್ಟ್ವಾ ಗರ್ದಭೇಯೋ ಮಹಾನೃಷಿಃ ।
ವಿಪೀತಃ ಪ್ರಾಹ ರಾಜೇಂದ್ರ ಕಾರುಣ್ಯಭರಿತಂ ವಚಃ ॥ ೧೫ ॥

ಜಾನನ್ನಪಿ ಯಥಾಪ್ರಾಪ್ತಂ ತಸ್ಯಾನುಷ್ಠಾನಜಂ ಫಲಂ ।
ಜಂತೋಸ್ತಸ್ಯೋಪಕಾರಾಯ ಸರ್ವತೋ ಹ್ಲಾದಯನ್ನಿವ ॥ ೧೬ ॥

---

೧೩. ಪ್ರೇತಜನ್ಮವನ್ನು ಪಡೆದ ಈ ವೈಶ್ಯನನ್ನು ಆ ಬ್ರಾಹ್ಮಣೋತ್ತಮನು ನೋಡಿದಾಗ, ಅವನು ಚೆನ್ನಾಗಿ ಬಿಸಿಲಿನಿಂದಕಾಯ ಮರಳಿನ ಮಧ್ಯದಲ್ಲಿ ಅತಿ ಸಂಕಟಕ್ಕೊಳಗಾದವನೂ, ಬಾಯಾರಿಕೆಯಿಂದ ಪೀಡಿತನೂ, ಹಸಿವಿನಿಂದ ಕುಗ್ಗಿದ ಸ್ವರವುಳ್ಳವನೂ, ಒಣಗಿದ ಬಾಯಿಯುಳ್ಳವನೂ, ಹೊರಗೆ ನೀಡಿರುವ ನಾಲಿಗೆಯುಳ್ಳವನೂ, ಸರ್ವಾಂಗಗಳಲ್ಲೂ ತಾಪಜನಿತವಾದ ಗುಳ್ಳೆಗಳುಳ್ಳವನೂ ಆಗಿದ್ದನು.

೧೪. ಮತ್ತು ಅವನು ಆಗ ನಿಟ್ಟುಸಿರು, ಆಯಾಸ, ದುಃಖ, ಇವುಗಳುಳ್ಳವನೂ, ದಿಗ್ಭ್ರಾಂತನೂ, ಪೀಡೆಹೊಂದಿದ ಉದರವುಳ್ಳವನೂ, ತನ್ನ ಪೂರ್ವಾರ್ಜಿತ ಕರ್ಮದಿಂದ ಬಂಧಿತನೂ, ನಡೆಯುವುದಕ್ಕೆ ಅಸಮರ್ಥನೂ ಆಗಿದ್ದನು.

೧೫. ಅಯ್ಯಾ ರಾಜೇಂದ್ರನೇ ! ಆ ವಿಪೀತಮಹರ್ಷಿಯು ಆ ಅವಸ್ಥೆಯನ್ನು ಹೊಂದಿದ ಆ ಪ್ರೇತನನ್ನು ನೋಡಿ ದಯಾಪೂರ್ಣನಾಗಿ ಈ ಮುಂದೆ ಹೇಳುವ ಮಾತುಗಳನ್ನಾಡಿದನು.

೧೬. ಈ ಪ್ರೇತಭಾವಾಪನ್ನನು ಪೂರ್ವಜನ್ಮದಲ್ಲಿ ತಾನು ಮಾಡಿದ ದುಷ್ಕರ್ಮಗಳಿಗೆ ಅನುಸಾರವಾಗಿ ಈ ಫಲಹೊಂದಿದ್ದಾನೆಯೆಂದು ಆ ವಿಪೀತಮಹರ್ಷಿಯು ತಿಳಿದುಕೊಂಡಿದ್ದರೂ ; ಆ ಪ್ರಾಣಿಗೆ ಉಪಕಾರವಾಗಲಿ ಎಂಬ ಭಾವನೆಯಿಂದ ಆ ಪ್ರೇತವನ್ನು ಸರ್ವಪ್ರಕಾರದಿಂದಲೂ ಆಹ್ಲಾದ ಪಡಿಸುವವನಂತೆ ಮಾತನಾಡಿದನು.

॥ ವಿಪೀತ ಉವಾಚ ॥

ಅಭೈಃ ಸೂರ್ಯಾಂಶುಭಿಸ್ತಪ್ತೈಃ ಬಡುಭಿಃ ಪಥಿ ಪಾಂಸುಭಿಃ ।
ಉಪರ್ಯರ್ಕಕರೈಸ್ತೀಕ್ಷ್ಣೈಸ್ತೃಷಾವಾತನಿಪೀಡಿತಂ ॥ ೧೭ ॥

ಅನ್ಯಸ್ತ್ರತ್ರಾಣಕೈರ್ಘೋರೈರವಿಷಹ್ಯೈಃ ಸುದಾರುಣೈಃ ।
ಕಥಯೇಹ ಯಥಾತತ್ತ್ವಮೇಕಾಕೀ ದಹ್ಯಸೇ ಕಥಂ ॥ ೧೮ ॥

ತಸ್ಯೈತದ್ವಚನಂ ಶ್ರುತ್ವಾ ವಿಪೀತಸ್ಯ ಸಸೇದನಃ ।
ವೇದನಾರ್ತ ಉವಾಚೇದಂ ಕೃಚ್ಛ್ರಾದುಚ್ಛ್ವಸ್ಯ ಮಂದಕಂ ॥ ೧೯ ॥

॥ ಸೀರಭದ್ರ ಉವಾಚ ॥

ಬ್ರಹ್ಮನ್ನಾಲೋಚಿತಂ ಪೂರ್ವಂ ಕಥಮಂತೇ ಭವಿಷ್ಯತಿ ।
ಅಶಾಶ್ವತೇ ಶಾಶ್ವತಧೀಸ್ತೇನ ದಹ್ಯಾಮಿ ದುರ್ಮತಿಃ ॥ ೨೦ ॥

---

೧೭. “ಅಯ್ಯಾ! ತೃಷ ಮತ್ತು ಬಿರುಗಾಳಿ ಇವುಗಳಿಂದ ಪೀಡಿತನೂ ಕೆಳಗಡೆ ಕಠೋರವಾದ ಸೂರ್ಯನ ಕಿರಣಗಳಿಂದ ಕಾಯ್ದ ಮರಳಿನ ರಾಶಿಗಳ ಮೇಲುಗಡೆಯಲ್ಲಿ ತೀಕ್ಷ್ಣವೂ ಕಠೋರವೂ,

೧೮. ಭಯಂಕರವೂ, ಸಹಿಸಲಸಾಧ್ಯವೂ ಆಗಿರುವ ಸೂರ್ಯಕಿರಣಗಳು ಇವುಗಳ ಉಪದ್ರವದಿಂದ ರಕ್ಷಿಸುವ ಪಾದುಕೆಯನ್ನಾಗಲಿ ಶಿರಸ್ತ್ರಾಣವನ್ನಾಗಲಿ ಧರಿಸದೆ ಏಕಾಕಿಯಾಗಿ ಯಾತಕ್ಕೆ ತಪಿಸುವೆ? ಯಥಾರ್ಥವನ್ನು ಹೇಳು” ಎಂದನು.

೧೯. ಆ ಪ್ರೇತಭಾವದ ವೈಶ್ಯನು ವಿಪೀತಮಹರ್ಷಿಯ ಈ ಮಾತುಗಳನ್ನು ಕೇಳಿ, ಮಹಾವೇದನೆಯಿಂದ ಪೀಡಿತನಾಗಿ, ಅತಿಕಷ್ಟದಿಂದ ನಿಟ್ಟುಸಿರು ಬಿಟ್ಟು, ಮೆಲ್ಲಮೆಲ್ಲನೆ ಈ ಮಾತುಗಳನ್ನು ಹೇಳಿದನು.

೨೦. ಸೀರಭದ್ರನು ಹೇಳುತ್ತಾನೆ—ಓ ಬ್ರಹ್ಮರ್ಷಿಯೇ! ಮುಂದಾಲೋಚನೆಯಿಲ್ಲದೆ ಮಾಡಿದ ಕೆಲಸವು ಕೊನೆಗೆ ಹೇಗೆ ಪರಿಣಮಿಸುವುದು? ದುಷ್ಟಬುದ್ಧಿಯುಳ್ಳ ನಾನು ಅಶಾಶ್ವತವಾದ ವಸ್ತುವಿನಲ್ಲಿ ಶಾಶ್ವತ ಎಂಬ ನಂಬಿಕೆಯುಳ್ಳವನಾಗಿದ್ದುದರಿಂದ ಈಗ ಈ ರೀತಿ ಸುಡಲ್ಪಡುತ್ತಿದ್ದೇನೆ.

ಇದಂ ಕರಿಷ್ಯಾಮ್ಯಪರಂ ತ್ವಿದಂ ಕೃತ್ವಾ ತ್ವಿದಂ ಪುನಃ ।
ಇತೀಚ್ಛಾಶತಮಾರೂಢಸ್ತೇನ ದಹ್ಯಾಮಿ ದುರ್ಮತಿಃ ॥ ೨೧ ॥

ಶೀತೋಷ್ಣವರ್ಷಾದಿಭವಂ ಲೋಭಾತ್ಸೋಢಂ ಮಯಾಽಶುಭಂ ।
ತದೇವ ಹಿ ನ ಧರ್ಮಾರ್ಥಂ ತೇನ ದಹ್ಯಾಮಿ ದುರ್ಮತಿಃ ॥ ೨೨ ॥

ಪಿತೃದೇವಮನುಷ್ಯಾಣಾಮದತ್ವಾ ಪೋಷಿತಾ ಹಿ ಯೇ ।
ತೇ ಗತಾ ನಾಪಿ ವರ್ತಂತೇ ದಹ್ಯಾಮ್ಯೇಕೋಽತ್ರ ದುರ್ಮತಿಃ ॥ ೨೩ ॥

ಪುತ್ರಕ್ಷೇತ್ರಕಲತ್ರೇಷು ದುಮತ್ವಾದೃತಚೇತಸಾ ।
ಬಹ್ವಸಾಧು ಕೃತಂ ಕರ್ಮ ತೇನ ದಹ್ಯಾಮಿ ದುರ್ಮತಿಃ ॥ ೨೪ ॥

---

೨೧. ಮತ್ತು ದುರ್ಮತಿಯಾದ ನಾನು ಪೂರ್ವದಲ್ಲಿ " ಇದನ್ನು ಮೊದಲು ಸಾಧಿಸಿ ಅನಂತರ ಅದನ್ನು ಮಾಡುತ್ತೇನೆ.'' ಎಂಬೀ ತರಹವಾದ ನೂರಾರು ಆಶೆಯುಳ್ಳವನಾದುದರಿಂದ ಈ ರೀತಿ ಈಗ ದಗ್ಧನಾಗುತ್ತಿದ್ದೇನೆ.

೨೨. ಮತ್ತು ಹಿಂದೆ ನಾನು ಲೋಭದಿಂದ ಚಳಿ, ಮಳೆ, ಬಿಸಿಲು (ಸೆಖೆ) ಇವುಗಳಿಂದ ಆಗುತ್ತಿದ್ದ ಕಷ್ಟಗಳನ್ನೂ ದುಃಖಗಳನ್ನೂ ಸಹಿಸಿರುತ್ತೇನೆ. ಆದರೆ ಅದೇ ಶೀತೋಷ್ಣಾದಿ ದ್ವಂದ್ವದುಃಖ ಸಹನೆಯನ್ನು ಧರ್ಮಾನುಷ್ಠಾನಕ್ಕಾಗಿ ವಹಿಸಲಿಲ್ಲ. ಈ ಕೆಟ್ಟ ಬುದ್ಧಿಯದೆಸೆಯಿಂದ ಈಗ ಸಂತಾಪವನ್ನು ಹೊಂದಿದ್ದೇನೆ.

೨೩. ಪಿತೃಗಳಿಗೂ, ದೇವತೆಗಳಿಗೂ, ಸತ್ಪಾತ್ರರಾದ ಮಾನವರಿಗೂ, ದಾನ ಮಾಡದೆ ಕಳತ್ರಪುತ್ರಾದಿಗಳನ್ನೇ ನಾನು ಪೋಷಿಸುತ್ತಿದ್ದೆ. ಅವರು ಎಲ್ಲೋ! ನಾನೆಲ್ಲೋ! ಈಗ ಇಲ್ಲಿ ಯಾರೂ ಗತಿಇಲ್ಲ. ದುಷ್ಟಮತಿಯಾದ ನಾನೊಬ್ಬನೇ ಇಲ್ಲಿ ದಗ್ಧವಾಗುತ್ತಿದ್ದೇನೆ.

೨೪. ಮತ್ತು ನಾನು ಪೂರ್ವಜನ್ಮದಲ್ಲಿ ಪುತ್ರರು, ಮನೆ, ಆಸ್ತಿ ಮತ್ತು ಹೆಂಡತಿ ಇವರುಗಳಿಗಾಗಿ ಅನೇಕ ದುಷ್ಕೃತ್ಯಗಳನ್ನು ನಡೆಯಿಸಿದ್ದೇನೆ. ದುರ್ಮತಿಯುಳ್ಳ ನಾನು ಅದರಿಂದ ದಹಿಸಲ್ಪಡುತ್ತಿದ್ದೇನೆ.

[illegible]ೇ ಮಯಿ ಧನೇ ತಸ್ಮಿನ್ನನ್ಯಾಯೋಽಪಾರ್ಜಿತೇ ಸದಾ ।
[illegible]ವಂತೋಽಭಿವರ್ತಂತೇ ದಹ್ಯಾಮ್ಯೇಕೋಽತ್ರ ದುರ್ಮತಿಃ ॥ ೨೫ ॥

ನ ಮಯಾ ಪೂಜಿತಾ ಗೇಹಾನ್ನಿರ್ಗತಾ ದ್ವಿಜಸತ್ತಮಾಃ ।
ಸ್ವವರ್ಗಮಿಹ ಕಾಮೇನ ತೇನ ದಹ್ಯಾಮ್ಯಹಂಮತಿಃ ॥ ೨೬ ॥

ಯನ್ಮೇ ನ ಪೂಜಿತಾ ದೇವಾಃ ಕುಟುಂಬಂ ಪೋಷಿತಂ ಪರಂ ।
ಏಕಾಕೀ ತತ್ರ ದಹ್ಯಾಮಿ ಯೇ ಸುತಾ ಸ್ತೇಽನ್ಯತೋ ಗತಾಃ ॥ ೨೭ ॥

ನಿತ್ಯಂ ನೈಮಿತ್ತಿಕಂ ಕರ್ಮ ಪೂರ್ವೇಷಾಂ ಚೈವ ನೋ ಕೃತಂ ।
ಏಕಾಕೀ ತೇನ ದಹ್ಯಾಮಿ ಗತಾಸ್ತೇ ಫಲಭೋಗಿನಃ ॥ ೨೮ ॥

---

೨೫. ಸದಾ ಅನ್ಯಾಯದಿಂದ ಸಂಪಾದಿಸಿ ಅಭಿಮಾನವಿಟ್ಟು ಕಾಪಾಡಿದ ಆ ನನ್ನ ಹಣಕಾಸನ್ನು, ನಾನು ಸತ್ತಮೇಲೆ ನನ್ನ ಪುತ್ರಕಲತ್ರಾದಿಗಳು ಭೋಗಿಸುತ್ತಿರುವರು. ದುರ್ಮತಿಯಾದ ನಾನು ಇಲ್ಲಿ ಒಂಟಿಯಾಗಿ ಕಷ್ಟಪಡುತ್ತಿದ್ದೇನೆ.

೨೬. ನನ್ನ ಪುತ್ರಕಲತ್ರಾದಿ ಕುಟುಂಬವರ್ಗದಲ್ಲಿ “ ಅಹಂ ” ಎಂಬ ಅಧ್ಯಾಸ ಉಳ್ಳವನಾಗಿ ಅವರನ್ನು ಪೋಷಿಸುವ ಕಾಮನೆಯಿಂದ, ಮನೆಗೆ ಬಂದ ಬ್ರಾಹ್ಮಣೋತ್ತಮರನ್ನು ನಾನು ಪೂಜಿಸದೆ ಹೋದಕಾರಣ, ಅವರು ನನ್ನ ಮನೆಯಿಂದ ನಿರಾಶರಾಗಿ ಹೊರಟು ಹೋದರು. ಈ ದುಷ್ಕರ್ಮದಿಂದ ನಾನು ಈಗ ದಗ್ಧನಾಗುತ್ತಿದ್ದೇನೆ.

೨೭. ನಾನು ದೇವತಾರ್ಚನೆಯನ್ನು ಮಾಡದೆ, ಕೇವಲ ಕುಟುಂಬ ಪೋಷಣೆಯನ್ನು ಮಾತ್ರ ಮಾಡಿದ್ದರಿಂದ, ಏಕಾಕಿಯಾಗಿ ಇಲ್ಲಿ ಸಂತಪ್ತನಾಗುತ್ತಿದ್ದೇನೆ. ನನ್ನಿಂದ ಪೋಷಿತರಾದ ನನ್ನ ಪುತ್ರಾದಿಗಳು ಎಲ್ಲೋ ಬೇರೆ ಕಡೆಗೆ ಹೋದರು.

೨೮. ನಾನು ಹಾಗೆಯೇ ನಿತ್ಯ ನೈಮಿತ್ತಿಕ ಕರ್ಮಗಳನ್ನೂ, ಪೂರ್ವಜರಾದ ಪಿತ್ರಾದಿಗಳಿಗೆ ಶ್ರಾದ್ಧಾದಿಕರ್ಮಗಳನ್ನು ಆಚರಿಸಲಿಲ್ಲ. ಅದರಿಂದ ಏಕಾಕಿಯಾಗಿ ಇಲ್ಲಿ ತಪ್ತನಾಗುತ್ತಿರುವೆನು. ನಾನು ಸಂಪಾದಿಸಿದ ಧನ ಅದರ ಭೋಕ್ತೃಗಳು ಎಲ್ಲಾ ಎಲ್ಲಿಗೋ ಹೋದರು.

**ದಾರಾಃ ಪುತ್ರಾಶ್ಚ ಭೃತ್ಯಾಶ್ಚ ಪಾಪಬುದ್ಧ್ಯಾ ಮಯಾ ಭೃತಾಃ ।**
**ಏಕಾಕೀ ತೇನ ದಹ್ಯಾಮಿ ಗತಾಸ್ತೇ ಫಲಭೋಗಿನಃ ॥ ೨೯ ॥**

**ದಾರಾಃ ಪುತ್ರಾಶ್ಚ ಭೃತ್ಯಾರ್ಥೇ ಮಯಾಽನ್ಯಾಯಮಾರ್ಗಸಂಚಯಃ ।**
**ಕೃತಸ್ತೇನಾತ್ರ ದಹ್ಯಾಮಿ ಯೇ ಭುಕ್ತಾಸ್ತೇಽನ್ಯತೋ ಗತಾಃ ॥ ೩೦ ॥**

**ಕ್ಷತಪಾಪಂ ಮಯಾ ಭುಕ್ತಮನ್ಯೈಸ್ತತ್ಕರ್ಮ ಸಂಚಿತಂ ।**
**ದಹ್ಯಾಮ್ಯೇಕೋಽಹಮತ್ಯಂತಂ ಗತಾಸ್ತೇ ಫಲಭೋಗಿನಃ ॥ ೩೧ ॥**

**ಯನ್ಮಮತ್ವಾಭಿಭೂತೇನ ಮಯಾ ಪಾಪಮುಪಾರ್ಜಿತಂ ।**
**ನ ತದನ್ಯಸ್ಯ ಕಸ್ಯಾಪಿ ಕೇವಲಂ ಮಮ ದುಷ್ಕೃತಂ ॥ ೩೨ ॥**

---

೨೯. ಹಿಂದೆ ನಾನು ಪಾಪಬುದ್ಧಿಯಿಂದ ಹೆಂಡತಿಯರು ಪುತ್ರರು ಭೃತ್ಯರು ಇವರುಗಳನ್ನೇ ಪೋಷಿಸುತ್ತಿದ್ದೆ. ಆದ್ದರಿಂದ ನಾನು ಏಕಾಕಿಯಾಗಿ ಇಲ್ಲಿ ಈಗ ದಗ್ಧನಾಗುತ್ತಿದೇನೆ. ಫಲಭೋಕ್ತೃಗಳಾದ ಪತ್ನೀಪುತ್ರಾದಿಗಳು ಈಗ ಕೈಬಿಟ್ಟು ಹೊರಟು ಹೋದರು.

೩೦. ಹೆಂಡತಿ ಮಕ್ಕಳು ಪರಿಚಾರಕರು ಇವರುಗಳಿಗಾಗಿ ನಾನು ಅನ್ಯಾಯಮಾರ್ಗದಿಂದ ಧನಸಂಪಾದನೆಯನ್ನು ಮಾಡುತ್ತಿದ್ದೆನು. ಆ ಕರ್ಮದಿಂದ ಇಲ್ಲಿ ದಗ್ಧನಾಗುತ್ತಿದ್ದೇನೆ. ನನ್ನಿಂದ ಸುಖವನ್ನು ಅನುಭವಿಸಿದ ಹೆಂಡತಿ ಮೊದಲಾದವರೆಲ್ಲ ಎಲ್ಲೋ ಬೇರೆ ಕಡೆಗೆ ಹೊರಟು ಹೋದರು.

೩೧. ಹಿಂಸಾತ್ಮಕವಾದ ಕರ್ಮಗಳಿಂದ ಪ್ರಾಪ್ತವಾದ ಪಾಪವನ್ನು ಮಾತ್ರ ನಾನು ಅನುಭವಿಸುತ್ತಿದ್ದೇನೆ. ಆ ಕರ್ಮದಿಂದ ಸಂಚಿತವಾದ ಧನ ಮೊದಲಾದುವುಗಳನ್ನು ಅನ್ಯರು ಸಮೃದ್ಧಿಯಾಗಿ ಉಪಭೋಗಿಸಿದರು. ಈಗ ಇಲ್ಲಿ ಒಂಟಿಯಾಗಿ ನಾನು ದಾರುಣವಾಗಿ ದಗ್ಧನಾಗುತ್ತಿದ್ದೇನೆ. ಫಲಭೋಕ್ತೃಗಳಾದ ಆದಾರಾ ಪುತ್ರಾದಿಗಳೆಲ್ಲಾ ಎಲ್ಲೋ ಹೊರಟು ಹೋದರು.

೩೨. ಪುತ್ರಾದಿಗಳಲ್ಲಿ ಮಮತಾಧ್ಯಾಸದಿಂದ ಅವರ ಸುಖಕ್ಕಾಗಿ ನಾನು ಅನೇಕ ಪಾಪಕರ್ಮಗಳನ್ನು ಎಸಗಿದೆನು. ನಾನು ಮಾಡಿದ ಆ ಪಾಪಫಲವು ಭೋಕ್ತೃಗಳಾದ ಅನ್ಯರಿಗಾರಿಗೂ ತಟ್ಟಲಿಲ್ಲ. ಆ ದುಷ್ಕರ್ಮಫಲವು ಕೇವಲ ನನಗೆ ಮಾತ್ರ ತಟ್ಟುತ್ತಿದೆ.

ಅಂತರ್ದುಃಖೇನ ದಗ್ಧೋಽಹಂ ಬಹಿರ್ದಹ್ಯಾಮಿ ಭಾವಯನ್ ।
ತಾವದ್ದುಃಖಂ ನವಾಭಂ ತು ಪಾಪಮೇಕಂ ದ್ವಿಧಾ ಸ್ಥಿತಂ　　॥ ೩೩ ॥

ಕುರು ತಸ್ಮಾತ್ಸಮುದ್ಧಾರಂ ಪಶ್ಯಸ್ಯಮೃತಸಾಗರಂ ।
ತವ ಯೇನಾಹಮಾಹ್ಲಾದಂ ಪ್ರಾಪ್ನುಯಾಂ ಮುನಿಸತ್ತಮ　　॥ ೩೪ ॥

॥ ವಿಪೀತ ಉವಾಚ ॥

ಅಲ್ಪಕಾಲಿಕ ಉದ್ಧಾರೇ ತವ ಪಶ್ಯಾಮ್ಯಸಂಶಯಂ ।
ಪ್ರಕ್ಷೀಣಂ ಪಾಪಮೇತಾವಚ್ಛ್ಸುಕೃತಂ ಚಾಸ್ತಿ ತೇ ಪರಂ　　॥ ೩೫ ॥

ಪ್ರತೀತೇ ದಶಮೇ ಜನ್ಮನ್ಯಚ್ಯುತಾರಾಧನೇಚ್ಛಯಾ ।
ಸುಕರ್ಮಜಯದಾ ಭದ್ರದ್ವಾದಶೀಂ ಸಮುಪೋಷಿತಃ ।
ನ ಚ ತಸ್ಯಾಃ ಪ್ರಸಾದೇನ ಪಾಪಮತ್ಯಂತದುರ್ಜಯಂ　　॥ ೩೬ ॥

---

೩೩. ನಾನು ಹಾಗೆ ಪೂರ್ವದಲ್ಲಿ ಮಾಡಿದ ಕರ್ಮಗಳನ್ನು ಮನದಲ್ಲಿ ಭಾವಿಸುತ್ತಾ ಒಳಗೆ ದುಃಖದಿಂದ ದಗ್ಧನಾಗುತ್ತಿದ್ದೇನೆ. ಹೊರಗೂ ಈ ರೀತಿ ಸುಡಲ್ಪಡುತ್ತಿದ್ದೇನೆ. ನಾನು ಮಾಡಿದ ಆ ಒಂದು ಪಾಪಸಮುದಾಯವು ಹೊಸದಾಗಿ ಎರಡು ತೆರನಾದ ದುಃಖರೂಪವಾಗಿ ಪರಿಣಮಿಸಿ, ಅನುಭವಕ್ಕೆ ಬರುತ್ತಿದೆ.

೩೪. ಅಯ್ಯಾ ಋಷಿವರ್ಯನೇ! ಆದುದರಿಂದ ನನ್ನನ್ನು ಉದ್ಧಾರಮಾಡು. ನೀನು ಅಮೃತಸಾಗರವನ್ನು ಕಾಣುತ್ತಿರುವೆ. ನಿನ್ನ ಅನುಗ್ರಹದಿಂದಲಾದರೂ ನಾನು ಸಂತೋಷವನ್ನು ಹೊಂದಿಯೇನು ಎಂದನು.

೩೫. ವಿಪೀತನು ಹೇಳುತ್ತಾನೆ—ಅಯ್ಯಾ ಸೀರಭದ್ರ! ಸ್ವಲ್ಪಕಾಲದಲ್ಲೇ ನಿಸ್ಸಂದೇಹವಾಗಿ ನಿನ್ನ ಉದ್ಧಾರವಾಗುವುದು ನೀನು ಮಾಡಿದ ಅಷ್ಟು ಪಾಪವೂ ಕ್ಷೀಣವಾಯಿತು. ಮತ್ತು ನೀನು ಮಾಡಿದ ಬೇರೇ ಸುಕೃತವೂ ಇದೆ.

೩೬. ಅಯ್ಯಾ ಸೀರಭದ್ರ! ಹಿಂದೆ ಕಳೆದುಹೋದ ನಿನ್ನ ಹತ್ತನೆಯ ಜನ್ಮದಲ್ಲಿ ನೀನು ಶ್ರೀ ಹರಿಯನ್ನು ಆರಾಧಿಸುವ ಅಭಿಲಾಷೆಯಿಂದ, ಪುಣ್ಯ ಮತ್ತು ಜಯ ಇವುಗಳನ್ನು ಕೊಡುವ ದ್ವಾದಶಿಯ ಉಪವಾಸವನ್ನಾಚರಿಸಿದ್ದೀಯೆ. ಅದರ ಮಹಿಮೆಯಿಂದ ಈ ಪಾಪವನ್ನು ಜಯಿಸುವುದು ನಿನಗೆ ಅಸಾಧ್ಯವಲ್ಲ.

ಅಲ್ಪೈರಹೋಭಿಃ ಸಂಕ್ಷೀಣಮಾಮಪಾತ್ರೇ ಯಥಾ ಜಲಂ ।
ಗತಂ ಪಾಪಮಯಂ ಹ್ಯಸ್ಯಾಃ ಪ್ರಭಾವೋಽತ್ಯಂತದುರ್ಲಭಃ ॥ ೩೭ ॥

ನಾಶಂ ಪಾಪಸ್ಯ ಕುರುತೇ ಜಯಂ ಸುಕೃತಕರ್ಮಣಃ ।
ಸಕೃತ್ಕರ್ಮಪ್ರದಾ ಹ್ಯೇಷಾ ತತೋ ವೈ ದ್ವಾದಶೀ ಸ್ಮೃತಾ ॥ ೩೮ ॥

ಯಥೈತದ್ವ್ರತಾರ್ತೇನ ಭವತಾ ಪರಿದೇವಿತಂ ।
ತಮುವಾಚಾತ್ರ ಸಂದೇಹೋ ಮಮ ತಾಪಾಯ ದೇವ ಕಿಂ ॥ ೩೯ ॥

ಪಾಪಮತ್ರ ಕೃತಂ ಪ್ರೇತ್ಯ ಭದ್ರ ತಾಪಾಯ ಜಾಯತೆ ।
ಆಹ್ಲಾದಾಯ ತಥಾ ಪುಣ್ಯಮಿಹ ಪುಣ್ಯಕೃತಾಂ ನೃಣಾಂ ॥ ೪೦ ॥

---

೩೭. ಓ ಸೀರಭದ್ರ ! ಹಸಿಯಾದ ಮಣ್ಣಿನ ಪಾತ್ರೆಯಲ್ಲಿ ತುಂಬಿದ ನೀರು ಕ್ಷಯವಾಗುವಂತೆ ನೀನು ಮಾಡಿದ ಪಾಪವೂ ಸ್ವಲ್ಪದಿನಗಳಲ್ಲೇ ಕ್ಷಯವಾಗುವುದು. ಈ ದ್ವಾದಶಿಯ ಪ್ರಭಾವವು ಇಂತಹುದು. ಇಂತಹ ಪುಣ್ಯಫಲವು ಇನ್ನೊಂದರಿಂದ ಸಿಗಲಾರದು.

೩೮. ಈ ದ್ವಾದಶೀವ್ರತವನ್ನು ಒಂದುಸಲ ಅನುಷ್ಠಾನಮಾಡಿದರೂ, ಇದು ಪಾಪಗಳನ್ನು ನಾಶಮಾಡಿ ಸುಕೃತವನ್ನು ಕೊಡುವುದು. ಆದುದರಿಂದ ಈ ದ್ವಾದಶೀವ್ರತವು ಸುಕೃತದ್ವಾದಶೀ ವ್ರತವೆಂದು ಹೇಳಲ್ಪಟ್ಟಿದೆ.

೩೯. "ಅಯ್ಯಾ ಸೀರಭದ್ರ ! ಮಹಾಕ್ಲೇಶವನ್ನು ಹೊಂದಿದ ನೀನು ಈ ರೀತಿ ನನ್ನಲ್ಲಿ ದುಃಖದಿಂದ ವಿಜ್ಞಾಪಿಸಿಕೊಂಡಿರುವೆ. ನಾನು ಹೇಳಿದ ಸುಕೃತ ದ್ವಾದಶೀ ವ್ರತಪುಣ್ಯದಿಂದ ನಿನಗೆ ಇನ್ನು ಅಲ್ಪ ಕಾಲದಲ್ಲೇ ಈ ದುಃಖವು ನಾಶವಾಗುವುದು'' ಎಂದನು. ಆಗ ಆ ಸೀರಭದ್ರನು ವಿಪೀತನನ್ನು ಕುರಿತು "ಸ್ವಾಮೀ! ನನಗೆ ಈ ಸುಕೃತವಿಷಯದಲ್ಲಿ ಒಂದು ಸಂದೇಹವಿದೆ. ಅಂಥ ಸುಕೃತವು ನನಗಿದ್ದಿದ್ದರೆ ಈ ಸಂತಾಪಪ್ರಾಪ್ತಿಗೆ ಕಾರಣವೇನು ? ಎಂದು ಪ್ರಶ್ನೆ ಮಾಡಿದನು.

೪೦. ಆಗ ಆ ವಿಪೀತಮಹರ್ಷಿಯು "ಅಯ್ಯಾ ಸೀರಭದ್ರ ! ಪ್ರಾಣಿಯು ಈ ಲೋಕದಲ್ಲಿ ಮಾಡಿದ ಪಾಪವು ಅದು ಮರಣ ಹೊಂದಿದ ಮೇಲೆ ಜನ್ಮಾಂತರದಲ್ಲಿ ಸಂತಾಪಕ್ಕೆ ಕಾರಣವಾಗುವುದು. ಹಾಗೆಯೇ ಈ ಲೋಕದಲ್ಲಿ ಪುಣ್ಯಸಂಪಾದಿಸಿದ ಪುರುಷರಿಗೆ ಆ ಪುಣ್ಯವು ಜನ್ಮಾಂತರದಲ್ಲಿ ಸುಖದಾಯಕವಾಗಿ ಆಹ್ಲಾದಕ್ಕೆ ಕಾರಣವಾಗುವುದು '' ಎಂದನು.

ಸೀರಭದ್ರಂ ಸಮಾಶ್ವಾಸ್ಯ ಯಯಾವಿತ್ಥಂ ಮಹಾಮುನಿಃ |
ಸೋಪ್ಯಲ್ಪೇನೈವ ಕಾಲೇನ ತತೋ ಮೋಕ್ಷಮವಾಪ್ತವಾನ್ || ೪೧ ||

ಉಪವಾಸಪ್ರಭಾವಶ್ಚ ಕಥಿತಸ್ತೇ ನರೋತ್ತಮ |
ಯೇನಾಲ್ಪೈರೇವ ದಿವಸೈರ್ಭೂರಿ ಪಾಪಂ ಕ್ಷಯಂ ಗತಂ || ೪೨ ||

ತಸ್ಮಾನ್ನರೇಣ ಪುಣ್ಯಾಯ ಯತಿತವ್ಯಂ ನ ಪಾತಕಂ |
ಉಪವಾಸಾಶ್ಚ ಕರ್ತವ್ಯಾಃ ಸದೈವಾತ್ಮಹಿತೈಷಿಣಾ || ೪೩ ||

|| ಯುಧಿಷ್ಠಿರ ಉವಾಚ ||
ಅಥೈತತ್ಕಷ್ಟಪಾಪಾನಾಂ ವಿಪಾಕೋ ನರಕಸ್ಥಿತೈಃ |
ಪುರುಷೈರ್ಭುಜ್ಯತೇ ಶಶ್ವತ್ತಂ ಮೋಕ್ಷಂ ವದ ಸತ್ತಮ || ೪೪ ||

---

೪೧. ಆ ವಿಪೀತಮಹರ್ಷಿಯು ಈರೀತಿ ಸೀರಭದ್ರನೆಂಬ ವೈಶ್ಯನಿಗೆ ಸಮಾಧಾನ ಹೇಳಿ, ಅಲ್ಲಿಂದ ಹೊರಟು ಹೋದನು. ಅನಂತರ ಆ ಸೀರಭದ್ರನೂ ಸ್ವಲ್ಪಕಾಲದಲ್ಲೇ ಮೋಕ್ಷವನ್ನು ಪಡೆದನು.

೪೨. ಅಯ್ಯಾ ರಾಜನೇ ! ಉಪವಾಸದ ಮಹಿಮೆಯನ್ನು ನಾನು ನಿನಗೆ ಹೇಳಿದೆನಷ್ಟೆ. ಈ ದ್ವಾದಶೀ ಉಪವಾಸದ ಪ್ರಭಾವದಿಂದ ಅವನ ಪಾಪಗಳೆಲ್ಲಾ ಸ್ವಲ್ಪದಿನಗಳಲ್ಲೇ ನಾಶವಾದುವು.

೪೩. ಆದುದರಿಂದ ಪ್ರತಿಯೊಬ್ಬನೂ ಆದಷ್ಟು ಪುಣ್ಯಸಂಪಾದಿಸುವುದಕ್ಕೆ ಪ್ರಯತ್ನಿಸಬೇಕು. ಪಾಪಸಾಧನಗಳಾದ ನಿಷಿದ್ಧಕರ್ಮಗಳನ್ನು ಸಂಪೂರ್ಣವಾಗಿ ತ್ಯಜಿಸಬೇಕು. ತನಗೆ ಒಳ್ಳೆಯದಾಗಬೇಕೆಂಬ ಆಶೆಯುಳ್ಳ ಪುರುಷನು ಯಾವಾಗಲೂ ಈ ವ್ರತೋಪವಾಸಗಳನ್ನು ಆಚರಿಸಬೇಕು.

೪೪. ಯುಧಿಷ್ಠಿರನು ಹೇಳುತ್ತಾನೆ—“ ಓ ಕೃಷ್ಣಪರಮಾತ್ಮ ! ಬಹು ಕಷ್ಟಕೊಡುವ ಪಾಪಗಳು ಪಕ್ವಗಳಾಗಿ ಪುರುಷರಿಗೆ ನರಕವಾಸ ಮೂಲಕವಾಗಿ ಯಾವಾಗಲೂ ದುಃಖೋಪಭೋಗಗಳನ್ನು ಒದಗಿಸುತ್ತವೆ. ಆದುದರಿಂದ ಆ ನರಕಯಾತನೆಗಳನ್ನು ತಪ್ಪಿಸಿಕೊಳ್ಳುವುದಕ್ಕೆ ಮಾಡಬೇಕಾದ ಕರ್ಮವನ್ನು ಹೇಳು ” ಎಂದನು.

॥ ಶ್ರೀ ಕೃಷ್ಣ ಉವಾಚ ॥

ಜಯಾಸಮೇತಾಃ ಪುರುಷಾಃ ಸದಾ ಸುಕೃತಕರ್ಮಣಃ ।
ಜಯಾ ಸಾ ದ್ವಾದಶೀ ಶಸ್ತಾ ನೃಣಾಂ ಸುಕೃತಕರ್ಮಣಾಂ ॥ ೪೫ ॥

ಫಾಲ್ಗುನಾಮಲಪಕ್ಷಸ್ಯ ಏಕಾದಶ್ಯಾಮುಪೋಷಿತಃ ।
ದ್ವಾದಶ್ಯಾಂ ತು ನೃಪಶ್ರೇಷ್ಠ ಪೂಜಯೇನ್ಮಧುಸೂದನಂ ॥ ೪೬ ॥

ಏಕಾದಶ್ಯಾಂ ಸಮುತ್ತಿಷ್ಠನ್ವಿಷ್ಣೋರ್ನಾಮಾನುಕೀರ್ತಯನ್ ।
ಪೂಜಾಯಾಂ ವಾಸುದೇವಸ್ಯ ಭುಂಜೀತ ಸುಸಮಾಹಿತಃ ॥ ೪೭ ॥

ಕಾಮಂ ಕ್ರೋಧಂ ಚ ಲೋಭಂ ಚ ಮದಂ ಮೋಹಂ ಚ ವರ್ಜಯೇತ್
ದ್ರೋಹಾದೀನ್ವರ್ಜಯೇದ್ದೋಷಾನ್ಸರ್ವಾನ್ಧನಮದೋದ್ಭವಾನ್ ॥

---

೪೫. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರ ! ಪುರುಷರು ಸುಕೃತಕರ್ಮದಿಂದ ಯಾವಾಗಲೂ ವಿಜಯಿಗಳಾಗುತ್ತಾರೆ. ಸತ್ಕರ್ಮಗಳ ನ್ನಾಚರಿಸುವ ಪುರುಷರಿಗೆ ಆ ಸುಕೃತದ್ವಾದಶಿಯು ವಿಜಯಪ್ರದವಾಗಿ ಅತಿ ಪ್ರಶಸ್ತವಾಗಿದೆ.

೪೬. ಅಯ್ಯಾ ನೃಪಶ್ರೇಷ್ಠನೇ ! ಫಾಲ್ಗುಣ ಶುಕ್ಲೈಕಾದಶಿಯಲ್ಲಿ ಪುರುಷನು ಉಪವಾಸದಿಂದಿದ್ದು, ಮರುದಿನ ದ್ವಾದಶಿಯಲ್ಲಿ ಶ್ರೀ ಹರಿಯನ್ನು ಪೂಜೆ ಮಾಡಬೇಕು.

೪೭. ಏಕಾದಶಿಯ ರಾತ್ರಿಯನ್ನು ಕಳೆದು ಮರುದಿನ ಶ್ರೀ ವಿಷ್ಣುನಾಮ ಸಂಕೀರ್ತನವನ್ನೇ ಮಾಡುತ್ತಾ ಎದ್ದು, ಚಿತ್ತೈಕಾಗ್ರತೆಯಿಂದ ಶ್ರೀ ಹರಿಪೂಜೆ ಯನ್ನು ಮಾಡಿದ ಮೇಲೆ ಭೋಜನಮಾಡಬೇಕು.

೪೮. ಧನಮದದಿಂದ ಉದ್ಭವಿಸುವ ಕಾಮ, ಕ್ರೋಧ, ಲೋಭ, ಮದ, ಮೋಹ, ಮತ್ತು ಪರದ್ರೋಹ ಮುಂತಾದ ಈ ಎಲ್ಲಾ ದೋಷಗಳನ್ನೂ ಪರಿ ತ್ಯಜಿಸಬೇಕು.

ಭಾವಯೇದ್ವಿಷ್ಣುಭಕ್ತಶ್ಚ ಸಂಸಾರೇಽಸಾರತಾಂ ತಥಾ ।
ಏವಂ ಭಾವಿತಚಿತ್ತೇನ ಪ್ರಾಣಿನಾಂ ಹಿತಮಿಚ್ಛತಾ ॥ ೪೯ ॥

ನಮೋ ನಾರಾಯಣಾಯೇತಿ ವಕ್ತವ್ಯಂ ಸ್ವಪತಾ ನಿಶಿ ।
ತಥೈವ ಕುರ್ಯಾದ್ದ್ವಾದಶ್ಯಾಂ ನಾಮ್ನಾ ಕ್ಷುತ್ಪಾರಣಂ ನೃಪ ॥ ೫೦ ॥

ಸೌವರ್ಣತಾಮ್ರಪಾತ್ರಾಣಿ ಮೃನ್ಮಯಾನ್ಯಪಿ ಪಾಂಡವ ।
ಯವಪಾತ್ರಾಣಿ ಪೂರ್ವಂ ತು ದದ್ಯಾನ್ಮಾಸಚತುಷ್ಟಯಂ ॥ ೫೧ ॥

ಆಷಾಢಾದಿದ್ವಿತೀಯಂ ತು ಪಾರಯೇಚ್ಚ ಮಹಾಮತೇ ।
ತತ್ರಾಪಿ ಘೃತಪಾತ್ರಾಣಿ ದದ್ಯಾಚ್ಛ್ರದ್ಧಾಸಮನ್ವಿತಃ ॥ ೫೨ ॥

---

೪೯. ಮತ್ತು ವಿಷ್ಣುಭಕ್ತಿಯುತನಾಗಿ, ಸಂಸಾರವು ಅಸಾರವೆಂಬ ಭಾವನೆಯಿಡಬೇಕು. ಈರೀತಿ ಭಾವನೆಯುಳ್ಳವನೂ, ಸಕಲಪ್ರಾಣಿಗಳಿಗೂ ಹಿತವನ್ನು ಬಯಸುವವನೂ ಆಗಿರಬೇಕು.

೫೦. ಪುರುಷನು ರಾತ್ರಿಯಲ್ಲಿ ಮಲಗುವಾಗ ನಾರಾಯಣಾಯನಮಃ ಎಂದು ಹೇಳಬೇಕು. ಅಯ್ಯಾ ರಾಜನೇ! ಅದೇ ರೀತಿ ದ್ವಾದಶೀದಿನವಲ್ಲೂ ಆ ನಾಮೋಚ್ಚಾರಣೆಮಾಡಿ, ಪೂಜೆಮಾಡಿದ ಮೇಲೆ ಕ್ಷುಧೆಯ ಪರಿಹಾರಕ್ಕಾಗಿ ಪಾರಣೆಮಾಡಬೇಕು.

೫೧. ಅಯ್ಯಾ ಪಾಂಡವನೇ! ಫಾಲ್ಗುಣಾದಿ ನಾಲ್ಕು ತಿಂಗಳುಗಳಲ್ಲಿ ಆಚರಿಸುವ ಪ್ರಥಮಾವರ್ತಪ್ರಯೋಗದಲ್ಲಿ; ಭಂಗಾರ, ತಾಮ್ರ ಅಥವಾ ಮಣ್ಣು ಇವುಗಳಲ್ಲಿ ಯಾವುದರಿಂದಲಾದರೂ ಮಾಡಿದ ಪಾತ್ರೆಗಳಲ್ಲಿ ಯವವನ್ನು ತುಂಬಿ ದಾನಮಾಡಬೇಕು

೫೨. ಅಯ್ಯಾ ಪ್ರಾಜ್ಞನೇ! ಆಷಾಢಮಾಸ ಮೊದಲ್ಗೊಂಡು ಆಚರಿಸುವ ಈ ವ್ರತದ ದ್ವಿತೀಯ ಪ್ರಯೋಗದಲ್ಲಿ ಯಥೋಕ್ತರೀತಿ ಪಾರಣೆಯನ್ನಾಚರಿಸುವುದಲ್ಲದೆ, ಶ್ರದ್ಧಾಯುಕ್ತನಾಗಿ ಘೃತಪೂರ್ಣ ಪಾತ್ರೆಗಳನ್ನು ದಾನಮಾಡಬೇಕು.

ಕಾರ್ತಿಕಾದಿಷು ಮಾಸೇಷು ಮಾಘಾಂತೇಷು ತಥಾ ತಿಲಾನ್ ।
ವಿಪ್ರಾಯ ದದ್ಯಾತ್ಪಾತ್ರಂ ತು ಪ್ರತಿಮಾಸಮುಪೋಷಿತಃ ॥ ೫೩ ॥

ನಾಮತ್ರಯಮಶೇಷೇಣ ಮಾಸಿಮಾಸಿ ದಿನದ್ವಯಂ ।
ತಥೈವೋಚ್ಚಾರಯನ್ದದ್ಯಾನ್ಮಾಸಿಮಾಸಿ ಯವಾದಿಕಂ ।
ಪ್ರಣಮ್ಯ ಚ ಹೃಷೀಕೇಶಂ ಕೃತಪೂಜಃ ಪ್ರಸಾದಯೇತ್ ॥ ೫೪ ॥

ವಿಷ್ಣೋ ನಮಸ್ತೇ ಜಗತೀಪ್ರಸೂತ್ರೇ ।
ಶ್ರೀ ವಾಸುದೇವಾಯ ನಮೋನಮಸ್ತೇ ।
ನಾರಾಯಣಾಖ್ಯಃ ಪ್ರಣತೈರ್ವಿಚಿಂತ್ಯಃ ।
ಕರೋತು ಮಾಂ ಶಾಶ್ವತಪುಣ್ಯರಾಶಿಂ ॥ ೫೫ ॥

ಪ್ರಸೀದ ಪುಣ್ಯಂ ಜಯಮೇತು ವಿಷ್ಣೋ ।
ಶ್ರೀವಾಸುದೇವದ್ಧಿಮುಪೈತು ಪುಣ್ಯಂ ।

---

೫೩. ಕಾರ್ತಿಕಾದಿಯಾಗಿ ಮಾಘಾಂತಪರ್ಯಂತ ನಾಲ್ಕು ಮಾಸಗಳಲ್ಲಿ ಮಾಡುವ ವ್ರತಪಾರಣೆಗಳಲ್ಲಿ, ತಿಲಪೂರಿತವಾದ ಪಾತ್ರೆಗಳನ್ನು ಬ್ರಾಹ್ಮಣರಿಗೆ ದಾನಮಾಡಬೇಕು. ಪ್ರತಿಮಾಸಗಳಲ್ಲೂ ಹಿಂದೆ ಹೇಳಿದಂತೆ ಉಪವಾಸವನ್ನು ಆಚರಿಸಬೇಕು.

೫೪. ಮತ್ತು ಪ್ರತಿತಿಂಗಳಲ್ಲೂ ಶ್ರೀ ಹರಿಯ ನಾಮತ್ರಯಗಳನ್ನು ಉಚ್ಚರಿಸಿ, ಏಕಾದಶಿ ಮತ್ತು ದ್ವಾದಶೀ ಈ ಎರಡು ದಿನಗಳಲ್ಲಿ ಈ ವ್ರತವನ್ನು ಆಚರಿಸಬೇಕು. ಹಿಂದೆ ಹೇಳಿದಂತೆ ಪ್ರತಿತಿಂಗಳಲ್ಲೂ ಯವಾದಿಗಳನ್ನು ದಾನ ಮಾಡಬೇಕು. ಶ್ರೀ ಹರಿಗೆ ನಮಸ್ಕಾರಮಾಡಿ ಪೂಜೆಮಾಡಿ, ಅವನನ್ನು ಪ್ರಸನ್ನನನ್ನಾಗಿ ಮಾಡಬೇಕು.

೫೫. ಓ ವಿಷ್ಣುವೇ ! ಪ್ರಪಂಚಕಾರಣನಾದ ನಿನಗೆ ನಮಸ್ಕಾರ. ಮತ್ತು ವಾಸುದೇವನಿಗೆ ಅನಂತ ನಮಸ್ಕಾರಗಳು. ನಾರಾಯಣನೆಂಬ ನಾಮಧೇಯ ಧರಿಸಿದವನೂ, ನಮ್ರರಾದ ಭಕ್ತರಿಂದ ಧ್ಯಾನಿಸಲ್ಪಡುವವನೂ ಆದ, ಶ್ರೀ ಹರಿಯು ನನಗೆ ಶಾಶ್ವತವಾದ ಪುಣ್ಯರಾಶಿಯನ್ನು ಕೊಡಲಿ ಎಂದು ಇದರ ಅರ್ಥ.

೫೬. ಎಲೈ ವಿಷ್ಣುವೇ ! ನನಲ್ಲಿ ಪ್ರಸನ್ನನಾಗು. ನನಗೆ ಜಯಲಾಭವಾಗಲಿ. ಓ ವಾಸುದೇವನೇ ! ನನ್ನ ಪುಣ್ಯವು ವೃದ್ಧಿಹೊಂದಲಿ. ಒಂದುಪಕ್ಷ

ಪ್ರಯಾತು ವಾಶೇಷಮಘೋ ವಿನಾಶಂ ।
ಮಾತೇಽಂಘ್ರಿಪದ್ಮಾದಿತರತ್ರ ಮೇ ಮತಿಃ ॥ ೫೬ ॥

ವಿಷ್ಣೋ ಪುಣ್ಯೋದ್ಭವೋ ಮೇಽಸ್ತು ವಾಸುದೇವಾಸ್ತು ಮೇ ಶುಭಂ ।
ನಾರಾಯಣಾಸ್ತು ಮೇ ಧರ್ಮೋ ಜಹಿ ಪಾಪಮಶೇಷತಃ ॥ ೫೭ ॥

ಅನೇಕಜನ್ಮಜನಿತಂ ಬಾಲ್ಯಯೌವನವಾರ್ಧಕೇ ।
ಪುಣ್ಯಂ ವಿವೃದ್ಧಿಮಾಯಾತು ಯಾತು ಪಾಪಂ ಚ ಸಂಕ್ಷಯಂ ॥ ೫೮ ॥

ಆಕಾಶಾದಿಷು ಶಬ್ದಾದೌ ಶ್ರೋತ್ರಾದೌ ಮಹದಾದಿಷು ।
ಪ್ರಕೃತೌ ಪುರುಷೇ ಚೈವ ಬ್ರಹ್ಮಣ್ಯಪಿ ಚ ಸ ಪ್ರಭುಃ ॥ ೫೯ ॥

ಯಥೈಕ ಏವ ಧರ್ಮಾತ್ಮಾ ವಾಸುದೇವೋ ವ್ಯವಸ್ಥಿತಃ ।
ತೇನ ಸತ್ಯೇನ ಪಾಪಂ ಮೇ ನರಕಾರ್ತಿಪ್ರದಂ ಕ್ಷಯಂ ॥ ೬೦ ॥

---

ನನ್ನ ಸರ್ವಸ್ವವು ನಾಶವಾದರೂ, ನನ್ನ ಬುದ್ಧಿಯು ನಿನ್ನ ಪದಕಮಲವನ್ನು ಬಿಟ್ಟು ಬೇರೇ ಕಡೆಗೆ ಹೋಗದಿರಲಿ.

೫೭. ಎಲೈ ಶ್ರೀ ವಿಷ್ಣುವೇ! ನನಗೆ ಪುಣ್ಯವು ಬರಲಿ. ಓ ವಾಸುದೇವನೇ ! ನನಗೆ ಶುಭವಾಗಲಿ. ಓ ನಾರಾಯಣನೇ ನನ್ನ ಧರ್ಮವು ಸಾಂಗವಾಗಿ ನೆರವೇರಲಿ. ಸಂಪೂರ್ಣವಾಗಿ ನನ್ನ ಪಾಪವನ್ನು ನಿವೃತ್ತಿಮಾಡು.

೫೮. ಓ ಹರಿಯೇ ! ನನ್ನ ಹಿಂದಿನ ಅನೇಕ ಜನ್ಮಗಳಲ್ಲಿ ಬಾಲ್ಯ ಯೌವನ ವಾರ್ಧಕಗಳೆಂಬ ಅವಸ್ಥಾತ್ರಯಗಳಲ್ಲೂ ಸಂಪಾದಿಸಿದ ಪಾಪವು ನಾಶವಾಗಿ ಪುಣ್ಯವು ವೃದ್ಧಿಯಾಗಲಿ.

೫೯. ಆಕಾಶಾದಿ ಸ್ಥೂಲಭೂತಗಳಲ್ಲೂ ಶಬ್ದಾದಿ ಪಂಚತನ್ಮಾತ್ರಗಳಲ್ಲೂ, ಶ್ರೋತ್ರಾದೀಂದ್ರಿಯಗಳಲ್ಲೂ, ಮಹತ್ತತ್ವಾದಿಗಳಲ್ಲೂ, ಪ್ರಕೃತಿ, ಪುರುಷ, ಬ್ರಹ್ಮ ಇವುಗಳಲ್ಲೆಲ್ಲಾ ಇದ್ದೀಯೆ.

೬೦. ಧರ್ಮಾತ್ಮನಾಗಿಯೂ, ಸ್ವಾಮಿಯಾಗಿಯೂ ಇರುವ ವಾಸುದೇವನೊಬ್ಬನೇ ಅಂತರ್ಯಾಮಿಸ್ವರೂಪದಿಂದ ವ್ಯವಸ್ಥಿತನಾಗಿ ಇರುವನು. ಆ ಸತ್ಯಸ್ವರೂಪನಾದ ಶ್ರೀ ಹರಿಯು ನರಕದುಃಖ ಕಾರಣವಾದ ನನ್ನ ಪಾಪವನ್ನು ನಾಶಮಾಡಲಿ.

ಪ್ರಯಾತು ಸುಕೃತಸ್ಯಾಸ್ತು ಮಮಾನುದಿವಸಂಜಯಃ ।
ಪಾಪಸ್ಯ ಹಾನಿಃ ಪುಣ್ಯಸ್ಯ ವೃದ್ಧಿರ್ನಿಸ್ತ್ವತ್ತಮೋತ್ತಮಾ ॥ ೬೧ ॥

ಏವಮುಚ್ಚಾರ್ಯ ವಿಪ್ರಾಯ ದದ್ಯಾದ್ಯತ್ಕಥಿತಂ ತವ ।
ಭುಂಜೀತ ಕೃತಕೃತ್ಯಸ್ತು ಪಾರಣೇಪಾರಣೇ ಗತೇ ॥ ೬೨ ॥

ಪಾರಣಾಂತೇ ತು ದೇವೇಶಪ್ರೀಣನಂ ಶಕ್ತಿತೋ ನೃಪ ।
ಕುರ್ವೀತಾಖಿಲಪಾಖಂಡೈರಾಲಾಪಂ ಚ ವಿವರ್ಜಯೇತ್ ॥ ೬೩ ॥

ಏವಂ ಸಂವತ್ಸರಸ್ಯಾಂತೇ ಕಾಂಚನೀಂ ಪ್ರತಿಮಾಂ ಹರೇಃ ।
ಪೂಜಯಿತ್ವಾ ವಸ್ತ್ರಪುಷ್ಪೈರ್ಘೃತಪಾತ್ರೇಣ ಸಂಯುತಾಂ ॥ ೬೪ ॥

---

೬೧. ಮತ್ತು ನನಗೆ ಪುಣ್ಯವನ್ನು ಕೊಡಲಿ. ಪ್ರತಿದಿನವೂ ನನಗೆ ಜಯ ಲಾಭವಾಗಲಿ. ನನ್ನ ಪಾಪವು ನಾಶವಾಗಿ ನನ್ನ ಪುಣ್ಯವು ಉತ್ತಮರೀತಿ ವೃದ್ಧಿಯನ್ನು ಹೊಂದಲಿ.

೬೨. ಅಯ್ಯಾ ರಾಜನೇ ! ಈರೀತಿ ಪಠಣಮಾಡಿ, ನಿನಗೆ ನಾನು ಹಿಂದೆ ಹೇಳಿದಂತೆ ಯವಾದಿಗಳನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಪ್ರತಿಮಾಸದಲ್ಲೂ ವ್ರತಾಂಗವಾದ ಪಾರಣೆಯಲ್ಲಿ ಪೂಜೆ, ದಾನ, ಇತ್ಯಾದಿಗಳನ್ನು ಮಾಡಿದ ಮೇಲೆ ಕೃತಕೃತ್ಯನಾಗಿ ಭೋಜನಮಾಡಬೇಕು.

೬೩. ಅಯ್ಯಾ ರಾಜನೇ ! ಈರೀತಿ ಪಾರಣೆಮಾಡಿದನಂತರ ಶಕ್ತ್ಯನುಸಾರ ವಾಗಿ ದೇವಾಧೀಶನಾದ ಶ್ರೀ ಹರಿಪ್ರೀಣನವನ್ನು ಮಾಡಿಸಬೇಕು. ಮತ್ತು ವೇದವಿದ್ವೇಷಿಗಳಾದ ಪಾಷಂಡರ ಜತೆ ಸಂಭಾಷಣೆಯನ್ನು ಮಾಡಬಾರದು.

೬೪. ಈರೀತಿ ಈ ವ್ರತವನ್ನು ಆಚರಿಸಿ ವರ್ಷಾಂತದಲ್ಲಿ ಭಂಗಾರದಿಂದ ಶ್ರೀ ಹರಿಪ್ರತಿಮೆಯನ್ನು ಮಾಡಿಸಿ, ಅದನ್ನು ವಸ್ತ್ರ ಪುಷ್ಪಾದಿಗಳಿಂದ ಪೂಜೆಮಾಡಿ, ಘೃತಪಾತ್ರಸಹಿತವಾಗಿ ಆ ಪ್ರತಿಮೆಯನ್ನು ಬ್ರಾಹ್ಮಣನಿಗೆ ದಾನಮಾಡ ಬೇಕು.

ಗಾಂ ಸವತ್ಸಾಂ ಚ ವಿಪ್ರಾಯ ದದ್ಯಾಚ್ಛ್ರದ್ಧಾಸಮನ್ವಿತಃ ।
ವಿಲಂಬಿತಂ ಚ ಯತ್ಪೂರ್ವಂ ದೇವಾನನ್ಯಾನ್ಯಜೇದ್ಯದಿ ।
ತಸ್ಮಿನ್ನಹನಿ ದಾತವ್ಯಂ ಭೋಜನಂ ಚಾನಿವಾರಿತಂ　　|| ೬೫ ||

ಇತ್ಯೇಷಾ ಕಥಿತಾ ಪುಣ್ಯಾ ಸುಕೃತಸ್ಯ ಜಯಾವಹಾ ।
ದ್ವಾದಶೀ ನರಕಂ ಪಾರ್ಥ ಯಾಮುಪೋಷ್ಯ ನ ಪಶ್ಯತಿ　　|| ೬೬ ||

ನಾಗ್ನಯೋ ನ ಚ ಶಸ್ತ್ರಾಣಿ ನ ಚ ಲೋಹಮುಖಾಃ ಖಗಾಃ ।
ನಾರಕಾಸ್ತಂ ಪ್ರಬಾಧಂತೇ ಮತಿರ್ಯಸ್ಯ ಜನಾರ್ದನೇ　　|| ೬೭ ||

ನಾಮೋಚ್ಚಾರಣಮಾತ್ರೇಣ ವಿಷ್ಣೋಃ ಕ್ಷೀಣಾಘಸಂಚಯಃ ।
ಭವತ್ಯಘವಿನಾಶಶ್ಚ ನರಕೇ ಪತನಂ ಕುತಃ　　|| ೬೮ ||

---

೬೫. ಮತ್ತು ಕರುಸಹಿತವಾದ ಗೋವನ್ನು ಶ್ರದ್ಧೆಯಿಂದ ಆ ಬ್ರಾಹ್ಮಣನಿಗೆ ದಾನಮಾಡಬೇಕು. ಅನ್ಯದೇವತಾರಾಧನವನ್ನು ಮಾಡುವ ಆತುರದಲ್ಲಿ, ಈ ವ್ರತಾಂಗವಾಗಿ ಫಾಲ್ಗುಣಾದಿಮಾಸಗಳಲ್ಲಿ ಕೊಡಬೇಕಾಗಿದ್ದ ದಾನಗಳನ್ನು ಕೊಡುವುದು ವಿಳಂಬವಾಗಿದ್ದಿದ್ದರೆ, ವರ್ಷಾಂತದಲ್ಲಿ ತಡಮಾಡದೇ ಆ ದಾನಗಳನ್ನು ಕೊಟ್ಟು ಪಾರಣಾಂಗವಾಗಿ ಭೋಜನಮಾಡಿಸಬೇಕು.

೬೬. ಅಯ್ಯಾ ಪಾರ್ಥನೇ ! ಈ ಸುಕೃತದ್ವಾದಶೀ ತಿಥಿಯಲ್ಲಿ ಉಪವಾಸವನ್ನು ಆಚರಿಸಿದ ಯಾವ ಪುರುಷನೂ ನರಕಸಂದರ್ಶನ ಮಾಡುವುದಿಲ್ಲ. ಪುಣ್ಯಪ್ರದವಾಗಿಯೂ ಜಯದಾಯಕವಾಗಿಯೂ ಇರುವ ಅಂತಹ ಈ ಸುಕೃತದ್ವಾದಶೀ ವ್ರತವಿಧಾನವನ್ನು ನಿನಗೆ ನಾನು ಹೇಳಿದೆನು.

೬೭. ಯಾವ ಪುರುಷನಿಗೆ ಶ್ರೀ ಹರಿಯಲ್ಲೇ ನಿಶ್ಚಲವಾದ ಬುದ್ಧಿಯಿರುವುದೋ, ಅವನಿಗೆ ನರಕಯಾತನಾಕಾರಣವಾದ ಅಗ್ನಿಗಳೂ ಶಸ್ತ್ರಗಳೂ ಮತ್ತು ಲೋಹಮುಖದ ಪಕ್ಷಿಗಳೂ ಬಾಧಕಗಳಾಗುವುದಿಲ್ಲ.

೬೮. ಶ್ರೀ ಹರಿನಾಮೋಚ್ಚಾರಣ ಮಾತ್ರದಿಂದ ಪುರುಷನ ಪಾಪಸಮುದಾಯಗಳೆಲ್ಲಾ ಕ್ಷೀಣವಾಗುತ್ತಾ ಬಂದು, ಸಂಪೂರ್ಣವಾಗಿ ನಾಶವಾಗುವುವು. ಆದುದರಿಂದ ಅವನಿಗೆ ನರಕವಾಸವು ಹೇಗೆತಾನೆ ಆದೀತು.

ನಮೋ ನಾರಾಯಣ ಹರೇ ವಾಸುದೇವೇತಿ ಕೀರ್ತಯನ್ ।
ನ ಯಾತಿ ನರಕಂ ಮರ್ತ್ಯಃ ಸಂಕ್ಷೀಣಾಶೇಷಪಾತಕಃ ॥ ೭೯ ॥

ತಸ್ಮಾತ್ಪಾಖಂಡಿಸಂಸರ್ಗಮಕುರ್ವನ್ದ್ವಾದಶೀಮಿಮಾಂ ।
ಉಪೋಷ್ಯ ಪುಣ್ಯೋಪಚಯೋ ನ ಯಾತಿ ನರಕಂ ನರಃ ॥ ೭೦ ॥

ಪಾಪಂ ಕ್ಷಿಣೋತಿ ಸುಕೃತಸ್ಯ ಕರೋತಿ ವೃದ್ಧಿಂ ।
ವೃದ್ಧಿಂ ಪ್ರಯಚ್ಛತಿ ನಿಯಚ್ಛತಿ ಸರ್ವದೋಷಾನ್ ।
ಯದ್ದ್ವಾದಶೀಹ ಸುಕೃತಾತಿಹಿತಾ ಚ ಲೋಕೇ ।
ಕಸ್ಮಾನ್ನ ತಾಮುಪವಸಂತಿ ವಿಮೂಢಚಿತ್ತಾಃ ॥ ೭೧ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಸುಕೃತದ್ವಾದಶೀ ವ್ರತವರ್ಣನಂ ನಾಮ ದ್ವ್ಯಶೀತಿತಮೋಽಧ್ಯಾಯಃ.

---

೭೯. ಹರೇ ! ವಾಸುದೇವ ! ನಮೋನಾರಾಯಣಾಯ, ಎಂದು ಸಂಕೀರ್ತನೆಮಾಡುವ ಪುರುಷನಿಗೆ, ಸಮಸ್ತ ಪಾತಕಗಳೂ ಸಂಕ್ಷಯವಾಗಿ, ನರಕದರ್ಶನವು ಎಂದೂ ಸಂಭವಿಸುವುದಿಲ್ಲ.

೭೦. ಆದುದರಿಂದ ವೇದನಿಂದಕರಾದ ಪಾಷಂಡಿಗಳ ಸಂಸರ್ಗವನ್ನು ಪರಿತ್ಯಾಗಮಾಡಿ, ದ್ವಾದಶಿಯಲ್ಲಿ ಉಪವಾಸಪೂರ್ವಕವಾಗಿ ಈ ಸುಕೃತದ್ವಾದಶೀ ವ್ರತವನ್ನು ಆಚರಿಸಿದ ಪುರುಷನು, ಬಹು ಪುಣ್ಯಸಂಪಾದಿಸುವುದರಿಂದ ಎಂದೂ ನರಕವಾಸಿಯಾಗುವುದಿಲ್ಲ.

೭೧. ಯಾವ ಸುಕೃತದ್ವಾದಶಿಯು ಪಾಪನಾಶಮಾಡಿ, ಪುಣ್ಯವನ್ನು ವೃದ್ಧಿಪಡಿಸಿ, ಎಲ್ಲಾ ವಿಷಯದಲ್ಲೂ ವೃದ್ಧಿಯನ್ನು ಕೊಟ್ಟು, ಸರ್ವದೋಷಗಳನ್ನೂ ನಿವಾರಿಸಿ ಲೋಕದಲ್ಲಿ ಪುರುಷರಿಗೆ ಅತಿಹಿತಕರವೆಂದು ಪ್ರಸಿದ್ಧವಾಗಿದೆಯೋ ಅಂತಹ ಈ ದ್ವಾದಶಿಯಲ್ಲಿ ಉಪವಾಸಾದಿಗಳನ್ನು ಆಚರಿಸದೆ ಇರುವವರು ಸತ್ಯವಾಗಿಯೂ ಮೂಢಾತ್ಮರೇ ಸರಿ.

ಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಸುಕೃತ ದ್ವಾದಶೀ ವ್ರತವರ್ಣನೆಯೆಂಬ ಎಂಭತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ತ್ರ್ಯಶೀತಿತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಯದೇತತ್ಪರಮಂ ಗುಹ್ಯಂ ಸರ್ವವೇದೇಷು ಪಠ್ಯತೇ ।
ಸ ದೇವಃ ಪುಂಡರೀಕಾಕ್ಷಃ ಸ್ವಯಂ ನಾರಾಯಣೋ ಹರಿಃ ॥ ೧ ॥

ಸ ಯಜ್ಞೈರ್ವಿವಿಧೈರಿಷ್ಟೈರ್ವ್ರತೈಶ್ಚ ಯದುಸತ್ತಮ ।
ಪ್ರಾಪ್ಯತೇ ಪರಮೋ ದೇವಃ ಸನಾತನ ಕಥಂಚನ ॥ ೨ ॥

ಬಹುವಿತ್ತೇನ ಭಗವನ್ನೃತ್ವಿಗ್ಭಿರ್ವೇದಪಾರಗೈಃ ।
ಪ್ರಾಪ್ಯಂತೇ ಸುಸಹಾಯೈಶ್ಚ ಕ್ವಚಿತ್ಕ್ರತವಃ ಸುದುಷ್ಕರಾಃ ॥ ೩ ॥

---

### ಎಂಭತ್ತಮೂರನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ಯಾದವೋತ್ತಮನೇ ! ಸರ್ವ ವೇದಗಳಲ್ಲೂ ಪರಮರಹಸ್ಯವೆಂದು ಉಕ್ತವಾಗಿರುವನೆಂದರೆ ಆ ಪುಂಡರೀಕಾಕ್ಷನೂ ಜೀವಾಂತರ್ಯಾಮಿ ಸ್ವರೂಪನೂ ಆಗಿರುವ ಸ್ವಯಂ ಶ್ರೀ ಹರಿಯೇ ಆಗಿದ್ದಾನೆ.

೨. ಎಲೈ ಅನಾದಿ ಪುರುಷನೇ ! ಆ ಪರಮಪುರುಷನಾದ ಶ್ರೀಹರಿಯನ್ನು ಅವನಿಗೆ ಪ್ರಿಯವಾದ ಅನೇಕ ತರಹದ ಯಾಗಗಳಿಂದಲೂ ವ್ರತಗಳಿಂದಲೂ ಅತಿಕಷ್ಟದಿಂದ ಹೊಂದಬೇಕು.

೩. ಎಲೈ ಭಗವಂತನೇ ! ವೇದಪಾರಂಗತರೆನಿಸಿಕೊಂಡು ದಕ್ಷಿಣೆಯಿಂದ ಪ್ರೀತರಾಗಿ ಯಾಗದಲ್ಲಿ ಕೆಲಸ ಮಾಡುವ ಋತ್ವಿಜರಿಂದಲೂ, ಬಹು ಧನ ಮತ್ತು ಜನಸಹಾಯದಿಂದಲೂ, ಆ ಶ್ರೀಹರಿ ಪ್ರೀತ್ಯರ್ಥಗಳಾದ ಯಾಗಗಳನ್ನು

ವಿತ್ತೇನ ಚ ವಿನಾ ದಾನಂ ದಾತುಂ ಕೃಷ್ಣ ನ ಶಕ್ಯತೇ ।
ವಿದ್ಯಮಾನೇऽಪಿ ನ ಮತಿಃ ಕುಟುಂಬಾಸಕ್ತಚೇತಸಃ ॥ ೪ ॥

ತಸ್ಯ ಮೋಕ್ಷಃ ಕಥಂ ಕೃಷ್ಣ ಸರ್ವಥಾ ದುರ್ಲಭೋ ಹರಿಃ ।
ಅಲ್ಪಾಯಾಸೇನ ಲಭತೇ ಯೇನ ದೇವಂ ಸನಾತನಂ ।
ತನ್ಮೇ ಸಾಮಾನ್ಯತೋ ಬ್ರೂಹಿ ಸರ್ವವರ್ಣೇಷು ಯದ್ಭವೇತ್ ॥ ೫ ॥

॥ ಶ್ರೀ ಕೃಷ್ಣ ಉವಾಚ ॥
ಕಥಯಾಮಿ ಪರಂ ಗುಹ್ಯಂ ರಹಸ್ಯಂ ದೇವನಿರ್ಮಿತಂ ।
ಧರಣ್ಯಾ ಯತ್ಕೃತಂ ಪೂರ್ವಂ ಮಜ್ಜನ್ತ್ಯಾ ವಸುಧಾತಲೇ ॥ ೬ ॥

---

ಸಾಧಿಸಬೇಕಾಗಿದೆ. ಆದುದರಿಂದ ಕೆಲವು ದೇಶಕಾಲಗಳಲ್ಲಿ ಮಾನವರು ಆ ಯಾಗಗಳನ್ನು ದುಷ್ಕರಗಳೆಂದು ಭಾವಿಸಿ ಆಚರಿಸದೆ ಪರಿತ್ಯಾಗ ಮಾಡಿರುತ್ತಾರೆ.

೪. ಎಲೈ ಶ್ರೀ ಕೃಷ್ಣನೇ ! ಧನವಿಲ್ಲದೆ ದಾನಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಅದರಲ್ಲೂ ಧನವಿದ್ದರೂ ಸ್ವಕುಟುಂಬ ಪೋಷಣಾದಿಗಳಲ್ಲೇ ಅತ್ಯಾಸಕ್ತವಾದ ಮನಸ್ಸುಳ್ಳ ಪುರುಷನಿಗೆ ದಾನಮಾಡಬೇಕೆಂಬ ಬುದ್ಧಿಯೇ ಹುಟ್ಟುವುದಿಲ್ಲ.

೫. ಹೇ ಕೃಷ್ಣನೇ ! ಆದುದರಿಂದ ಅಂತಹವನಿಗೆ ಮೋಕ್ಷವು ಹೇಗೆತಾನೆ ಲಭಿಸೀತು ? ಅವನಿಗೆ ಯಜ್ಞ, ದಾನ, ವ್ರತಾದಿಗಳಿಂದ ಶ್ರೀಹರಿ ಪ್ರಾಪ್ತಿಯು ಸರ್ವಥಾ ದುರ್ಲಭವಷ್ಟೆ. ಅಂತಹವನು ಅಲ್ಪಾಯಾಸದಿಂದಲೇ ಸನಾತನನಾದ ಶ್ರೀಹರಿಯನ್ನು ಹೊಂದಬಹುದಾದುದೂ, ಬ್ರಾಹ್ಮಣಾದಿ ಎಲ್ಲಾ ವರ್ಣದವರು ಆಚರಿಸಬಹುದಾದುದೂ, ಸರ್ವಸಾಧಾರಣವಾದುದೂ, ಆಗಿರುವ ಒಂದು ವ್ರತವನ್ನು ನನಗೆ ಹೇಳು ಎಂದನು.

೬. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ ! ಪರಮ ರಹಸ್ಯವೂ, ದೇವನಿರ್ಮಿತವೂ ಆಗಿರುವ ಒಂದು ಗೋಪ್ಯವಿಷಯವನ್ನು ಹೇಳುತ್ತೇನೆ. ಪೂರ್ವಕಾಲದಲ್ಲಿ ಪಾತಾಳದಲ್ಲಿ ಮುಳುಗುತ್ತಿರುವಾಗ ಭೂದೇವಿಯು ಏನನ್ನು ಮಾಡಿದಳು ? ಎಂಬುದನ್ನು ಶ್ರವಣಮಾಡು.

ಪೃಥಿವ್ಯಾಃ ಪಾರ್ಥಿವ ಪುರಾ ಸಂಜಾತಃ ಸಂಗಮೋಽಂಬುಭಿಃ ।
ತಸ್ಮಿನ್ಸಲಿಲಸಂಲಗ್ನೇ ಮಹೀ ಪ್ರಾಯಾದ್ರಸಾತಲಂ ॥ ೭ ॥

ಸಾ ಭೂತಧಾತ್ರೀ ಧರಣೀ ರಸಾತಲಗತಾ ಶುಭಾ ।
ಆರಾಧಯಾಮಾಸ ವಿಭುಂ ದೇವಂ ನಾರಾಯಣಂ ಪರಂ ॥ ೮ ॥

ಉಪವಾಸವ್ರತೈರ್ದೇವೀ ನಿಯಮೈಶ್ಚ ಪೃಥಗ್ವಿಧೈಃ ।
ಕಾಲೇನ ಮಹತಾ ತಸ್ಯಾಃ ಪ್ರಸನ್ನೋ ಗರುಡಧ್ವಜಃ ॥ ೯ ॥

ಉಜ್ಜಹಾರ ಸ್ಥಿತೌ ಚೇಮಾಂ ಸ್ಥಾಪಯಾಮಾಸ ಚಾಚ್ಯುತಃ ।
ಪ್ರಾಪ್ತೇ ಮಾರ್ಗಶಿರೇ ಮಾಸೇ ದಶಮ್ಯಾಂ ನಿಯತಾತ್ಮವಾನ್ ।
ಸ್ನಾತ್ವಾ ದೇವಾರ್ಚನಂ ಕೃತ್ವಾ ಅಗ್ನಿಕಾರ್ಯಂ ಯಥಾವಿಧಿ ॥ ೧೦ ॥

---

೭. ಅಯ್ಯಾ ರಾಜನೆ ! ಪೂರ್ವದಲ್ಲಿ ಭೂಮಿಗೆ ಎಲ್ಲಕಡೆಯಿಂದಲೂ ಜಲ ಸಂಗಮವಾಯಿತು. ಆರೀತಿ ಭೂಮಿಯು ಜಲಸಂಲಗ್ನವಾಗುತ್ತಿರಲು ಅದು ರಸಾತಲಕ್ಕೆ ಹೋಯಿತು.

೮. ಮಂಗಳಕರಳಾದ ಆ ಭೂಮಾತೆಯು ಪಾತಾಳಗತಳಾಗುತ್ತಿರಲು ಆಕೆ ಪ್ರಭುವಾದ ಶ್ರೀಮನ್ನಾರಾಯಣನನ್ನು ಆರಾಧಿಸಿ ಪ್ರಾರ್ಥಿಸಿದಳು.

೯. ಆ ಭೂದೇವಿಯು ಉಪವಾಸ ವ್ರತಗಳಿಂದಲೂ ನಾನಾತರಹವಾದ ನಿಯಮಗಳಿಂದಲೂ ಶ್ರೀಹರಿಯನ್ನು ಆರಾಧಿಸುತ್ತಾ, ಬಹುಕಾಲ ಕಳೆದುಹೋದ ಮೇಲೆ, ಗರುಡಧ್ವಜನಾದ ಶ್ರೀಹರಿಯು ಪ್ರಸನ್ನನಾಗಿ ಆ ಭೂದೇವಿಯನ್ನು ಪಾತಾಳದಿಂದ ಮೇಲಕ್ಕೆ ಎತ್ತಿ ತಂದು ಈಗ ಇರುವ ಸ್ಥಿತಿಯಲ್ಲಿ ಇರಿಸಿದನು.

೧೦. ಮಾರ್ಗಶೀರ್ಷಮಾಸದ ದಶಮಿಯ ದಿವಸ ಕಾರ್ಯಕರಣಸಂಘಾತ ಗಳನ್ನು ಸ್ವಾಧೀನದಲ್ಲಿಟ್ಟುಕೊಂಡವನಾಗಿ ಸ್ನಾನಮಾಡಿ, ಮಡಿಮಾಡಿದ ಬಟ್ಟೆ ಯನ್ನುಟ್ಟು ದೇವತಾರ್ಚನೆಯನ್ನು ಪೂರೈಸಿ, ಶಾಸ್ತ್ರಪ್ರಕಾರವಾಗಿ ಅಗ್ನಿಯಲ್ಲಿ ಹೋಮ ಮಾಡಬೇಕು.

ಶುಚಿವಾಸಾಃ ಪ್ರಸನ್ನಾತ್ಮಾ ಹ್ಯತ್ಯಲ್ಪಾನ್ನಂ ಸುಸಂಸ್ಕೃತಂ ।
ಭುಕ್ತ್ವಾ ಶತಪದಂ ಕೃತ್ವಾ ಪುನಃ ಶೌಚಂ ಚ ಪಾದಯೋಃ ॥ ೧೧ ॥

ಕೃತ್ವಾಷ್ಟಾಂಗುಲಮಾತ್ರಂ ತು ಕ್ಷೀರವೃಕ್ಷಸಮುದ್ಭವಂ ।
ಭಕ್ಷಯೇದ್ದಂತಕಾಷ್ಠಂ ತು ತತಶ್ಚಾಚಮ್ಯ ಯತ್ನತಃ ॥ ೧೨ ॥

ಸ್ಪೃಷ್ಟ್ವಾ ನ್ಯಸ್ಯಾನ್ಯಕರ್ಮಾಣಿ ಚಿರಂ ಧ್ಯಾತ್ವಾ ಜನಾರ್ದನಂ ।
ಶಂಖಚಕ್ರಗದಾಪಾಣಿಂ ಪೀತಾಂಬರಸಮಾವೃತಂ ॥ ೧೩ ॥

ಏವಮುಚ್ಚಾರಯೇದ್ವಾಚಂ ತಸ್ಮಿನ್ಕಾಲೇ ಮಹಾದ್ಯುತೇ ।
ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾಹಮಪರೇಹನಿ ।
ಸಂಭೋಕ್ಷ್ಯೇ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ॥ ೧೪ ॥

ಏವಮುಕ್ತ್ವಾ ತತೋ ದೇವ ದೇವದೇವಸ್ಯ ಸನ್ನಿಧೌ ।
ಜಪೇನ್ನಾರಾಯಣಾಯೇತಿ ರೂಪೇ ತತ್ರ ವಿಧಾನತಃ ॥ ೧೫ ॥

---

೧೧. ಬಳಿಕ ಪ್ರಸನ್ನವಾದ ಮನಸ್ಸುಳ್ಳವನಾಗಿ ಪವಿತ್ರವಾದ ಸ್ವಲ್ಪ ಅನ್ನವನ್ನು ಸೇವಿಸಿ, ಭೋಜನವಾದ ಮೇಲೆ ನೂರು ಹೆಜ್ಜೆ ನಡೆದು, ಪುನಃ ಕಾಲುಗಳನ್ನು ಪ್ರಕ್ಷಾಳನೆ ಮಾಡಿಕೊಳ್ಳಬೇಕು.

೧೨. ಅನಂತರ ಎಂಟು ಅಂಗುಲ ಪ್ರಮಾಣವುಳ್ಳ ಹಾಲುತೊಟ್ಟಿನ ಮರದ ದಂತಕಾಷ್ಠವನ್ನು ಜಗಿದು ಆಮೇಲೆ ಆಚಮನ ಮಾಡಬೇಕು.

೧೩. ಆ ಮೇಲೆ ಆಚಮನಾಂಗವಾಗಿ ಆಯಾಯ ಅವಯವಗಳನ್ನು ಶಾಸ್ತ್ರೋಕ್ತ ರೀತಿಯಲ್ಲಿ ಸ್ಪರ್ಶಮಾಡಿ, ಅವಹಿತನಾಗಿ, ಚಕ್ರಗದಾಪಾಣಿಯೂ, ಪೀತಾಂಬರಧಾರಿಯೂ ಆಗಿರುವ ಶ್ರೀಹರಿಯನ್ನು ಬಹುಕಾಲ ಧ್ಯಾನಿಸುತ್ತಿರಬೇಕು

೧೪. ಎಲೈ ಪುಂಡರೀಕಾಕ್ಷನೇ ! ನಾನು ಏಕಾದಶಿಯದಿನ ನಿರಾಹಾರವಾಗಿದ್ದು ಮರುದಿನ ದ್ವಾದಶಿಯಲ್ಲಿ ಭೋಜನ ಮಾಡುವೆನು. ಓ ಅಚ್ಯುತನೇ! ಅಂತಹ ನನಗೆ ನೀನು ರಕ್ಷಕನಾಗು ಎಂಬ ಅರ್ಥವುಳ್ಳ ಮಂತ್ರವನ್ನು ಹೇಳಬೇಕು.

೧೫. ಅಯ್ಯಾ ರಾಜನೇ ! ದೇವದೇವನಾದ ಶ್ರೀಹರಿಯ ಸನ್ನಿಧಿಯಲ್ಲಿ ಈರೀತಿ ಹೇಳಿ, ಅನಂತರ ಆ ಮೂರ್ತಿಯ ಸಮೀಪದಲ್ಲೇ ವಿಧ್ಯುಕ್ತರೀತಿಯಿಂದ ನಮೋನಾರಾಯಣಾಯ ಎಂದು ಜಪವನ್ನು ಮಾಡಬೇಕು.

ತತಃ ಪ್ರಭಾತೇ ವಿಮಲೇ ನದೀಂ ಗತ್ವಾ ಸಮುದ್ರಗಾಂ ।
ಇತರಾಂ ವಾ ತಡಾಗಂ ವಾ ಗೃಹೇ ವಾ ನಿಯತಾತ್ಮವಾನ್ ॥ ೧೬ ॥

ಆನೀಯ ಮೃತ್ತಿಕಾಂ ಶುದ್ಧಾಂ ಮಂತ್ರೇಣಾನೇನ ಮಾನವಃ ।
ಧಾರಣಂ ಪೋಷಣಂ ತ್ವತ್ತೋ ಭೂತಾನಾಂ ದೇವಿ ಸರ್ವದಾ ।
ತೇನ ಸತ್ಯೇನ ಮಾಂ ಪಾಹಿ ಪಾಪಾನ್ಮೋಚಯ ಸುವ್ರತೇ ॥ ೧೭ ॥

(ಇತಿ ಮೃತ್ತಿಕಾ ಮಂತ್ರಃ)

॥ ಆದಿತ್ಯದರ್ಶನ ಮಂತ್ರಃ ॥

ಬ್ರಹ್ಮಾಂಡೋದರತೀರ್ಥಾನಿ ಕರೈಃ ಸ್ಪೃಷ್ಟಾನಿ ತೇ ರವೇ ।
ಭವಂತಿ ಭೂತಾನಿ ಸತಾಂ ಮೃತ್ತಿಕಾಮಾಲಭೇತ್ಸ್ಪಸಃ ॥ ೧೮ ॥

(ಇತ್ಯಾದಿತ್ಯದರ್ಶನ ಮಂತ್ರಃ)

---

೧೬. ಅನಂತರ ಬೆಳಗಾದ ಮೇಲೆ ಈ ವ್ರತಾನುಷ್ಠಾನಮಾಡುವ ಪುರುಷನು, ಸಮುದ್ರವನ್ನು ಸೇರುವ ನಿರ್ಮಲ ಜಲಯುತವಾದ ದೊಡ್ಡ ನದಿಗಾಗಲಿ ಅಥವಾ ಇತರ ಉಪನದಿಗಾಗಲಿ, ಅಥವಾ ಕೊಳಕ್ಕಾಗಲಿ, ಕೊನೆಗೆ ಮನೆಯಲ್ಲೇ ಇರುವ ವಾಪ್ಯಾದಿಗಳಿಗಾಗಲಿ ಹೋಗಿ, ಪ್ರಾರ್ಥನಾ ಮಂತ್ರವನ್ನು ಪಠಿಸಿ, ಶುದ್ಧ ಮೃತ್ತಿಕೆಯನ್ನು ಅಲ್ಲಿಂದ ತರಬೇಕು.

೧೭. ಓ ದೇವಿ ! ಪ್ರಾಣಿಗಳ ಧಾರಣವೂ ಮತ್ತು ಪೋಷಣವೂ ಯಾವಾಗಲೂ ನಿನ್ನಿಂದ ಆಗುತ್ತದೆ. ಎಲೌ ಸುವ್ರತಶಾಲಿನೀ ! ಆ ಬಲದಿಂದ ನೀನು ನನ್ನನ್ನು ಕಾಪಾಡು. ಮತ್ತು ನನ್ನನ್ನು ಪಾಪಮುಕ್ತನನ್ನಾಗಿ ಮಾಡು ಎಂದು ಪ್ರಾರ್ಥನಾಮಂತ್ರಾರ್ಥ

೧೮. ಆ ಮೃತ್ತಿಕೆಯನ್ನು ಆದಿತ್ಯನಿಗೆ ತೋರಿಸುವಾಗ " ಓ ರವಿಯೇ ! ಬ್ರಹ್ಮಾಂಡೋದರವಲ್ಲಿರುವ ತೀರ್ಥಗಳೆಲ್ಲಾ ನಿನ್ನ ಕಿರಣಸಂಪರ್ಕದಿಂದ ಪವಿತ್ರವಾದುವುಗಳು. ಹಾಗೆಯೇ ನಿನ್ನ ಕರಸ್ಪರ್ಶದಿಂದಲೇ ಸಮಸ್ತಭೂತಗಳೂ ಪವಿತ್ರಗಳಾಗಿ ಸತ್‌ಪದಾರ್ಥಗಳಾಗುತ್ತವೆ. ಅಂತಹ ನಿನ್ನ ಕಿರಣಸಂಪರ್ಕವು ಈ ಮೃತ್ತಿಕೆಗೂ ಆಗಲಿ " ಎಂಬ ಅರ್ಥವುಳ್ಳ ಪ್ರಾರ್ಥನಾಶ್ಲೋಕವನ್ನು ಹೇಳಬೇಕು.

**ಏವಂ ಮೃದಂ ರವೇರಗ್ರೇ ಕೃತ್ವಾಥಾತ್ಮಾನಮಾಲಭೇತ್ ।**
**ತ್ರಿಃಕೃತ್ವಾಶೇಷಮೃದಯಾ ಕುಂಡಮಾಲಿಖ್ಯ ವೈ ಜಲೇ ॥ ೧೯ ॥**

**ತತಃ ಸ್ನಾತ್ವಾ ನರಃ ಸಮ್ಯಕ್ಶುಕ್ರವತ್ಯುಪಚಾರಕಃ ।**
**ಆಚಮ್ಯಾವಶ್ಯಕಂ ಕೃತ್ವಾ ಪುನರ್ದೇವಗೃಹಂ ವ್ರಜೇತ್ ॥ ೨೦ ॥**

**ತಮಾರಾಧ್ಯ ಮಹಾಯೋಗಂ ದೇವಂ ನಾರಾಯಣಂ ಪ್ರಭುಂ ।**
**ಕೇಶವಾಯ ನಮಃ ಪಾದೌ ಕಟಿಂ ದಾಮೋದರಾಯ ಚ ॥ ೨೧ ॥**

**ಊರುಯುಗ್ಮಂ ನೃಸಿಂಹಾಯ ಉರಃ ಶ್ರೀವತ್ಸಧಾರಿಣೇ ।**
**ಕಂಠಂ ಕೌಸ್ತುಭನಾಥಾಯ ವಕ್ಷಃ ಶ್ರೀಪತಯೇ ತಥಾ ॥ ೨೨ ॥**

---

೧೯. ಈ ರೀತಿಯಾಗಿ ಪಠಿಸಿ ಆ ಮೃತ್ತಿಗೆಯನ್ನು ಸೂರ್ಯನ ಇದಿರಿಗೆ ತೋರಿಸಿ, ಆ ಮೇಲೆ ತನ್ನ ಶರೀರಕ್ಕೆ ಲೇಪನಮಾಡಿಕೊಳ್ಳಬೇಕು. ಹಾಗೆ ಮೂರು ಸಾರಿ ಲೇಪಿಸಿ ಉಳಿದಿರುವ ಮೃತ್ತಿಕೆಯಿಂದ ತಾನು ಸ್ನಾನಮಾಡವ ನೀರಿನಲ್ಲಿ ಕುಂಡಾಕಾರವಾಗಿ ರೇಖಾವಿನ್ಯಾಸಮಾಡಬೇಕು.

೨೦. ಅನಂತರ ಆ ಜಲದಲ್ಲಿ ಸ್ನಾನಮಾಡಿದ ಮೇಲೆ ಶುಭ್ರವಸ್ತ್ರಾದಿ ಧಾರಣ, ಆಚಮನ ಇವುಗಳನ್ನು ಮಾಡಿ, ಅವಶ್ಯವಾಗಿ ಆಚರಿಸಬೇಕಾದ ನಿತ್ಯ ಕರ್ಮಗಳನ್ನು ಪೂರಯಿಸಿ, ಪುನಃ ದೇವಮಂದಿರ ಪ್ರವೇಶಮಾಡಬೇಕು.

೨೧. ಅಲ್ಲಿ ಮಹಾಯೋಗೇಶ್ವರನಾಗಿಯೂ, ಸ್ವಾಮಿಯಾಗಿಯೂ ಇರುವ ಶ್ರೀಮನ್ನಾರಾಯಣನನ್ನು ಪೂಜಿಸಬೇಕು. ಶ್ರೀ ಕೇಶವಾಯನಮಃ ಎಂದು ಹೇಳಿ ಪಾದಗಳನ್ನೂ, ದಾಮೋದರಾಯನಮಃ ಎಂದು ಹೇಳಿ ಕಟಿಪ್ರದೇಶವನ್ನೂ ಪೂಜಿಸಬೇಕು.

೨೨. ನೃಸಿಂಹಾಯನಮಃ ಎಂದು ಹೇಳಿ ಎರಡು ತೊಡೆಗಳನ್ನೂ, ಶ್ರೀವತ್ಸಧಾರಿಣೇನಮಃ ಎಂದು ಪಠಿಸಿ ಉರಃಪ್ರದೇಶವನ್ನೂ, ಮತ್ತು ಶ್ರೀ ಕೌಸ್ತುಭನಾಥಾಯನಮಃ ಎಂದು ಹೇಳಿ ಕಂಠವನ್ನೂ, ಶ್ರೀ ಪತಯೇನಮಃ ಎಂದು ಹೇಳಿ ವಕ್ಷಸ್ಥಳವನ್ನೂ ಅರ್ಚಿಸಬೇಕು.

ತ್ರೈಲೋಕ್ಯವಿಜಯಾಯೇತಿ ಬಾಹೂ ಸರ್ವಾತ್ಮನೇ ಶಿರಃ ।
ರಥಾಂಗಧಾರಿಣೇ ಚಕ್ರಂ ಶಂಕರಾಯೇತಿ ಚಾಂಬುಜಂ ॥ ೨೩ ॥

ಗಂಭೀರಾಯೇತಿ ಚ ಗದಾಮಭಯಂ ಶಾಂತಮೂರ್ತಯೇ ।
ಏವಮಭ್ಯರ್ಚ್ಯ ದೇವೇಶಂ ದೇವಂ ನಾರಾಯಣಂ ಪ್ರಭುಂ ॥ ೨೪ ॥

ಪುನಸ್ತಸ್ಯಾಗ್ರತಃ ಕುಂಭಾಶ್ಚತುರಃ ಸ್ಥಾಪಯೇದ್ಬುಧಃ ।
ಜಲಪೂರ್ಣಾನ್ಸಮಾಲ್ಯಾಂಶ್ಚ ಸಿತಚಂದನಚರ್ಚಿತಾನ್ ॥ ೨೫ ॥

ಚತುರ್ಭಿಸ್ತಿಲಪಾತ್ರೈಶ್ಚ ಸ್ಥಗಿತಾನ್ರತ್ನಸಂಯುತಾನ್ ।
ಚತ್ವಾರಸ್ತೇ ಸಮುದ್ರಾಸ್ತು ಕಲಶಾಃ ಪರಿಕೀರ್ತಿತಾಃ ॥ ೨೬ ॥

---

೨೩. ತ್ರೈಲೋಕ್ಯ ವಿಜಯಾಯನಮಃ ಎಂದು ಹೇಳಿ ಶ್ರೀ ವಿಷ್ಣುವಿನ ಬಾಹುಗಳನ್ನೂ, ಸರ್ವಾತ್ಮನೇನಮಃ ಎಂದು ಹೇಳಿ ಶ್ರೀ ಹರಿಯ ಶಿರಸ್ಸನ್ನೂ, ರಥಾಂಗಧಾರಿಣೇನಮಃ ಎಂದು ಹೇಳಿ ಚಕ್ರಾಯುಧವನ್ನೂ, ಶ್ರೀ ಶಂಕರರಾಯ ನಮಃ ಎಂದು ಹೇಳಿ ಹಸ್ತದಲ್ಲಿರುವ ಪದ್ಮವನ್ನೂ, ಪೂಜಿಸಬೇಕು.

೨೪. ಗಂಭೀರಾಯನಮಃ ಎಂದು ಹೇಳಿ ಶ್ರೀ ಹರಿಯ ಗದೆಯನ್ನೂ, ಶಾಂತಮೂರ್ತಯೇನಮಃ ಎಂದು ಹೇಳಿ ಶ್ರೀ ಹರಿಯ ಅಭಯಮುದ್ರೆಯನ್ನೂ ಪೂಜಿಸಬೇಕು. ಈ ರೀತಿಯಾಗಿ ದೇವಾಧೀಶನೂ, ಸರ್ವನಿಯಾಮಕನೂ ಆಗಿರುವ ಶ್ರೀಮನ್ನಾರಾಯಣನ ಅವಯವಗಳನ್ನು ಪೂಜಿಸಬೇಕು.

೨೫. ಈ ವ್ರತವನ್ನು ಆಚರಿಸುವ ಪ್ರಾಜ್ಞನು ಪುನಃ ಆ ದೇವನ ಪುರೋಭಾಗದಲ್ಲಿ, ಜಲಪೂರಿತಗಳೂ ಶ್ರೀಗಂಧ ಲೇಪನಮಾಡಿದವೂ, ಪುಷ್ಪಹಾರಗಳಿಂದ ಅಲಂಕೃತಗಳೂ ಆಗಿರುವ ನಾಲ್ಕು ಕಲಶಗಳನ್ನು ಸ್ಥಾಪನೆಮಾಡಬೇಕು.

೨೬. ಮತ್ತು ಆ ಕಲಶಗಳಲ್ಲಿ ರತ್ನಗಳನ್ನಿಟ್ಟು ತಿಲಪೂರ್ಣವಾದ ನಾಲ್ಕು ಪಾತ್ರೆಗಳನ್ನೂ ಆ ಕುಂಭದ ಮೇಲಿಟ್ಟು ಮುಚ್ಚಬೇಕು. ಆ ನಾಲ್ಕು ಕಲಶಗಳು ಪ್ರಸಿದ್ಧಗಳಾದ ನಾಲ್ಕು ಸಮುದ್ರಗಳೆಂದು ಹೇಳಲ್ಪಟ್ಟಿವೆ.

ತೇಷಾಂ ಮಧ್ಯೇ ತು ಸಂಪೀಠಂ ಸ್ಥಾಪಯೇದ್ವಸ್ತ್ರಸಂಯುತಂ ।
ತಸ್ಮಿನ್ಸೌವರ್ಣಂ ರೌಪ್ಯಂ ವಾ ತಾಮ್ರಂ ವಾ ದಾರವಂ ತಥಾ ।
ಪಾತ್ರಂ ತೋಯಭೃತಂ ಕೃತ್ವಾ ತಸ್ಯ ಮಧ್ಯೇ ತತೋ ನ್ಯಸೇತ್ ॥೨೭॥

ಸೌವರ್ಣಂ ಮಾತ್ಸ್ಯರೂಪೇಣ ಕೃತ್ವಾ ದೇವಂ ಜನಾರ್ದನಂ ।
ವೇದವೇದಾಂಗಸಂಯುಕ್ತಂ ಶ್ರುತಿಸ್ಮೃತಿ ವಿಭೂಷಿತಂ ॥ ೨೮ ॥

ಭಕ್ಷ್ಯೈರ್ಬಹುವಿಧೈಃ ರಾಜನ್ಫಲೈಃ ಪುಷ್ಪೈಶ್ಚ ಶೋಭಿತಂ ।
ಗಂಧೈರ್ಧೂಪೈರ್ಮಂತ್ರವರ್ಯೈರರ್ಚಯಿತ್ವಾ ಯಥಾವಿಧಿ ॥ ೨೯ ॥

ರಸಾತಲಗತಾ ವೇದಾ ಯಥಾ ದೇವ ತ್ವಯಾಹೃತಾಃ ।
ಮತ್ಸ್ಯರೂಪೇಣ ತದ್ವನ್ಮಾಂ ಭವಾದುದ್ಧರ ಕೇಶವ ॥ ೩೦ ॥

---

೨೭. ಆ ನಾಲ್ಕು ಕಲಶಗಳ ಮಧ್ಯೆ ವಸ್ತ್ರದಿಂದ ಮುಚ್ಚಿದ ಭದ್ರಾಸನವನ್ನು ಸ್ಥಾಪನೆಮಾಡಬೇಕು. ಆ ಭದ್ರಾಸನದ ಮೇಲೆ ಭಂಗಾರ, ಬೆಳ್ಳಿ ಅಥವಾ ತಾಮ್ರ ಅಥವಾ ಮರ ಇವುಗಳಲ್ಲಿ ಯಾವುದರಿಂದಲಾದರೂ ಮಾಡಿದ ಒಂದು ಪಾತ್ರೆಯನ್ನು ಇರಿಸಿ, ಅದರಲ್ಲಿ ನೀರನ್ನು ತುಂಬಿ ಆ ಕಲಶಗಳ ನಡುವೆ ಸ್ಥಾಪಿಸಿದ ಭದ್ರಾಸನದ ಮೇಲೆ ಇಡಬೇಕು.

೨೮. ಅನಂತರ ಆ ಪೀಠಸ್ಥವಾದ ಪಾತ್ರೆಯಲ್ಲಿ ಭಂಗಾರದಿಂದ ಮತ್ಸ್ಯಾಕಾರವಾಗಿ ಮಾಡಿಸಿದ ಶ್ರೀ ಜನಾರ್ದನ ಪ್ರತಿಮೆಯನ್ನು ಸ್ಥಾಪಿಸಿ, ವೇದವೇದಾಂಗನೂ, ಶ್ರುತಿ, ಸ್ಮೃತಿ ಪ್ರತಿಪಾದ್ಯನೆನಿಸಿ ಶೋಭಿಸುವವನೂ ಆಗಿ ಇರುವ ಶ್ರೀಹರಿಯನ್ನು ಅರ್ಚಿಸಬೇಕು.

೨೯. ಅಯ್ಯಾ ರಾಜನೇ! ಬಹು ವಿಧಗಳಾದ ಪುಷ್ಪಗಳಿಂದ ಅಲಂಕರಿಸಿ, ಭಕ್ಷ್ಯಗಳನ್ನೂ ಫಲಗಳನ್ನೂ ಸಮರ್ಪಿಸಿ ; ಗಂಧ, ಧೂಪ, ನೈವೇದ್ಯಾದಿಗಳನ್ನು ಮಂತ್ರಪೂರ್ವಕವಾಗಿ ಸಮರ್ಪಿಸಿ, ಶಾಸ್ತ್ರಪ್ರಕಾರ ಪೂಜಿಸಿ ಪ್ರಾರ್ಥನಾಮಂತ್ರವನ್ನು ಹೇಳಬೇಕು.

೩೦. ಓ ದೇವದೇವನಾದ ಕೇಶವನೇ ! ಪೂರ್ವದಲ್ಲಿ ನೀನು ಮತ್ಸ್ಯರೂಪವನ್ನು ಧರಿಸಿ ಪಾತಾಳಗತವಾಗಿದ್ದ ವೇದಗಳನ್ನು ಹೇಗೆ ತೆಗೆದುಕೊಂಡು ಬಂದೆಯೋ ಅದೇ ರೀತಿಯಾಗಿ ನನ್ನನ್ನು ಸಂಸಾರಸಾಗರದಿಂದ ಉದ್ಧಾರಮಾಡು ಎಂಬುದು ಮಂತ್ರಾರ್ಥ.

**ಏವಮುಚ್ಚಾರ್ಯ ತಸ್ಯಾಗ್ರೇ ಜಾಗರಂ ತತ್ರ ಕಾರಯೇತ್ ।**
**ಯಥಾವಿಭವಸಾರೇಣ ಪ್ರಭಾತೇಽಪಿ ಪುನಃಪುನಃ ।**
**ಚತುರ್ಣಾಂ ಬ್ರಾಹ್ಮಣಾನಾಂ ತು ಚತುರೋ ದಾಪಯೇದ್ಘಟಾನ್ ॥**

**ಪೂರ್ವಂ ತು ಬಹ್ವೃಚೇ ದದ್ಯಾಚ್ಛಂದೋಗೇ ದಕ್ಷಿಣಂ ತಥಾ ।**
**ಯಜುಃಶಾಖಾನ್ವಿತೇ ದದ್ಯಾತ್ಪಶ್ಚಿಮಂ ಘಟಮುತ್ತಮಂ ॥ ೩೨ ॥**

**ಉತ್ತರಂ ಕಾಮತೋ ದದ್ಯಾದ್ದೇಶ ಏವ ವಿಧಿಕ್ರಮಾತ್ ।**
**ಋಗ್ವೇದಃ ಪ್ರೀಯತಾಂ ಪೂರ್ವಂ ಸಾಮವೇದಶ್ಚ ದಕ್ಷಿಣಃ ॥ ೩೩ ॥**

**ಯಜುಷಃ ಪಶ್ಚಿಮೋ ನಾಮ್ನಾ ಅಥರ್ವಾಯೋತ್ತರಂ ತಥಾ ।**
**ಪೂರ್ಣಪಾತ್ರೈಸ್ತು ಸತಿಲೈಃ ಸ್ಥಗಿತಾನ್ಕಾರಯೇದ್ಘಟಾನ್ ॥ ೩೪ ॥**

---

೩೧. ಈರೀತಿಯಾಗಿ ಆ ಹರಿಯ ಸಮ್ಮುಖದಲ್ಲಿ ಪಠಿಸಿ, ಆ ರಾತ್ರೆ ಅಲ್ಲೇ ಜಾಗರಣೆಮಾಡಬೇಕು. ಬೆಳಗಾದ ಮೇಲೆ ತನ್ನ ದ್ರವ್ಯಾನುಕೂಲವಿದ್ದಷ್ಟರಲ್ಲಿ ಪುನಃ ಶ್ರೀ ಹರಿಯನ್ನು ಪೂಜಿಸಿ, ಆಮೇಲೆ ಆ ನಾಲ್ಕು ಕುಂಭಗಳನ್ನೂ ನಾಲ್ಕು ಮಂದಿ ಬ್ರಾಹ್ಮಣರಿಗೆ ದಾನಮಾಡಬೇಕು.

೩೨. ಅದರಲ್ಲಿ ಪೂರ್ವದಿಕ್ಕಿನಲ್ಲಿರುವ ಕುಂಭವನ್ನು ಋಗ್ವೇದಾಧ್ಯಯನ ಮಾಡಿದ ಬ್ರಾಹ್ಮಣನಿಗೂ, ದಕ್ಷಿಣದಿಗ್ಭಾಗದಲ್ಲಿ ಸ್ಥಾಪಿಸಿರುವ ಕಲಶವನ್ನು ಸಾಮ ಶಾಖಿಗೂ, ಪಶ್ಚಿಮದಿಕ್ಕಿನಲ್ಲಿರುವ ಘಟವನ್ನು ಯಜುಶ್ಶಾಖಾಧ್ಯಾಯಿಗೂ, ದಾನ ಮಾಡಬೇಕು.

೩೩. ಉತ್ತರದಿಕ್ಕಿನಲ್ಲಿರುವ ಕಲಶವನ್ನು ಯಜಮಾನನು ತನ್ನ ಇಚ್ಛೆ ಬಂದವರಿಗೆ ದಾನಮಾಡಬಹುದು. ಈರೀತಿ ದಾನಮಾಡುವುದಕ್ಕೆ ಕಲಶಗಳಿರುವ ತತ್ತದ್ದೇಶಕಾಲಕ್ರಮವೇ ಕಾರಣ. ಪೂರ್ವದಿಕ್ಕಿನ ಕಲಶದಾನಕಾಲದಲ್ಲಿ ಋಗ್ವೇದಃ ಪ್ರೀಯತಾಂ ಎಂದೂ, ದಕ್ಷಿಣದಿಕ್ಕಿನ ಕಲಶದಾನಕಾಲದಲ್ಲಿ ಸಾಮವೇದಃ ಪ್ರೀಯತಾಂ ಎಂದೂ ಹೇಳಿ, ದಾನಮಾಡಬೇಕು.

೩೪. ಪಶ್ಚಿಮದಿಕ್ಕಿನ ಕಲಶದ ದಾನಕಾಲದಲ್ಲಿ "ಯಜುರ್ವೇದಾ ಪ್ರೀಯತಾಂ" ಎಂದೂ ಉತ್ತರದಿಕ್ಕಿನ ಕಲಶದಾನಕಾಲದಲ್ಲಿ ಅಥರ್ವಣವೇದಃ ಪ್ರೀಯತಾಂ ಎಂದೂ ಹೇಳಿ ತಿಲಪೂರ್ಣವಾದ ಪಾತ್ರೆಗಳಿಂದ ಆಚ್ಛಾದಿತಗಳಾದ ಆ ಕುಂಭಗಳನ್ನು ದಾನಮಾಡಬೇಕು?

ತತಸ್ತಂ ಜಲಪಾತ್ರಸ್ಥಂ ಬ್ರಾಹ್ಮಣಾಯ ಕುಟುಂಬಿನೇ ।
ದದ್ಯಾದೇವಂ ಮಹಾಭಾಗ ತತಃ ಪಶ್ಚಾತ್ತು ಭೋಜಯೇತ್ ॥ ೩೫ ॥

ಬ್ರಾಹ್ಮಣಾನ್ಪಾಯಸಾನ್ನೇನ ತತಃ ಪಶ್ಚಾತ್ಸ್ವಯಂ ಗೃಹೀ ।
ಭುಂಜೀತ ಭೃತ್ಯಸಹಿತೋ ವಾಗ್ಯತಃ ಸಂಯತೇಂದ್ರಿಯಃ ॥ ೩೬ ॥

ಅನೇನ ವಿಧಿನಾ ಯಸ್ತು ದ್ವಾದಶೀಂ ಕ್ಷಪಯೇನ್ನರಃ ।
ತಸ್ಯ ಪುಣ್ಯಫಲಂ ರಾಜಞ್ಛೃಣು ಸತ್ಯವತಾಂ ವರ ॥ ೩೭ ॥

ಯದಿ ವಕ್ತ್ರಸಹಸ್ರಾಣಿ ಭವಂತಿ ಹಿ ಯುಗೇಯುಗೇ ।
ಆಯುಶ್ಚ ಬ್ರಹ್ಮಣಸ್ತುಲ್ಯಂ ಭವೇದ್ಯದಿ ಮಹಾಮತೇ ।
ತದಾಸ್ಯ ಫಲಸಂಖ್ಯಾನಂ ಕರ್ತುಂ ಶಕ್ಯಂ ನ ಧಾರಯೇತ್ ॥ ೩೮ ॥

---

೩೫. ಅಯ್ಯಾ ಮಹಾಭಾಗ್ಯಶಾಲಿಯೇ ! ಅನಂತರ ಆ ಜಲಪಾತ್ರದಲ್ಲಿ ಸ್ಥಾಪಿಸಿದ್ದ ಶ್ರೀಹರಿ ಪ್ರತಿಮೆಯನ್ನು, ಕುಟುಂಬಿಯಾದ ಬ್ರಾಹ್ಮಣನಿಗೆ ದಾನ ಮಾಡಬೇಕು. ಈರೀತಿ ದಾನಮಾಡಿದ ಮೇಲೆ ಪಾಯಸಾನ್ನಾದಿಗಳಿಂದ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು.

೩೬. ಅನಂತರ ಆ ಯಜಮಾನನು ಇಂದ್ರಿಯನಿಗ್ರಹಿಯೂ ಮೌನ ವ್ರತಿಯೂ ಆಗಿ, ಭೃತ್ಯಾದಿಸಮೇತನಾಗಿ ತಾನೂ ಭೋಜನಮಾಡಬೇಕು.

೩೭. ಅಯ್ಯಾ ಸತ್ಯಸಂಧನಾದ ರಾಜನೇ ! ಈ ಕ್ರಮದಲ್ಲಿ ಯಾವ ಪುರುಷನು ಈ ದ್ವಾದಶೀವ್ರತವನ್ನು ಆಚರಿಸುವನೋ ಅವನಿಗೆ ಲಭಿಸುವ ಪುಣ್ಯ ಫಲವನ್ನು ಹೇಳುತ್ತೇನೆ ಶ್ರವಣಮಾಡು.

೩೮. ಅಯ್ಯಾ ಬುದ್ಧಿಶಾಲಿಯೇ ! ಕದಾಚಿತ್ ಯಾವನಾದರೂ ಒಬ್ಬನಿಗೆ ಪ್ರತಿಯುಗದಲ್ಲೂ ಸಹಸ್ರವದನಗಳಿದ್ದು ಬ್ರಹ್ಮನಷ್ಟು ಆಯುಸ್ಸೂ ಸಂಭವಿಸಿದರೆ, ಆಗ ಈ ವ್ರತದ ಫಲಗಣನೆಯನ್ನು ಹೇಳುವುದಕ್ಕೆ ಅವನು ಸಮರ್ಥನಾದಾನು. ಆದರೆ ಅವನು ಹೇಳಿದ ಫಲಗಳನ್ನು ಗ್ರಹಿಸಿ ಧಾರಣೆಮಾಡುವಷ್ಟು ಸಮರ್ಥರು ಯಾರೂ ಇಲ್ಲ.

ಯಃ ಕೃಷ್ಣದ್ವಾದಶೀಮೇತಾಮನೇನ ವಿಧಿನಾ ನೃಪ ।
ಕರೋತಿ ಬ್ರಹ್ಮಲೋಕಂ ಸ ಸಮಾಪ್ನೋತಿ ನ ಸಂಶಯಃ ॥ ೩೯ ॥

ಬ್ರಹ್ಮಹತ್ಯಾದಿಪಾಪಾನಿ ಜನ್ಮಾಂತರಕೃತಾನ್ಯಪಿ ।
ಅಕಾಮತಃ ಕಾಮತೋ ವಾ ಪ್ರಣಶ್ಯಂತಿ ನ ಸಂಶಯಃ ॥ ೪೦ ॥

ತಥೈವ ಪೌಷಮಾಸೇನ ಅಮೃತಂ ಮಥಿತಂ ಸುರೈಃ ।
ತತ್ರ ಕೂರ್ಮೋಽಭವದ್ದೇವಃ ಸ್ವಯಮೇವ ಜನಾರ್ದನಃ ॥ ೪೧ ॥

ತಸ್ಯೇಯಂ ತಿಥಿರುದ್ದಿಷ್ಟಾ ಹರೇರ್ವೈ ಕೂರ್ಮರೂಪಿಣಃ ।
ಪೌಷಮಾಸಂ ಸಮಾಸಾದ್ಯ ದ್ವಾದಶೀಂ ಶುಕ್ಲಸಂಯುತಾಂ ॥ ೪೨ ॥

ತಸ್ಯಾಂ ಪ್ರಾಗ್ವತ್ಸಂಕಲ್ಪಃ ಪ್ರಾತಸ್ನಾನಾದಿಕಾಃ ಕ್ರಿಯಾಃ ।
ನಿರ್ವರ್ತ್ಯಾರಾಧಯೇದ್ರಾತ್ರ್ಯಾಮೇಕಾದಶ್ಯಾಂ ಜನಾರ್ದನಂ ।
ಪ್ರೀಯಮಂತ್ರೈರ್ನೃಪಶ್ರೇಷ್ಠ ದೇವದೇವಂ ಜಗದ್ಗುರುಂ ॥ ೪೩ ॥

---

೩೯. ಅಯ್ಯಾ ರಾಜನೇ ! ಈ ಕೃಷ್ಣದ್ವಾದಶೀವ್ರತವನ್ನು ಈ ಕ್ರಮದಿಂದ ಯಾವನು ಆಚರಿಸುವನೋ, ಅವನು ಬ್ರಹ್ಮಲೋಕವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

೪೦. ಮತ್ತು ಇದನ್ನು ಆಚರಿಸಿದವನಿಗೆ ಬುದ್ಧಿಪೂರ್ವಕವಾಗಿಯೋ ಅಜ್ಞಾತವಾಗಿಯೋ ಇಹದಲ್ಲೂ ಜನ್ಮಾಂತರದಲ್ಲೂ ಒದಗಿದ ಬ್ರಹ್ಮಹತ್ಯಾದಿ ಮಹಾಪಾತಕಗಳು ನಿಸ್ಸಂದೇಹವಾಗಿ ನಾಶವಾಗುತ್ತವೆ.

೪೧. ಪೂರ್ವದಲ್ಲಿ ದೇವತೆಗಳು ಪುಸ್ಯಮಾಸದಲ್ಲಿ ಅಮೃತಕ್ಕಾಗಿ ಸಮುದ್ರ ಮಥನವನ್ನು ಮಾಡಿದರು. ಆಗ ಶ್ರೀ ಜನಾರ್ದನಮೂರ್ತಿಯು ತಾನೇ ಕೂರ್ಮ ರೂಪವನ್ನು ಧರಿಸಿದನು.

೪೨. ಪುಷ್ಯಮಾಸದ ಶುಕ್ಲಪಕ್ಷದ್ವಾದಶಿಯು, ಆ ಶ್ರೀ ಹರಿಯು ಕೂರ್ಮಾವತಾರಮಾಡಿದ ದಿವಸವೆಂದು ಉಕ್ತವಾಗಿದೆ.

೪೩. ಅಯ್ಯಾ ರಾಜಶ್ರೇಷ್ಠನೇ ! ಈ ವ್ರತಿಯು ಈ ಮೊದಲು ಹೇಳಿದಂತೆ ಸಂಕಲ್ಪಮಾಡಿ, ಪ್ರಾತಃಸ್ನಾನಾದಿ ನಿತ್ಯಕರ್ಮಗಳನ್ನು ಆಚರಿಸಿ, ಏಕಾದಶೀ ದಿನದ ರಾತ್ರಿಯಲ್ಲಿ ಶ್ರೀ ಜನಾರ್ದನನನ್ನು ಆರಾಧಿಸಬೇಕು. ಮತ್ತು ಜಗದ್ಗುರು

ಕೂರ್ಮಾಯ ಪಾದೌ ಪ್ರಥಮಂ ಸುಪೂಜ್ಯ ।
ನಾರಾಯಣಾಯೇತಿ ಕಟಿಂ ಹರೇಸ್ತು ।
ಸಂಕರ್ಷಣಾಯೇತ್ಯುದರಂ ವಿಶೋಧೇ ।
ತ್ಪುರೋಭವಾಯೇತಿ ಚ ಕಂಠಪೀಠಂ ॥ ೪೪ ॥

ಸುಬಾಹವೇತ್ಯೇವ ಭುಜೌ ಶಿರಶ್ಚ ।
ಸರ್ವಾತ್ಮನೇ ಪಾಂಡವ ಪೂಜನೀಯೌ ।
ಸ್ವನಾಮಮಂತ್ರೇಣ ಚ ಶಂಖಚಕ್ರೇ ।
ಗದಾಂ ನಮಸ್ಕಾರಪರೇಣ ಚೈವ ॥ ೪೫ ॥

ಏಭಿರ್ಮಂತ್ರೈಃ ಪುಷ್ಪಸುಗಂಧಧೂಪೈ ।
ರ್ನೈವೇದ್ಯದೀಪೈರ್ವಿವಿಧೈಃ ಫಲೈಶ್ಚ ।
ಅಭ್ಯರ್ಚ್ಯ ದೇವಂ ಕಲಶಂ ತದಗ್ರೇ ।
ಸಂಸ್ಥಾಪಯೇನ್ಮಾಲ್ಯವಿಲೇಪನಾದ್ಯಂ ॥ ೪೬ ॥

---

ವಾಗಿಯೂ ದೇವದೇವನಾಗಿಯೂ ಇರುವ ಶ್ರೀ ಹರಿಪ್ರೀತ್ಯರ್ಥವಾದ ಮಂತ್ರ ಪೂರ್ವಕವಾಗಿ ಪೂಜಿಸಬೇಕು.

೪೪. ಮೊದಲು "ಕೂರ್ಮಾಯನಮಃ" ಎಂದು ಹೇಳಿ ಶ್ರೀ ಹರಿಯ ಪಾದಗಳನ್ನೂ, ನಾರಾಯಣಾಯನಮಃ ಎಂದು ಹೇಳಿ ಕಟಿಪ್ರದೇಶವನ್ನೂ, ಸಂಕರ್ಷಣಾಯನಮಃ ಎಂದು ಹೇಳಿ ಉದರವನ್ನೂ, ಪುರೋಭವಾಯನಮಃ ಎಂದು ಹೇಳಿ ಕಂಠಪೀಠವನ್ನೂ ಅರ್ಚಿಸಬೇಕು.

೪೫. ಅಯ್ಯಾ ಪಾಂಡವನೇ! "ಸುಬಾಹವೇನಮಃ" ಎಂದು ಹೇಳಿ ಆ ದೇವನ ಭುಜಗಳನ್ನೂ, "ಸರ್ವಾತ್ಮನೇನಮಃ" ಎಂದು ಹೇಳಿ ಶಿರಸ್ಸನ್ನೂ, ಪೂಜಿಸಬೇಕು. ಹಾಗೆಯೇ ಅವನ ಶಂಖಚಕ್ರಗಳನ್ನೂ, ಗದೆಯನ್ನೂ ಆಯಾ ನಾಮಮಂತ್ರಗಳಿಂದಲೇ ನಮಃಪದಾಂತವಾಗಿ ಅರ್ಚಿಸಬೇಕು.

೪೬. ಬಳಿಕ ಪುಷ್ಪ, ಸುಗಂಧ, ಧೂಪ, ದೀಪ, ನೈವೇದ್ಯ ವಿವಿಧ ಫಲಗಳು ಇವುಗಳಿಂದ ಶ್ರೀ ಹರಿಯನ್ನು ಪೂಜಿಸಿ, ಅನಂತರ ಅವನ ಮುಂಭಾಗದಲ್ಲಿ ಮಾಲ್ಯ ವಿಲೇಪನಾದಿಗಳಿಂದ ಅಲಂಕೃತವಾದ ಕಲಶವನ್ನು ಸ್ಥಾಪನೆಮಾಡಬೇಕು.

ತಂ ರತ್ನಗರ್ಭಂ ಸುಸುಗಂಧತೋಯಂ ।
ಕೃತ್ವಾ ತತೋ ಹೇಮಮಯಂ ಸ್ವಶಕ್ತ್ಯಾ ।
ಸಮಂದರಂ ಕೂರ್ಮತನುಂ ಸುರೇಶಂ ।
ಸಂಸ್ಥಾಪಯೇಚ್ಚಾತ್ರ ಶುಭೇ ಚ ಪಾತ್ರೇ ॥ ೪೭ ॥

ಘೃತೈಶ್ಚ ಪೂರ್ಣೇ ಕಲಶಾಗ್ರಸಂಸ್ಥಂ ।
ಸಂಪೂಜಯೇಜ್ಜಾಗರನೃತ್ಯಗೀತೈಃ ।
ಸಂಪೂಜ್ಯ ವಿಪ್ರಾನ್ಘೃತಪಾಯಸೇನ ।
ನಿವೇದ್ಯ ಪೂರ್ವಂ ದ್ವಿಜಪುಂಗವಾಯ ॥ ೪೮ ॥

ನಿರ್ವರ್ತ್ಯ ಸರ್ವಂ ವಿಧಿವತ್ತತಶ್ಚ ।
ಭುಂಜೀತ ಸಂತುಷ್ಟಮನಾಃ ಸಭೃತ್ಯಃ ।
ಏವಂ ಕೃತೇ ಕಲ್ಪಯುಗಾಂತರಾಣಿ ।
ಸ್ವರ್ಗೇ ವಸೇತ್ಸರ್ವಸಮೃದ್ಧಕಾಮಃ ॥ ೪೯ ॥

---

೪೭. ಆ ಕಲಶದೊಳಗೆ ಪಂಚರತ್ನಗಳನ್ನು ಹಾಕಿ, ಸುಗಂಧಜಲವನ್ನು ತುಂಬಿ, ಆಮೇಲೆ ಸುರಾಧಿಪನಾದ ಶ್ರೀ ಹರಿಯ ಕೂರ್ಮಮೂರ್ತಿಯನ್ನು ಮಂದರಪರ್ವತಸಹಿತನಾಗಿ ಸ್ವಶಕ್ತ್ಯನುಸಾರವಾಗಿ ಭಂಗಾರದಿಂದ ಮಾಡಿಸಿ ಶುಭಕರವಾದ ಪಾತ್ರೆಯಲ್ಲಿ ಆ ಪ್ರತಿಮೆಯನ್ನಿಡಬೇಕು.

೪೮. ಆ ಪಾತ್ರೆಯಲ್ಲಿ ತುಪ್ಪವನ್ನು ತುಂಬಿ, ಪೂರ್ವೋಕ್ತ ಕಲಶವ ಮುಂಭಾಗದಲ್ಲಿಟ್ಟು, ಅದರಲ್ಲಿ ಶ್ರೀ ಕೂರ್ಮಮೂರ್ತಿಯನ್ನು ಸ್ಥಾಪಿಸಿ; ಜಾಗರಣ, ನೃತ್ಯಗೀತಾದಿಗಳಿಂದ ಸಂತೋಷಗೊಳಿಸಬೇಕು. ಅನಂತರ ಬ್ರಾಹ್ಮಣರಿಗೂ ಪೂಜೆಮಾಡಿ ಘೃತಮಿಶ್ರವಾದ ಪಾಯಸದಿಂದ ಆ ಬ್ರಾಹ್ಮಣೋತ್ತಮರಿಗೆ ಮೊದಲು ಭೋಜನಮಾಡಿಸಬೇಕು. ಈರೀತಿ ಶಾಸ್ತ್ರೋಕ್ತರೀತಿಯಲ್ಲಿ ಎಲ್ಲ ವನ್ನೂ ಆಚರಿಸಿದ ಮೇಲೆ ತಾನು ಸಂತುಷ್ಟಚಿತ್ತನಾಗಿ ಭೃತ್ಯವರ್ಗಸಮೇತ ಭುಂಜಿಸಬೇಕು.

೪೯. ಈ ರೀತಿಯಾಗಿ ಈ ಕರ್ಮವನ್ನು ಮಾಡಿದವನು ತನ್ನ ಸರ್ವ ಇಷ್ಟಾರ್ಥಗಳನ್ನೂ ಪಡೆದು ಸ್ವರ್ಗದಲ್ಲಿ ಕಲ್ಪಾಂತಪರ್ಯಂತ ವಾಸವಾಗಿರುತ್ತಾನೆ.

ಸಂಸಾರಚಕ್ರಂ ಸ ವಿಹಾಯ ಶೀಘ್ರ ।
ಮಾಪ್ನೋತಿ ಲೋಕಂ ತು ಹರೇಃ ಪುರಾಣಂ ।
ಪ್ರಯಾಂತಿ ಪಾಪಾನಿ ವಿನಾಶಮಾಶು ।
ಶ್ರಿಯಾ ಯುತೋ ಜಾಯತಿ ಸತ್ಯಧರ್ಮಃ ॥ ೫೦ ॥

ಅನೇಕಜನ್ಮಾರ್ಜಿತಸಂಯುತಾನಿ ।
ನಶ್ಯಂತಿ ಪಾಪಾನಿ ನರಸ್ಯ ಭಕ್ತ್ಯಾ ।
ಪ್ರಾಗುಕ್ತರೂಪಂ ಚ ಫಲಂ ಲಭೇತ ।
ನಾರಾಯಣಂ ವಸ್ತುಮುಪೈತಿ ಸದ್ಯಃ ॥ ೫೧ ॥

ಏವಂ ಮಾಘೇ ಸಿತೇ ಪಕ್ಷೇ ದ್ವಾದಶೀಂ ಧರಣೀಧರ ।
ವರಾಹಸ್ಯ ಶೃಣುಷ್ವಾನ್ಯಾಂ ರಾಜನ್ಪರಮಧಾರ್ಮಿಕ ॥ ೫೨ ॥

ಪ್ರಾಗುಕ್ತೇನ ವಿಧಾನೇನ ಸ್ನಾನಂ ಸಂಕಲ್ಪಮೇವ ಚ ।
ಕೃತ್ವಾ ದೇವಂ ಸಮಭ್ಯರ್ಚ್ಯ ಏಕಾದಶ್ಯಾಂ ಸಮಾಹಿತಃ ॥ ೫೩ ॥

---

೫೦. ಅವಶ್ಯಂಭಾವಿಯಾದ ಫಲಗಳನ್ನು ಕೊಡುವ ಈ ಧರ್ಮಕಾರ್ಯವನ್ನು ಮಾಡಿದಾತನು, ಶೀಘ್ರವಾಗಿ ಈ ಸಂಸಾರಚಕ್ರವನ್ನು ತ್ಯಜಿಸಿ, ಪುರಾತನನಾದ ಶ್ರೀ ವಿಷ್ಣುವಿನ ಲೋಕವನ್ನು ಹೊಂದುತ್ತಾನೆ. ಅಲ್ಲದೆ ಅವನ ಪಾಪಗಳು ಬೇಗನೆ ನಾಶವಾಗುತ್ತವೆ. ಮತ್ತು ಅವನು ಸಂಪದ್ಯುಕ್ತನಾಗುತ್ತಾನೆ.

೫೧. ಅಲ್ಲದೆ ಭಕ್ತಿಯಿಂದ ಈ ವ್ರತವನ್ನು ಆಚರಿಸಿದಂಥ ಪುರುಷನ ಪೂರ್ವಾರ್ಜಿತವಾದ ಅನೇಕ ಪಾಪಗಳು ನಾಶವಾಗುತ್ತವೆ. ಈರೀತಿಯಾದ ಹಲವು ಫಲಗಳನ್ನು ಅವನು ಪಡೆದು ಸದ್ಯಃ ಪಾರಮಾರ್ಥಿಕವಾಗಿ ಶ್ರೀಮನ್ನಾರಾಯಣನನ್ನು ಹೊಂದುತ್ತಾನೆ.

೫೨. ಅಯ್ಯಾ ಪರಮಧಾರ್ಮಿಕನಾದ ಭೂಪತಿಯೇ ! ಇದೇ ರೀತಿಯಾಗಿ ಮಾಘಮಾಸದ ಶುಕ್ಲಪಕ್ಷದ ದ್ವಾದಶಿಯಲ್ಲಿ ಆಚರಿಸಬೇಕಾದ ಶ್ರೀ ಹರಿಯ ವರಾಹಾವತಾರದ ಇನ್ನೊಂದು ಪೂಜೆಯ ವಿಧಾನವನ್ನು ಹೇಳುತ್ತೇನೆ ಶ್ರವಣ ಮಾಡು.

೫೩. ಮಾಘಮಾಸದ ಶುಕ್ಲೈಕಾದಶಿಯಲ್ಲಿ ಚಿತ್ತೈಕಾಗ್ರತೆಯುಳ್ಳವನಾಗಿ ಪೂರ್ವೋಕ್ತರೀತಿಯಾಗಿ ಸಂಕಲ್ಪ, ಸ್ನಾನ ಇವುಗಳನ್ನು ಆಚರಿಸಿ, ಶ್ರೀಹರಿಯನ್ನು ಪೂಜಿಸಬೇಕು.

ಧೂಪನೈವೇದ್ಯಗಂಧೈಸ್ತು ಅರ್ಚಯಿತ್ವಾ ಪುನರ್ನರಃ ।
ಪಶ್ಚಾತ್ತಸ್ಯಾಗ್ರತಃ ಕುಮ್ಭಂ ಜಲಪೂರ್ಣಂ ತು ವಿನ್ಯಸೇತ್ ॥ ೫೪ ॥

ವರಾಹಾಯೇತಿ ಪಾದೌ ತು ಮಾಧವಾಯೇತಿ ವೈ ಕಟಿಂ ।
ಕ್ಷೇತ್ರಜ್ಞಾಯೇತಿ ಜಠರಂ ವಿಶ್ವರೂಪೇತ್ಯುರೋ ಹರೇಃ ॥ ೫೫ ॥

ಪೂರ್ವತ್ರಾಯೇತಿ ಕಂಠಂ ತು ಪ್ರಜಾನಾಂ ಪತಯೇ ಶಿರಃ ।
ಪ್ರದ್ಯುಮ್ನಾಯೇತಿ ಚ ಭುಜೌ ದಿವ್ಯಾಸ್ತ್ರಾಯ ಸುದರ್ಶನಂ ॥ ೫೬ ॥

ಅಮೃತೋದ್ಭವಾಯ ಶಂಖಂ ತು ಗದಿನೇ ಚ ಗದಾಂ ತಥಾ ।
ಏವಮಭ್ಯರ್ಚ್ಯ ಮೇಧಾವೀ ತಸ್ಮಿನ್ಕುಂಭೇಽಪಿ ವಿನ್ಯಸೇತ್ ॥ ೫೭ ॥

---

೫೪. ಗಂಧ, ಧೂಪ, ನೈವೇದ್ಯಾದಿಗಳಿಂದ ಶ್ರೀಹರಿಯನ್ನು ಪೂಜಿಸಿದ ಮೇಲೆ ಆ ಪುರುಷನು ಆ ಶ್ರೀ ದೇವನ ಮುಂಭಾಗದಲ್ಲಿ ಜಲಪೂರಿತವಾದ ಕುಂಭ ವನ್ನು ಸ್ಥಾಪಿಸಬೇಕು.

೫೫. ಶ್ರೀ ಹರಿಯನ್ನು ಪೂಜಿಸುವಾಗ "ವರಾಹಾಯನಮಃ" ಎಂದು ಹೇಳಿ ಪಾದಗಳನ್ನೂ, "ಮಾಧವಾಯನಮಃ" ಎಂದು ಕಟಿಪ್ರದೇಶವನ್ನೂ, "ಕ್ಷೇತ್ರಜ್ಞಾಯನಮಃ" ಎಂದು ಉದರವನ್ನೂ, "ವಿಶ್ವರೂಪಾಯನಮಃ" ಎಂದು ವಕ್ಷಸ್ಥಲವನ್ನೂ ಪೂಜಿಸಬೇಕು.

೫೬. ಹಾಗೆಯೇ "ಪವಿತ್ರಾಯನಮಃ" ಎಂದು ಕಂಠವನ್ನೂ "ಪ್ರಜಾನಾಂಪತಯೇನಮಃ" ಎಂದು ಶಿರಸ್ಸನ್ನೂ, "ಪ್ರದ್ಯುಮ್ನಾಯನಮಃ" ಎಂದು ಭುಜಗಳನ್ನೂ, "ದಿವ್ಯಾಸ್ತ್ರಾಯ ನಮಃ" ಎಂದು ಹೇಳಿ ಚಕ್ರವನ್ನೂ ಅರ್ಚಿಸಬೇಕು.

೫೭. "ಅಮೃತೋದ್ಭವಾಯನಮಃ" ಎಂದು ಶಂಖವನ್ನೂ, ಗದಿನೇ ನಮಃ ಎಂದು ಗದೆಯನ್ನೂ ಪೂಜಿಸಬೇಕು.

ಸೌವರ್ಣ ರೂಪ್ಯಂ ತಾಮ್ರಂ ವಾ ಪಾತ್ರಂ ವಿಭವಶಕ್ತಿತಃ ।
ಸರ್ವಬೀಜೈಸ್ತು ಸಂಪೂರ್ಣಂ ಸ್ಥಾಪಯಿತ್ವಾ ವಿಚಕ್ಷಣಃ ॥ ೫೮ ॥

ತತ್ರ ಶಕ್ತ್ಯಾ ಚ ಸೌವರ್ಣಂ ವಾರಾಹಂ ಕಾರಯೇತ್ತತಃ ।
ದಂಷ್ಟ್ರಾಗ್ರೇಣೋದ್ಧರನ್ಪೃಥ್ವೀಂ ಸಪರ್ವತವನದ್ರುಮಾಂ ॥ ೫೯ ॥

ಮಾಧವಂ ಮಧುಹಂತಾರಂ ವಾರಾಹಂ ರೂಪಮಾಸ್ಥಿತಂ ।
ಸರ್ವಬೀಜಭೃತಂ ಪಾತ್ರಂ ರತ್ನಗರ್ಭಘಟೋಪರಿ ॥ ೬೦ ॥

ಸ್ಥಾಪಯೇತ್ಪರಮಂ ದೇವಂ ಜಾತರೂಪಮಯಂ ಹರಿಂ ।
ಸಿತವಸ್ತ್ರಯುಗಚ್ಛನ್ನಂ ತಾಮ್ರಾಭಾವೇ ತು ವೈಣವೇ ॥ ೬೧ ॥

---

೫೮. ಈ ಕ್ರಮದಿಂದ ಪೂಜೆಮಾಡಿದ ಮೇಲೆ, ಆ ಮೇಧಾವಿಯಾದ ವ್ರತಿಯು ತನ್ನ ದ್ರವ್ಯ ಸಂಪತ್ತಿಗನುಸಾರವಾಗಿ ಮಾಡಿಸಿದ ಭಂಗಾರ, ಬೆಳ್ಳಿ ಅಥವಾ ತಾಮ್ರ ಈ ಪಾತ್ರೆಯಲ್ಲಿ ಸರ್ವಧಾನ್ಯಗಳನ್ನೂ ತುಂಬಿ ಪೂರ್ವೋಕ್ತವಾದ ಆ ಕಲಶದ ಮೇಲೆ ಇಡಬೇಕು.

೫೯-೬೦. ಅನಂತರ ಶ್ರೀ ಲಕ್ಷ್ಮೀಕಾಂತನೂ, ಮಧುನಾಮಕ ದೈತ್ಯನನ್ನು ಸಂಹರಿಸಿದವನೂ ಆಗಿ; ಕಾಡು, ಗುಡ್ಡ, ಮರ ಇವುಗಳಿಂದ ಸಹಿತವಾದ ಭೂಮಿಯನ್ನು ತನ್ನ ಕೋರೆದಾಡೆಗಳಿಂದ ಎತ್ತಿ ಹಿಡಿದಿರುವ ಸ್ವರೂಪವುಳ್ಳ ಮಹಾ ವರಾಹರೂಪದ ಪ್ರತಿಮೆಯನ್ನು, ಸ್ವಶಕ್ತ್ಯನುಸಾರ ಭಂಗಾರದಿಂದ ಮಾಡಿಸಿ, ಶ್ರೀಹರಿಯ ಆ ಸುವರ್ಣದ ಪ್ರತಿಮೆಯನ್ನು, ಹಿಂದೆ ಹೇಳಿದ ರತ್ನಗಳನ್ನು ಹಾಕಿರುವ ಕಲಶದ ಮೇಲೆ ಸ್ಥಾಪಿಸಿರುವ ಸರ್ವಧಾನ್ಯ ಪರಿಪೂರ್ಣವಾದ ಪಾತ್ರೆಯಲ್ಲಿಟ್ಟು, ಶುಕ್ಲ ವಸ್ತ್ರಯುಗಳವನ್ನು ಹೊದ್ದಿಸಬೇಕು.

೬೧. ಕಲಶದ ಮೇಲೆ ಇಡುವುದಕ್ಕೆ ತಾಮ್ರದ ಪಾತ್ರೆಯು ಇಲ್ಲವಾದರೆ ಬಿದಿರಿನಿಂದ ಮಾಡಿದ ಪಾತ್ರೆಯನ್ನಿಟ್ಟು, ಅದರಲ್ಲಿ ಧಾನ್ಯವನ್ನು ತುಂಬಿ, ಅದರ ಮೇಲೇ ಈ ಪ್ರತಿಮೆಯನ್ನು ಸ್ಥಾಪಿಸಬಹುದು.

ಸ್ಥಾಪ್ಯಾರ್ಚಯೇದ್ಗಂಧಪುಷ್ಪೈರ್ನೈವೇದ್ಯೈರ್ವಿವಿಧೈಃ ಫಲೈಃ ।
ಪುಷ್ಪಮಂಟಪಿಕಾಂ ಕೃತ್ವಾ ಜಾಗರಂ ತತ್ರ ಕಾರಯೇತ್ || ೬೨ ||

ಪ್ರಾದುರ್ಭಾವಂ ಹರೇರ್ದಿವ್ಯಂ ವಾಚಯೇದ್ಗಾಪಯೇದ್ಬುಧಃ ।
ಏವಂ ಸನಿಯಮಸ್ಯಾಸ್ಯ ಪ್ರಭಾತೇ ಉದಿತೇ ರವೌ || ೬೩ ||

ವೇದವೇದಾಂಗವಿದುಷೇ ಸಾಧುವೃತ್ತಾಯ ಧೀಮತೇ ।
ವಿಷ್ಣುಭಕ್ತಾಯ ರಾಜೇಂದ್ರ ವಿಶೇಷೇಣ ಪ್ರದಾಪಯೇತ್ || ೬೪ ||

ಏವಂ ಸಕುಂಭಂ ದತ್ವಾ ಚ ಹರಿಂ ವಾರಾಹರೂಪಿಣಂ ।
ಬ್ರಾಹ್ಮಣಾಯ ಭವೇದ್ಯದ್ವತ್ಫಲಂ ತನ್ಮೇ ನಿಶಾಮಯ || ೬೫ ||

---

೬೨. ಈರೀತಿ ಸ್ಥಾಪಿಸಿದ ಮೇಲೆ ಗಂಧ, ಪುಷ್ಪ, ಮೊದಲಾದುವುಗಳಿಂದ ಅರ್ಚನೆಮಾಡಿ, ನಾನಾ ನೈವೇದ್ಯಗಳನ್ನೂ, ವಿವಿಧ ಫಲಗಳನ್ನೂ ಸಮರ್ಪಿಸ ಬೇಕು. ಅಲ್ಲದೆ ದೇವರಿಗೆ ಪುಷ್ಪದಿಂದ ಮಂಟಪವನ್ನು ರಚಿಸಿ, ಆ ಸನ್ನಿಧಿಯಲ್ಲಿ ಆದಿನ ರಾತ್ರಿಯೆಲ್ಲಾ ಜಾಗರಣೆ ಮಾಡಬೇಕು.

೬೩. ಪ್ರಾಜ್ಞನಾದ ಈ ವ್ರತಾನುಷ್ಠಾನಕರ್ತನು ಆಗ ಶ್ರೀಹರಿಯ ದಿವ್ಯ ಅವತಾರ ವಿಚಾರವನ್ನು ಹರಿಕಥಾ ರೂಪವಾಗಿ ಹೇಳಿಸಬೇಕು. ಅಥವಾ ಆ ಚರಿತ್ರೆಯನ್ನು ಗಾನಮಾಡಿಸಬೇಕು. ಅಯ್ಯಾ ರಾಜೇಂದ್ರನೇ ! ಈ ರೀತಿ ಯಾಗಿ ಸತ್ಕಾಲಕ್ಷೇಪದಿಂದ ನಿಯಮಯುತನಾಗಿ ಜಾಗರಣೆಮಾಡಿ ಆ ರಾತ್ರಿ ಯನ್ನು ಕಳೆಯಬೇಕು.

೬೪. ಮರುದಿನ ಸೂರ್ಯೋದಯವಾಗುತ್ತಿರಲು, ವೇದ ವೇದಾಂಗಗಳನ್ನು ತಿಳಿದವನೂ, ಸದಾಚಾರಿಯೂ, ಪಂಡಿತನೂ, ವಿಶೇಷತಃ ವಿಷ್ಣುಭಕ್ತನೂ ಆಗಿ ರುವ ಬ್ರಾಹ್ಮಣನಿಗೆ ಆ ಕುಂಭಾದಿಗಳನ್ನು ದಾನ ಮಾಡಬೇಕು.

೬೫. ಅಯ್ಯಾ ರಾಜನೇ! ಈರೀತಿ ಆ ಕಲಶವನ್ನೂ, ಮತ್ತು ಶ್ರೀಹರಿಯ ವರಾಹ ಪ್ರತಿಮೆಯನ್ನೂ ಬ್ರಾಹ್ಮಣನಿಗೆ ದಾನಮಾಡಿ, ಈ ವ್ರತವನ್ನು ಮಾಡಿದ್ದ ರಿಂದ ಅವನಿಗೆ ಬರುವ ಫಲವೇನೆಂಬುದನ್ನು ಹೇಳುತ್ತೇನೆ ಕೇಳು.

ಇಹ ಜನ್ಮನಿ ಸೌಭಾಗ್ಯಂ ಶ್ರೀಕಾನ್ತೀ ಪುಷ್ಟಿಮೇವ ಚ ।
ಪ್ರಾಪ್ನೋತಿ ಪುರುಷೋ ರಾಜನ್ಯದ್ಯದಿಚ್ಛತಿ ಕಿಂಚನ ॥ ೭೬ ॥

ಏಕಾಽಪಿ ವಿಧಿನೋಪಾಸ್ತಾ ದದಾತ್ಯಮೃತಮುತ್ತಮಂ ।
ಕಿಂ ಪುನರ್ವರ್ಷಮೇಕಂ ಚ ಕರೋತಿ ಕುರುನಂದನ ॥ ೭೭ ॥

ಏಷಾ ಚ ಫಾಲ್ಗುನೇ ಮಾಸಿ ಶುಕ್ಲಪಕ್ಷೇ ತು ದ್ವಾದಶೀ ।
ಉಪೋಷ್ಯಾ ಪೂರ್ವವಿಧಿನಾ ಹರಿಮಾರಾಧಯೇತ್ಸುಧೀಃ ॥ ೭೮ ॥

ನರಸಿಂಹಾಯ ಪಾದೌ ತು ಗೋವಿಂದಾಯೋದರಂ ತಥಾ ।
ಕಟಿಂ ವಿಶ್ವಸೃಜೇ ಪೂಜ್ಯ ಅನಿರುದ್ಧೇತ್ಯುರೋ ಹರೇಃ ॥ ೭೯ ॥

---

೭೬. ಅಯ್ಯಾ ರಾಜನೇ ! ಇದನ್ನು ಆಚರಿಸಿದ ಪುರುಷನು ಈ ಜನ್ಮದಲ್ಲಿ ಸುಖ, ಸೌಭಾಗ್ಯ, ಸಂಪತ್ತು, ಸೌಂದರ್ಯ, ಪುಷ್ಟಿ ಇವುಗಳನ್ನು ಪಡೆಯುವುದಲ್ಲದೆ ತಾನು ಬಯಸಿದುವನ್ನೆಲ್ಲಾ ಪಡೆಯುತ್ತಾನೆ.

೭೭. ಅಯ್ಯಾ ಕುರುವಂಶಜನೇ ! ಒಂದು ಮಾಸದಲ್ಲಿ ವಿದ್ಯುಕ್ತ ಪ್ರಕಾರವಾಗಿ ಒಂದೇಸಲ ಈ ಆರಾಧನೆಯನ್ನು ಮಾಡಿದರೂ, ಇದು ಅವನಿಗೆ ಉತ್ತಮವಾದ ಅಮರತ್ವವನ್ನೇ ಕೊಡುತ್ತದೆ. ಹೀಗಿರುವಾಗ ಒಂದು ವರ್ಷ ಪೂರ್ತಿಯಾಗಿ ಈ ಆರಾಧನೆಯನ್ನು ನಡೆಸಿದರೆ ಅದರ ಪುಣ್ಯಫಲವನ್ನು ಹೇಳಬೇಕೇ ?

೭೮. ಫಾಲ್ಗುನ ಮಾಸದ ಶುಕ್ಲಪಕ್ಷದ ದ್ವಾದಶಿಯಲ್ಲಿಯೂ ಇದೇ ರೀತಿ ಆಚರಿಸಬೇಕು. ಆಗ ಪೂರ್ವದಿನವಾದ ಏಕಾದಶಿಯಲ್ಲಿ ಉಪವಾಸವನ್ನಾಚರಿಸಿ ಪ್ರಾಜ್ಞನಾದವನು ಪೂರ್ವೋಕ್ತ ಪ್ರಕಾರವಾಗಿ ಶ್ರೀಹರಿಯನ್ನು ಆರಾಧಿಸಬೇಕು.

೭೯. ಆಗ "ನರಸಿಂಹಾಯ ನಮಃ" ಎಂದು ಶ್ರೀಹರಿಯ ಪಾದಗಳನ್ನೂ, ಹಾಗೆಯೇ "ಗೋವಿಂದಾಯ ನಮಃ" ಎಂದು ಉದರವನ್ನೂ, "ವಿಶ್ವಸೃಜೇ ನಮಃ" ಎಂದು ಕಟಿಪ್ರದೇಶವನ್ನೂ, "ಅನಿರುದ್ಧಾಯ ನಮಃ" ಎಂದು ಹೇಳಿ ಶ್ರೀಹರಿಯ ವಕ್ಷಸ್ಥಲವನ್ನೂ ಅರ್ಚಿಸಬೇಕು.

ಕಂಠಂ ತು ಶಿತಿಕಂಠಾಯ ವೈನತೇಯಾಯ ವೈ ಶಿರಃ ।
ಅಸುರಧ್ವಂಸನಾಯೇತಿ ವಕ್ತ್ರಂ ತೋಯಾತ್ಮನೇ ನಮಃ ॥ ೭೦ ॥

ಶಂಖಮಿತ್ಯೇವ ಸಂಪೂಜ್ಯ ಗಂಧಪುಷ್ಪೈಃ ಫಲೈಸ್ತಥಾ ।
ತದಗ್ರೇ ತು ಘಟಂ ಸ್ಥಾಪ್ಯ ಸಿತವಸ್ತ್ರಯುಗಾನ್ವಿತಂ ॥ ೭೧ ॥

ತಸ್ಯೋಪರಿ ನೃಸಿಂಹಂ ತು ಸೌವರ್ಣಂ ತಾಮ್ರಭಾಜನೇ ।
ಹೈಮೇ ಚ ಶಕ್ತಿತಃ ಕೃತ್ವಾ ದಾರುವಂಶಮಯೇಽಪಿ ವಾ ॥ ೭೨ ॥

ರತ್ನಗರ್ಭಮಯೇ ಸ್ಥಾಪ್ಯ ಭಕ್ತ್ಯಾ ಸಂಪೂಜ್ಯ ಮಾನವಃ ।
ದ್ವಾದಶ್ಯಾಂ ವೇದವಿದುಷೇ ಬ್ರಾಹ್ಮಣಾಯ ನಿವೇದಯೇತ್ ॥ ೭೩ ॥

---

೭೦. "ಶಿತಿಕಂಠಾಯನಮಃ" ಎಂದು ಕಂಠವನ್ನೂ, "ವೈನತೇಯಾಯ ನಮಃ" ಎಂದು ಶಿರಸ್ಸನ್ನೂ, "ಅಸುರಧ್ವಂಸನಾಯ ನಮಃ" ಎಂದು ವದನವನ್ನೂ, "ತೋಯಾತ್ಮನೇ ನಮಃ" ಎಂದು ಹೇಳಿ ಹಸ್ತದಲ್ಲಿನ ಶಂಖವನ್ನೂ ಪೂಜಿಸಬೇಕು.

೭೧. ಬಳಿಕ ಗಂಧ, ಪುಷ್ಪ, ಫಲಾದಿಗಳಿಂದ ಅರ್ಚಿಸಬೇಕು. ಅನಂತರ ಆ ದೇವನ ಮುಂಭಾಗದಲ್ಲಿ ಬಿಳಿಯ ವಸ್ತ್ರಯುಗಳದಿಂದ ಸಮೇತವಾದ ಕಲಶವನ್ನು ಸ್ಥಾಪಿಸಬೇಕು.

೭೨-೭೩. ಈ ವ್ರತವನ್ನು ಆಚರಿಸುವ ಪುರುಷನು ಸ್ವಶಕ್ತ್ಯಾನುಸಾರವಾಗಿ ಭಂಗಾರ, ತಾಮ್ರ, ಮರ, ಬಿದಿರು ಇವುಗಳಲ್ಲಿ ಯಾವುದರಿಂದಲಾದರೂ ಮಾಡಿದ ಪಾತ್ರೆಯನ್ನು ಆ ರತ್ನಗರ್ಭಮಯವಾದ ಕಲಶದ ಮೇಲಿಟ್ಟು ಆ ಪಾತ್ರೆಯಲ್ಲಿ ಭಂಗಾರದಿಂದ ಮಾಡಿಸಿದ ಶ್ರೀ ನರಸಿಂಹ ಮುಂತಾದ ಪ್ರತಿಮೆಗಳನ್ನು ಸ್ಥಾಪಿಸಿ, ಭಕ್ತಿಯಿಂದ ಪೂಜಿಸಿ, ದ್ವಾದಶಿಯದಿನ ವೇದಾಧ್ಯಯನಮಾಡಿದ ಬ್ರಾಹ್ಮಣನಿಗೆ ಆ ವಸ್ತ್ರ ಸಮೇತವಾದ ಕುಂಭವನ್ನೂ, ಪ್ರತಿಮೆಯನ್ನೂ, ದಾನ ಕೊಡಬೇಕು.

ಏಷಾ ವಂದ್ಯಾ ಪಾಪಹರಾ ದ್ವಾದಶೀ ಭವತೇ ಮಯಾ ।
ಕಥಿತಾ ಚ ಪ್ರಯತ್ನೇನ ಶ್ರುತಾ ಚ ಭವತೇಽಪ್ಸಿತಾ ॥ ೭೪ ॥

ಏವಮೇನಾಂ ನರವ್ಯಾಘ್ರ ಚೈತ್ರೇ ಸಂಕಲ್ಪ್ಯ ದ್ವಾದಶೀಂ ।
ಉಪೋಷ್ಯಾರಾಧಯೇತ್ಪಶ್ಚಾದ್ದೇವದೇವಂ ಜನಾರ್ದನಂ ॥ ೭೫ ॥

ಕುಂಡಿಕಾಂ ಸ್ಥಾಪಯೇತ್ಪಾರ್ಶ್ವೇ ಛತ್ರಿಕಾಂ ಪಾದುಕೇ ತಥಾ ।
ಅಮಲಂ ವಾಮನಂ ಸ್ಥಾಪ್ಯ ಬೃಸೀಂ ಕಾಂಸಪರಿಚ್ಛದಾಂ ॥ ೭೬ ॥

ಫಲೈಃ ಪುಷ್ಪೈಃ ಸುಗಂಧೈಶ್ಚ ಪ್ರಭಾತೇ ಸದ್ದ್ವಿಜಾತಯೇ ।
ದಾಪಯೇತ್ಪ್ರೀಯತಾಂ ವಿಷ್ಣುರ್ಹ್ರಸ್ವರೂಪೀತ್ಯುದೀರಯೇತ್ ॥೭೭॥

---

೭೪. ಅಯ್ಯಾ ರಾಜನೇ ! ಪರಮಪೂಜ್ಯವಾಗಿಯೂ ಪಾಪನಿವಾರಕವಾಗಿಯೂ ಇರುವ, ಈ ದ್ವಾದಶೀಪೂಜಾ ವಿಚಾರಗಳನ್ನು ನಿನಗೆ ನಾನು ಹೇಳಿದೆನು. ನಿನ್ನ ಇಷ್ಟಾನುಸಾರ ನಾನು ಹೇಳಿದ ಈ ದ್ವಾದಶಿವ್ರತವನ್ನು ನೀನು ಏಕಾಗ್ರತೆಯಿಂದ ಶ್ರವಣಮಾಡಿರುವೆ.

೭೫. ಅಯ್ಯಾ ನರಶ್ರೇಷ್ಠನೇ ! ಇದೇ ರೀತಿಯಾಗಿ ಚೈತ್ರಮಾಸದ ಶುಕ್ಲಪಕ್ಷದ ದ್ವಾದಶಿವ್ರತದಲ್ಲೂ, ಪೂರ್ವದಿನದಲ್ಲಿ ಉಪವಾಸಮಾಡಿ, ಅನಂತರ ದೇವದೇವನಾದ ಶ್ರೀ ಜನಾರ್ದನನನ್ನು ಆರಾಧಿಸಬೇಕು.

೭೬. ಆ ಶ್ರೀ ಹರಿಯ ಪಾರ್ಶ್ವದಲ್ಲಿ ಕಲಶವನ್ನು ಸ್ಥಾಪನೆಮಾಡಬೇಕು. ಹಾಗೆಯೇ ಛತ್ರಿ, ಪಾದುಕೆ, ಪೀಠ, ಇತರ ರಾಜೋಪಚಾರವಸ್ತುಗಳಾದ ಚಾಮರಾದಿಗಳನ್ನೂ ಇಟ್ಟು ನಿರ್ಮಲವಾದ ಶ್ರೀ ವಾಮನಮೂರ್ತಿಯ ವಿಗ್ರಹವನ್ನು ಪೀಠದಲ್ಲಿ ಸ್ಥಾಪಿಸಬೇಕು.

೭೭. ಆ ಮೂರ್ತಿಯನ್ನು ಫಲ, ಪುಷ್ಪ, ಗಂಧ ಅಕ್ಷತಾದಿಗಳಿಂದ ಅರ್ಚಿಸಿ, ಮರುದಿನ ಎಂದರೆ ದ್ವಾದಶೀದಿನ ಪ್ರಭಾತವಾಗುತ್ತಿರಲು ಸದ್ಬ್ರಾಹ್ಮಣರಿಗೆ ಅದನ್ನೆಲ್ಲಾ "ಹ್ರಸ್ವರೂಪಿ ವಿಷ್ಣುಃಪ್ರೀಯತಾಂ" ಎಂದು ಹೇಳಿ ದಾನ ಕೊಡಬೇಕು.

ಮಾಸನಾಮ್ನಾತ್ರ ಸಂಯುಕ್ತಂ ಪ್ರಾದುರ್ಭಾವಂ ವಿಧಾನತಃ ।
ಪ್ರೀಯತಾಮಿತಿ ಸರ್ವತ್ರ ವಿಧಿರೇವಂ ಪ್ರಕೀರ್ತಿತಃ || ೭೮ ||

ಅಪುತ್ರೋ ಲಭತೇ ಪುತ್ರಮಧನೋ ಧನಮಾಪ್ನುಯಾತ್ ।
ಭ್ರಷ್ಟರಾಜ್ಯೋ ಲಭೇದ್ರಾಜ್ಯಂ ಮೃತೋ ವಿಷ್ಣುಪುರಂ ವ್ರಜೇತ್||೭೯||

ಕ್ರೀಡಿತ್ವಾ ಸುಚಿರಂ ಕಾಲಮಿಹ ಮರ್ತ್ಯಮುಪಾಗತಃ ।
ಚಕ್ರವರ್ತೀ ಭವೇದ್ಧೀಮಾನ್ಯಯಾತಿರಿವ ನಾಹುಷಃ || ೮೦ ||

ವೈಶಾಖೇऽಪ್ಯೇವಮೇವಂ ತು ಸಂಕಲ್ಪ್ಯ ವಿಧಿವನ್ನರಃ ।
ತದ್ವತ್ಸ್ನಾನಂ ಮೃದಾ ತದ್ವತ್ತತೋ ದೇವಾಲಯಂ ವ್ರಜೇತ್ || ೮೧ ||

---

೭೮. ಈ ವ್ರತದಲ್ಲಿ ಆಯಾಯ ಮಾಸನಾಮಗಳ ಸಹಿತವಾಗಿ ತತ್ತನ್ಮಾಸಗಳ ಶ್ರೀ ಹರಿಯ ಅವತಾರನಾಮವನ್ನು ಹೇಳಿಕೊಂಡು ಶಾಸ್ತ್ರಪ್ರಕಾರವಾಗಿ "ಕೂರ್ಮಃ ಪ್ರೀಯತಾಂ'' ಇತ್ಯಾದಿಯಾಗಿ ಹೇಳಿ ದಾನಕೊಡಬೇಕು. ಎಲ್ಲಾ ತಿಂಗಳಿನಲ್ಲೂ ದಾನಕ್ರಮವು ಇದೇರೀತಿ ಎಂದು ಹೇಳಲ್ಪಟ್ಟಿದೆ.

೭೯. ಹೀಗೆ ಆಚರಿಸಿದ್ದರಿಂದ ಅಪುತ್ರನಿಗೆ ಪುತ್ರಲಾಭವಾಗುವುದು. ಧನಹೀನನಾದ ದರಿದ್ರನಿಗೆ ಧನಲಾಭವಾಗುತ್ತದೆ. ರಾಜ್ಯಭ್ರಷ್ಟನಾದವನು ಪುನಃ ರಾಜ್ಯವನ್ನು ಪಡೆಯುತ್ತಾನೆ. ಇವರು ಮರಣಾನಂತರದಲ್ಲಿ ಶ್ರೀ ವಿಷ್ಣುವಿನ ಲೋಕಕ್ಕೆ ಹೋಗುತ್ತಾರೆ.

೮೦. ಆತನು ಆ ವಿಷ್ಣುಲೋಕದಲ್ಲಿ ಬಹುಕಾಲ ಕ್ರೀಡಿಸಿ, ಈ ಮನುಷ್ಯಲೋಕಕ್ಕೆ ಬಂದು, ನಹುಷಚಕ್ರವರ್ತಿಯ ಸಂಬಂಧಿಯಾದ ಯಯಾತಿಯಂತೆ ಚಕ್ರವರ್ತಿಯಾಗುತ್ತಾನೆ.

೮೧. ಪ್ರತಿಯು ವೈಶಾಖಮಾಸದಲ್ಲೂ ಇದೇರೀತಿಯಾಗಿ ವಿಧಿವತ್ತಾಗಿ ಸಂಕಲ್ಪಮಾಡಿ, ಹಿಂದೆ ಹೇಳಿದಂತೆಯೇ ಮೃತ್ತಿಕೆಯನ್ನು ಲೇಪಿಸಿಕೊಂಡು ಸ್ನಾನಮಾಡಿ, ಆಮೇಲೆ ಮೊದಲಿನಂತೆಯೇ ದೇವಾಲಯಕ್ಕೆ ಹೋಗಬೇಕು.

ತತ್ರಾರಾಧ್ಯ ಹರಿಂ ಭಕ್ತ್ಯಾ ಏಭಿರ್ಮಂತ್ರೈರ್ವಿಚಕ್ಷಣಃ ।
ಜಾಮದಗ್ನ್ಯಾಯ ಪಾದೌ ತು ಉದರಂ ಸರ್ವಧಾರಿಣೇ ॥ ೮೨ ॥

ಮಧುಸೂದನಾಯೇತಿ ಕಟಿಮುರಃ ಶ್ರೀವತ್ಸಧಾರಿಣೇ ।
ಕ್ಷತ್ರಾಂತಕಾಯ ಚ ಭುಜೌ ಮಣಿಕಂಠಾಯ ಕಂಠಕಂ ॥ ೮೩ ॥

ಪೂಜಯೇನ್ನಿಯತೋ ಭೂತ್ವಾ ಸುರೂಪಾಯೇತಿ ವೈ ಮುಖಂ ।
ಸ್ವನಾಮ್ನಾ ಶಂಖಚಕ್ರೇ ಚ ಶಿರೋ ಬ್ರಹ್ಮಾಂಡಧಾರಿಣೇ ॥ ೮೪ ॥

ಏವಮಭ್ಯರ್ಚ್ಯ ಮೇಧಾವೀ ಪ್ರಾಗ್ವಂಶಸ್ಯಾಗ್ರತೋ ಘಟಂ ।
ವಿನ್ಯಸ್ಯೇತ್ಪುಷ್ಪವಸ್ತ್ರಾಢ್ಯಂ ಸಿತಚಂದನಚರ್ಚಿತಂ ॥ ೮೫ ॥

---

೮೨. ಈ ವ್ರತವನ್ನಾಚರಿಸುವ ಪಂಡಿತನು ಆ ದೇವಾಲಯದಲ್ಲಿ ಈ ಮುಂದೆ ಹೇಳುವ ನಾಮಮಂತ್ರಗಳನ್ನು ಹೇಳಿ ಪೂಜೆಮಾಡಬೇಕು. " ಜಾಮದಗ್ನ್ಯಾಯನಮಃ " ಎಂದು ಶ್ರೀ ಹರಿಯ ಪಾದಗಳನ್ನೂ, ಮತ್ತು ಸರ್ವಧಾರಿಣೇ ನಮಃ ಎಂದು ಹೇಳಿ ಶ್ರೀ ಹರಿಯ ಉದರವನ್ನೂ ಅರ್ಚಿಸಬೇಕು.

೮೩. " ಮಧುಸೂದನಾಯನಮಃ " ಎಂದು ಹೇಳಿ ಕಟಿಪ್ರದೇಶವನ್ನೂ, " ಶ್ರೀ ವತ್ಸಧಾರಿಣೇನಮಃ " ಎಂದು ವಕ್ಷಸ್ಥಲವನ್ನೂ, " ಕ್ಷತ್ರಾಂತಕಾಯ ನಮಃ " ಎಂದು ಭುಜಗಳನ್ನೂ " ಮಣಿಕಂಠಾಯನಮಃ " ಎಂದು ಹೇಳಿ ಕಂಠವನ್ನೂ ಪೂಜಿಸಬೇಕು.

೮೪. ಬಳಿಕ ಇಂದ್ರಿಯಗಳನ್ನು ನಿಗ್ರಹಿಸಿ ಚಿತ್ತೈಕಾಗ್ರತೆಯುಳ್ಳವನಾಗಿ " ಸುರೂಪಾಯ ನಮಃ " ಎಂದು ಶ್ರೀಹರಿಯ ಮುಖವನ್ನೂ, ಅವುಗಳ ನಾಮಗಳಿಂದ ಶಂಖ, ಚಕ್ರಗಳನ್ನೂ, ಅರ್ಚಿಸಿ " ಬ್ರಹ್ಮಾಂಡ ಧಾರಿಣೇ ನಮಃ " ಎಂದು ಹೇಳಿ ಶ್ರೀಹರಿಯ ಉದರವನ್ನು ಪೂಜಿಸಬೇಕು.

೮೫. ಈ ವ್ರತಾನುಷ್ಠಾನಮಾಡುವ ಮೇಧಾವಿಯು ಈ ಪ್ರಕಾರ ಶ್ರೀ ಹರಿಯನ್ನು ಪೂಜಿಸಿದ ಮೇಲೆ ಆ ಪೂಜಾಮಂಟಪದ ಮುಂಭಾಗದಲ್ಲಿ ಶುಕ್ಲ ಚಂದನಲಿಪ್ತವಾಗಿಯೂ ಪುಷ್ಪ ವಸ್ತ್ರಗಳಿಂದ ಅಲಂಕೃತವಾಗಿಯೂ ಇರುವ ಕಲಶವನ್ನು ಸ್ಥಾಪನೆಮಾಡಬೇಕು.

ವೈಣವೇಽಭಿನವೇ ಪಾತ್ರೇ ಸ್ಥಾಪಯೇನ್ಮಧುಸೂದನಂ ।
ಜಾಮದಗ್ನ್ಯೇನ ರೂಪೇಣ ಕೃತ್ವಾ ಸೌವರ್ಣಮಗ್ರತಃ ॥ ೮೬ ॥

ದಕ್ಷಿಣೇ ಪರಶುಂ ಹಸ್ತೇ ತಸ್ಯ ದೇವಸ್ಯ ಕಾರಯೇತ್ ।
ಸರ್ವಗಂಧೈಸ್ತು ಸಂಪೂಜ್ಯ ಪುಷ್ಪೈರ್ನಾನಾವಿಧೈಃ ಶುಭೈಃ ॥ ೮೭ ॥

ತತಸ್ತಸ್ಯಾಗ್ರತಃ ಕುರ್ಯಾಜ್ಜಾಗರಂ ಭಕ್ತಿಮಾನ್ನರಃ ।
ಪ್ರಭಾತೇ ವಿಮಲೇ ಸೂರ್ಯೇ ಬ್ರಾಹ್ಮಣಾಯ ನಿವೇದಯೇತ್ ॥ ೮೮ ॥

ಏವಂ ನಿಯಮಯುಕ್ತಸ್ಯ ಯತ್ಫಲಂ ತನ್ನಿಬೋಧ ಮೇ ।
ಕಾಶ್ಯಪೇ ಬ್ರಹ್ಮಣೋ ಲೋಕೇ ಚೋಷಿತ್ವಾಪ್ಸರಸಾಂ ಗಣೈಃ ।
ಸ್ಥಿತ್ವಾ ಭೌತೇ ಚ ಸೃಷ್ಟೌ ಚ ಚಕ್ರವರ್ತೀ ಭವೇದ್ಧ್ರುವಂ ॥ ೮೯ ॥

---

೮೬. ಅನಂತರ ಹೊಸದಾದ ಬಿದಿರಿನಿಂದ ಮಾಡಿದ ಪಾತ್ರೆಯಲ್ಲಿ ಜಮದಗ್ನಿ ಪುತ್ರನಾದ ಶ್ರೀ ಪರಶುರಾಮನ ಆಕಾರವಾಗಿ ಸುವರ್ಣದಿಂದ ಮಾಡಿಸಿದ ಪ್ರತಿಮೆಯನ್ನಿಟ್ಟು ಆ ಕಲಶದ ಇದಿರಿಗೆ ಸ್ಥಾಪಿಸಬೇಕು.

೮೭. ಆ ದೇವಪ್ರತಿಮೆಯ ಬಲಗೈಯಲ್ಲಿ ಪರಶುವನ್ನು ಹಿಡಿದಿರುವಂತೆ ಮಾಡಿಸಬೇಕು. ಅನಂತರ ಆ ಪ್ರತಿಮೆಗೆ ಸುಗಂಧವನ್ನು ಲೇಪನಮಾಡಿ, ನಾನಾ ವಿಧವಾದ ಪುಷ್ಪಗಳಿಂದ ಅರ್ಚನೆ ಮಾಡಬೇಕು.

೮೮. ಆ ದೇವನ ಇದಿರಾಗಿ ಆದಿನ ರಾತ್ರೆ ಭಕ್ತಿಯುತನಾಗಿ ಜಾಗರಣೆಯನ್ನು ಆಚರಿಸಬೇಕು. ಮರುದಿನ ಬೆಳಗಾಗಿ ಸೂರ್ಯೋದಯವಾದ ಮೇಲೆ ಆ ಸವಸ್ತ್ರ, ಕುಂಭ ಪ್ರತಿಮೆ ಆದಿಯಾಗಿ ಎಲ್ಲವನ್ನೂ ಬ್ರಾಹ್ಮಣನಿಗೆ ದಾನ ಕೊಡಬೇಕು.

೮೯. ಅಯ್ಯಾ ರಾಜನೇ ! ಈರೀತಿ ನಿಯಮಯುಕ್ತನಾಗಿ ಈ ವ್ರತವನ್ನು ಆಚರಿಸಿದವನಿಗೆ ಯಾವ ಫಲ ಲಭಿಸುವುದೆಂಬುದನ್ನು ಹೇಳುವೆನು ಕೇಳು. ಆ ಪುರುಷನು ಅಪ್ಸರಸ್ತ್ರೀಗಣ ಪರಿವೃತನಾಗಿ, ಕಶ್ಯಪ ಪ್ರಜಾಪತಿಯ ಲೋಕದಲ್ಲಿ ಬಹುಕಾಲ ವಾಸಮಾಡಿ, ಆ ಮೇಲೆ ಪುನಃ ಸೃಷ್ಟ್ಯಾದಿಯ ಭೂತಸೃಷ್ಟಿಯ ಕಾಲದಲ್ಲಿ ಈ ಮರ್ತ್ಯಲೋಕದಲ್ಲಿ, ಜನಿಸಿ ಚಕ್ರವರ್ತಿಯಾಗುವನೆಂಬುದು ನಿಶ್ಚಯವು.

ಜ್ಯೇಷ್ಠೇ ಮಾಸೇಪ್ಯೇವಮೇವ ಸಂಕಲ್ಪ್ಯ ವಿಧಿವನ್ನರಃ ।
ಅರ್ಚಯೇತ್ಪರಮಂ ದೇವಂ ಪುಷ್ಪೈರ್ನಾನಾವಿಧೈಃ ಶುಭೈಃ ॥ ೯೦ ॥

ನಮೋ ದಾಮೋದರಾಯೇತಿ ಪಾದೌ ಪೂರ್ವಂ ಸಮರ್ಚಯೇತ್ ।
ತ್ರಿವಿಕ್ರಮಾಯೇತಿ ಕಟಿಂ ಧೃತವಿಶ್ವಾಯ ಚೋದರಂ ॥ ೯೧ ॥

ಉರಃ ಸಂವರ್ತಕಾಯೇತಿ ಕಂಠಂ ಸಂವತ್ಸರಾಯ ಚ ।
ಸರ್ವಾಸುಧಾರಿಣೇ ಬಾಹುಂ ಸ್ವನಾಮ್ನಾಬ್ಜರಥಾಂಗಕೇ ॥ ೯೨ ॥

ಸಹಸ್ರಶಿರಸೇಽಭ್ಯರ್ಚ್ಯ ಶಿರಸ್ತಸ್ಯ ಮಹಾತ್ಮನಃ ।
ಏವಮಭ್ಯರ್ಚ್ಯ ವಿಧಿವತ್ಪ್ರಾಗುಕ್ತವಿಧಿವನ್ನ್ಯಸೇತ್ ॥ ೯೩ ॥

---

೯೦. ಪ್ರತಿಯು ಜ್ಯೇಷ್ಠಮಾಸದಲ್ಲೂ ಇದೇ ರೀತಿ ವಿಧಿವತ್ತಾಗಿ ಸಂಕಲ್ಪ ಮಾಡಿ, ಪರಮಪುರುಷನಾದ ಶ್ರೀಹರಿಯನ್ನು ನಾನಾವಿಧ ಶುಭಫಲಪುಷ್ಪಗಳಿಂದ ಪೂಜಿಸಬೇಕು.

೯೧. ಆಗ ಮೊದಲು ದಾಮೋದರಾಯ ನಮಃ ಎಂದು ಹೇಳಿ ಶ್ರೀಹರಿಯ ಪಾದಗಳನ್ನು ಅರ್ಚಿಸಬೇಕು. ಹಾಗೆಯೇ ತ್ರಿವಿಕ್ರಮಾಯ ನಮಃ ಎಂದು ಕಟಿಪ್ರದೇಶವನ್ನೂ, ಧೃತವಿಶ್ವಾಯ ನಮಃ ಎಂದು ಹೇಳಿ ಉದರವನ್ನೂ ಪೂಜಿಸಬೇಕು.

೯೨. ಸಂವರ್ತಕಾಯ ನಮಃ ಎಂದು ವಕ್ಷಸ್ಥಳವನ್ನೂ, ಸಂವತ್ಸರಾಯ ನಮಃ ಎಂದು ಕಂಠವನ್ನೂ, ಸರ್ವಾಸುಧಾರಿಣೇ ನಮಃ ಎಂದು ಬಾಹುಗಳನ್ನೂ, ಪದ್ಮ ಮತ್ತು ಚಕ್ರಗಳನ್ನು ಸ್ವಸ್ವನಾಮಗಳಿಂದಲೂ ಅರ್ಚಿಸಬೇಕು.

೯೩. ಹಾಗೇ "ಸಹಸ್ರ ಶಿರಸೇ ನಮಃ" ಎಂದು ಹೇಳಿ ಆ ಮಹಾತ್ಮನಾದ ಶ್ರೀಹರಿಯ ಶಿರಸ್ಸನ್ನು ಪೂಜಿಸಬೇಕು. ಈರೀತಿ ಶಾಸ್ತ್ರೋಕ್ತ ರೀತಿಯಲ್ಲಿ ಪೂಜಿಸಿದ ಮೇಲೆ ಹಿಂದೆ ಹೇಳಿದ ಕ್ರಮದಲ್ಲಿಯೇ ಕಲಶ ಸ್ಥಾಪನಾದಿಗಳನ್ನು ಮಾಡಬೇಕು.

ಸ್ರಗ್ಭಿರ್ವಸ್ತ್ರಸುಗಂಧೈಶ್ಚ ಸೌವರ್ಣೌ ರಾಮಲಕ್ಷ್ಮಣೌ ।
ಅರ್ಚಯಿತ್ವಾ ವಿಧಾನೇನ ಪ್ರಭಾತೇ ಬ್ರಾಹ್ಮಣಾಯ ತೌ ।
ದಾತವ್ಯೌ ಮನಸಾ ಕಾಮಮೀಹತಾ ಪುರುಷೇಣ ತು || ೯೪ ||

ಅಪುತ್ರೇಣ ಪುರಾ ಪೃಷ್ಟೋ ರಾಜ್ಞಾ ದಶರಥೇನ ತು ।
ಪುತ್ರಕಾಮೇನ ಯಜತಾ ವಶಿಷ್ಠಃ ಪರಮಾರ್ಚಿತಃ || ೯೫ ||

ಇದಮೇವ ವಿಧಾನಂ ತು ಕಥಯಾಮಾಸ ವೈ ದ್ವಿಜಃ ।
ಸರಹಸ್ಯಂ ವಿದಿತ್ವಾತ್ರ ಸ ರಾಜಾ ಕೃತವಾನಿದಂ || ೯೬ ||

ತಸ್ಯ ಪುತ್ರಃ ಸ್ವಯಂ ಜಜ್ಞೇ ರಾಮೋ ನಾಮ ಮಹಾಬಲಃ ।
ಚತುರ್ಧಾ ಸೋಽವ್ಯಯೋ ವಿಷ್ಣುಃ ಪರಿತೋಷಾದಜಾಯತ ।
ಏತದೇವಂ ಮಯಾಖ್ಯಾತಂ ಪರಲೋಕೇ ಸುಖಪ್ರದಂ || ೯೭ ||

---

೯೪. ಅನಂತರ ಹಿಂದೆ ಮಾಡಿಸಿದಂತೆಯೇ ಭಂಗಾರದಿಂದ ಶ್ರೀರಾಮ ಲಕ್ಷ್ಮಣರ ಪ್ರತಿಮೆಮಾಡಿಸಿ, ವಸ್ತ್ರ ಮತ್ತು ಸುಗಂಧಾದಿಗಳಿಂದ ಶಾಸ್ತ್ರಪ್ರಕಾರವಾಗಿ ಪೂಜೆಮಾಡಬೇಕು. ವ್ರತಾನುಷ್ಠಾತೃವಾದ ಪುರುಷನು ಮರುದಿನ ಬೆಳಗಾದ ಮೇಲೆ ತನ್ನ ಇಷ್ಟಾರ್ಥವು ಸಿದ್ಧಿಸಲೆಂದು ಮನಸ್ಸಿನಲ್ಲಿ ಪ್ರಾರ್ಥಿಸಿ, ಆ ರಾಮ ಲಕ್ಷ್ಮಣರ ಪ್ರತಿಮೆಗಳನ್ನು ಬ್ರಾಹ್ಮಣರಿಗೆ ದಾನ ಮಾಡಬೇಕು.

೯೫. ಸಂತಾನವಿಲ್ಲದ ದಶರಥಮಹಾರಾಜನು ಪೂರ್ವದಲ್ಲಿ ಪುತ್ರಾರ್ಥವಾಗಿ ಪುತ್ರಕಾಮೇಷ್ಟಿಯಾಗವನ್ನು ಮಾಡುತ್ತಿರುವಾಗ, ವಸಿಷ್ಠಮಹರ್ಷಿಯನ್ನು ಪೂಜೆಮಾಡಿ ಪ್ರಶ್ನೆ ಮಾಡಿದನು.

೯೬. ಆಗ ವಶಿಷ್ಠನೆಂಬ ಬ್ರಹ್ಮರ್ಷಿಯು ಈ ಪೂಜಾವಿಧಾನವನ್ನೇ ಆ ರಾಜನಿಗೆ ಉಪದೇಶಿಸಿದನು. ಆ ದಶರಥರಾಜನು ಅನುಷ್ಠಾನಕ್ರಮ ಸಹಿತವಾಗಿ ಇದನ್ನು ತಿಳಿದುಕೊಂಡು ಈ ಕರ್ಮವನ್ನು ಮಾಡಿದನು.

೯೭. ಆಗ ಆ ಮಹಾವಿಷ್ಣುವು ಇವರಿಂದ ಸಂತುಷ್ಟನಾಗಿ ತಾನೇ ನಾಲ್ಕು ಅಂಶದಿಂದ ಅವನಿಗೆ ಪುತ್ರರಾಗಿ ಜನಿಸಿದನು. ಆ ದಶರಥನಿಗೆ ನಾಲ್ಕು ಪುತ್ರರಾಗಿ ಜನಿಸಿದವರಲ್ಲಿ ಮಹಾಬಲಶಾಲಿಯಾದ ರಾಮನೆಂಬುವನು ಸಾಕ್ಷಾತ್ ಶ್ರೀ ವಿಷ್ಣುವಿನ ಮೂಲಾಂಶಸಂಭೂತನು. ಅಯ್ಯಾ ರಾಜನೇ ! ಪರಲೋಕದಲ್ಲಿ ಸುಖದಾಯಕವಾದ ಈ ವ್ರತವನ್ನು ಈರೀತಿಯಾಗಿ ನಾನು ನಿನಗೆ ಹೇಳಿದ್ದಾಯಿತು ಎಂದನು.

|| ಶ್ರೀ ಕೃಷ್ಣ ಉವಾಚ ||

ಅಷಾಢೇಽಪ್ಯೇವಮೇವಂ ತು ಸಂಕಲ್ಪ್ಯ ವಿಧಿನಾ ನರಃ ।
ಅರ್ಚಯೇತ್ಪರಮಂ ದೇವಂ ಗಂಧಪುಷ್ಪೈಃ ಸಮಾಹಿತಃ || ೯೮ ||

ವಾಸುದೇವಾಯ ಪಾದೌ ತು ಕಟಿಂ ಸಂಕರ್ಷಣಾಯ ಚ ।
ಪ್ರದ್ಯುಮ್ನಾಯೇತಿ ಜಠರಮನಿರುದ್ಧಾಯ ವೈ ಉರಃ || ೯೯ ||

ಚಕ್ರಪಾಣಿಂ ಭುಜೌ ಕಂಠಂ ಮುಖಂ ಭೂಪತಯೇ ತಥಾ ।
ಸ್ವನಾಮ್ನಾ ಶಂಖಚಕ್ರೇ ತು ಪುರುಷಾಯೇತಿ ವೈ ಶಿರಃ || ೧೦೦ ||

ಏವಮಭ್ಯರ್ಚ್ಯ ಮೇಧಾವೀ ಪ್ರಾಗ್ವತ್ತಸ್ಯಾಗ್ರತೋ ಘಟಂ ।
ವಿನ್ಯಸ್ಯ ವಸ್ತ್ರಸಂಯುಕ್ತಂ ತಸ್ಯೋಪರಿ ತತೋ ನ್ಯಸೇತ್ ।
ಕಾಂಚನಂ ವಾಸುದೇವೇತಿ ಚಕ್ರಬಾಹುಂ ಸನಾತನಂ || ೧೦೧ ||

---

೯೮. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ರಾಜನೇ ! ಆಷಾಢಮಾಸದಲ್ಲಿ ವ್ರತಿಯು ವಿಧಿಪ್ರಕಾರವಾಗಿ ಸಂಕಲ್ಪಿಸಿ, ಚಿತ್ತೈಕಾಗ್ರತೆಯುಳ್ಳವನಾಗಿ ಪರಮಪುರುಷನಾದ ಶ್ರೀ ಹರಿಯನ್ನು ಗಂಧಪುಷ್ಪಾದಿಗಳಿಂದ ಪೂಜಿಸಬೇಕು.

೯೯. ಆಗ ವಾಸುದೇವಾಯನಮಃ ಎಂದು ಶ್ರೀ ಹರಿಯ ಪಾದಗಳನ್ನೂ, ಸಂಕರ್ಷಣಾಯನಮಃ ಎಂದು ಕಟಿಪ್ರದೇಶವನ್ನೂ, ಪ್ರದ್ಯುಮ್ನಾಯನಮಃ ಎಂದು ಉದರವನ್ನೂ, ಮತ್ತು ಅನಿರುದ್ಧಾಯನಮಃ ಎಂದು ಹೇಳಿ ವಕ್ಷಸ್ಥಲವನ್ನೂ ಪೂಜಿಸಬೇಕು.

೧೦೦. ಮತ್ತು ಚಕ್ರಪಾಣಿನೇನಮಃ ಎಂದು ಭುಜಗಳನ್ನೂ, ಹಾಗೆಯೇ ಭೂಪತಯೇನಮಃ ಎಂದು ಮುಖವನ್ನೂ, ಸ್ವಸ್ವನಾಮಗಳಿಂದ ಶಂಖಚಕ್ರಗಳನ್ನೂ, ಪುರುಷಾಯನಮಃ ಎಂದು ಹೇಳಿ ಶಿರಸ್ಸನ್ನೂ ಪೂಜಿಸಬೇಕು.

೧೦೧. ಈ ವ್ರತಾನುಷ್ಠಾತೃವಾದ ಮೇಧಾವಿಯು ಈ ಕ್ರಮದಿಂದ ಅರ್ಚಿಸಿದ ಮೇಲೆ ಮೊದಲಿನಂತೆಯೇ ಆ ದೇವನ ಮುಂಭಾಗದಲ್ಲಿ ವಸ್ತ್ರಯುತವಾದ ಕಲಶವನ್ನು ಸ್ಥಾಪನೆಮಾಡಿ, ಅನಂತರ ಅನಾದಿಯಾದ ಆ ಹರಿಯಕೈಯ ಚಕ್ರವನ್ನು ಧರಿಸಿದ, ಶ್ರೀ ವಾಸುದೇವನ ಆಕೃತಿಯಾಗಿ ಭಂಗಾರದಲ್ಲಿ ಮಾಡಿಸಿದ ಪ್ರತಿಮೆಯನ್ನು, ಆ ಕಲಶದ ಮೇಲೆ ಸ್ಥಾಪಿಸಬೇಕು.

**ತಾಮಭ್ಯರ್ಚ್ಯ ವಿಧಾನೇನ ಗಂಧಪುಷ್ಪಾದಿಭಿಃ ಕ್ರಮಾತ್ ।**
**ಪ್ರಾಗುಕ್ತದ್ಬ್ರಾಹ್ಮಣೇ ದದ್ಯಾದ್ವೇದವಾದಿನಿ ಸುವ್ರತೇ ॥ ೧೦೨ ॥**

**ಏಷಾಹ್ಯುಪೋಷಿತಾ ರಾಜನ್ವಿದ್ಯಾಂ ವಿಪ್ರೇ ಪ್ರಯಚ್ಛತಿ ।**
**ರಾಜ್ಯಂ ಚ ಭ್ರಷ್ಟರಾಜ್ಯಾನಾಮಪುತ್ರಾಣಾಂ ಸುತಾನ್ಬಹೂನ್ ॥ ೧೦೩ ॥**

**ಮೃತೋ ವಿಷ್ಣುಪುರೇ ರಮ್ಯೇ ಕ್ರೀಡತೇ ಕಾಲಮಕ್ಷಯಂ ।**
**ಮನ್ವಂತರಾಣಿ ಷಟ್ತ್ರಿಂಶತ್ತತಃ ಕಾಲಾತ್ಯಯೇ ಪುನಃ ॥ ೧೦೪ ॥**

**ಇಹಲೋಕೇ ಭವೇದ್ರಾಜಾ ಸಪ್ತಜನ್ಮನಿ ಮಾನವಃ ।**
**ದಾತಾ ಯಶಃಕ್ಷಮಾಯುಕ್ತಸ್ತತೋ ನಿರ್ವಾಣಮಾಪ್ನುಯಾತ್ ॥೧೦೫॥**

---

೧೦೨. ಆ ಮೂರ್ತಿಯನ್ನು ಪೂರ್ವೋಕ್ತಕ್ರಮದಲ್ಲಿ ಗಂಧಪುಷ್ಪಾದಿಗಳಿಂದ ಅರ್ಚಿಸಿ, ವೇದಾಧ್ಯಯನವನ್ನು ಮಾಡಿದವನೂ ಸದಾಚಾರಸಂಪನ್ನನೂ ಆದ ಬ್ರಾಹ್ಮಣನಿಗೆ ದಾನಮಾಡಬೇಕು.

೧೦೩. ಅಯ್ಯಾ ರಾಜನೇ! ಈ ವ್ರತದಲ್ಲಿ ಏಕಾದಶಿಯದಿವಸ ಉಪವಾಸ ಮಾಡಿ ಪೂಜೆಮಾಡಿದರೆ, ಬ್ರಾಹ್ಮಣನಿಗಾದರೆ ವಿದ್ಯಾಪ್ರಾಪ್ತಿಯಾಗುವುದು. ರಾಜ್ಯಭ್ರಷ್ಟನಾದ ಕ್ಷತ್ರಿಯನಾದರೆ ಅವನಿಗೆ ಪುನಃ ರಾಜ್ಯಪ್ರಾಪ್ತಿಯಾಗುವುದು. ಅಪುತ್ರರಿಗೆ ಬಹುಪುತ್ರಲಾಭವಾಗುವುದು.

೧೦೪. ಅವನು ದೇಹತ್ಯಾಗಮಾಡಿದ ಮೇಲೆ ಸುಂದರವಾದ ವಿಷ್ಣುಲೋಕಕ್ಕೆ ಹೋಗಿ, ಅಕ್ಷಯವಾದ ಬಹುಕಾಲಪರ್ಯಂತ ಆ ಲೋಕದಲ್ಲಿ ಕ್ರೀಡಿಸುತ್ತಾನೆ. ಹಾಗೆ ಮೂವತ್ತಾರು ಮನ್ವಂತರಗಳಕಾಲ ಆ ವಿಷ್ಣುಲೋಕದಲ್ಲಿ ವಾಸವಾಗಿರುತ್ತಾನೆ.

೧೦೫. ಆಮೇಲೆ ಪುನಃ ಈ ಮರ್ತ್ಯಲೋಕಕ್ಕೆ ಬಂದು ಏಳುಜನ್ಮಗಳಲ್ಲಿ ದಾತೃತ್ವ, ಕ್ಷಮೆ, ಇತ್ಯಾದಿ ಗುಣಗಳಿಂದ ಕೂಡಿದ ರಾಜನಾಗುತ್ತಾನೆ. ಅನಂತರ ಅವನು ಮೋಕ್ಷವನ್ನು ಪಡೆಯುತ್ತಾನೆ.

|| ಶ್ರೀ ಕೃಷ್ಣ ಉವಾಚ ||

ಏವಮೇವ ಶ್ರಾವಣೇ ತು ಮಾಸಿ ಸಂಕಲ್ಪ್ಯ ದ್ವಾದಶೀಂ |
ಅರ್ಚಯೇತ್ಪರಮಂ ದೇವಂ ಗಂಧಪುಷ್ಪನಿವೇದನೈಃ || ೧೦೬ ||

ಬುಧಾಯ ಪಾದೌ ಸಂಪೂಜ್ಯ ಶ್ರೀಧರಾಯೇತಿ ವೈ ಕಟಿಂ |
ಪದ್ಮೋದ್ಭವಾಯ ಜಠರಮುರಃ ಸಂವತ್ಸರಾಯ ಚ || ೧೦೭ ||

ಸುಗ್ರೀವಾಯೇತಿ ವೈ ಕಂಠಂ ಭುಜೌ ವೈ ಚಿತ್ರಬಾಹವೇ |
ಪ್ರಾಗ್ವದಸ್ತ್ರಾಣಿ ಸಂಪೂಜ್ಯ ಬ್ರಾಹ್ಮಣಾಯ ನಿವೇದಯೇತ್ || ೧೦೮ ||

ಅನೇನ ವಿಧಿನಾ ಸರ್ವಾಂ ದ್ವಾದಶೀಂ ಸಮುಪೋಷಿತಃ |
ಶುದ್ಧೌದನೇನ ತಸ್ಯಾಭೂತ್ಸ್ವಯಂ ಪುತ್ರೋ ಜನಾರ್ದನಃ || ೧೦೯ ||

---

೧೦೬. ಶ್ರೀ ಕೃಷ್ಣನು ಮುಂದುವರಿಸಿ ಹೇಳುತ್ತಾನೆ— ಅಯ್ಯಾ ರಾಜನೇ! ಇದೇರೀತಿ ಶ್ರಾವಣಶುದ್ಧ ದ್ವಾದಶಿಯಲ್ಲೂ ಸಂಕಲ್ಪಮಾಡಿ ಪರಮಪುರುಷನಾದ ಶ್ರೀ ಹರಿಯನ್ನು ಗಂಧ, ಪುಷ್ಪ, ಧೂಪದೀಪನಿವೇದನಾದಿಗಳಿಂದ ಅರ್ಚಿಸಬೇಕು.

೧೦೭. ಆಗ ಬುದ್ಧಾಯನಮಃ ಎಂದು ಶ್ರೀಹರಿಯ ಪಾದಗಳನ್ನೂ, ಶ್ರೀಧರಾಯನಮಃ ಎಂದು ಕಟಿಪ್ರದೇಶವನ್ನೂ, ಪದ್ಮೋದ್ಭವಾಯನಮಃ ಎಂದು· ಉದರವನ್ನೂ, ಸಂವತ್ಸರಾಯನಮಃ ಎಂದು ಹೇಳಿ ವಕ್ಷಸ್ಥಳವನ್ನೂ, ಪೂಜಿಸಬೇಕು.

೧೦೮. ಮತ್ತು ಸುಗ್ರೀವಾಯನಮಃ ಎಂದು ಕಂಠವನ್ನೂ, ಚಿತ್ರಬಾಹವೇ ನಮಃ ಎಂದು ಭುಜಗಳನ್ನೂ, ಶಂಖಚಕ್ರ ಆಯುಧ ಮೊದಲಾದಗಳನ್ನು ಮೊದಲಿನಂತೆ ಸ್ವಸ್ವನಾಮಗಳಿಂದಲೂ ಅರ್ಚಿಸಿ, ಪ್ರತಿಮಾದಿಗಳನ್ನು ಮೊದಲಿನಂತೆಯೇ ಬ್ರಾಹ್ಮಣನಿಗೆ ದಾನಮಾಡಬೇಕು.

೧೦೯. ಶುದ್ಧೋಧನೆಂಬವನು ಈ ಕ್ರಮದಲ್ಲಿ ಉಪವಾಸದಿಂದಿದ್ದು ಈ ಎಲ್ಲಾ ದ್ವಾದಶೀವ್ರತದ ಪೂಜೆಯನ್ನೂ ಮಾಡಿದ್ದರಿಂದ ಶ್ರೀ ಜನಾರ್ದನನು ತಾನೇ ಅವನಿಗೆ ಪುತ್ರನಾಗಿ ಜನಿಸಿದನು.

[illegible]ಶೀಂ ಚ ಶ್ರಿಯಂ ಪ್ರಾಪ್ಯ ಪುತ್ರಪೌತ್ರಸಮನ್ವಿತಃ ।
[illegible] ರಾಜ್ಯಶ್ರಿಯಂ ಸೋಽಥ ಗತಃ ಪರಮಿಕಾಂ ಗತಿಂ ॥ ೧೧೦ ॥

ಏಷ ತೇ ವಿಧಿರುದ್ದಿಷ್ಟಃ ಶ್ರಾವಣೇ ಮಾಸಿ ಸತ್ತಮಃ ।
ಏಕೈಕೋಽಪ್ಯೋಷಿತಾಪ್ಯಸ್ತು ರಾಜ್ಯಮೇಕೈವ ಯಚ್ಛತಿ ।
ಕಿಂ ಪುನರ್ದ್ವಾದಶೈವಾತ್ರ ದದ್ಯುರೈಂದ್ರಂ ಮಹತ್ಪದಂ ॥ ೧೧೧ ॥

ತದ್ವದ್ಭಾದ್ರಪದೇ ಮಾಸಿ ಶುಕ್ಲಪಕ್ಷೇ ತು ದ್ವಾದಶೀಂ ।
ಸಂಕಲ್ಪ್ಯ ವಿಧಿನಾ ದೇವಮರ್ಚಯೇತ್ಪರಮೇಶ್ವರಂ ॥ ೧೧೨ ॥

ನಮೋಽಸ್ತು ಕಲ್ಕಿನೇ ಪಾದೌ ಹೃಷೀಕೇಶಾಯ ವೈ ಕಟಿಂ ।
ಮ್ಲೇಚ್ಛಪ್ರಧ್ವಂಸನಾಯೇತಿ ಜಗನ್ಮೂರ್ತೇ ತಥೋದರಂ ॥ ೧೧೩ ॥

---

೧೧೦. ಮತ್ತು ಆ ಶುದ್ಧೋದನನು ಈ ವ್ರತಾಚರಣೆಯಿಂದ ಬಹು ಸಂಪತ್ತನ್ನು ಹೊಂದಿ, ಪುತ್ರಪೌತ್ರಸಮೇತನಾಗಿ, ರಾಜ್ಯಸುಖಗಳನ್ನನುಭವಿಸಿ, ಅನಂತರ ಅವನು ಪರಮಗತಿಯನ್ನು ಪಡೆದನು.

೧೧೧. ಅಯ್ಯಾ ನೃಪೋತ್ತಮನೇ ! ಶ್ರಾವಣಶುಕ್ಲ ದ್ವಾದಶೀವ್ರತದ ಪ್ರಯೋಗವಿಧಾನವನ್ನು ನಿನಗೆ ನಾನು ಹೇಳಿದೆನು. ಒಂದು ಒಂದು ಉಪವಾಸ ವನ್ನು ಆಚರಿಸಿ ಈ ಪೂಜೆಯನ್ನು ಒಂದು ತಿಂಗಳಿನಲ್ಲಿ ಆಚರಿಸಿದರೂ ಆ ಒಂದು ದ್ವಾದಶಿಯೇ ರಾಜ್ಯಪ್ರದವಾಗುವುದು. ಹೀಗಿರುವಲ್ಲಿ ಒಂದು ವರ್ಷದಲ್ಲಿ ಪ್ರತಿ ಯೊಂದುತಿಂಗಳಿನ ಶುಕ್ಲದ್ವಾದಶಿಯಲ್ಲೂ ಇದೇ ರೀತಿ ಆಚರಿಸುತ್ತಾ ಹನ್ನೆರಡು ದ್ವಾದಶಿಯಲ್ಲಿಯೂ ಮಾಡಿದರೆ ಇನ್ನು ಹೇಳತಕ್ಕದ್ದೇನು ? ಅಂತಹವನಿಗೆ ಆ ದ್ವಾದಶಿಯ ಪುಣ್ಯಫಲಗಳು ಈ ಜನ್ಮದಲ್ಲಿಯೇ ದೇವೇಂದ್ರನ ಮಹಾಪದವಿಗೆ ಸಮನಾದ ಪದವಿಯನ್ನು ಕೊಡುತ್ತವೆ.

೧೧೨. ಇದೇ ರೀತಿಯಾಗಿ ಭಾದ್ರಪದಮಾಸದ ಶುಕ್ಲಪಕ್ಷದ ದ್ವಾದಶಿ ಯಲ್ಲೂ, ಶಾಸ್ತ್ರೋಕ್ತ ರೀತಿಯಾಗಿ ಸಂಕಲ್ಪಮಾಡಿ, ಆದಿದೇವನಾದ ಶ್ರೀಹರಿ ಯನ್ನು ಪೂಜಿಸಬೇಕು.

೧೧೩. ಆಗ "ಕಲ್ಕಿನೇನಮಃ" ಎಂದು ಪಾದಗಳನ್ನೂ, "ಹೃಷೀ ಕೇಶಾಯನಮಃ" ಎಂದು ಕಟಿಪ್ರದೇಶವನ್ನೂ, ಮ್ಲೇಚ್ಛಪ್ರಧ್ವಂಸನಾಯನಮಃ ಎಂದು ಜಗನ್ಮೂರ್ತಿಯಾದ ಶ್ರೀಹರಿಯ ಉದರವನ್ನೂ ಪೂಜಿಸಬೇಕು.

ಶಿತಿಕಂಠಾಯ ಕಂಠಂ ತು ಖಡ್ಗಪಾಣಿನಿ ವೈ ಭುಜೌ ।
ಶಂಖಚಕ್ರೇ ಸ್ವನಾಮ್ನಾತ್ರ ವಿಶ್ವಮೂರ್ತೇ ತಥಾ ಶಿರಃ ॥ ೧೧೪ ॥

ಏವಮಭ್ಯರ್ಚ್ಯ ಮೇಧಾವೀ ಪ್ರಾಗ್ವತ್ತಸ್ಯಾಗ್ರತೋ ಘಟಂ ।
ವಿನ್ಯಸ್ಯ ಕಲ್ಕಿನಂ ದೇವಂ ಸೌವರ್ಣಂ ತತ್ರ ಕಾರಯೇತ್ ॥ ೧೧೫ ॥

ಸಿತವಸ್ತ್ರಯುಗಚ್ಛನ್ನಂ ಗಂಧಪುಷ್ಪೋಪಶೋಭಿತಂ ।
ಕೃತ್ವಾ ಪ್ರಭಾತೇ ವಿಪ್ರಾಯ ಪ್ರದೇಯಃ ಶಾಸ್ತ್ರವಿತ್ತಮೇ ॥ ೧೧೬ ॥

ಏವಂ ಕೃತೇ ಭವೇದ್ಯಸ್ತು ತನ್ನಿಬೋಧ ನೃಪೋತ್ತಮ ।
ದಶಾವತಾರದಾನೇನ ಪೂಜನೇ ಚೈವ ಯತ್ಫಲಂ ॥ ೧೧೭ ॥

---

೧೧೪. ಹಾಗೆಯೇ ಶಿತಿಕಂಠಾಯನಮಃ ಎಂದು ಕಂಠವನ್ನೂ, ಶಾರ್ಙ್ಗಪಾಣಿನೇನಮಃ ಎಂದು ಭುಜಗಳನ್ನೂ, ಶಂಖಚಕ್ರಗಳನ್ನು ಸ್ವಸ್ವನಾಮಗಳಿಂದಲೂ ಅರ್ಚಿಸಿ, ವಿಶ್ವಮೂರ್ತಯೇನಮಃ ಎಂದು ಹೇಳಿ ಶಿರಸ್ಸನ್ನು ಅರ್ಚಿಸಬೇಕು.

೧೧೫. ಪ್ರಾಜ್ಞನಾದವನು ಈರೀತಿ ಅರ್ಚಿಸಿ, ಹಿಂದೆ ಹೇಳಿದಂತೆಯೇ ಆ ಶ್ರೀ ಹರಿಯ ಮುಂಭಾಗದಲ್ಲಿ ಕಲಶಸ್ಥಾಪನೆಮಾಡಿ, ಅನಂತರ ಶ್ರೀ ಹರಿಯ ಕಲ್ಕ್ಯವತಾರದ ಆಕೃತಿಯುಳ್ಳ ಭಂಗಾರದ ಪ್ರತಿಮೆಯನ್ನು ಮಾಡಿಸಿ, ಆ ಕಲಶದ ಮೇಲೆ ಸ್ಥಾಪಿಸಬೇಕು.

೧೧೬. ಅನಂತರ ಆ ಮೂರ್ತಿಗೆ ಶುಕ್ಲವಸ್ತ್ರಯುಗಳವನ್ನು ಹೊದ್ದಿಸಿ ಗಂಧಪುಷ್ಪಗಳಿಂದ ಅಲಂಕರಿಸಿ, ಮರುದಿನ ಬೆಳಗಾದ ಮೇಲೆ ಅದನ್ನು ಶಾಸ್ತ್ರಜ್ಞನಾದ ಪಂಡಿತೋತ್ತಮನಿಗೆ ದಾನಮಾಡಬೇಕು.

೧೧೭. ಅಯ್ಯಾ ನೃಪೋತ್ತಮನೇ! ಶ್ರೀಹರಿಯ ದಶಾವತಾರದ ಪೂಜೆ, ಆ ದಶಾವತಾರ ಪ್ರತಿಮಾದಾನ, ಇವನ್ನು ಇಲ್ಲಿ ಹೇಳಿದಂತೆ ಆಚರಿಸಿದವನಿಗೆ ಯಾವ ಫಲವು ಲಭಿಸುವುದೋ ಅದನ್ನು ಹೇಳುವೆನು ಕೇಳು.

ಪೂಜ್ಯತೇ ಮತ್ಸ್ಯರೂಪೇಣ ಸರ್ವಜ್ಞತ್ವಮಭೀಪ್ಸುಭಿಃ ।
ಸ್ವಕುಂಟುಂಬಭರಣಾಯಾಥ ಕೂರ್ಮರೂಪೀ ತು ಪೂಜ್ಯತೆ || ೧೧೮ ||

ಭವೋದಧಿನಿಮಗ್ನೈಸ್ತು ವಾರಾಹಃ ಪೂಜ್ಯತೇ ಹರಿಃ ।
ನೃಸಿಂಹನವರೂಪೇಣ ತದ್ವತ್ಪಾಪಭಯಾನ್ನರಃ || ೧೧೯ ||

ವಾಮನಂ ಮೋಹನಾಶಾಯ ವಿತ್ತಾರ್ಥೇ ಜಮದಗ್ನಿಜಂ ।
ಕ್ರೂರಶತ್ರುವಿನಾಶಾಯ ಯಜೇದ್ದಾಶರಥಿಂ ಬುಧಃ || ೧೨೦ ||

ಬಲಕೃಷ್ಣೌ ಯಜೇದ್ಧೀಮಾನ್ಪುತ್ರಕಾಮೋ ನ ಸಂಶಯಃ ।
ರೂಪಕಾಮೋ ಯಜೇದ್ಬುದ್ಧಂ ಕಲ್ಕಿನಂ ಶತ್ರುಘಾತನೇ ।
ಸರ್ವಾಂ ದತ್ವಾ ವಿಧಾನೇನ ಪೂಜಾಂ ಪ್ರಾಪ್ನೋತಿ ವಾಂಛಿತಂ || ೧೨೧ ||

---

೧೧೮. ಸರ್ವಜ್ಞತ್ವವು ಲಭಿಸಬೇಕೆಂದಿರುವವರು ಮತ್ಸ್ಯಾವತಾರನಾದ ಶ್ರೀಹರಿಯನ್ನು ಪೂಜಿಸುವರು. ಸ್ವಕುಟುಂಬ ಪೋಷಣೆಯಲ್ಲಿ ಆಸಕ್ತ ರಾದವರು ಕುಟುಂಬಭರಣಾರ್ಥವಾಗಿ ಕೂರ್ಮರೂಪಿಯಾದ ಶ್ರೀ ಹರಿಯನ್ನು ಪೂಜಿಸುತ್ತಾರೆ. ಎಂದರೆ ಆ ಅವತಾರಮೂರ್ತಿ ಪೂಜೆಯಿಂದ ಈ ಫಲವಿಶೇಷ ಲಾಭವಾಗುವುದು.

೧೧೯. ಸಂಸಾರಸಾಗರನಿಮಗ್ನರಾದವರು ತದುದ್ಧಾರಕ್ಕಾಗಿ ವರಾಹರೂಪಿ ಯಾದ ಶ್ರೀ ಹರಿಯನ್ನು ಪೂಜಿಸುತ್ತಾರೆ. ಹಾಗೆಯೇ ಪಾಪಭೀರುಗಳು ತಮ್ಮ ಪಾಪನಿವೃತ್ತ್ಯರ್ಥವಾಗಿ ನೃಸಿಂಹಾವತಾರನಾದ ಶ್ರೀ ಹರಿಯನ್ನು ಅರ್ಚಿಸುವರು.

೧೨೦. ಹಾಗೆಯೇ ತಮ್ಮ ಅಜ್ಞಾನನಿವೃತ್ತಿಗಾಗಿ ವಾಮನಮೂರ್ತಿಯನ್ನೂ, ಧನಲಾಭಕ್ಕಾಗಿ ಪರಶುರಾಮಮೂರ್ತಿಯನ್ನೂ, ಕ್ರೂರಶತ್ರುವಿನಾಶಾರ್ಥವಾಗಿ ಶ್ರೀರಾಮಮೂರ್ತಿಯನ್ನೂ, ಪ್ರಾಜ್ಞನಾದವನು ಪೂಜಿಸಬೇಕು.

೧೨೧. ಪುತ್ರಕಾಮನೆಯುಳ್ಳ ಪ್ರಾಜ್ಞನು ಪುತ್ರಾರ್ಥವಾಗಿ ಬಲರಾಮ ಕೃಷ್ಣರನ್ನು ಪೂಜಿಸಿದರೆ ನಿಸ್ಸಂಶಯವಾಗಿ ಪುತ್ರಲಾಭವಾಗುವುದು. ಸೌಂದರ್ಯಾಭಿ ಲಾಷೆಯುಳ್ಳವನು ಬುದ್ಧಮೂರ್ತಿಯನ್ನು ಅರ್ಚಿಸಬೇಕು. ಶತ್ರುನಾಶವಾಗ ಬೇಕೆಂದಿರುವವನು ಕಲ್ಕಿಮೂರ್ತಿಯನ್ನು ಆರಾಧಿಸಬೇಕು. ಈ ಎಲ್ಲಾ ಅವತಾರ ಮೂರ್ತಿಗಳ ಅರ್ಚನೆಯನ್ನೂ ಮಾಡಿ, ಆ ಮೂರ್ತಿಗಳನ್ನು ಉಕ್ತಕ್ರಮದಲ್ಲಿ ದಾನಮಾಡಿದವನು ತನ್ನ ಸರ್ವಮನೋರಥಗಳನ್ನೂ ಪಡೆಯುತ್ತಾನೆ.

॥ ಶ್ರೀ ಕೃಷ್ಣ ಉವಾಚ ॥

ತದ್ವದಾಶ್ವಯುಜೇ ಮಾಸಿ ಶುಕ್ಲಪಕ್ಷೇ ತು ದ್ವಾದಶೀಂ ।
ಸಂಕಲ್ಪ್ಯಾಭ್ಯರ್ಚಯೇದ್ದೇವಂ ಪದ್ಮನಾಭಂ ಸನಾತನಂ ॥ ೧೨೨ ॥

ಪದ್ಮನಾಭಾಯ ಪಾದೌ ತು ಕಟಿಂ ವೈ ಪದ್ಮಯೋನಯೇ ।
ಉದರಂ ಸರ್ವದೇವಾಯ ಪುಷ್ಕರಾಕ್ಷಾಯ ವಾ ಉರಃ ।
ಅವ್ಯಯಾಯ ತಥಾ ಶೀರ್ಷಂ ಪ್ರಾಗ್ವದಸ್ತ್ರಾಣಿ ಪೂಜಯೇತ್॥ ೧೨೩ ॥

ತತಸ್ತಸ್ಯಾಗ್ರತಃ ಕುಂಭಂ ಮಾಲ್ಯವಸ್ತ್ರಸಮನ್ವಿತಂ ।
ಯಥಾಶಕ್ತ್ಯಾ ಕಾಂಚನೇನ ಪದ್ಮನಾಭೇತಿ ಭೂಷಿತಂ ॥ ೧೨೪ ॥

ರಾತ್ರೌ ತು ಜಾಗರಂ ಕೃತ್ವಾ ಪ್ರಭಾತೇ ವಿಮಲೇ ತತಃ ।
ಬ್ರಾಹ್ಮಣೇ ತತ್ಪ್ರದಾತವ್ಯಂ ಸಂಸಾರಭಯಭೀರುಣಾ ॥ ೧೨೫ ॥

೧೨೨. ಶ್ರೀ ಕೃಷ್ಣನು ಮುಂದುವರಿಸಿ ಹೇಳುತ್ತಾನೆ—ಅಯ್ಯಾ ರಾಜನೇ ! ಇದೇ ರೀತಿಯಾಗಿ ಆಶ್ವಯುಜಮಾಸ ಶುಕ್ಲಪಕ್ಷದ ದ್ವಾದಶಿಯಲ್ಲಿ ಆದಿದೇವನಾದ ಶ್ರೀ ಹರಿಯನ್ನು ಸಂಕಲ್ಪಪೂರ್ವಕವಾಗಿ ಅರ್ಚಿಸಬೇಕು.

೧೨೩. ಆಗ " ಪದ್ಮನಾಭಾಯನಮಃ " ಎಂದು ಹೇಳಿ ಶ್ರೀ ಹರಿಯ ಪಾದಗಳನ್ನೂ, " ಪದ್ಮಯೋನಯೇನಮಃ " ಎಂದು ಹೇಳಿ ಕಟಿಪ್ರದೇಶವನ್ನೂ, " ಸರ್ವದೇವಾಯನಮಃ " ಎಂದು ಹೇಳಿ ಶ್ರೀಹರಿಯ ಉದರವನ್ನೂ, " ಪುಷ್ಕರಾಕ್ಷಾಯನಮಃ" ಎಂದು ವಕ್ಷಸ್ಥಳವನ್ನೂ, ಹಾಗೆಯೇ "ಅವ್ಯಯಾಯನಮಃ" ಎಂದು ಹೇಳಿ ಶಿರಸ್ಸನ್ನೂ ಅರ್ಚಿಸಿ, ಗದಾ ಚಕ್ರ ಶಂಖಾದ್ಯಾಯುಧಗಳನ್ನು ಮೊದಲಿನಂತಯೇ ಅವುಗಳ ನಾಮಗಳಿಂದ ಪೂಜಿಸಬೇಕು.

೧೨೪. ಅನಂತರ ಆ ದೇವನ ಮುಂದೆ ಮಾಲ್ಯ ಮತ್ತು ವಸ್ತ್ರಸಹಿತವಾಗಿ ಕಲಶವನ್ನು ಸ್ಥಾಪಿಸಿ, ತನ್ನ ಶಕ್ತ್ಯನುಸಾರವಾಗಿ ಭಂಗಾರದಿಂದ ಶ್ರೀ ಪದ್ಮನಾಭ ಪ್ರತಿಮೆಯನ್ನು ಮಾಡಿಸಿ, ಆ ಕಲಶದ ಮೇಲಿಟ್ಟು ಅಲಂಕಾರ ಮಾಡಬೇಕು.

೧೨೫. ಸಂಸಾರಭಯಗ್ರಸ್ತನಾದ ಪುರುಷನು ಆ ಭಯನಿವೃತ್ತ್ಯರ್ಥವಾಗಿ ಆದಿನ ರಾತ್ರಿ ಅಲ್ಲೇ ಜಾಗರಣೆಮಾಡಿ ಚೆನ್ನಾಗಿ ಬೆಳಗಾದ ಮೇಲೆ ಆ ಪದ್ಮನಾಭ ಪ್ರತಿಮೆಯನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

ಏಕಾ ಕೃತೇ ತು ಯತ್ಪುಣ್ಯಂ ತದ್ವಕ್ತುಂ ಶಕ್ಯತೇ ಕಥಂ ।
ಬ್ರಹ್ಮಹತ್ಯಾದಿಪಾಪಾನಿ ಕಿಂ ತು ಪಂಚೈವ ಭಾರತ ।
ನಶ್ಯಂತಿ ಕೃತಪುಣ್ಯಸ್ಯ ವಿಷ್ಣೋರ್ನಾಮಾನುಕೀರ್ತನಾತ್ ॥ ೧೨೬ ॥

॥ ಶ್ರೀ ಕೃಷ್ಣ ಉವಾಚ ॥
ಶೃಣು ರಾಜನ್ಮಹಾಬಾಹೋ ಕಾರ್ತಿಕೇ ಮಾಸಿ ದ್ವಾದಶೀಂ ।
ಉಪೋಷ್ಯ ವಿಧಿನಾ ಯೇನ ಯಥಾಸ್ಯಾಃ ಪ್ರಾಪ್ಯತೇ ಫಲಂ ॥ ೧೨೭ ॥

ಪ್ರಾಗ್ವಿಧಾನೇನ ಸಂಕಲ್ಪ್ಯ ವಾಸುದೇವಂ ಪ್ರಪೂಜಯೇತ್ ।
ಅನುಲೋಮೇನ ದೇವೇಶಂ ಪೂಜಯಿತ್ವಾ ವಿಚಕ್ಷಣಃ ।
ನಮೋ ದಾಮೋದರಾಯೇತಿ ಸರ್ವಾಂಗಂ ಪೂಜಯೇದ್ಧರಿಂ ॥ ೧೨೮ ॥

ಏವಂ ಸಂಪೂಜ್ಯ ವಿಧಿನಾ ತಸ್ಯಾಗ್ರೇ ಚತುರೋ ಘಟಾನ್ ।
ಸ್ಥಾಪಯೇದ್ರತ್ನಗರ್ಭಾಂಶ್ಚ ಸಿತಚಂದನಚರ್ಚಿತಾನ್ ॥ ೧೨೯ ॥

---

೧೨೬. ಅಯ್ಯಾ ಭರತವಂಶಜನೇ ! ಈರೀತಿ ಆಚರಿಸಿದರೆ ಲಭಿಸುವ ಪುಣ್ಯಫಲವನ್ನು ವರ್ಣಿಸುವುದಕ್ಕೆ ಸಾಧ್ಯವಾದೀತೇ ? ಶ್ರೀ ವಿಷ್ಣುನಾಮ ಸಂಕೀರ್ತನಮಾಡಿ ಪುಣ್ಯಸಂಪಾದನೆ ಮಾಡಿದವನಿಗೆ ಬ್ರಹ್ಮಹತ್ಯಾದಿ ಐದು ಮಹಾಪಾತಕಗಳೂ ನಾಶವಾಗುತ್ತವೆ.

೧೨೭. ಶ್ರೀ ಕೃಷ್ಣನು ಮುಂದುವರಿಸಿ ಹೇಳುತ್ತಾನೆ—ಅಯ್ಯಾ ಮಹಾ ಬಾಹುಶಾಲಿಯಾದ ರಾಜನೇ ! ಉಪವಾಸವನ್ನು ಆಚರಿಸಿ ಕಾರ್ತೀಕಮಾಸದ ಶುಕ್ಲಪಕ್ಷದ ದ್ವಾದಶಿಯಲ್ಲಿ ಶ್ರೀ ಹರಿಪೂಜೆಯನ್ನು ಮಾಡಿದ್ದರಿಂದ ಅವನಿಗೆ ಯಾವ ಫಲಲಾಭವಾಗುತ್ತದೆ ಎಂಬುದನ್ನು ಹೇಳುತ್ತೇನೆ ಕೇಳು.

೧೨೮. ಹಿಂದೆ ಹೇಳಿದ ರೀತಿಯಾಗಿ ಸಂಕಲ್ಪಮಾಡಿ ಯಥಾಕ್ರಮದಿಂದ ಶ್ರೀ ವಾಸುದೇವನನ್ನು ಪೂಜಿಸಿ, ದಾಮೋದರಾಯನಮಃ ಎಂದು ಹೇಳಿ ಶ್ರೀ ಹರಿಯ ಸರ್ವಾಂಗಗಳಲ್ಲೂ ಪೂಜೆಯನ್ನು ಮಾಡಬೇಕು.

೧೨೯. ಈರೀತಿ ವಿಧಿವತ್ತಾಗಿ ಪೂಜೆಮಾಡಿ, ಆ ಶ್ರೀ ವಾಸುದೇವನ ಪುರೋಭಾಗದಲ್ಲಿ ರತ್ನಗರ್ಭಗಳಾಗಿಯೂ, ಶ್ರೀಗಂಧಲಿಪ್ತಗಳಾಗಿಯೂ ಇರುವ ನಾಲ್ಕು ಕಲಶಗಳನ್ನು ಸ್ಥಾಪಿಸಬೇಕು.

ಸ್ರಗ್ದಾಮಾಲಂಬಿತಗ್ರೀವಾನ್ಸಿತವಸ್ತ್ರೈಶ್ಚ ಗುಂಠಿತಾನ್ ।
ಸ್ಥಗಿತಾಂಸ್ತಾಮ್ರಪಾತ್ರೈಸ್ತು ತಿಲಪೂರ್ಣೈಃ ಸಕಾಂಚನೈಃ ॥ ೧೩೦ ॥

ಚತ್ವಾರಃ ಸಾಗರಾಸ್ತೇ ಚ ಕಥಿತಾ ರಾಜಸತ್ತಮ ।
ತನ್ಮಧ್ಯೇ ಪ್ರಾಗ್ವಿಧಾನೇನ ಸೌವರ್ಣಂ ಸ್ಥಾಪಯೇದ್ಧರಿಂ ॥ ೧೩೧ ॥

ಯೋಗೇಶ್ವರಮನಂಗನಿಧಿಂ ವಿರಕ್ತಂ ಪೀತವಾಸಸಂ ।
ತದ್ವದ್ದೇವಂ ಚ ಸಂಪೂಜ್ಯ ಜಾಗರಂ ತತ್ರ ಕಾರಯೇತ್ ॥ ೧೩೨ ॥

ಕೃತ್ವಾ ತು ವೈಷ್ಣವಂ ಯೋಗಂ ಯಜೇದ್ಯೋಗೇಶ್ವರಂ ಹರಿಂ ।
ಷೋಡಶೇ ವೈ ರಥಾಂಗೇಷು ರಜೋಭಿರ್ಬಹುಭಿಃ ಕೃತೇ ॥ ೧೩೩ ॥

---

೧೩೦. ಮತ್ತು ಆ ಕಲಶಗಳಿಗೆ ಕಂಠದಲ್ಲಿ ಪುಷ್ಪಮಾಲಿಕೆಗಳಿಂದ ಅಲಂಕರಿಸಿ, ಬಿಳಿಯವಸ್ತ್ರಗಳನ್ನು ಸುತ್ತಿ, ತಿಲಪೂರ್ಣಗಳಾಗಿಯೂ, ಹಿರಣ್ಯಸಹಿತಗಳಾಗಿಯೂ, ಇರುವ ನಾಲ್ಕು ತಾಮ್ರದ ಪಾತ್ರೆಗಳಿಂದ ಆಚ್ಛಾದನೆ ಮಾಡಬೇಕು.

೧೩೧. ಅಯ್ಯಾ ನೃಪಶ್ರೇಷ್ಠನೇ ! ಆ ನಾಲ್ಕು ಕಲಶಗಳು ನಾಲ್ಕು ಸಮುದ್ರ ಸದೃಶಗಳೆಂದು ಉಕ್ತವಾಗಿವೆ. ಆ ನಾಲ್ಕು ಕಲಶಗಳ ಮಧ್ಯಭಾಗದಲ್ಲಿ ಈ ಪೂರ್ವೋಕ್ತಕ್ರಮದಲ್ಲಿ ಭಂಗಾರದಿಂದ ಮಾಡಿಸಿದ ಶ್ರೀಹರಿ ಪ್ರತಿಮೆಯನ್ನು ಸ್ಥಾಪಿಸಬೇಕು.

೧೩೨. ಅಯ್ಯಾ ರಾಜೇಂದ್ರನೇ! ಯೋಗೇಶ್ವರನೂ, ಯೋಗನಿಧಿಯೂ, ವಿರಕ್ತನೂ, ಪೀತಾಂಬರಧರನೂ ಆಗಿರುವ ಶ್ರೀ ಹರಿಯನ್ನು ಪೂರ್ವದಲ್ಲಿ ಹೇಳಿದಂತೆ ಪೂಜಿಸಿ ಆ ರಾತ್ರಿ ಜಾಗರಣೆಮಾಡಬೇಕು.

೧೩೩. ಶ್ರೀ ವಿಷ್ಣು ಧ್ಯಾನತತ್ಪರನಾಗಿ ಯೋಗೇಶ್ವರನಾದ ಶ್ರೀ ಹರಿಯನ್ನು ಪೂಜಿಸುತ್ತಾ, ಅನೇಕರನ್ನು ಆಹ್ವಾನಿಸಿ ಜಾಗರಣೆಯಿಂದ ಆ ರಾತ್ರಿಯನ್ನು ಕಳೆಯಬೇಕು.

ಏವಂ ಕೃತ್ವಾ ಪ್ರಭಾತೇ ತು ಬ್ರಾಹ್ಮಣಾನ್ಪಂಚ ಭೋಜಯೇತ್ ।
ಚತ್ವಾರಃ ಕಲಶಾ ದೇಯಾಶ್ಚತುರ್ಣಾಂ ಪಂಚಮಸ್ಯ ಹಿ ॥ ೧೩೪ ॥

ಯೋಗೇಶ್ವರಂ ಚ ಸೌವರ್ಣಂ ದಾಪಯೇತ್ಪ್ರಯತಃ ಶುಚಿಃ ।
ಬ್ರಾಹ್ಮಣಾಯ ಸಮಂ ದತ್ತಂ ದ್ವಿಗುಣಂ ವೇದವಾದಿನೇ ॥ ೧೩೫ ॥

ವೇದವೇದಾಂಗವಿದುಷೇ ಸಹಸ್ರಗುಣಿತಂ ಭವೇತ್ ।
ಪಂಚಮಸ್ಯ ರಹಸ್ಯಂ ತು ಸಸಮಂ ಚೋಪಪಾದಯೇತ್ ॥ ೧೩೬ ॥

ವಿಧಾನಂ ತಸ್ಯ ಪಂಚೈವ ದತ್ವಾ ಕೋಟಿಗುಣೋತ್ತರಂ ।
ಇತಿಹಾಸಪುರಾಣಜ್ಞೇ ದತ್ತಂ ಚೈವಾಕ್ಷಯಂ ಭವೇತ್ ॥ ೧೩೭ ॥

---

೧೩೪. ಮರುದಿನ ಬೆಳಗಾದ ಮೇಲೆ ಐದುಜನ ಬ್ರಾಹ್ಮಣರಿಗೆ ಸಂತರ್ಪಣೆ ಮಾಡಿಸಬೇಕು. ಅವರಲ್ಲಿ ನಾಲ್ಕು ಜನರಿಗೆ ಆ ನಾಲ್ಕು ಕಲಶಗಳನ್ನು ದಾನ ಮಾಡಬೇಕು.

೧೩೫. ಅನಂತರ ರಾಗಾದಿದೋಷರಹಿತನೂ ಸ್ನಾನಾದಿಗಳಿಂದ ಬಾಹ್ಯಾಭ್ಯಂತರಗಳಲ್ಲಿ ಶುಚಿಯೂ ಆದ ಈ ವ್ರತಕರ್ತೃವು ಐದನೆಯ ವಿಪ್ರನಿಗೆ ಯೋಗೇಶ್ವರನಾದ ಶ್ರೀಹರಿಯ ಭಂಗಾರದ ಪ್ರತಿಮೆಯನ್ನು ದಾನಕೊಡಬೇಕು. ಅದರಲ್ಲೂ ಜಾತ್ಯಾಬ್ರಾಹ್ಮಣ ಜನ್ಮವೆತ್ತಿದವನಿಗೆ ದಾನಮಾಡಿದರೇ ಸಮಫಲ ಪ್ರಾಪ್ತಿಯಾಗುವುದು. ವೇದಾಧ್ಯನಮಾಡಿದ ಬ್ರಾಹ್ಮಣನಿಗೆ ದಾನಮಾಡಿದರೆ ದ್ವಿಗುಣಿತ ಫಲಲಾಭವಾಗುವುದು.

೧೩೬. ಹಾಗೇ ವೇದ ಮತ್ತು ವೇದಾಂಗಗಳನ್ನು ತಿಳಿದಿರುವ ಪಂಡಿತನಿಗೆ ದಾನಮಾಡಿದರೆ ಸಹಸ್ರಗುಣಿತ ಫಲಪ್ರಾಪ್ತಿಯಾಗುವುದು. ಭಂಗಾರದ ಪ್ರತಿಮೆಯನ್ನು ದಾನ ಮಾಡಬೇಕಾದರೆ ಆ ಪ್ರತಿಗೃಹೀತೃವು ಸರಹಸ್ಯ ವೇದಾಧ್ಯಯನ ಮಾಡಿದವನಾಗಿರಬೇಕು. ಅಂತಹವನಿಗೇ ಅದನ್ನು ದಾನ ಮಾಡಬೇಕು.

೧೩೭. ಅಂತಹವನಿಗೆ ಆ ಕಲಶ ವಸ್ತ್ರ ಪ್ರತಿಮೆ ದಕ್ಷಿಣೆ ತಾಂಬೂಲ ಎಂಬ ಐದನ್ನೂ ದಾನಕೊಟ್ಟರೆ ಕೋಟಿ ಗುಣಿತ ಫಲಪ್ರಾಪ್ತಿಯಾಗುವುದು. ಇತಿಹಾಸ ಪುರಾಣಗಳನ್ನು ತಿಳಿದಿರುವ ಪಂಡಿತನಿಗೆ ದಾನ ಮಾಡಿದರೆ ಅಕ್ಷಯ ಫಲಪ್ರಾಪ್ತಿಯಾಗುತ್ತದೆ.

ಪಂಚ ದತ್ವಾ ವಿಧಾನೇನ ದ್ವಾದಶ್ಯಾಂ ವಿಷ್ಣುಮರ್ಚ್ಯ ಚ ।
ವಿಪ್ರಾಣಾಂ ಭೋಜನಂ ದದ್ಯಾದ್ಯಥಾಶಕ್ತ್ಯಾ ಸದಕ್ಷಿಣಂ ।
ದೀನಾನಾಥಾದಿಕಾನ್ಸರ್ವಾನ್ಪೂಜಯೇಚ್ಛಕ್ತಿತೋ ನೃಪ ॥ ೧೩೮ ॥

ಧರಣೀವ್ರತಮೇತತ್ತು ಪುರಾ ಕೃತ್ವಾ ಪ್ರಜಾಪತಿಃ ।
ಪ್ರಜಾಂ ಲೇಭೇ ತತೋ ಮುಕ್ತಿರ್ಬ್ರಹ್ಮಣಾ ವಿಷ್ಣವೇ ಶುಭೇ ॥ ೧೩೯ ॥

ಯುವನಾಶ್ವೋ ಹಿ ರಾಜರ್ಷಿರನೇನ ವಿಧಿನಾ ಪುರಾ ।
ಮಾಂಧಾತಾರಂ ಸುತಂ ಲೇಭೇ ಪರಂ ಬ್ರಹ್ಮ ಚ ಶಾಶ್ವತಂ ॥ ೧೪೦ ॥

ತಥಾ ಹೈಹಯದಾಯಾದಃ ಕೃತವೀರ್ಯೋ ನರಾಧಿಪಃ ।
ಚಕ್ರವರ್ತಿಸುತಂ ಲೇಭೇ ಸಹಸ್ರಾರ್ಜುನಮೂರ್ಜಿತಂ ॥ ೧೪೧ ॥

---

೧೩೮. ಅಯ್ಯಾ ರಾಜನೇ ! ಈ ರೀತಿಯಾಗಿ ದ್ವಾದಶಿಯದಿನ ವಿಷ್ಣುವನ್ನು ಪೂಜಿಸಿ, ಆ ಐದು ದಾನಗಳನ್ನೂ ಕೊಟ್ಟು, ಸ್ವಶಕ್ತ್ಯನುಸಾರವಾಗಿ ಬ್ರಾಹ್ಮಣರಿಗೆ ಭೋಜನಮಾಡಿಸಿ ದಕ್ಷಿಣೆಯನ್ನು ಕೊಟ್ಟು, ತನ್ನ ಅನುಕೂಲವಿದ್ದಷ್ಟು ಮಂದಿ ಬಡವರು, ಅನಾಥರು ಮುಂತಾದರಿಗೂ ಸತ್ಕಾರಮಾಡಬೇಕು.

೧೩೯. ಪೂರ್ವಕಾಲದಲ್ಲಿ ಪ್ರಜಾಪತಿಯು ಶುಭದಿನದಲ್ಲಿ ಶ್ರೀ ಮಹಾವಿಷ್ಣುವಿಗೆ ಪೂಜೆಮಾಡಿ ಈ ಧರಣೀವ್ರತವನ್ನು ಆಚರಿಸಿ, ಅದರಿಂದ ಪ್ರಜೆಗಳನ್ನು ಪಡೆದು ಕೊನೆಗೆ ಪರಬ್ರಹ್ಮದಲ್ಲಿ ಐಕ್ಯವನ್ನು ಹೊಂದಿದನು.

೧೪೦. ಹಾಗೆಯೇ ಪೂರ್ವದಲ್ಲಿ ಯುವನಾಶ್ವನೆಂಬ ರಾಜರ್ಷಿಯು ಈ ವ್ರತದಿಂದಲೇ ಮಾಂಧಾತನೆಂಬ ಪುತ್ರನನ್ನು ಪಡೆದು, ಅನಂತರ ಶಾಶ್ವತವಾದ ಪರಬ್ರಹ್ಮವನ್ನೇ ಹೊಂದಿದನು.

೧೪೧. ಹಾಗೆಯೇ ಹೈಹಯ ವಂಶೀಯನಾದ ಕೃತವೀರ್ಯನೆಂಬ ಅರಸನು ಈ ವ್ರತದಿಂದ ಅತಿಪ್ರಬಲನೂ ಚಕ್ರವರ್ತಿಯೋಗವುಳ್ಳವನೂ ಆದ ಬಾಹುಸಹಸ್ರಾರ್ಜುನನೆಂಬ ಮಗನನ್ನು ಪಡೆದನು.

ಶಕುಂತಲಾಪ್ಯೇವಮೇವ ವ್ರತಂ ಚೀರ್ತ್ವಾ ನರೋತ್ತಮಂ ।
ಲೇಭೇ ಶಾಕುಂತಲಂ ಪುತ್ರಂ ದುಷ್ಯಂತಶ್ಚಕ್ರವರ್ತಿನಂ ॥ ೧೪೨ ॥

ತಥಾ ಪುರಾಣರಾಜಾನೋ ವೇದೋಕ್ತಾಶ್ಚಕ್ರವರ್ತಿನಃ ।
ಅನೇನ ವಿಧಿನಾ ಪ್ರಾಪ್ತಾಶ್ಚಕ್ರವರ್ತಿತ್ವಮುತ್ತಮಂ ॥ ೧೪೩ ॥

ಧರಣ್ಯಾ ಅಪಿ ಪಾತಾಲೇ ಮಗ್ನಯಾಚರಿತಂ ಪುರಾ ।
ವ್ರತಮೇತತ್ತತೋ ನಾಮ್ನಾ ಧರಣೀವ್ರತಮುಚ್ಯತೆ ॥ ೧೪೪ ॥

ಸಮಾಪ್ತೇಽಸ್ಮಿಂಸ್ತದಾ ದೇವೀ ಹರಿಣಾ ಕ್ರೋಡರೂಪಿಣಾ ।
ಉದ್ಧೃತಾ ದಶನಾಗ್ರೇಣ ಸ್ಥಾಪಿತಾ ನೌರಿವಾಂಭಸಿ ॥ ೧೪೫ ॥

---

೧೪೨. ಶಕುಂತಲಾ ಮತ್ತು ದುಷ್ಯಂತರೆಂಬ ದಂಪತಿಗಳು ಇದೇ ಕ್ರಮದಲ್ಲಿ ಈ ವ್ರತವನ್ನು ಆಚರಿಸಿ ಚಕ್ರವರ್ತಿಯಾದ ಭರತನೆಂಬ ಸುಪುತ್ರನನ್ನು ಪಡೆದರು.

೧೪೩. ಹಾಗೆಯೇ ಪ್ರಾಚೀನರಾದ ರಾಜರುಗಳೂ, ವೇದದಲ್ಲಿ ಉಕ್ತರಾಗಿರುವ ಚಕ್ರವರ್ತಿಗಳೂ, ಈ ವ್ರತಾಚರಣೆಯಿಂದಲೇ ಉತ್ತಮವಾದ ಚಕ್ರವರ್ತಿ ಪದವಿಯನ್ನು ಹೊಂದಿದರು.

೧೪೪. ಪೂರ್ವದಲ್ಲಿ ಧರಣಿಯು (ಭೂಮಿ) ತಾನು ಪಾತಾಳದಲ್ಲಿ ಮುಳುಗಿ ಹೋದಾಗ ಈ ವ್ರತವನ್ನು ಆಚರಿಸಿದಳು. ಆದುದರಿಂದ ಈ ವ್ರತಕ್ಕೆ ಧರಣೀ ವ್ರತವೆಂಬ ಹೆಸರು ಉಂಟಾಗಿದೆ.

೧೪೫. ಭೂದೇವಿಯು ಇದನ್ನಾಚರಿಸಿ ಮುಗಿಸಿದ ಮೇಲೆ, ಶ್ರೀಹರಿಯು ವರಾಹರೂಪವನ್ನು ಧರಿಸಿ, ತನ್ನ ಎರಡು ಕೋರೆದಾಡೆಗಳ ತುದಿಯಿಂದ ಆ ಭೂಮಿಯನ್ನು ಪಾತಾಳದಿಂದ ಎತ್ತಿ, ಭಾರಿಯ ಹಡಗನ್ನು ನೀರಿನಲ್ಲಿ ನಿಲ್ಲಿಸಿದಂತೆ ಭೂಮಂಡಲವನ್ನು ಸ್ಥಾಪಿಸಿದನು.

ಧರಣೀವ್ರತಮೇತತ್ತೇ ಕಥಿತಂ ಪಾಂಡುನಂದನ ।
ಯ ಇದಂ ಶೃಣುಯಾದ್ಭಕ್ತ್ಯಾ ಯಶ್ಚ ಕುರ್ಯಾನ್ನರೋತ್ತಮ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಸಾಯುಜ್ಯಮಾಪ್ನುಯಾತ್ ॥ ೧೪೬ ॥

ಚೀರ್ಣಂ ರಸಾತಲತಲೇ ಗತಯಾ ಧರಣ್ಯಾ ।
ತೇನ ಪ್ರಸಿದ್ಧಿಮಗಮದ್ಧರಣೀವ್ರತೇತಿ ।
ಸದ್ಯಃ ಸಮಾಚರತಿ ಧರ್ಮರತಿರ್ಧರಿತ್ರ್ಯಾಂ ।
ಮುದ್ಧೃತ್ಯ ಸಪ್ತ ಪುರುಷಾನ್ಸ ಪರಂ ಪ್ರಯಾತಿ ॥ ೧೪೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ಧರಣೀವ್ರತಂ ನಾಮ
ತ್ರ್ಯಶೀತಿತಮೋಽಧ್ಯಾಯಃ.



೧೪೬. ಅಯ್ಯಾ ಪಾಂಡುಪುತ್ರನೇ ! ಈ ವ್ರತವನ್ನು ನಾನು ನಿನಗೆ ಉಪದೇಶಿಸಿ ಆಯಿತು. ಅಯ್ಯಾ ರಾಜನೇ ! ಈ ವ್ರತವನ್ನು ಯಾವನು ಶ್ರವಣ ಮಾಡುವನೋ, ಮತ್ತು ಯಾವನು ಆಚರಿಸುವನೋ, ಅಂತಹವನು ಸರ್ವಪಾಪ ವಿನಿರ್ಮುಕ್ತನಾಗಿ ಶ್ರೀ ವಿಷ್ಣುಸಾಯುಜ್ಯವನ್ನು ಪಡೆಯುತ್ತಾನೆ.

೧೪೭. ಪಾತಾಳಲೋಕದಲ್ಲಿ ಮುಳುಗಿದ ಧರಣಿಯು ಪೂರ್ವದಲ್ಲಿ ಈ ವ್ರತವನ್ನಾಚರಿಸಿದಳು. ಆದುದರಿಂದ ಇದು ಧರಣೀವ್ರತವೆಂಬ ನಾಮಧೇಯ ದಿಂದ ಪ್ರಸಿದ್ಧಿಹೊಂದಿತು. ಭೂಲೋಕದಲ್ಲಿ ಧರ್ಮಾಸಕ್ತಿಯುಳ್ಳ ಯಾವನು ಇದನ್ನು ಆಚರಿಸುವನೋ ಅಂತಹವನು ತನ್ನ ವಂಶಜರಾದ ಸಪ್ತಪುರುಷರನ್ನು ಉದ್ಧಾರಮಾಡಿ ಸಾಯುಜ್ಯವನ್ನು ಪಡೆಯುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಧರಣೀ
ವ್ರತವರ್ಣನೆಯೆಂಬ ಎಂಭತ್ತಮೂರನೆಯ
ಅಧ್ಯಾಯವು ಮುಗಿದುದು.



|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಚತುರಶೀತಿತಮೋಽಧ್ಯಾಯಃ

---

|| ಯುಧಿಷ್ಠಿರ ಉವಾಚ ||

ಕಿಮಭೀಷ್ಟವಿಯೋಗಶೋಕಸಂಘಾ- |
ಲ್ಲಘು ಇಹ ಸಮುಪೋಷತಾಂ ವ್ರತಂ ವಾ |
ವಿಭವೋದ್ಭವಕಾರಿ ಭೂತಲೇಸ್ಮಿನ್ |
ಭವತಿ ವಿಭೋ ಭಯಸೂದನಂ ಚ ಪುಂಸಾಂ || ೧ ||

|| ಶ್ರೀ ಕೃಷ್ಣ ಉವಾಚ ||

ಪರಿಪೃಷ್ಟಮಿದಂ ಜಗತ್ಪ್ರಿಯಂ ತೇ |
ವಿಬುಧಾನಾಮಪಿ ದುರ್ಲಭಂ ಮಹತ್ವಾತ್ |

---

## ಎಂಭತ್ತನಾಲ್ಕನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಓ ಸ್ವಾಮಿಯೇ ! ಈ ಭೂತಲದಲ್ಲಿ ಪುರುಷರಿಗೆ ಇಷ್ಟವಸ್ತುವಿಯೋಗದಿಂದ ಬರುವ ಶೋಕಸಮುದಾಯಗಳನ್ನು ನಿವೃತ್ತಿಪಡಿಸುವುದೂ, ಸಂಪತ್ಸಮೃದ್ಧಿಕಾರಕವೂ, ಭಯನಾಶಕವೂ ಆದುದೆನಿಸಿ, ಉಪವಾಸದಿಂದ ಆಚರಿಸಬೇಕಾದ ಲಘುವ್ರತವು ಯಾವುದಾದರೂ ಇದೆಯೋ ? ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ರಾಜನೇ ! ಈ ನಿನ್ನ ಪ್ರಶ್ನೆಗೆ ವಿಷಯವಾದ ವಿಶೋಕ ದ್ವಾದಶೀವ್ರತವು ಜಗತ್ತಿಗೆ ಪ್ರಿಯವಾಗಿಯೂ, ಮಹತ್ವವುಳ್ಳದರಿಂದ ದೇವತೆಗಳಿಗೂ ದುರ್ಲಭವಾಗಿಯೂ ಇದೆ. ಇಂದ್ರಾದಿದೇವತೆ

ತವ ಭಕ್ತಿಮತಸ್ತಥಾಪಿ ವಕ್ಷ್ಯೇ ।
ವ್ರತಮಿಂದ್ರಾಸುರದಾನವೇಷು ಗುಹ್ಯಂ ॥ ೨ ॥

ಪುಣ್ಯಮಾಶ್ವಯುಜೇ ಮಾಸಿ ವಿಶೋಕದ್ವಾದಶೀವ್ರತಂ ।
ದಶಮ್ಯಾಂ ಲಘುಭುಗ್ವಿದ್ವಾನಾರಭೇನ್ನಿಯಮೇನ ತು ॥ ೩ ॥

ಉದಙ್ಮುಖಃ ಪ್ರಾಙ್ಮುಖೋ ವಾ ದಂತಧಾವನಪೂರ್ವಕಂ ।
ಏಕಾದಶ್ಯಾಂ ನಿರಾಹಾರಃ ಸಮ್ಯಗಭ್ಯರ್ಚ್ಯ ಕೇಶವಂ ॥ ೪ ॥

ವಿಧಿವತ್ತಾಂ ಸಮಭ್ಯರ್ಚ್ಯ ಭೋಕ್ಷ್ಯಾಮಿ ಅಪರೇಽಹನಿ ।
ಏವಂ ನಿಯಮಕೃತ್ಸುಪ್ತ್ವಾ ಪ್ರಾತರುತ್ಥಾಯ ಮಾನವಃ ॥ ೫ ॥

ಸ್ನಾನಂ ಸರ್ವೌಷಧೈಃ ಕುರ್ಯಾತ್ಪಂಚಗವ್ಯಜಲೇನ ತು ।
ಶುಕ್ಲಮಾಲ್ಯಾಂಬರಸ್ತದ್ವತ್ಪೂಜಯೇಚ್ಛ್ರೀಶಮುತ್ಪಲೈಃ ॥ ೬ ॥

---

ಗಳು, ಅಸುರರು, ದಾನವರು, ಇವರುಗಳಿಗೂ ಹೇಳದೆ ಗೋಪ್ಯವಾಗಿರುವುದಾದಾಗ್ಯೂ ಆ ವ್ರತವನ್ನು ನನ್ನಲ್ಲಿ ಪರಮಭಕ್ತಿಯುಳ್ಳ ನಿನಗೆ ಹೇಳುತ್ತೇನೆ.

೩. ವಿದ್ವಾಂಸನು ಪುಣ್ಯಜನಕವಾದ ಈ ವಿಶೋಕದ್ವಾದಶೀ ವ್ರತವನ್ನು ಆಶ್ವಯುಜಮಾಸದ ದಶಮಿಯ ದಿವಸ ನಿಯಮದಿಂದ ಲಘುಭೋಜನಮಾಡಿ ಪ್ರಾರಂಭಿಸಬೇಕು.

೪. ಆ ದಶಮಿಾದಿನದಲ್ಲಿ ಉತ್ತರದಿಕ್ಕಿಗೆ ಇದಿರಾಗಿಯೋ, ಅಥವಾ ಪೂರ್ವಾಭಿಮುಖವಾಗಿಯೋ ಕುಳಿತು ದಂತಧಾವನ ಸ್ನಾನಾದಿ ಕೃತ್ಯಗಳನ್ನು ಮುಗಿಸಿ, “ ಓ ಹರಿಯೇ ! ನಾಳೆ ಏಕಾದಶಿಯ ದಿನದಲ್ಲಿ ವಿಧ್ಯುಕ್ತಪ್ರಕಾರವಾಗಿ ಪೂಜೆಮಾಡಿ, ನಿರಾಹಾರನಾಗಿದ್ದು ಮರುದಿನ ಪಾರಣೆಮಾಡುವೆನು ’’ ಎಂದು ಸಂಕಲ್ಪ ಮಾಡಬೇಕು.

೫. ಈರೀತಿ ನಿಯಮಾನುಷ್ಠಾನ ಮಾಡಿದಾತನು ಆ ದಿನ ಮಲಗಿ ಮರುದಿನ ಬೆಳಿಗ್ಗೆ ಎದ್ದು ಸರ್ವೌಷಧ ಮತ್ತು ಪಂಚಗವ್ಯಜಲ ಇವುಗಳಿಂದ ಸ್ನಾನವನ್ನು ಮಾಡಬೇಕು.

೬. ಬಳಿಕ ಶುಭ್ರವಾದ ಮಡಿಬಟ್ಟೆಗಳನ್ನು ಧರಿಸಿ, ಮೊದಲು ಸಂಕಲ್ಪ ಮಾಡಿದ ಹಾಗೆಯೇ ಶ್ರೀ ಲಕ್ಷ್ಮೀಕಾಂತನಾದ ಹರಿಯನ್ನು ಉತ್ಪಲ (ನೈದಿಲೆ) ಪುಷ್ಪಗಳಿಂದ ಪೂಜಿಸಬೇಕು.

**ವಿಶೋಕಾಯ ನಮಃ ಪಾದೌ ಜಂಘೇ ಚ ವರದಾಯ ವೈ ।**
**ಶ್ರೀಶಾಯ ಜಾನುನೀ ತದ್ವದೂರೂ ಚ ಜಲಶಾಯಿನೇ ॥ ೭ ॥**

**ಕಂದರ್ಪಾಯ ನಮೋ ಗುಹ್ಯೇ ಮಾಧವಾಯ ನಮಃ ಕಟಿಂ ।**
**ದಾಮೋದರಾಯೇತ್ಯುದರಂ ಪಾರ್ಶ್ವೇ ಚ ವಿಪುಲಾಯ ವೈ ॥ ೮ ॥**

**ನಾಭಿಂ ಚ ಪದ್ಮನಾಭಾಯ ಹೃದಯಂ ಮನ್ಮಥಾಯ ವೈ ।**
**ಶ್ರೀಧರಾಯ ವಿಭೋರ್ವಕ್ಷಃ ಕರೌ ಮಧುಭಿದೇ ನಮಃ ॥ ೯ ॥**

**ಚಕ್ರಿಣೇ ವಾಮಬಾಹುಂ ಚ ದಕ್ಷಿಣಂ ಗದಿನೇ ನಮಃ ।**
**ವೈಕುಂಠಾಯ ನಮಃ ಕಂಠಮಾಸ್ಯಂ ಯಜ್ಞಮುಖಾಯ ವೈ ॥ ೧೦ ॥**

---

೭. ಆ ಪೂಜೆಯ ವೇಳೆಯಲ್ಲಿ ಶ್ರೀಹರಿಯ ಪಾದಗಳನ್ನು ವಿಶೋಕಾಯ ನಮಃ ಎಂದೂ, ಜಂಘೆಗಳನ್ನು ವರದಾಯ ನಮಃ ಎಂದೂ, ಜಾನುಗಳನ್ನು ಶ್ರೀಶಾಯನಮಃ ಎಂದೂ, ಮತ್ತು ತೊಡೆಗಳನ್ನು ಜಲಶಾಯಿನೇ ನಮಃ ಎಂದೂ, ಹೇಳಿ ಅರ್ಚಿಸಬೇಕು.

೮. ಮತ್ತು ಗುಹ್ಯಪ್ರದೇಶವನ್ನು ಕಂದರ್ಪಾಯ ನಮಃ ಎಂದೂ, ಕಟಿ ಪ್ರದೇಶವನ್ನು ಮಾಧವಾಯ ನಮಃ ಎಂದೂ, ಉದರವನ್ನು ದಾಮೋದರಾಯ ನಮಃ ಎಂದೂ, ಪಾರ್ಶ್ವಗಳನ್ನು ವಿಪುಲಾಯ ನಮಃ ಎಂದೂ ಹೇಳಿ, ಪೂಜಿಸಬೇಕು.

೯. ಹಾಗೆಯೇ ನಾಭಿಯನ್ನು ಪದ್ಮನಾಭಾಯ ನಮಃ ಎಂದೂ, ಹೃದಯವನ್ನು ಮನ್ಮಥಾಯ ನಮಃ ಎಂದೂ, ಸ್ವಾಮಿಯ ವಕ್ಷಸ್ಥಳವನ್ನು ಶ್ರೀಧರಾಯ ನಮಃ ಎಂದೂ, ಹಸ್ತಗಳನ್ನು ಮಧುಭಿದೇ ನಮಃ ಎಂದೂ, ಹೇಳಿ ಪೂಜಿಸಬೇಕು.

೧೦. ಅಲ್ಲದೆ ಶ್ರೀಹರಿಯ ವಾಮಬಾಹುವನ್ನು ಚಕ್ರಿಣೇ ನಮಃ ಎಂದೂ, ದಕ್ಷಿಣ ಬಾಹುವನ್ನು ಗದಿನೇ ನಮಃ ಎಂದೂ, ಕಂಠವನ್ನು ವೈಕುಂಠಾಯ ನಮಃ ಎಂದೂ, ವದನವನ್ನು ಯಜ್ಞಮುಖಾಯ ನಮಃ ಎಂದೂ, ಹೇಳಿ ಪೂಜಿಸಬೇಕು.

ನಾಸಾಮಶೋಕನಿಧಯೇ ವಾಸುದೇವಾಯ ಚಾಕ್ಷಿಣೀ ।
ಲಲಾಟಂ ವಾಮನಾಯೇತಿ ಕಿರೀಟಂ ವಿಶ್ವರೂಪಿಣೇ ॥ ೧೧ ॥

ನಮಃ ಸರ್ವಾತ್ಮನೇ ತದ್ವಚ್ಛಿರ ಇತ್ಯಭಿಪೂಜಯೇತ್ ।
ಏವಂ ಸಂಪೂಜ್ಯ ಗೋವಿಂದಂ ಫಲಮಾಲ್ಯಾನುಲೇಪನೈಃ ॥ ೧೨ ॥

ತತಸ್ತಸ್ಯಾಗ್ರತೋ ಭವ್ಯಂ ಸ್ಥಂಡಿಲಂ ಕಾರಯೇನ್ಮೃದಾ ।
ಚತುರಸ್ರಂ ಸಮಂತಾಚ್ಚಾರತ್ನಿಮಾತ್ರಮುದಗ್ಭವಂ ॥ ೧೩ ॥

ನದೀವಾಲುಕಯಾ ಪೂರ್ಣಂ ಲಕ್ಷ್ಮ್ಯಾಃ ಕೃತಿಂ ಕೃತೀ ನ್ಯಸೇತ್ ।
ಸ್ಥಂಡಿಲೇ ಸೂರ್ಯಮಾರೋಪ್ಯ ಲಕ್ಷ್ಮೀಮಿತ್ಯರ್ಚಯೇದ್ಬುಧಃ ॥ ೧೪ ॥

---

೧೧. ಹಾಗೆಯೇ ನಾಸಿಕೆಯನ್ನು ಅಶೋಕನಿಧಯೇ ನಮಃ ಎಂದೂ, ನಯನಗಳನ್ನು ವಾಸುದೇವಾಯ ನಮಃ ಎಂದೂ, ಲಲಾಟವನ್ನು ವಾಮನಾಯ ನಮಃ ಎಂದೂ, ಕಿರೀಟವನ್ನು ವಿಶ್ವರೂಪಿಣೇ ನಮಃ ಎಂದೂ ಹೇಳಿ, ಭಕ್ತಿಯಿಂದ ಅರ್ಚಿಸಬೇಕು.

೧೨. ಬಳಿಕ ಸರ್ವಾತ್ಮನೇ ನಮಃ ಎಂದು ಹೇಳಿ ಶ್ರೀಹರಿಯ ಶಿರಸ್ಸನ್ನು ಅರ್ಚಿಸಬೇಕು. ಬಳಿಕ ಶ್ರೀಹರಿಗೆ ಕ್ರಮವಾಗಿ ಗಂಧ, ಮಾಲ್ಯ, ಫಲಾದಿಗಳಿಂದ ಪೂಜೆ ಮಾಡಬೇಕು.

೧೩. ಅನಂತರ ಆ ದೇವನ ಮುಂಭಾಗದಲ್ಲಿ ಮಣ್ಣಿನಿಂದ ಸುಂದರವಾದ ಸ್ಥಂಡಿಲವನ್ನು ಮಾಡಿಸಬೇಕು. ಆ ಸ್ಥಂಡಿಲವು ಒಂದು ಮೊಳ ಉದ್ದವುಳ್ಳದ್ದಾಗಿ ಚತುರಸ್ರಾಕಾರ (ಚಚ್ಚೌಕ) ವಾಗಿ ಇರಬೇಕು.

೧೪. ಪ್ರಾಜ್ಞನಾದವನು ಆ ಸ್ಥಂಡಿಲದ ಒಳಗೆ ನದಿಯ ಮರಳನ್ನು ತುಂಬಿ ಅದರಲ್ಲಿ ಶ್ರೀ ಮಹಾಲಕ್ಷ್ಮಿಯ ಆಕಾರವನ್ನು ಬರೆಯಬೇಕು. ಅನಂತರ ಆ ಸ್ಥಂಡಿಲದಲ್ಲಿ ಸೂರ್ಯಭಾವನೆಯನ್ನಿಟ್ಟು ಶ್ರೀ ಮಹಾಲಕ್ಷ್ಮಿಯನ್ನು ಈರೀತಿ ಪೂಜಿಸಬೇಕು.

ನಮೋ ದೇವ್ಯೈ ನಮಃ ಶಾಂತ್ಯೈ ನಮೋ ಲಕ್ಷ್ಮ್ಯೈ ನಮಃ ಶ್ರಿಯೇ ।
ನಮಃ ಪುಷ್ಟ್ಯೈ ನಮಸ್ತುಷ್ಟ್ಯೈ ನಮೋ ದೃಷ್ಟ್ಯೈ ನಮೋನಮಃ ॥

ವಿಶೋಕಾ ದುಃಖನಾಶಾಯ ವಿಶೋಕಾ ವರದಾಸ್ತು ಮೇ ।
ವಿಶೋಕಾ ವಾಸ್ತು ಸಂತತ್ಯೈ ವಿಶೋಕಾ ಸರ್ವಸಿದ್ಧಯೇ ॥ ೧೬ ॥

ತತಃ ಶುಕ್ಲಾಂಬರಧರೋ ಶೂರ್ಪಂ ಸಂವೇಷ್ಟ್ಯ ಪೂಜಯೇತ್ ।
ಭಕ್ಷ್ಯೈರ್ನಾನಾವಿಧೈಸ್ತದ್ವತ್ಸುವರ್ಣಕಮಲೇನ ಚ ॥ ೧೭ ॥

ರಜನೀಷು ಚ ಸರ್ವಾಸು ಪಿಬೇದ್ದರ್ಭೋದಕಂ ವ್ರತೀ ।
ತತಸ್ತು ನೃತ್ಯಗೀತಾದಿ ಕಾರಯೇತ್ಸರ್ವರಾತ್ರಕಂ ॥ ೧೮ ॥

---

೧೫. ದೇವ್ಯೈ ನಮಃ, ಶಾಂತ್ಯೈ ನಮಃ, ಲಕ್ಷ್ಮ್ಯೈ ನಮಃ, ಶ್ರಿಯೈ ನಮಃ, ಪುಷ್ಟ್ಯೈ ನಮಃ, ತುಷ್ಟ್ಯೈ ನಮಃ, ದೃಷ್ಟ್ಯೈ ನಮಃ ಎಂಬ ಈ ನಾಮ ಮಂತ್ರಗಳಿಂದ ಶ್ರೀ ಲಕ್ಷ್ಮಿಯನ್ನು ಪೂಜಿಸಿ ಈರೀತಿ ಪ್ರಾರ್ಥಿಸಬೇಕು.

೧೬. "ಶ್ರೀ ಲಕ್ಷ್ಮೀಪ್ರಸಾದದಿಂದ ಈ ವಿಶೋಕವ್ರತವು ನನ್ನ ದುಃಖ ನಾಶಮಾಡಲಿ, ಮತ್ತು ಇದು ನನಗೆ ಇಷ್ಟವಾದ ವರಗಳನ್ನು ಕೊಡಲಿ, ಮತ್ತು ನನಗೆ ಸಂತತಿ ಪ್ರದವಾಗಲಿ, ಅಲ್ಲದೆ ವಿಶೋಕಸ್ವರೂಪಳಾದ ಈ ಲಕ್ಷ್ಮಿಯು ನನಗೆ ಸರ್ವಸಿದ್ಧಿ ಪ್ರದಳಾಗಲಿ" ಇದು ಪ್ರಾರ್ಥನಾಮಂತ್ರಾರ್ಥ.

೧೭. ಅನಂತರ ಈ ವ್ರತಾನುಷ್ಠಾತೃವು ಬಿಳಿಯ ಬಟ್ಟೆಯನ್ನು ಉಟ್ಟು, ನಾನಾವಿಧ ಭಕ್ಷ್ಯಗಳನ್ನು ಮೊರಗಳಲ್ಲಿಟ್ಟು, ಅದರ ಮೇಲೆ ಮೊರಗಳನ್ನು ಮುಚ್ಚಿಟ್ಟು, ಸುವರ್ಣಕಮಲಾದಿಗಳಿಂದ ಸೂರ್ಯ, ಲಕ್ಷ್ಮಿ ಇವರುಗಳನ್ನು ಪೂಜಿಸಬೇಕು.

೧೮. ಈ ವ್ರತಕರ್ತೃವು ಪ್ರತಿ ಮಾಸಗಳಲ್ಲೂ ಈ ವ್ರತವನ್ನು ಆಚರಿಸುವಾಗ, ಪ್ರತಿ ಏಕಾದಶಿಯ ರಾತ್ರಿಗಳಲ್ಲೂ ದರ್ಭೋದಕವನ್ನು ಪ್ರಾಶನ ಮಾಡಬೇಕು. ಮತ್ತು ಪ್ರತಿ ಏಕಾದಶೀ ರಾತ್ರಿಗಳಲ್ಲಿ ನೃತ್ಯಗೀತಾದಿಗಳನ್ನು ಏರ್ಪಡಿಸಿ ಜಾಗರಣೆಮಾಡಬೇಕು.

ಯಾಮತ್ರಯೇ ವ್ಯತೀತೇ ತು ಸುಪ್ತ್ವಾ ಸ್ವಸ್ಥೋಪಮಾನಸಃ ।
ಅಭಿಗಮ್ಯ ಚ ವಿಪ್ರಾಣಾಂ ಮಿಥುನಾನಿ ಸದಾರ್ಚಯೇತ್ ॥ ೧೯ ॥

ಶಕ್ತಿತಸ್ತ್ರೀಣಿ ಚೈಕಂ ವಾ ವಸ್ತ್ರಮಾಲ್ಯಾನುಲೇಪನೈಃ ।
ಶಯನಾಸ್ಥಾನಿ ಪೂಜ್ಯಾನಿ ನಮೋಽಸ್ತು ಜಲಶಾಯಿನೇ ॥ ೨೦ ॥

ತತಸ್ತು ಗೀತವಾದ್ಯಾದ್ಯೈ ರಾತ್ರೌ ಜಾಗರಣೇ ಕೃತೇ ।
ಪ್ರಭಾತೇ ವಿಮಲೇ ಸ್ನಾನಂ ಕೃತ್ವಾ ದಾಂಪತ್ಯಮರ್ಚಯೇತ್ ॥ ೨೧ ॥

ಭೋಜನಂ ಚ ಯಥಾಶಕ್ತ್ಯಾ ವಿತ್ತಶಾಠ್ಯವಿವರ್ಜಿತಃ ।
ಭುಕ್ತ್ವಾ ಶ್ರುತ್ವಾ ಪುರಾಣಾನಿ ತದ್ದಿನಂ ತ್ವತಿವಾಹಯೇತ್ ॥ ೨೨ ॥

---

೧೯. ಆ ರಾತ್ರಿಯ ಮೂರು ಯಾಮಗಳು ಕಳೆದ ಮೇಲೆ ಸ್ವಲ್ಪ ಶಯನ ಮಾಡಿ, ಎದ್ದು ಸ್ವಸ್ಥವಾದ ಮನಸ್ಸುಳ್ಳವನಾಗಿ, ಬ್ರಾಹ್ಮಣ ದಂಪತಿಗಳನ್ನು ಪೂಜಿಸಬೇಕು.

೨೦. ತನ್ನ ಶಕ್ತಿಯನ್ನನುಸರಿಸಿ ಮೂವರು ದಂಪತಿಗಳು, ಅಥವಾ ಒಂದು ದಂಪತಿಗಳನ್ನು ಹಾಸಿಗೆಯ ಮೇಲೆ ಕುಳ್ಳಿರಿಸಿ "ಜಲಶಾಯಿನೇ ನಮೋಽಸ್ತು" ಎಂದು ಹೇಳಿ ಅವರಿಗೆ ವಸ್ತ್ರ, ಸುಗಂಧ, ಮಾಲ್ಯ, ಅನುಲೇಪನಾದಿಗಳನ್ನು ಕೊಟ್ಟು ಪೂಜೆ ಮಾಡಬೇಕು.

೨೧. ಗೀತ, ವಾದ್ಯ ಮೊದಲಾದುವುಗಳಿಂದ ಏಕಾದಶಿಯ ರಾತ್ರಿಯಲ್ಲಿ ಜಾಗರಣೆಮಾಡಿ, ಮರುದಿನ ಸುಪ್ರಭಾತವಾದ ಮೇಲೆ ನಿರ್ಮಲಜಲದಲ್ಲಿ ಸ್ನಾನ ಮಾಡಿ, ದಂಪತಿ ಪೂಜೆಯನ್ನು ಮಾಡಬೇಕು.

೨೨. ಆಗ ಧನಲೋಭ ಮಾಡದೆ ಸ್ವಶಕ್ತ್ಯನುಸಾರವಾಗಿ ಅವರಿಗೆ ಭೋಜನವನ್ನು ಮಾಡಿಸಿ, ಅನಂತರ ತಾನೂ ಭೋಜನಮಾಡಿ, ಪುರಾಣಶ್ರವಣ ಮಾಡುತ್ತಾ ಆ ದಿನವನ್ನೆಲ್ಲಾ ಕಳೆಯಬೇಕು.

ಅನೇನ ವಿಧಿನಾ ಸರ್ವಂ ಮಾಸಿಮಾಸಿ ಸಮಾಚರೇತ್ ।
ವ್ರತಾಂತೇ ಶಯನಂ ದದ್ಯಾದ್ಗುಡಧೇನುಸಮನ್ವಿತಂ ।
ಸೋಪಧಾನಕವಿಶ್ರಾಮಮಾಸ್ತರಾವರಣಂ ಶುಭಂ　|| ೨೩ ||

ಯಥಾ ನ ಲಕ್ಷ್ಮೀರ್ದೇವೇಶ ತ್ವಾಂ ಪರಿತ್ಯಜ್ಯ ಗಚ್ಛತಿ ।
ತಥಾ ಕುರು ಯಥಾಯೋಗ್ಯಮಶೋಕಂ ಚಾಸ್ತು ಮೇ ಸದಾ || ೨೪ ||

ಯಥಾ ದೇವೇನ ರಹಿತಾ ನ ಲಕ್ಷ್ಮೀರ್ಜಾಯತೇ ಕ್ವಚಿತ್ ।
ತಥಾ ವಿಶೋಕತಾ ಮೇಽಸ್ತು ಭಕ್ತಿರಗ್ರ್ಯಾ ಚ ಕೇಶವೇ　|| ೨೫ ||

ಮಂತ್ರೇಣಾನೇನ ಧ್ಯಾತ್ವಾ ತು ಗುಡಧೇನುಸಮನ್ವಿತಂ ।
ಶೂರ್ಪಂ ಚ ಲಕ್ಷ್ಮ್ಯಾಸಹಿತಂ ದಾತವ್ಯಂ ಭೂತಿಮಿಚ್ಛತಾ　|| ೨೬ ||

---

೨೩. ಈ ಕ್ರಮದಲ್ಲಿ ಪ್ರತಿ ತಿಂಗಳಲ್ಲೂ ಎಲ್ಲವನ್ನೂ ಆಚರಿಸಬೇಕು. ಹೀಗೆ ಒಂದು ವರ್ಷ ಆಚರಿಸಿ, ಈ ವ್ರತವು ಸಮಾಪ್ತವಾದಾಗ ದಿಂಬು, ಹಾಸುವ ಬಟ್ಟೆ, ಶುಭಕರವಾದ ಹಾಸಿಗೆ ಸಹಿತವಾದ ಮಂಚ, ಗುಡಧೇನು ಇವುಗಳನ್ನು ದಾನ ಮಾಡಬೇಕು.

೨೪-೨೫. ದಾನಕಾಲದಲ್ಲಿ ಈ ಪ್ರಾರ್ಥನಾ ಮಂತ್ರ ಹೇಳಬೇಕು. ಓ ದೇವಾಧೀಶನೇ ! ಹೇಗೆ ಲಕ್ಷ್ಮಿಯು ನಿನ್ನನ್ನು ತ್ಯಜಿಸಿ ಅನ್ಯತ್ರ ಹೋಗುವುದಿಲ್ಲವೋ, ಹಾಗೆಯೇ ಯಥಾಯೋಗ್ಯವಾಗಿ ಸಂಪದಭಿಮಾನಿಯಾದ ಆ ಲಕ್ಷ್ಮೀ ವಿಯೋಗ ಬಾರದಂತೆ ಮಾಡು. ಮತ್ತು ನನಗೆ ಯಾವಾಗಲೂ ಶೋಕ ಬಾರದಿರಲಿ, ಅಲ್ಲದೆ ಲಕ್ಷ್ಮಿಯು ಶ್ರೀಹರಿಯಿಂದ ವಿಯುಕ್ತಳಾಗಿ ಎಲ್ಲೂ ಯಾವಾಗಲೂ ಇರದಂತೆ ನನಗೂ ಅವಿಯೋಗವು ಇರಲಿ. ಹಾಗೆಯೇ ಸರ್ವಶೋಕವೂ ನೀಗಲಿ. ಅಲ್ಲದೆ ಶ್ರೀಹರಿಯಲ್ಲಿ ಉತ್ತಮವಾದ ಸ್ಥಿರಭಕ್ತಿಯು ನನಗಿರಲಿ ಎಂದು ಈ ಮಂತ್ರಾರ್ಥ.

೨೬. ತನಗೆ ಒಳ್ಳೆಯದಾಗಬೇಕೆಂದಿರುವವನು ಈ ಮಂತ್ರದಿಂದ ಶ್ರೀಹರಿಯನ್ನು ಧ್ಯಾನಿಸಿ, ಗುಡಧೇನುಸಮನ್ವಿತವಾದ ಶಯ್ಯೆ ಲಕ್ಷ್ಮೀ ಸಹಿತವಾದ ಶೂರ್ಪ, ಇವುಗಳನ್ನು ದಾನವಾಗಿ ಕೊಡಬೇಕು.

ಉತ್ಪಲಂ ಕರವೀರಂ ಚ ಬಾಣಾಮಮ್ಲಾನಕುಂಡಲಂ ।
ಕೇಸರಂ ಸಿಂದುವಾರಂ ಚ ಮಲ್ಲಿಕಾಚಂಧಪಾಟಲಂ ।
ಕಾದಂಬೈಃ ಕುಂಕುಮೈರ್ಜಾತ್ಯಾ ತಥಾನ್ಯೈರಪಿ ಪೂಜಯೇತ್ ॥೨೭॥

॥ ಯುಧಿಷ್ಠಿರ ಉವಾಚ ॥
ಗುಡಧೇನುವಿಧಾನಂ ಮೇ ತ್ವಮಾಚಕ್ಷ್ವ ಜಗತ್ಪತೇ ।
ಕಿಂರೂಪಾ ಕೇನ ಮಂತ್ರೇಣ ದಾತವ್ಯಾ ತದಿಹೋಚ್ಯತಾಂ ॥ ೨೮ ॥

॥ ಶ್ರೀ ಕೃಷ್ಣ ಉವಾಚ ॥
ಗುಡಧೇನುವಿಧಾನಂ ಚ ಯದ್ರೂಪಮಿಹ ಯತ್ಫಲಂ ।
ತದಿದಾನೀಂ ಪ್ರವಕ್ಷ್ಯಾಮಿ ಸರ್ವಪಾಪಪ್ರಣಾಶನಂ ॥ ೨೯ ॥

ಕೃಷ್ಣಾಜಿನಂ ಚತುರ್ಹಸ್ತಂ ಪ್ರಾಗ್ರೀವಂ ವಿನ್ಯಸೇದ್ಭುವಿ ।
ಗೋಮಯೇನಾನುಲಿಪ್ತಾಯಾಂ ದರ್ಭಾನಾಸ್ತೀರ್ಯ ಸರ್ವತಃ ॥ ೩೦ ॥

---

೨೭. ಬಾಡದೇ ಇರುವ ಉತ್ಪಲ, ಕರವೀರ, ಕರೀ ಗೋರಂಟಿಹೂ, ಕರ್ಣಕುಂಡಲಪುಷ್ಪ, ಕೇಸರಪುಷ್ಪ, ಸಿಂಧುವಾರ (ಲಕ್ಕಿಹೂ), ಮಲ್ಲಿಗೆ, ಪಾದರಿ ಹೂ, ಕಡಹದಪುಷ್ಪ, ಕುಂಕುಮ(ಕೆಂಪುಗುಲಾಬಿ), ಜಾಜಿ, ಈ ಪುಷ್ಪಗಳಿಂದಲೂ, ಇತರ ಪುಷ್ಪಗಳಿಂದಲೂ ಈ ವ್ರತದಲ್ಲಿ ದೇವತಾರ್ಚನೆಯನ್ನು ಮಾಡಬೇಕು.

೨೮. ಯುಧಿಷ್ಠಿರನು ಹೇಳುತ್ತಾನೆ—" ಓ ಜಗದೀಶನೇ ! ಈಗ ಗುಡ ಧೇನು ವಿಧಾನವನ್ನು ನನಗೆ ಹೇಳು. ಆ ಗುಡಧೇನುವು ಯಾವ ಸ್ವರೂಪದ್ದು ? ಆ ದಾನ ಕೊಡಬೇಕಾದರೆ ಅದಕ್ಕೆ ಮಂತ್ರವು ಯಾವುದು ? ಎಂಬುದನ್ನು ಈಗ ಉಪದೇಶಿಸು " ಎಂದನು.

೨೯. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ರಾಜನೇ ! ಸರ್ವಪಾಪ ಗಳನ್ನೂ ನಾಶಮಾಡುವ ಗುಡಧೇನುವಿನ ವಿಧಾನ, ಸ್ವರೂಪ, ಆ ದಾನದ ಫಲ, ಇದನ್ನೆಲ್ಲಾ ಈಗ ನಿನಗೆ ಹೇಳುತ್ತೇನೆ.

೩೦. ಭೂಮಿಯನ್ನು ಗೋಮಯದಿಂದ ಸಾರಿಸಿ ಶುದ್ಧೀಕರಿಸಿ, ಅದರ ಮೇಲೆ ಪೂರ್ತಾ ದರ್ಭೆಗಳನ್ನು ಪ್ರಸರಿಸಿ, ಆ ದರ್ಭೆ ಹಾಸಿದ ಭೂಮಿಯಲ್ಲಿ ಪೂರ್ವಾಭಿಮುಖವಾಗಿ ನಾಲ್ಕು ಹಸ್ತಪ್ರಮಾಣವುಳ್ಳ ಕೃಷ್ಣಾಜಿನವನ್ನು ಹಾಸಬೇಕು.

**ಲಬ್ಧೇನ ಕಾಂಚನಂ ತದ್ವದ್ವತ್ಸಂ ಚ ಪರಿಕಲ್ಪಯೇತ್ ।**
**ಪ್ರಾಙ್ಮುಖೀಂ ಕಲ್ಪಯೇದ್ಧೇನುಮುದಕ್ಪಾದಾಂ ಸವತ್ಸಿಕಾಂ　|| ೩೧ ||**

**ಉತ್ತಮಾ ಗುಡಧೇನುಃ ಸ್ಯಾತ್ಸದಾ ಭಾರಚತುಷ್ಟಯಾ ।**
**ವತ್ಸಂ ಭಾರೇಣ ಕುರ್ವೀತ ದ್ವಾಭ್ಯಾಂ ವೈ ಮಧ್ಯಮಾ ಸ್ಮೃತಾ || ೩೨ ||**

**ಅರ್ಧಭಾರೇಣ ವತ್ಸಃ ಸ್ಯಾತ್ಕನಿಷ್ಠಾ ಭಾರಕೇಣ ತು ।**
**ಚತುರ್ಥಾಂಶೇನ ವತ್ಸಃ ಸ್ಯಾದ್ಗೃಹವಿತ್ತಾನುಸಾರತಃ　|| ೩೩ ||**

**ಧೇನುವತ್ಸೌ ಕೃತಾವೇತೌ ಸಿತಸೂಕ್ಷ್ಮಾಂಬರಾವೃತೌ ।**
**ಶುಕ್ತಿಕರ್ಣಾವಿಕ್ಷುಪಾದೌ ಶುಕ್ತಿಮುಕ್ತಾಫಲೇಕ್ಷಣೌ　|| ೩೪ ||**

---

೩೧. ಈ ಮುಂಚೆ ಭಂಗಾರದಿಂದ ಕರುಸಹಿತವಾದ ಪಸುವಿನ ಪ್ರತಿಮೆಯನ್ನು ಮಾಡಿಸಬೇಕು. ಅದನ್ನು ಪೂರ್ವಾಭಿಮುಖವಾಗಿಯೋ, ಅಥವಾ ಉತ್ತರಾಭಿಮುಖವಾಗಿಯೋ ಪಾದಗುಳುಳ್ಳ ಹಾಗೆ, ಆ ಕೃಷ್ಣಾಜಿನದಲ್ಲಿ ಕುಳ್ಳಿರಿಸಬೇಕು.

೩೨. ಅ ಗುಡಧೇನುವನ್ನು ನಾಲ್ಕುಭಾರ ತೂಕದ ಭಂಗಾರದಿಂದ ಮಾಡಿಸಿದರೆ ಉತ್ತಮ. ಆಗ ಅದರ ಕರುವನ್ನು ಒಂದು ಭಾರತೂಕದ ಚಿನ್ನದಿಂದ ಮಾಡಿಸಬೇಕು. (ಒಂದು ಭಾರಕ್ಕೆ ಇಪ್ಪತ್ತು ತೊಲೆಗಳ ತೂಕ ಇರುವುದು). ಎರಡು ಭಾರತೂಕ ಭಂಗಾರದಿಂದ ಮಾಡಿಸಿದರೆ ಅದು ಮಧ್ಯಮವೆನಿಸುವುದು.

೩೩. ಎರಡುಭಾರತೂಕದ ಧೇನು ಮಾಡಿಸಿದಾಗ ಅದರ ಕರುವನ್ನು ಅರ್ಧ ಭಾರ ತೂಕದಿಂದ ಮಾಡಿಸಬೇಕು. ಒಂದು ಭಾರತೂಕದಿಂದ ಗೋವನ್ನು ಮಾಡಿಸುವುದು ಕನಿಷ್ಠವೆನಿಸುವುದು. ಆಗ ಕರುವನ್ನು ಕಾಲುಭಾರ ತೂಕದಿಂದ ಮಾಡಿಸಬೇಕು. ಈರೀತಿ ಕರುಸಹಿತವಾದ ಭಂಗಾರದ ಧೇನುವನ್ನು ತನ್ನ ದ್ರವ್ಯ ಸಂಪತ್ತಿಗನುಸಾರವಾಗಿ ಮಾಡಿಸಬೇಕು.

೩೪. ಈರೀತಿ ಮಾಡಿಸಿದ ಹಸು ಮತ್ತು ಕರುಗಳಿಗೆ, ಸೂಕ್ಷ್ಮ ತಂತು, ನಿರ್ಮಿತವಾದ ಬಿಳಿಯ ವಸ್ತ್ರಗಳನ್ನು ಹೊದ್ದಿಸಬೇಕು. ಮತ್ತು ಅವುಗಳ ಕಿವಿಗಳನ್ನು ಕಪ್ಪೇಚಿಪ್ಪುಗಳಿಂದಲೂ, ಪಾದಗಳನ್ನು ಕಬ್ಬುಗಳಿಂದಲೂ, ಕಣ್ಣುಗಳನ್ನು ಕಪ್ಪೇಚಿಪ್ಪು ಮತ್ತು ಮುತ್ತುಗಳಿಂದಲೂ ಮಾಡಬೇಕು.

ಸಿತಸೂತ್ರಶಿರಾಲೌ ತು ಸಿತಕಂಬಲಕಂಬಲೌ ।
ತಾಮ್ರಗಲ್ಲಕಪೃಷ್ಠೌ ತೌ ಸಿತಚಾಮರರೋಮಕೌ ॥ ೩೫ ॥

ವಿದ್ರುಮಭ್ರೂಯುಗಾವೇತೌ ನವನೀತಸ್ತನಾನ್ವಿತೌ ।
ಕ್ಷೌಮಪುಚ್ಛೌ ಕಾಂಸ್ಯದೋಹಾವಿಂದ್ರನೀಲಕತಾರಕೌ ॥ ೩೬ ॥

ಸುವರ್ಣಶೃಂಗಾಭರಣೌ ರಾಜತಖುರಸಂಯುತೌ ।
ನಾನಾಫಲಸಮಾಯುಕ್ತೌ ಘ್ರಾಣಗಂಧಕರಂಡಕೌ ।
ಇತ್ಯೇವಂ ರಚಯಿತ್ವಾ ತು ಧೂಪದೀಪೈರಥಾರ್ಚಯೇತ್ ॥ ೩೭ ॥

ಯಾ ಲಕ್ಷ್ಮೀಃ ಸರ್ವಭೂತಾನಾಂ ಯಾ ಚ ದೇವೇ ವ್ಯವಸ್ಥಿತಾ ।
ಧೇನುರೂಪೇಣ ಸಾ ದೇವೀ ಮಮ ಪಾಪಂ ವ್ಯಪೋಹತು ॥ ೩೮ ॥

---

೩೫. ಬಿಳಿಯ ತಂತುಗಳಿಂದ ನಾಡಿ (ನರ) ಗಳನ್ನೂ ಬಿಳಿಯ ಕಂಬಳಿಯಿಂದ ಕಂಠದ ಕೆಳಗೆ ಜೋಲಾಡುವ ಗಂಗೆದೊಗಲನ್ನೂ, ಹಾಗೆಯೇ ಗಡ್ಡ ಮತ್ತು ಪೃಷ್ಠ ಪ್ರದೇಶಗಳನ್ನೂ ತಾಮ್ರ ಮತ್ತು ಬಿಳಿಯ ಚಮರಿಯ ರೋಮ ಇವುಗಳಿಂದ ಮಾಡಬೇಕು.

೩೬. ಈ ಸವತ್ಸಧೇನುವನ್ನು ಹವಳಗಳ ಭ್ರೂಯುಗಳ, ಬೆಣ್ಣೆಯ ಸ್ತನಗಳು, ರೇಶ್ಮೆಯ ಬಾಲ, ಇಂದ್ರನೀಲ ಮಣಿಯ ಕಣ್ಣಿನ ಗುಡ್ಡೆ, ಇವುಗಳುಳ್ಳದ್ದಾಗಿ ಮಾಡಬೇಕು.

೩೭. ಮತ್ತು ಕೊಂಬುಗಳಿಗೆ ಸುವರ್ಣದ ಆಭರಣಗಳನ್ನು ಮಾಡಿಸಿ ಹಾಕಬೇಕು. ಬೆಳ್ಳಿಯಿಂದ ಗೊರಸುಗಳನ್ನು ಮಾಡಿಸಬೇಕು. ನಾನಾಫಲಗಳಿಂದ ಮಾಡಿದ ನಾಸಾಪುಟಗಳಿಂದ ಕೂಡಿರಬೇಕು. ಈ ಕ್ರಮದಿಂದ ಆ ಸವತ್ಸಗೋವನ್ನು ರಚಿಸಿ, ಅನಂತರ ಧೂಪ ದೀಪಗಳಿಂದ ಪೂಜಿಸಿ.

೩೮. ಈ ಪ್ರಾರ್ಥನಾ ಮಂತ್ರಗಳನ್ನು ಹೇಳಬೇಕು ಯಾವ ಲಕ್ಷ್ಮೀದೇವಿಯು ಸರ್ವಪ್ರಾಣಿಗಳಿಗೂ ರಕ್ಷಕಳಾಗಿ ಶ್ರೀಹರಿಯಲ್ಲಿ ಸ್ಥಿರವಾಗಿ ವಾಸಿಸಿರುವಳೋ, ಆ ಲಕ್ಷ್ಮೀದೇವಿಯು ಧೇನುರೂಪವಾಗಿದ್ದು ನನ್ನ ಪಾಪವನ್ನು ನಾಶಮಾಡಲಿ.

ವಿಷ್ಣೋರ್ವಕ್ಷಸಿ ಯಾಲಕ್ಷ್ಮೀಃ ಸ್ವಾಹಾಯಾಂ ಚ ವಿಭಾವಸೌ ।
ಚಂದ್ರಾರ್ಕಶಕ್ರಶಕ್ತಿರ್ಯಾ ಧೇನುರೂಪಾಸ್ತು ಸಾ ಶ್ರಿಯೇ　　॥ ೩೯ ॥

ಚತುರ್ಮುಖಸ್ಯ ಯಾ ಲಕ್ಷ್ಮೀರ್ಯಾ ಲಕ್ಷ್ಮೀರ್ಧನದಸ್ಯ ಚ ।
ಯಾ ಲಕ್ಷ್ಮೀರ್ಲೋಕಪಾಲಾನಾಂ ಸಾ ಧೇನುರ್ವರದಾಸ್ತು ಮೇ ॥ ೪೦ ॥

ಸ್ವಧಾ ತ್ವಂ ಪಿತೃಮುಖ್ಯಾನಾಂ ಸ್ವಾಹಾಯಜ್ಞಭುಜಾಂ ಪುನಃ ।
ಸರ್ವಪಾಪಹರೇ ಧೇನೋ ತಸ್ಮಾಚ್ಛಾಂತಿಂ ಪ್ರಯಚ್ಛ ಮೇ　　॥ ೪೧ ॥

ಏವಮಾಮಂತ್ರ್ಯ ತಾಂ ಧೇನುಂ ಬ್ರಾಹ್ಮಣಾಯ ನಿವೇದಯೇತ್ ।
ವಿಧಾನಮೇತದ್ಧೇನೂನಾಂ ಸರ್ವಾಸಾಮಿಹ ಪಠ್ಯತೇ　　॥ ೪೨ ॥

---

೩೯. ವಿಷ್ಣುವಿನ ವಕ್ಷಸ್ಥಲದಲ್ಲಿ ವಾಸಿಸಿರುವಳೂ, ಅಗ್ನಿಪತ್ನಿಯಾದ ಸ್ವಾಹಾದೇವಿ, ಅಗ್ನಿ, ಚಂದ್ರ, ಸೂರ್ಯ, ಇಂದ್ರ, ಇವರುಗಳಲ್ಲಿ ಶಕ್ತಿಸ್ವರೂಪಳಾಗಿ ಇರುವವಳೂ ಆದ ಲಕ್ಷ್ಮಿಯು ಧೇನುರೂಪದಿಂದ ನನ್ನ ಸಂಪತ್ಪ್ರಾಪ್ತಿಗೆ ಕಾರಣಳಾಗಲಿ.

೪೦. ಯಾವಳು ಚತುರ್ಮುಖಬ್ರಹ್ಮ, ಕುಬೇರ, ಇಂದ್ರಾದಿ ಲೋಕಪಾಲಕರು, ಇವರುಗಳಿಗೆ ಲಕ್ಷ್ಮೀ ಸ್ವರೂಪಳಾಗಿರುವಳೋ, ಆ ಗೋಮಾತೆಯು ನನಗೆ ವರಪ್ರದಳಾಗಲಿ.

೪೧. ಸರ್ವಪಾಪಗಳನ್ನೂ ನಾಶಮಾಡುವ ಓ ಧೇನುವೇ ! ನೀನು ಪಿತೃದೇವತೆಗಳಿಗೆ ಕವ್ಯಕರ್ಮಗಳಲ್ಲಿ ಪಿಂಡಪ್ರದಾನ ಮಾಡುವುದಕ್ಕೆ ಉಪಯುಕ್ತವಾದ ಸ್ವಧಾ ಸ್ವರೂಪಳಾಗಿಯೂ, ಯಜ್ಞಗಳಲ್ಲಿ ದೇವತೆಗಳಿಗೆ ಹವಿಸ್ಸನ್ನು ಕೊಡುವುದಕ್ಕೆ ಉಪಯುಕ್ತವಾದ ಸ್ವಾಹಾ ಸ್ವರೂಪಳಾಗಿಯೂ ಇರುವೆ. ಆದುದರಿಂದ ಅಂತಹ ನೀನು ನನಗೆ ಸಂಪತ್ತನ್ನು ಕೊಡು ಎಂಬುದು ಈ ಮಂತ್ರಗಳ ಅರ್ಥ.

೪೨. ಈರೀತಿ ಆ ಗುಡಧೇನುವನ್ನು ಪ್ರಾರ್ಥಿಸಿ, ಅನಂತರ ಬ್ರಾಹ್ಮಣನಿಗೆ ಅದನ್ನು ದಾನ ಮಾಡಬೇಕು. ಇದು ಗುಡಧೇನುವಿನ ವಿಧಾನ. ಇನ್ನು ಇತರ ಧೇನುಗಳ ವಿಧಾನವನ್ನು ಹೇಳುತ್ತೇನೆ.

ಯಾಸ್ತು ಪಾಪವಿನಾಶಿನ್ಯಃ ಶ್ರೂಯಂತೇ ದಶ ಧೇನವಃ ।
ತಾಸಾಂ ಸ್ವರೂಪಂ ವಕ್ಷ್ಯಾಮಿ ನಾಮಾನಿ ಚ ನರಾಧಿಪ ॥ ೪೩ ॥

ಪ್ರಥಮಾ ಗುಡಧೇನುಸ್ಸ್ಯಾದ್ಘೃತಧೇನುರಥಾಽಪರಾ ।
ತಿಲಧೇನುಸ್ತೃತೀಯಾ ಸ್ಯಾಚ್ಚತುರ್ಥೀ ಮಧುಧೇನುಕಾ ॥ ೪೪ ॥

ಜಲಧೇನುಃ ಪಂಚಮೀ ತು ಷಷ್ಠೀ ತು ಕ್ಷೀರಸಂಭವಾ ।
ಸಪ್ತಮೀ ಶರ್ಕರಾಧೇನುರ್ದಧಿಧೇನುರಥಾಷ್ಟಮೀ
ರಸಧೇನುಶ್ಚ ನವಮೀ ದಶಮೀಸ್ಯಾತ್ಸ್ವರೂಪತಃ ॥ ೪೫ ॥

ಕುಂಭಾಸ್ಯುರ್ದಶಧೇನೂನಾಮಿತರಾಸಾಂ ತು ರಾಶಯಃ ।
ಸುವರ್ಣಧೇನುಮಪ್ಯತ್ರ ಕೇಚಿದಿಚ್ಛಂತಿ ಮಾನವಾಃ ॥ ೪೬ ॥

---

೪೩. ಅಯ್ಯಾ ರಾಜನೇ ! ಪಾಪನಿವಾರಣಾರ್ಥವಾಗಿ ಹತ್ತುಧೇನುಗಳು ಪ್ರಮಾಣಗ್ರಂಥಗಳಲ್ಲಿ ಶ್ರುತಗಳಾಗಿವೆ. ಆ ಧೇನುಗಳ ಸ್ವರೂಪಗಳನ್ನೂ ಮತ್ತು ನಾಮಧೇಯಗಳನ್ನೂ ಹೇಳುತ್ತೇನೆ ಕೇಳು.

೪೪. ಅದರಲ್ಲಿ ಮೊದಲನೆಯದು ಗುಡಧೇನು, ಎರಡನೆಯದು ಘೃತ ಧೇನು, ಮೂರನೆಯದು ತಿಲಧೇನು, ನಾಲ್ಕನೆಯದು ಮಧುಧೇನು.

೪೫. ಐದನೆಯದು ಜಲಧೇನು, ಆರನೆಯದು ಕ್ಷೀರಧೇನು, ಏಳನೆ ಯದು ಶರ್ಕರಾಧೇನು, ಎಂಟನೆಯದು ದಧಿಧೇನು, ಒಂಭತ್ತನೆಯದು ರಸ ಧೇನು, ಲೋಕದಲ್ಲಿ ಪ್ರಸಿದ್ಧವಾಗಿರುವ ಧೇನುಸ್ವರೂಪವಾದ ಗೋವೇ ಹತ್ತನೆಯ ಧೇನು.

೪೬. ಈ ಹತ್ತು ಧೇನುಗಳಲ್ಲಿ ಘೃತಧೇನ್ವಾದಿ ಕೆಲವು ರಸಪದಾರ್ಥಗಳ ದಾನಕ್ಕಾಗಿ ಕುಂಭವು ಅಪೇಕ್ಷಿತವಾಗಿದೆ. ಸ್ವರೂಪಧೇನುವು ಪ್ರಸಿದ್ಧವಾದ ಗೋವು. ಗುಡಧೇನು ಇತ್ಯಾದಿಗಳಿಗೆ ಆಯಾಯ ವಸ್ತುಗಳ ರಾಶಿಯೇ ಸಾಕು. ಕುಂಭಾಪೇಕ್ಷೆ ಇಲ್ಲ, ಕೆಲವರು ವಿದ್ವಾಂಸರು ಇಲ್ಲಿ ಸುವರ್ಣಧೇನುವನ್ನೂ ಪರಿಗಣಿಸಿ ಹೇಳಲು ಇಚ್ಛಿಸುವರು.

ನವನೀತೇನ ರತ್ನೈಶ್ಚ ತಥಾಪ್ಯನ್ಯೇ ಮಹರ್ಷಯಃ ।
ಏತದೇವ ವಿಧಾನಂ ಸ್ಯಾತ್ತ ಏವೋಪಸ್ಕರಾಃ ಸ್ಮೃತಾಃ  || ೪೭ ||

ಮಂತ್ರಾವಾಹನಸಂಯುಕ್ತಾಂ ಸದಾ ಪರ್ವಣಿಪರ್ವಣಿ ।
ಯಥಾಶ್ರದ್ಧಂ ಪ್ರದಾತವ್ಯಾ ಭುಕ್ತಿಮುಕ್ತಿಫಲಪ್ರದಾ  || ೪೮ ||

ಗುಡಧೇನುಪ್ರಸಂಗೇನ ಸರ್ವಾಸ್ತ್ವವ ಮಯೋದಿತಾಃ ।
ಅಶೇಷಯಜ್ಞಫಲದಾಃ ಸರ್ವಪಾಪಹರಾಃ ಶುಭಾಃ  || ೪೯ ||

ವ್ರತಾನಾಮುತ್ತಮಂ ಯತ್ಸ್ಯಾದ್ವಿಶೋಕದ್ವಾದಶೀವ್ರತಂ ।
ತದಂಗತ್ವೇನ ಚೈವೈಷಾ ಗುಡಧೇನುಃ ಪ್ರಶಸ್ಯತೆ  || ೫೦ ||

ಅಯನೇ ವಿಷುವೇ ಪುಣ್ಯೇ ವ್ಯತೀಪಾತೇಽಥವಾ ಪುನಃ ।
ಗುಡಧೇನ್ವಾದಯೋ ದೇಯಾ ಉಪರಾಗಾದಿಪರ್ವಸು  || ೫೧ ||

---

೪೭. ಇತರ ಕೆಲವು ಮಹರ್ಷಿಗಳು ನವನೀತಧೇನು, ರತ್ನಧೇನು ಇವುಗಳನ್ನೂ ಹೇಳಿರುತ್ತಾರೆ. ಅವುಗಳ ದಾನಕ್ರಮಾದಿಗಳು ಈ ಹಿಂದೆ ಹೇಳಿದಂತೆಯೇ. ಅವುಗಳ ಅಂಗಾಲಂಕಾರ ಸಂಭಾರಗಳೂ ಗುಡಧೇನು ವಿಚಾರವಾಗಿ ಹಿಂದೆ ಹೇಳಿದ ಪದಾರ್ಥಗಳೇ ಆಗಿವೆ.

೪೮. ಭೋಗ ಮತ್ತು ಅಪವರ್ಗಫಲ ಇವುಗಳನ್ನು ಕೊಡುವ ಈ ದಶಧೇನು ದಾನಗಳನ್ನು ಯಾವಾಗಲೂ ಪ್ರತಿಪರ್ವ ತಿಥಿಗಳಲ್ಲೂ ಮಂತ್ರಪೂರ್ವಕ ಆವಾಹನ ಪೂಜಾದಿಗಳನ್ನು ಮಾಡಿ, ಶ್ರದ್ಧೆಯಿಂದ ದಾನ ಕೊಡಬೇಕು.

೪೯. ಅಯ್ಯಾ ರಾಜನೇ ! ಈ ಗುಡಧೇನು ಪ್ರಸಂಗದಿಂದ ಎಲ್ಲಾ ಧೇನುಗಳ ವಿಧಾನವನ್ನೂ ನಾನು ನಿನಗೆ ಹೇಳಿದೆನು. ಇವೆಲ್ಲವೂ ಮಹಾಯಜ್ಞಫಲಪ್ರವಗಳೂ, ಸರ್ವಪಾತಕ ನಿವಾರಕಗಳೂ, ಮಂಗಳಕರಗಳೂ ಆಗಿವೆ.

೫೦. ಎಲ್ಲಾ ವ್ರತಗಳಲ್ಲಿ ವಿಶೋಕದ್ವಾದಶೀವ್ರತವು ಅತ್ಯುತ್ತಮವಾದುದೆಂದು ಉಕ್ತವಾಗಿದೆ. ಈ ವ್ರತಾಂಗವಾಗಿ ಗುಡಧೇನುವು ಅತಿಪ್ರಶಸ್ತವಾಗಿದೆ.

೫೧. ಪುಣ್ಯಕರವಾದ ಉತ್ತರಾಯಣ ಸಂಕ್ರಾಂತಿಗಳಲ್ಲೂ ವ್ಯತೀಪಾತ, ಗ್ರಹಣ ಮತ್ತು ಇತರ ಪರ್ವತಿಥಿಗಳು ಮುಂತಾಹ ಪುಣ್ಯಕಾಲಗಳಲ್ಲೂ, ಈ ಗುಡಧೇನ್ವಾದಿಗಳನ್ನು ಕಲ್ಪೋಕ್ತವಾಗಿ ಪೂಜಿಸಿ ದಾನ ಮಾಡಬೇಕು.

ವಿಶೋಕದ್ವಾದಶೀ ಚೈಷಾ ಸರ್ವಪಾಪಹರಾ ಶುಭಾ ।
ಯಾಮುಪೋಷ್ಯ ನರೋ ಯಾತಿ ತದ್ವಿಷ್ಣೋಃ ಪರಮಂ ಪದಂ॥ ೫೨ ॥

ಇಹ ಲೋಕೇ ತು ಸೌಭಾಗ್ಯಮಾಯುರಾರೋಗ್ಯಮೇವ ಚ ।
ವೈಷ್ಣವಂ ಪದಮಾಪ್ನೋತಿ ಮರಣೇ ಸದ್ಗತಿರ್ಭವೇತ್ ॥ ೫೩ ॥

ಭವಾರ್ಬುದಸಹಸ್ರಾಣಿ ದಶ ಚಾಷ್ಟೌ ಚ ಧರ್ಮವಿತ್ ।
ನ ಶೋಕದುಃಖದೌರ್ಗತ್ಯಂ ತಸ್ಯ ಸಂಜಾಯತೇ ನೃಪ ॥ ೫೪ ॥

ನಾರೀ ವಾ ಕುರುತೇ ಯಾ ತು ವಿಶೋಕದ್ವಾದಶೀಮಿಮಾಂ ।
ನೃತ್ಯಗೀತಪರಾ ನಿತ್ಯಂ ಸಾಪಿ ತತ್ಫಲಮಾಪ್ನುಯಾತ್ ॥ ೫೫ ॥

ಇತಿ ಪಠತಿ ಯ ಇತ್ಥಂ ಯಃ ಶೃಣೋತೀಹ ಸಮ್ಯಕ್ ।
ಮಧುಪುರನರಕಾರೇರರ್ಚನಂ ಯಶ್ಚ ಪಶ್ಯೇತ್ ।

---

೫೨. ಈ ವಿಶೋಕದ್ವಾದಶಿಯು ಸರ್ವಪಾಪನಾಶಕವೂ, ಮಂಗಳ ಪ್ರದವೂ ಆಗಿದೆ. ಉಪವಾಸ ಪೂರ್ವಕವಾಗಿ ಈ ದ್ವಾದಶೀ ವ್ರತವನ್ನು ಹಿಂದೆ ಹೇಳಿದಂತೆ ಆಚರಿಸಿದ ಪುರುಷನು ಶ್ರೀ ವಿಷ್ಣುಲೋಕವನ್ನು ಪಡೆಯುತ್ತಾನೆ.

೫೩. ಇಹಲೋಕದಲ್ಲೂ ಅವನು ಸೌಭಾಗ್ಯ ಆಯುರಾರೋಗ್ಯ ಇವುಗಳನ್ನು ಪಡೆದು, ಮರಣಾಂತರ ಶ್ರೀವಿಷ್ಣುಪದವನ್ನು ಹೊಂದಿ, ಸದ್ಗತಿಯನ್ನು ಪಡೆಯುತ್ತಾನೆ.

೫೪. ಅಯ್ಯಾ ರಾಜನೇ ! ಧರ್ಮವನ್ನರಿತು ಈ ವ್ರತವನ್ನು ಆಚರಿಸಿದವನಿಗೆ ಒಂದು ಅರ್ಬುದದ ಹದಿನೆಂಟು ಸಹಸ್ರ ಜನ್ಮಗಳಲ್ಲಿ ಶೋಕ, ದುಃಖ, ದಾರಿದ್ರ್ಯ ಇವುಗಳು ಸಂಭವಿಸುವುದಿಲ್ಲ.

೫೫. ಈ ವಿಶೋಕದ್ವಾದಶೀ ವ್ರತವನ್ನು ಯಾವ ಹೆಂಗಸು ಆಚರಿಸುವಳೋ, ಮತ್ತು ತದಂಗವಾಗಿ ಯಾವಳು ನೃತ್ಯ ಗೀತಾದಿಗಳನ್ನು ನಡೆಸುವಳೋ, ಅವರೂ ಸಹ ಈ ವ್ರತದ ಸಂಪೂರ್ಣ ಫಲಭಾಗಿನಿಯರಾಗುತ್ತಾರೆ.

೫೬. ಈ ವ್ರತಪ್ರತಿಪಾದಕ ಗ್ರಂಥವನ್ನು ಯಾವನು ಪಠನಮಾಡುವನೋ, ಯಾವನು ಇದನ್ನು ಸಮಗ್ರವಾಗಿ ಶ್ರವಣಮಾಡುವನೋ, ಮತ್ತು

ಮತಿಮಪಿ ಚ ಜನಾನಾಂ ಯೋ ದದಾತೀಂದ್ರಲೋಕೇ ।
ವಸತಿ ಸ ವಿಬುಧಾದ್ಯೈಃ ಪೂಜ್ಯಮಾನಃ ಸದೈವ || ೫೬ ||

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ವಿಶೋಕದ್ವಾದಶೀ ವ್ರತಂ ನಾಮ ಚತುರಶೀತಿತಮೋಽಧ್ಯಾಯಃ.**



---

ಮಧುನಾಮಕ ದೈತ್ಯ ಮತ್ತು ನರಕಾಸುರ ಇವರುಗಳ ಸಂಹಾರಕನಾದ ಶ್ರೀಹರಿಯ ಪೂಜೆಯನ್ನು ಯಾವನು ಸಂದರ್ಶನಮಾಡುವನೋ, ಮತ್ತು ಯಾವ ಪಂಡಿತನು ಈ ವ್ರತವನ್ನು ವಿವರಿಸಿ ಹೇಳಿ ಇದರಲ್ಲಿ ಇತರ ಜನರಿಗೆ ತಿಳಿವಳಿಕೆ ಹುಟ್ಟಿಸುತ್ತಾನೋ, ಅವರೆಲ್ಲರೂ ಇಂದ್ರಲೋಕಕ್ಕೆ ಹೋಗಿ ಅಲ್ಲಿ ಯಾವಾಗಲೂ ದೇವಾದಿಗಳಿಂದ ಪೂಜಿಸಲ್ಪಡುತ್ತಾ ಸ್ಥಿರವಾಗಿರುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ವಿಶೋಕ ದ್ವಾದಶೀ ವ್ರತವರ್ಣನೆಯೆಂಬ ಎಂಭತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಪಂಚಾಶೀತಿತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ಶೃಣು ಭೂಪಾಲ ವಕ್ಷ್ಯಾಮಿ ವಿಷ್ಣುವ್ರತಮನುತ್ತಮಂ ।
ವಿಭೂತಿದ್ವಾದಶೀಂ ನಾಮ ಸರ್ವಾಮರನಮಸ್ಕೃತಂ ॥ ೧ ॥

ಕಾರ್ತಿಕೇ ವಾಽಥ ವೈಶಾಖೇ ಮಾರ್ಗಶೀರ್ಷೇ ಚ ಫಾಲ್ಗುನೇ ।
ಆಷಾಢೇ ವಾ ದಶಮ್ಯಾಂ ಚ ಶುಕ್ಲಾಯಾಂ ಲಘುಭುಙ್ನರಃ ॥ ೨ ॥

ಕೃತ್ವಾ ಸಾಯಂತನೀಂ ಸಂಧ್ಯಾಂ ಗೃಹ್ಣೀಯಾನ್ನಿಯಮಂ ಬುಧಃ ।
ಏಕಾದಶ್ಯಾಂ ನಿರಾಹಾರಃ ಸಮಭ್ಯರ್ಚ್ಯ ಜನಾರ್ದನಂ ॥ ೩ ॥

---

## ಎಂಭತ್ತೈದನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಭೂಪತಿಯೇ ! ಎಲ್ಲ ದೇವತೆಗಳಿಂದಲೂ ನಮಸ್ಕೃತವಾಗಿ ಗೌರವಿಸಲ್ಪಟ್ಟದ್ದಾಗಿಯೂ, ಅತ್ಯುತ್ತಮವಾಗಿಯೂ, ವಿಷ್ಣೂದ್ದೇಶಕವಾಗಿಯೂ, ಇರುವ ವಿಭೂತಿದ್ವಾದಶೀ ಎಂಬ ವ್ರತವನ್ನು ಹೇಳುತ್ತೇನೆ ಶ್ರವಣ ಮಾಡು.

೨. ಪ್ರಾಜ್ಞನಾದ ಪುರುಷನು ಕಾರ್ತಿಕ, ವೈಶಾಖ, ಮಾರ್ಗಶೀರ್ಷ, ಫಾಲ್ಗುನ, ಆಷಾಢ ಈ ಮಾಸಗಳಲ್ಲಿ ಯಾವುದಾದರೂ ಒಂದು ತಿಂಗಳಿನಲ್ಲಿ ಆರಂಭಿಸುವನಾಗಿ ಶುಕ್ಲಪಕ್ಷದ ದಶಮಿಯಲ್ಲಿ ಲಘುವಾಗಿ ಭೋಜನ ಮಾಡಬೇಕು.

೩–೪. ಅನಂತರ ಸಾಯಂಸಂಧ್ಯಾವಂದನವನ್ನು ಮಾಡಿ ಈ ಮುಂದೆ ಹೇಳುವಂತೆ ಸಂಕಲ್ಪಪೂರ್ವಕವಾಗಿ ನಿಯಮವನ್ನು ಪರಿಗ್ರಹಿಸಬೇಕು. "ಓ ಪ್ರಭುವೇ!

ದ್ವಾದಶ್ಯಾಂ ದ್ವಿಜಸಂಯುಕ್ತಃ ಕರಿಷ್ಯೇ ಭೋಜನಂ ವಿಭೋ ।
ತದವಿಘ್ನೇನ ಮೇ ಯಾತು ಸಾಫಲ್ಯಂ ಮಧುಸೂದನ ॥ ೪ ।

ತತಃ ಪ್ರಭಾತ ಉತ್ಥಾಯ ಕೃತಸ್ನಾನಜಪಃ ಶುಚಿಃ ।
ಪೂಜಯೇತ್ಪುಂಡರೀಕಾಕ್ಷಂ ಶುಕ್ಲಮಾಲ್ಯಾನುಲೇಪನೈಃ ॥ ೫ ॥

ಭೂತಿದಾಯ ನಮಃ ಪಾದೌ ವಿಶೋಕಾಯ ಚ ಜಾನುನೀ ।
ನಮಃ ಶಿವಾಯೇತ್ಯೂರೂ ಚ ವಿಶ್ವಮೂರ್ತೇ ನಮಃ ಕಟಿಂ ॥ ೬ ॥

ಕಂದರ್ಪಾಯ ನಮೋ ಮೇಢ್ರಮಾದಿತ್ಯಾಯ ನಮಃ ಕರೌ ।
ದಾಮೋದರಾಯೇತ್ಯುದರಂ ವಾಸುದೇವಾಯ ಚ ಸ್ತನೌ ॥ ೭ ॥

---

ನಾನು ಏಕಾದಶೀದಿನ ನಿರಾಹಾರದಿಂದಿದ್ದು, ಶ್ರೀಹರಿಯ ಪೂಜೆಮಾಡಿ ಮರುದಿನ ದ್ವಾದಶಿಯಲ್ಲಿ ಬ್ರಾಹ್ಮಣರ ಜತೆಯಲ್ಲಿ ಭೋಜನ ಮಾಡುತ್ತೇನೆ. ಓ ಮಧುಸೂದನನೇ ! ನಾನು ಮಾಡುವ ಈ ವ್ರತಕರ್ಮವು ಅವಿಘ್ನದಿಂದ ನೆರವೇರಿ ಸಫಲವಾಗಲಿ ಎಂದು ಈ ಮಂತ್ರಾರ್ಥ.

೫. ಅನಂತರ ಅವನು ಏಕಾದಶೀದಿನ ಪ್ರಾತಃಕಾಲ ಎದ್ದು, ಸ್ನಾನ ಜಪಾದಿಗಳನ್ನು ಮಾಡಿ, ಶುಚಿಯಾಗಿ ಪುಂಡರೀಕಾಕ್ಷನಾದ ಶ್ರೀಹರಿಯನ್ನು ಬಿಳಿಯ ಪುಷ್ಪಹಾರ, ಗಂಧ, ಇವುಗಳಿಂದ ಪೂಜಿಸಬೇಕು.

೬. ಆಗ ಭೂತಿದಾಯ ನಮಃ ಎಂದು ಪಾದಗಳನ್ನೂ, ವಿಶೋಕಾಯ ನಮಃ ಎಂದು ಜಾನುಪ್ರದೇಶವನ್ನೂ, ಶಿವಾಯನಮಃ ಎಂದು ತೊಡೆಗಳನ್ನೂ ವಿಶ್ವಮೂರ್ತಯೇನಮಃ ಎಂದು ಕಟಿಪ್ರದೇಶವನ್ನೂ, ಪೂಜಿಸಬೇಕು.

೭. ಕಂದರ್ಪಾಯ ನಮಃ ಎಂದು ಶಿಶ್ನವನ್ನೂ, ಆದಿತ್ಯಾಯ ನಮಃ ಎಂದು ಹಸ್ತಗಳನ್ನೂ, ದಾಮೋದರಾಯ ನಮಃ ಎಂದು ಉದರವನ್ನೂ, ವಾಸುದೇವಾಯ ನಮಃ ಎಂದು ಸ್ತನಗಳನ್ನೂ ಅರ್ಚಿಸಬೇಕು.

ಮಾಧವಾಯೇತಿ ಹೃದಯಂ ಕಂಠಂ ವೈಕುಂಠಿನೇ ನಮಃ ।
ಶ್ರೀಧರಾಯ ಮುಖಂ ಕೇಶಾನ್ಕೇಶವಾಯೇತಿ ಪಾಂಡವ ॥ ೮ ॥

ಪೃಷ್ಠಂ ಶಾರ್ಙ್ಗಧರಾಯೇತಿ ಶ್ರವಣೌ ವರದಾಯ ವೈ ।
ಸ್ವನಾಮ್ನಾ ಶಂಖಚಕ್ರಾಸಿಗದಾಪರಶುಪಾಣಯೇ ॥ ೯ ॥

ಸರ್ವಾತ್ಮನೇ ಶಿರೋ ರಾಜನ್ನಮಇತ್ಯಭಿಪೂಜಯೇತ್ ।
ದಶಾವತಾರರೂಪಾಣಿ ಪ್ರತಿಮಾಸಂ ಕ್ರಮಾನ್ನೃಪ ॥ ೧೦ ॥

ದತ್ತಾತ್ರೇಯಂ ತಥಾ ವ್ಯಾಸಮುತ್ಪಲೇನ ಸಮನ್ವಿತಂ ।
ದದ್ಯಾದನೇನ ವಿಧಿನಾ ಪಾಖಂಡಾನಪಿ ವರ್ಜಯೇತ್ ॥ ೧೧ ॥

---

೮. ಮತ್ತೆ ಮಾಧವಾಯ ನಮಃ ಎಂದು ಹೃದಯವನ್ನೂ, ವೈಕುಂಠಿನೇ ನಮಃ ಎಂದು ಕಂಠವನ್ನೂ, ಶ್ರೀಧರಾಯ ನಮಃ ಎಂದು ಮುಖವನ್ನೂ, ಶ್ರೀ ಕೇಶವಾಯ ನಮಃ ಎಂದು ಕೇಶಗಳನ್ನೂ, ಪೂಜಿಸಬೇಕು.

೯. ಹಾಗೆಯೇ ಶಾರ್ಙ್ಗಧರಾಯ ನಮಃ ಎಂದು ಪೃಷ್ಠವನ್ನೂ, ವರದಾಯ ನಮಃ ಎಂದು ಕಿವಿಗಳನ್ನೂ, ಶಂಖ, ಚಕ್ರ, ಖಡ್ಗ, ಗದೆ, ಪರಶು ಇವುಗಳನ್ನು ಸ್ವ-ಸ್ವ ನಾಮಗಳಿಂದಲೂ ಪೂಜಿಸಬೇಕು. ಎಂದರೆ ಶಂಖ ಪಾಣಯೇ ನಮಃ, ಚಕ್ರಪಾಣಯೇ ನಮಃ, ಖಡ್ಗಹಸ್ತಾಯ ನಮಃ, ಗದಾಹಸ್ತಾಯ ನಮಃ, ಪರಶುಹಸ್ತಾಯ ನಮಃ ಈರೀತಿ ಅರ್ಚಿಸಬೇಕು.

೧೦. ಅಯ್ಯಾ ರಾಜನೇ ! ಬಳಿಕ ಸರ್ವಾತ್ಮನೇ ನಮಃ ಎಂದು ಶಿರಸ್ಸನ್ನು ಪೂಜಿಸಬೇಕು. ಎಲೈ ನೃಪನೇ ! ಈ ವ್ರತದಲ್ಲಿ ಕ್ರಮವಾಗಿ ಹತ್ತು ತಿಂಗಳಲ್ಲಿ ಶ್ರೀಹರಿಯ ದಶಾವತಾರ ರೂಪಗಳನ್ನು ಪೂಜಿಸಬೇಕು.

೧೧. ಬಳಿಕ ಉಳಿದ ಎರಡು ತಿಂಗಳುಗಳಲ್ಲಿ ಕ್ರಮವಾಗಿ ದತ್ತಾತ್ರೇಯ ವ್ಯಾಸ ಈ ಮಹಾವ್ಯಕ್ತಿಗಳನ್ನು ಪೂಜಿಸಬೇಕು. ಉತ್ಪಲಪುಷ್ಪ ಸಮನ್ವಿತವಾಗಿ ಈ ಕ್ರಮದಿಂದ ಪೂಜೆಮಾಡಿ ದಾನ ಕೊಡಬೇಕು. ಆ ಕಾಲದಲ್ಲಿ ವೇದನಿಂದಕರಾದ ಪಾಷಂಡಿಗಳ ಜತೆ ಸಂಭಾಷಣೆ ಮಾಡಬಾರದು.

ಸಮಾಪ್ಯೈವಂ ಯಥಾಶಕ್ತ್ಯಾ ದ್ವಾದಶ ದ್ವಾದಶೀರ್ನರಃ ।
ಸಂವತ್ಸರಾಂತೇ ಲವಣಪರ್ವತೇನ ಸಹ ಪ್ರಭೋ　　॥ ೧೨ ॥

ಶಯ್ಯಾಂ ದದ್ಯಾನ್ಮುನಿಶ್ರೇಷ್ಠ ಗುರವೇ ರಸಸಂಯುತಾಮ್ ।
ಗ್ರಾಮಂ ಚ ಶಕ್ತಿಮಾನ್ದದ್ಯಾತ್ಕ್ಷೇತ್ರಂ ವಾ ಭವನಾನ್ವಿತಂ ।
ಗುರುಂ ಸಂಪೂಜ್ಯವಿಧಿವದ್ವಸ್ತ್ರಾಲಂಕಾರಭೂಷಣೈಃ　　॥ ೧೩ ॥

ಅನ್ಯಾನಪಿ ಯಥಾಶಕ್ತ್ಯಾ ಭೋಜಯಿತ್ವಾ ದ್ವಿಜೋತ್ತಮಾನ್ ।
ತರ್ಪಯೇದ್ವಸ್ತ್ರಗೋದಾನೈರನ್ಯೈಶ್ಚ ಧನಸಂಚಯಾತ್　　॥ ೧೪ ॥

ಅಲ್ಪವಿತ್ತೋ ಯಥಾಶಕ್ತ್ಯಾ ಸ್ತೋಕಂಸ್ತೋಕಂ ಸಮಾಚರೇತ್ ।
ಯಶ್ಚಾತಿನಃಸ್ವಃ ಪುರುಷೋ ಭಕ್ತಿಮಾನ್ಮಾಧವಂ ಪ್ರತಿ ।
ಪುಷ್ಪಾರ್ಚನವಿಧಾನೇನ ಸ ಕುರ್ಯಾದ್ವತ್ಸರತ್ರಯಂ　　॥ ೧೫ ॥

---

೧೨. ಅಯ್ಯಾ ರಾಜರ್ಷಿಯೇ ! ಸ್ವಶಕ್ತ್ಯನುಸಾರ ಈ ವ್ರತವನ್ನು ಹನ್ನೆರಡು ದ್ವಾದಶಿಗಳಲ್ಲಿಯೂ ಆಚರಿಸಿ, ಆ ವ್ರತಾನುಷ್ಠಾತೃವು ವರ್ಷದ ಕೊನೆಯಲ್ಲಿ ಲವಣಪರ್ವತ ಸಹಿತವಾಗಿ ಶಯ್ಯೆಯನ್ನು ತನ್ನ ಗುರುವಿಗೆ ದಾನ ಮಾಡಬೇಕು.

೧೩. ಮತ್ತು ಅವನು ಗುರುವಿಗೆ ವಸ್ತ್ರ, ಅಲಂಕಾರ, ಭೂಷಣ ಇವುಗಳಿಂದ ಚೆನ್ನಾಗಿ ಪೂಜೆಮಾಡಿ, ಶಕ್ತಿಯುಳ್ಳವನಾದರೆ ಗ್ರಾಮವನ್ನು ದಾನ ಮಾಡಬೇಕು. ಅಥವಾ ಗೃಹಸಹಿತವಾಗಿ ಕ್ಷೇತ್ರದಾನ ಮಾಡಬೇಕು.

೧೪. ಅಲ್ಲದೆ ತಾನು ಧನಲೋಭಮಾಡದೆ ಸ್ವಶಕ್ತ್ಯನುಸಾರವಾಗಿ ಇತರ ಬ್ರಾಹ್ಮಣೋತ್ತಮರಿಗೂ ಭೋಜನಮಾಡಿಸಿ, ವಸ್ತ್ರದಾನ, ಗೋದಾನ ಇವುಗಳಿಂದ ಅವರನ್ನು ತೃಪ್ತಿಪಡಿಸಬೇಕು.

೧೫. ಅಲ್ಪಧನವುಳ್ಳವನಾದರೆ ಅವನು ಈ ವ್ರತಾಂಗವಾಗಿ ಹೇಳಿದ ದಾನಾದಿಗಳನ್ನು ಯಥಾಶಕ್ತಿ ಸೂಕ್ಷ್ಮವಾಗಿ ಮಾಡಬೇಕು. ಯಾವ ಪುರುಷನು ಅತಿ ದರಿದ್ರನೋ ಅವನು ಶ್ರೀಹರಿಯಲ್ಲಿ ಭಕ್ತಿಯುಳ್ಳವನಾಗಿ ಈ ವ್ರತವನ್ನು ಕೇವಲ ಪುಷ್ಪಾರ್ಚನ ವಿಧಾನದಿಂದ ಮೂರು ವರ್ಷಕಾಲ ಆಚರಿಸಬೇಕು.

ಅನೇನ ವಿಧಿನಾ ಯಸ್ತು ವಿಭೂತಿದ್ವಾದಶೀವ್ರತಂ ।
ಕುರ್ಯಾತ್ಸ ಪಾಪನಿರ್ಮುಕ್ತಃ ಪಿತೄಣಾಂ ತಾರಯೇಚ್ಛತಂ ॥ ೧೬ ॥

ಜನ್ಮನಾಂ ಶತಸಾಹಸ್ರಂ ನ ಶೋಕಫಲಭಾಗ್ಭವೇತ್ ।
ನ ಚ ವ್ಯಾಧಿರ್ಭವೇತ್ತಸ್ಯ ನ ದಾರಿದ್ರ್ಯಂ ನ ಬಂಧನಂ ॥ ೧೭ ॥

ವೈಷ್ಣವೋ ವಾಥ ಶೈವೋ ವಾ ಭವೇಜ್ಜನ್ಮನಿಜನ್ಮನಿ ।
ಯಾವದ್ಯುಗಸಹಸ್ರಾಣಾಂ ಶತಮಷ್ಟೋತ್ತರಂ ಭವೇತ್ ।
ತಾವತ್ಸ್ವರ್ಗೇ ವಸೇದ್ರಾಜನ್ಭೂಪತಿಶ್ಚ ಪುನರ್ಭವೇತ್ ॥ ೧೮ ॥

ಪುರಾ ರಥಂತರೇ ಕಲ್ಪೇ ರಾಜಾಸೀತ್ಪುಷ್ಪವಾಹನಃ ।
ನಾಮ್ನಾ ಲೋಕೇಷು ವಿಖ್ಯಾತಸ್ತೇಜಸಾ ಸೂರ್ಯಸನ್ನಿಭಃ ॥ ೧೯ ॥

ತಪಸಾ ತಸ್ಯ ತುಷ್ಟೇನ ಚತುರ್ವಕ್ತ್ರೇಣ ಭಾರತ ।
ಕಮಲಂ ಕಾಂಚನಂ ದತ್ತಂ ಯಥಾಕಾಮಗತಿಃ ಸದಾ ॥ ೨೦ ॥

---

೧೬. ಈ ಕ್ರಮದಿಂದ ಯಾವ ಪುರುಷನು ಈ ವಿಭೂತಿ ದ್ವಾದಶೀ ವ್ರತವನ್ನು ಆಚರಿಸುವನೋ, ಅವನು ಪಾಪವಿನಿರ್ಮುಕ್ತನಾಗಿ ತನ್ನ ನೂರುಮಂದಿ ಪಿತೃಗಳು ನರಕಗತರಾಗಿದ್ದಾಗ್ಯೂ ಅವರನ್ನು ಉದ್ಧಾರಮಾಡುತ್ತಾನೆ.

೧೭. ಮತ್ತು ಅವನಿಗೆ ಒಂದು ಲಕ್ಷ ಜನ್ಮಗಳಲ್ಲಿ ಶೋಕ, ವ್ಯಾಧಿ, ದಾರಿದ್ರ್ಯ, ಕಾರಾಗೃಹವಾಸ, ಬಂಧನ ಇವುಗಳು ಎಂದಿಗೂ ಸಂಭವಿಸುವುದಿಲ್ಲ.

೧೮. ಮತ್ತು ಅವನು ಜನ್ಮಜನ್ಮಗಳಲ್ಲೂ ವೈಷ್ಣವನೋ ಅಥವಾ ಶೈವನೋ ಆಗಿ ಜನಿಸುವನು. ಮತ್ತು ಅಷ್ಟೋತ್ತರ ಶತಸಹಸ್ರಯುಗಗಳು ಕಳೆಯುವವರೆಗೂ ಸ್ವರ್ಗಲೋಕದಲ್ಲಿ ವಾಸಿಸಿ, ಪುನಃ ಈ ಭೂಲೋಕದಲ್ಲಿ ಜನಿಸಿ ರಾಜನಾಗುದನು.

೧೯. ಪೂರ್ವದಲ್ಲಿ ರಥಂತರಕಲ್ಪದಲ್ಲಿ ಪುಷ್ಪವಾಹನನೆಂಬ ರಾಜನು ಲೋಕ ಪ್ರಖ್ಯಾತನಾಗಿದ್ದನು. ಅವನು ಸೂರ್ಯನಂತೆಯೇ ತೇಜಸ್ವಿಯಾಗಿದ್ದನು.

೨೦. ಅಯ್ಯಾ ಭರತವಂಶಜನೇ ! ಅವನ ತಪಸ್ಸಿಗೆ ಸಂತೋಷಪಟ್ಟು ಚತುರ್ಮುಖ ಬ್ರಹ್ಮನು ಆ ರಾಜನಿಗೆ ಸುವರ್ಣಕಮಲವನ್ನು ಕೊಟ್ಟನು. ಅದರ ಪ್ರಭಾವದಿಂದ ಅವನು ಯಾವಾಗಲೂ ತನ್ನ ಸ್ವೇಚ್ಛಾನುಸಾರವಾಗಿ ಎಲ್ಲಾ ಕಡೆಗಳಲ್ಲೂ ಸಂಚಾರ ಮಾಡುತ್ತಿದ್ದನು.

ಸಮಸ್ತಭೃತ್ಯಸಹಿತಃ ಸಾಂತಃಪುರಪರಿಸ್ಥಿತಃ ।
ದ್ವೀಪಾನಿ ಸುರಲೋಕಂ ಚ ಯಥೇಷ್ಟಂ ವಿಚರತ್ಯಸೌ ॥ ೨೧ ॥

ಕಲ್ಪಾದೌ ಸಪ್ತಮೇ ದ್ವೀಪೇ ತೇನ ಪುಷ್ಕರವಾಸಿನಃ ।
ಲೋಕೇ ಸಂಪೂಜಿತಾ ಯಸ್ಮಾತ್ಪುಷ್ಕರದ್ವೀಪ ಉಚ್ಯತೆ ॥ ೨೨ ॥

ತದೈವ ಬ್ರಹ್ಮಣಾ ದತ್ತಂ ಯಾನಮಸ್ಯ ಯತೋ ನೃಪ ।
ಪುಷ್ಪವಾಹನಮಿತ್ಯಾಹುಸ್ತಸ್ಮಾತ್ತಂ ದೇವದಾನವಾಃ ॥ ೨೩ ॥

ನಾಗತ್ಯ ತಸ್ಯಾಸ್ಯ ಜಗತ್ತ್ರಯೇಽಪಿ ।
ಬ್ರಹ್ಮಾಂಬುಜಸ್ಥಸ್ಯ ತತೋಽನುಭಾವಾತ್ ।
ಪತ್ನೀ ಚ ತಸ್ಯಾಽಪ್ರತಿಮಾ ನರೇಂದ್ರ ।
ನಾರೀಸಹಸ್ರೈರಭಿತೋಽಭಿಸಂದ್ಯಾ ॥ ೨೪ ॥

---

೨೧. ಆ ರಾಜನು ಸಮಸ್ತ ಭೃತ್ಯಸಹಿತನೂ, ಅಂತಃಪುರ ಸ್ತ್ರೀಜನ ಸಮೇತನೂ ಆಗಿ, ಭೂಲೋಕದ ಎಲ್ಲ ದ್ವೀಪಗಳಲ್ಲೂ ಸ್ವರ್ಗಲೋಕದಲ್ಲೂ ಯಥೇಷ್ಟವಾಗಿ ಸಂಚರಿಸುತ್ತಿದ್ದನು.

೨೨. ಕಲ್ಪಾದಿಯಲ್ಲಿ ಆ ರಾಜನು ಏಳನೆಯ ದ್ವೀಪದಲ್ಲಿ ವಾಸಿಸುವ ಜನರನ್ನು ಪೂಜಿಸಿದ್ದರಿಂದ ಆ ದ್ವೀಪಕ್ಕೆ ಪುಷ್ಕರದ್ವೀಪ ಎಂಬ ನಾಮಧೇಯ ಉಂಟಾಯಿತು.

೨೩. ಅಯ್ಯಾ ರಾಜನೇ! ಆ ಕಾಲದಲ್ಲೇ ಬ್ರಹ್ಮನು ಈ ರಾಜನಿಗೆ ಪುಷ್ಪಕವಿಮಾನವನ್ನು ಕೊಟ್ಟುದರಿಂದ ದೇವತೆಗಳು, ದಾನವರು ಇವರೆಲ್ಲ ಆ ರಾಜನನ್ನು ಪುಷ್ಪವಾಹನ ಎಂಬ ನಾಮಧೇಯದಿಂದ ಕರೆಯುತ್ತಾರೆ.

೨೪. ಅಯ್ಯಾ ರಾಜನೇ! ತಪಃಪ್ರಭಾವದಿಂದಲೂ, ಬ್ರಹ್ಮನು ಕೊಟ್ಟ ಸುವರ್ಣಕಮಲವನ್ನು ಧಾರಣೆ ಮಾಡಿದ್ದರಿಂದಲೂ, ಆ ಪುಷ್ಪವಾಹನನಿಗೆ ಮೂರು ಲೋಕಗಳಲ್ಲೂ ಅಗಮ್ಯವಾದ ಸ್ಥಳವೇ ಇರಲಿಲ್ಲ. ಅವನ ಪತ್ನಿಯು ಸರ್ವಾಂಗಗಳಲ್ಲೂ ಅಸದೃಶಳಾಗಿರುತ್ತಾ ಸಾವಿರಾರು ಸ್ತ್ರೀಯರಿಂದ ಸ್ತೋತ್ರಾರ್ಹಳೆನಿಸಿಕೊಂಡಿದ್ದಳು.

ನಾಮ್ನಾ ಚ ಲಾವಣ್ಯವತೀ ಬಭೂವ ।
ಯಾ ಪಾರ್ವತೀವೇಷ್ಟತಮಾ ಭವಸ್ಯ ।
ತಸ್ಯಾತ್ಮಜಾನಾಮಯುತಂ ಬಭೂವ ।
ಧರ್ಮಾತ್ಮನಾಮಗ್ರ್ಯಧನುರ್ಧರಾಣಾಂ ॥ ೨೫ ।

ತದಾತ್ಮನಃ ಸರ್ವಮವೇಕ್ಷ್ಯ ರಾಜಾ ।
ಮುಹುರ್ಮುಹುರ್ವಿಸ್ಮಯಮಾಸಸಾದ ।
ಸೋಽಭ್ಯಾಗತಂ ಪೂಜ್ಯ ಮುನಿಪ್ರವೀರಂ।
ಪ್ರಚೇತಸಂ ವಾಚಮಿಮಾಂ ಬಭಾಷೆ ॥ ೨೬ ॥

ಕಸ್ಮಾದ್ವಿಭೂತಿರಮಲಾ ಮಮ ಮರ್ತ್ಯಪೂಜ್ಯಾ ।
ಜಾಯಾ ಚ ಸರ್ವವಿಜಿತಾಮರಸುಂದರೀ ಯಾ ।
ಭಾರ್ಯಾ ತ್ವನಲ್ಪತಪಸಾ ವಸುತೋಷಿತೇನ ।
ದತ್ತಂ ಮಮಾಂಬುಜಗೃಹಂ ಪರಮಪ್ರಸಾದಾತ್ ॥ ೨೭ ॥

---

೨೫. ಅವಳು ಸೌಂದರ್ಯದಲ್ಲಿ ಮಾತ್ರವಲ್ಲದೆ, ಹೆಸರಿನಲ್ಲೂ ಲಾವಣ್ಯವತಿಯೇ ಆಗಿದ್ದಳು. ಪರಮೇಶ್ವರನಿಗೆ ಪಾರ್ವತಿಯು ಹೇಗೆ ಇಷ್ಟಳಾಗಿದ್ದಳೋ, ಹಾಗೆಯೇ ಇವಳೂ ತನ್ನ ಪತಿಗೆ ಅತಿ ಇಷ್ಟಳಾಗಿದ್ದಳು. ಆ ರಾಜನಿಗೆ ಇವಳಲ್ಲಿ ಅಯುತಸಂಖ್ಯಾತ ಪುತ್ರರು ಜನಿಸಿದರು. ಅವರೆಲ್ಲರೂ ಧರ್ಮಿಷ್ಠರಲ್ಲೂ ಧನುರ್ಧಾರಿಗಳಲ್ಲೂ ಮುಂದಾಳುಗಳಾಗಿದ್ದರು.

೨೬. ಆರೀತಿ ಇರುವ ಪುತ್ರರನ್ನು ಕಂಡು ಆ ಪುಷ್ಪವಾಹನನು ಮತ್ತೆ ಮತ್ತೆ ಹಿಗ್ಗಿ ಆಶ್ಚರ್ಯಯುಕ್ತನಾದನು. ಅನಂತರ ಆ ರಾಜನು ಅತಿಥಿಯಾಗಿ ಬಂದ ವಾಲ್ಮೀಕಿ ಮಹರ್ಷಿಯನ್ನು ಪೂಜಿಸಿ ಈ ಮಾತುಗಳನ್ನು ಹೇಳಿದನು.

೨೭. ಎಲೈ ಮಹರ್ಷಿಯೇ ! ಮನುಷ್ಯರೆಲ್ಲರಿಂದಲೂ ಪೂಜಿಸಲರ್ಹವಾದ ನಿರ್ದೋಷವಾದ ಐಶ್ವರ್ಯವು ನನಗೆ ಯಾವ ಪುಣ್ಯದಿಂದ ಪ್ರಾಪ್ತವಾಯಿತು ? ರೂಪದಿಂದ ಸಮಸ್ತ ದೇವಸುಂದರಿಯರನ್ನೂ ಮೀರಿಸಿರುವ ಭಾರ್ಯೆಯು ನನಗೆ ಹೇಗೆ ಲಭಿಸಿದಳು ? ನನ್ನ ಅಧಿಕವಾದ ತಪಸ್ಸಿನಿಂದ ಬ್ರಹ್ಮನು ಸಂತುಷ್ಟನಾಗಿ ಪರಮಾನುಗ್ರಹಮಾಡಿ ನನಗೆ ಸುವರ್ಣಕಮಲ, ಪುಷ್ಕರದ್ವೀಪವೆಂಬ ಗೃಹ, ಇತ್ಯಾದಿಗಳನ್ನು ಕೊಟ್ಟಿರುತ್ತಾನೆ.

ಯಸ್ಮಿನ್ಪ್ರವಿಷ್ಟಮಪಿ ಕೋಟಿಶತಂ ನೃಪಾಣಾಂ ।
ಸಾಮಾನ್ಯಕುಂಜರಸರಾಶ್ವಘನಾವೃತಾನಾಂ ।
ನಾಲಕ್ಷ್ಯ ಸಂಗತಸುಬಾಧತಯಾ ಹಿ ಬಾಧ- ।
ಸ್ತಾರಾಗಣೈರಪಿ ಸುರಾಸುರಲೋಕಪಾಲೈಃ　　　　|| ೨೮ ||

ತಸ್ಮಾತ್ಕಿಮನ್ಯಜನನೀಜಠರೋದ್ಭವೇನ ।
ಧರ್ಮಾದಿಕಂ ಕೃತಮಶೇಷಜನಾತಿಗಂ ಸ್ಯಾತ್ ।
ಸಮ್ಯಙ್ಮಯಾಥ ತನಯೈರನಯಾ ಮಹರ್ಷೇ ।
ಮಾಹಾರ್ಯಯಾ ತದಖಿಲಂ ಕಥಯ ಪ್ರಚೇತಃ　　　　|| ೨೯ ||

ತಸ್ಯ ತದ್ವಚನಂ ಶ್ರುತ್ವಾ ಧ್ಯಾನೇನಾವೇಕ್ಷ್ಯ ಚಾಖಿಲಂ ।
ಪ್ರಚೇತಾಸ್ತಮುವಾಚಾಥ ಶೃಣು ಭೂಪ ಪುರಾತನಂ　　　　|| ೩೦ ||

---

೨೮. ನನ್ನ ಶತ್ರುವು ತನ್ನ ಮಂತ್ರಿಗಳು, ಹಸ್ತ್ಯಶ್ವರಥಪದಾತಿಗಳೆಂಬ ಚತುರಂಗ ಬಲಸಮೇತರಾದ ನೂರುಕೋಟಿ ಸಾಮಂತರಾಜರ ಸಮೂಹ, ಇವರ ಮಧ್ಯೆ ಸೇರಿಕೊಂಡೋ, ಅಥವಾ ಸುರರು, ಅಸುರರು, ಲೋಕಪಾಲಕರು, ನಕ್ಷತ್ರ, ಗಣ, ಇವುಗಳಿಂದ ನಿಬಿಡವಾದ ಪ್ರದೇಶದಲ್ಲಿ-ಸೇರಿಕೊಂಡೋ ಕಂಡುಹಿಡಿಯಲು ಅಸಾಧ್ಯವಾಗಿದ್ದರೂ, ಅಂಥ ಶತ್ರುವನ್ನು ನನ್ನ ಶರಗಳು ಛೇಧಿಸಿ ಬಾಧಿಸುವುವು.

೨೯. ಆದುದರಿಂದ ನಾನು ಜನ್ಮಾಂತರದಲ್ಲಿ ಬೇರೆ ಮಾತೃಗರ್ಭದಲ್ಲಿ ಜನಿಸಿದ್ದಾಗ, ಸರ್ವಜನರೂ ಮಾಡುವುದಕ್ಕೆ ಅಸಾಧ್ಯವೂ, ಅಸಾಧಾರಣವೂ ಆಗಿರುವ ಯಾವ ಧರ್ಮಾದಿಗಳನ್ನು ಅನುಷ್ಠಾನಮಾಡಿರುತ್ತೇನೆ? ಎಲೈ ವಾಲ್ಮೀಕಿ ಮಹರ್ಷಿಯೇ! ನಾನು, ಈ ನನ್ನ ಪುತ್ರರು, ಮತ್ತು ಈ ಲೋಕಪೂಜ್ಯಳಾದ ನನ್ನ ಹೆಂಡತಿ, ಇವರೆಲ್ಲರೂ ಏನು ಧರ್ಮಗಳನ್ನು ಆಚರಿಸಿದ್ದೆವೆಂಬುವನ್ನೆಲ್ಲಾ ಹೇಳು ಎಂದನು.

೩೦. ರಾಜನ ಈ ಮಾತನ್ನು ಕೇಳಿ ಪ್ರಚೇತಸನು (ವಾಲ್ಮೀಕಿಯು) ಧ್ಯಾನದೃಷ್ಟಿಯಿಂದ ನೋಡಿ, ಎಲ್ಲವನ್ನೂ ತಿಳಿದುಕೊಂಡು ಅನಂತರ ಆ ರಾಜನನ್ನು ಕುರಿತು "ಎಲೈ ಭೂಪತಿಯೇ! ನಿನ್ನ ಪೂರ್ವಜನ್ಮದ ಚರಿತ್ರೆಯನ್ನು ಹೇಳುತ್ತೇನೆ ಕೇಳು" ಎಂದನು.

ಲುಬ್ಧಕಸ್ತ್ವಂ ಪುರಾ ರಾಜನ್ಸರ್ವಸತ್ವಭಯಂಕರಃ ।
ಆಸೀದಸಾಧುಚರಿತಃ ಸುಹೃನ್ಮಿತ್ರವಿವರ್ಜಿತಃ ॥ ೩೧ ॥

ಯತಮಧ್ಯೋ ಹ್ರಸ್ವಕೇಶಃ ಕೃಷ್ಣಾಂಗೋ ರಕ್ತಲೋಚನಃ ।
ಧನುಷ್ಪಾಣಿರ್ವನಗತಃ ಕೃತಾಂತಕಸಮೋ ಭವಾನ್ ॥ ೩೨ ॥

ಅಭೂದನಾವೃಷ್ಟಿರತೀವ ರೌದ್ರಾ ।
ಕದಾಚಿದಾಹಾರನಿಮಿತ್ತರೋಷಃ ।
ಪದ್ಮಾನ್ಯಥಾದಾಯ ತತೋ ಬಹೂನಿ ।
ಗತಂ ಪುರಂ ವೈದಿಶನಾಮಧೇಯಂ ॥ ೩೩ ॥

ಉನ್ಮೂಲ್ಯ ಲೋಭಾಚ್ಚ ಪುರಂ ಸಮಸ್ತಂ ।
ಭ್ರಾಂತಂ ತ್ವಯಾಶೇಷಮಹತ್ತದಾಸೀತ್ ।
ಕ್ರೇತಾ ನ ಕಶ್ಚಿತ್ಕಮಲೇಷು ಜಾತ- ।
ಸ್ತೋಕೇ ಭೃಶಂ ಕ್ಷುತ್ಪರಿಪೀಡಿತಶ್ಚ ॥ ೩೪ ॥

---

೩೧. ಅಯ್ಯಾ ರಾಜನೇ ! ನೀನು ಪೂರ್ವದಲ್ಲಿ ಸರ್ವಪ್ರಾಣಿಗಳಿಗೂ ಭಯಂಕರನಾದ ಬೇಡರವನಾಗಿದ್ದೆ. ಅಲ್ಲದೆ ಆಗ ನೀನು ದುರ್ನಡತೆಯುಳ್ಳವನಾಗಿಯೂ, ಮಿತ್ರಾದಿರಹಿತನಾಗಿಯೂ ಇರುತ್ತಿದ್ದೆ.

೩೨. ಮತ್ತು ಆ ವ್ಯಾಧಜನ್ಮದಲ್ಲಿ ನೀನು ಕೃಶವಾದ ನಡು, ಹ್ರಸ್ವಕೇಶ, ಕಪ್ಪಾದ ಅವಯವಗಳು, ಕೆಂಪುಕಣ್ಣುಗಳು, ಇವುಗಳಿಂದ ಕೂಡಿ ಧನುಷ್ಪಾಣಿಯಾಗಿ ಕಾಡಿಗೆ ಹೋದಾಗ ಯಮನಿಗೆ ಸಮಾನನಾಗಿ ಕಾಣಿಸುತ್ತಿದ್ದೆ.

೩೩. ಒಂದಾನೊಂದು ಕಾಲದಲ್ಲಿ ಅತಿಭಯಂಕರವಾದ ಅನಾವೃಷ್ಟಿಯುಂಟಾಯಿತು. ಆಗ ಎಲ್ಲೂ ಆಹಾರವು ಲಭಿಸದೆ ಹೋಗಲಾಗಿ, ಆಗ ನಿನಗೆ ಕೋಪಬಂದಿತು. ಅನಂತರ ನೀನು ಬಹುಸಂಖ್ಯೆಯ ಕಮಲಗಳನ್ನು ತೆಗೆದುಕೊಂಡು ವೈದಿಶವೆಂಬ ನಗರಕ್ಕೆ ಹೋದೆ.

೩೪. ಅದನ್ನು ಮಾರಿ ದ್ರವ್ಯಸಂಪಾದಿಸಬೇಕೆಂಬ ಲೋಭದಿಂದ ಎಲ್ಲಾ ಕಮಲಪುಷ್ಪಗಳನ್ನೂ ಮಾರುವುದಕ್ಕಾಗಿ ಕಿತ್ತುಕೊಂಡು ಕೈಯಲ್ಲಿ ಹಿಡಿದು ಆ ನಗರಿಯ ಎಲ್ಲ ಕಡೆಯಲ್ಲೂ ಸುತ್ತುತ್ತಿದ್ದೆ. ಆದರೆ ನಿನ್ನಲ್ಲಿರುವ ಕಮಲಗಳಲ್ಲಿ ಸ್ವಲ್ಪವನ್ನು ಕೂಡ, ಕ್ರಯಕ್ಕೆ ತೆಗೆದುಕೊಳ್ಳುವವನು ಒಬ್ಬನೂ ಬರಲಿಲ್ಲ. ನೀನಾದರೋ ಬಹು ಹಸಿವಿನಿಂದ ಪೀಡಿತನಾಗಿ ಇದ್ದೆ.

**ಉಪವಿಷ್ಟಸ್ತ್ವಮೇಕಸ್ಮಿನ್ಸಭಾರ್ಯೋ ಭವನಾಂಗಣೇ ।**
**ಅಥ ಮಂಗಲಶಬ್ದಸ್ತು ತ್ವಯಾ ರಾತ್ರೌ ತಥಾ ಶ್ರುತಃ ॥ ೩೫ ॥**

**ಸಮಾಪ್ಯ ಮಾಘಮಾಸಸ್ಯ ದ್ವಾದಶ್ಯಾಂ ಲವಣಾಚಲಂ ।**
**ನಿವೇದಯಂತೀ ಗುರವೇ ಶಯ್ಯಾಂ ಚೋಪಸ್ಕರಾನ್ವಿತಾಂ ॥ ೩೬ ॥**

**ಅಲಂಕೃತ್ಯ ಹೃಷೀಕೇಶಂ ಸೌವರ್ಣಂ ಪರಮಂ ಪದಂ ।**
**ಸಾಥ ದೃಷ್ಟಾ ತತಸ್ತಾಭ್ಯಾಮಿದಂ ಚಿತ್ತೇವಧಾರಿತಂ ॥ ೩೭ ॥**

**ಕಿಮೇಭಿಃ ಕಮಲೈಃ ಕಾರ್ಯಂ ವರಂ ವಿಷ್ಣುರಲಂಕೃತಃ ।**
**ಇತಿ ಭಕ್ತಿಸ್ತದಾ ಜಾತಾ ದಾಂಪತ್ಯಸ್ಯ ನರೇಶ್ವರ ॥ ೩೮ ॥**

**ತತ್ಪ್ರಸಂಗಾತ್ಸಮಭ್ಯರ್ಚ್ಯ ಕೇಶವಂ ಲವಣಾಚಲಂ ।**
**ಶಯ್ಯಾ ಚ ಪುಷ್ಪಪ್ರಕರೈಃ ಪೂಜಿತಾಭೂಚ್ಚ ಸರ್ವದಾ ॥ ೩೯ ॥**

---

೩೫. ಆಗ ನೀನು ನಿನ್ನ ಹೆಂಡತಿಯ ಸಮೇತ ಒಂದು ಮನೆಯ ಅಂಗಳದಲ್ಲಿ ಇಳಿದುಕೊಂಡೆ. ಆದಿನ ರಾತ್ರಿಯಲ್ಲಿ ನೀನು ಒಂದು ಮಂಗಲಶಬ್ದವನ್ನು ಕೇಳಿದೆ.

೩೬–೩೭. ಆ ಶಬ್ದ ಬಂದ ದಿಕ್ಕನ್ನನುಸರಿಸಿ ಹೋಗಿ ನೋಡಲಾಗಿ, ಒಬ್ಬ ಸ್ತ್ರೀಯು (ಅನಂಗವತೀ) ಮಾಘಮಾಸದ ದ್ವಾದಶಿಯಲ್ಲಿ, ಸುವರ್ಣದಿಂದ ಶ್ರೀಹರಿಯ ಪರಮಪೂಜ್ಯವಾದ ವಿಗ್ರಹವನ್ನು ಮಾಡಿಸಿ, ಅದಕ್ಕೆ ಪೂಜೆಮಾಡಿ ಅಲಂಕರಿಸಿ, ಆ ಪೂಜಾಸಮಾಪ್ತಿಯಾದ ಮೇಲೆ ತನ್ನ ಗುರುವಿಗೆ ಲವಣಾಚಲ, (ಉಪ್ಪಿನ ರಾಶಿ) ದಿಂಬು ಮೊದಲಾದ ಶಯನೋಪಕರಣ ಸಹಿತವಾದ ಹಾಸಿಗೆ. ಇವುಗಳನ್ನು ದಾನ ಮಾಡುತ್ತಿದ್ದುದು ಕಾಣಿಸಿತು. ಆ ಸ್ತ್ರೀಯನ್ನು ನೋಡಿ ಆಗ ದಂಪತಿಗಳಾದ ನೀವು ಈರೀತಿ ಮನಸ್ಸಿನಲ್ಲಿಯೇ ಯೋಚಿಸಿದಿರಿ.

೩೮. ಈಗ ವಿಕ್ರಯವಾಗದೆ ಉಳಿದಿರುವ ಈ ಕಮಲ ಪುಷ್ಪಗಳಿಂದ ಏನು ತಾನೇ ಪ್ರಯೋಜನ? ಇವುಗಳಿಂದ ಶ್ರೀವಿಷ್ಣುವನ್ನಾದರೂ ಅಲಂಕರಿಸಿದರೆ ಒಳ್ಳೆಯದು ಎಂಬ ಭಕ್ತಿಯು ನಿಮ್ಮ ದಂಪತಿಗಳಿಗೆ ಉದಯಿಸಿತು.

೩೯. ಆ ವ್ರತವನ್ನು ಆಚರಿಸುತ್ತಿದ್ದ ಸ್ತ್ರೀಯನ್ನು ದರ್ಶನಮಾಡಿದ್ದರಿಂದ, ಆ ವ್ಯಾಧಜನ್ಮದಲ್ಲಿಯೇ ಪ್ರತಿವರ್ಷವೂ ನೀನು ಪುಷ್ಪಸಮೂಹಗಳಿಂದ ಶ್ರೀಹರಿಯನ್ನು ಪೂಜಿಸಿ, ಲವಣಾಚಲ ಸಹಿತವಾಗಿ ಶಯ್ಯೆಯನ್ನು ದಾನ ಮಾಡಿದೆ.

ಅಥಾನಂಗವತೀ ತುಷ್ಟಾ ತಯೋರ್ಹೋಮಶತತ್ರಯಂ ।
ಪ್ರಾದಾದ್ಗೃಹೀತಂ ತಾಭ್ಯಾಂ ಚ ನ ತತ್ಸರ್ವಾವಲಂಬನಾತ್ ॥ ೪೦ ॥

ಅನಂಗವತೀ ಚ ಪುನಸ್ತಯೋರನ್ನಂ ಚತುರ್ವಿಧಂ ।
ಆನಾಯ್ಯೋಪಪ್ಲುತಂ ಕೃತ್ವಾ ಭುಜ್ಯತಾಮಿತಿ ಭೂಪತೇ ॥ ೪೧ ॥

ತಾಭ್ಯಾಂ ತು ತದಪಿತ್ಯಕ್ತಂ ಭೋಕ್ಷ್ಯಾವಃ ಶ್ವೋ ವರಾನನೇ ।
ಪ್ರಸಂಗಾಚ್ಚೋಪವಾಸೇನ ತವಾದ್ಯಾಸ್ತು ಸುಖಾವಹಃ ॥ ೪೨ ॥

ಜನ್ಮಪ್ರಭೃತಿಪಾಪಿಷ್ಠಾವಾವಾಂ ದೇವಿ ದೃಢವ್ರತೇ ।
ತತ್ಪ್ರಸಂಗಾದ್ಧನುರ್ಮಧ್ಯೇ ಧರ್ಮಲಾಭಸ್ತು ಚಾವಯೋಃ ॥ ೪೩ ॥

೪೦. ನೀವು ಆ ವ್ರತವನ್ನು ಆಚರಿಸುತ್ತಿದ್ದಾಗ ಮುಂಚೆ ನೀವು ನೋಡಿದ್ದ ಆ ಅನಂಗವತಿಯು, ಇದನ್ನು ಕಂಡು ಸಂತೋಷಪಟ್ಟು, ದಂಪತಿಗಳಾದ ನಿಮಗೆ ಮೂನ್ನೂರಕ್ಕೆ ಸ್ವಲ್ಪ ಕಡಿಮೆಯಾದ ವಸ್ತು, ಧನ ಮೊದಲಾದುವುಗಳನ್ನು ಕೊಟ್ಟಳು. ಆದರೆ ದಂಪತಿಗಳಾದ ನೀವು ಸಂಪೂರ್ಣವಾಗಿ ವ್ರತವನ್ನು ಪರಿಗ್ರಹಿಸಿದುವರಿಂದ ಆ ಧನಾದಿಗಳನ್ನು ಸ್ವೀಕರಿಸಲಿಲ್ಲ.

೪೧. ಅಯ್ಯಾ ರಾಜನೇ! ಅನಂತರ ಅನಂಗವತಿಯು ಪುನಃ ಆ ದಂಪತಿಗಳಿಗೆ ಚತುರ್ವಿಧ ಅನ್ನವನ್ನು ಕೊಟ್ಟು ಭೋಜನಮಾಡಿ ಎಂದು ಹೇಳಿದಳು.

೪೨. ಆಗ ನೀವು ದಂಪತಿಗಳು "ಎಲೌ ಸುಂದರಿಮುಖಿ! ನಾವು ನಾಳೆಯ ದಿನ ಊಟಮಾಡುತ್ತೇವೆ'' ಎಂದು ಹೇಳಿ ಆ ಅನ್ನವನ್ನೂ ಪರಿತ್ಯಾಗಮಾಡಿದಿರಿ. ಪ್ರಸಂಗಾತ್ ಈರೀತಿ ಉಪವಾಸವನ್ನು ಆಚರಿಸಿದ್ದರಿಂದ ನಿನಗೆ ಆ ಉಪವಾಸಾದಿ ನಿಯಮವು ಈಗ ಈ ಅನಂತ ಸುಖವನ್ನು ಕೊಡುತ್ತಿದೆ.

೪೩. ಆಗ ನಾವು ದಂಪತಿಗಳು ಅನಂಗವತಿಯನ್ನು ಕುರಿತು "ಓ ದೃಢನಿಯಮವುಳ್ಳವಳೇ ! ದೇವೀ ! ಜನ್ಮವೆತ್ತಿದಾರಭ್ಯ ನಾವಿಬ್ಬರೂ ಪಾಪಕರ್ಮ ಮಾಡಿದವರಾಗಿದ್ದೇವೆ. ಸಾಧ್ವಿಯಾದ ನಿನ್ನ ಸಹವಾಸದಿಂದ ನಮ್ಮಿಬ್ಬರಿಗೂ ಧನುರ್ಮಧ್ಯದಲ್ಲಿ ಧರ್ಮಲಾಭವಾದಂತಾಗಿದೆ '' ಎಂದಿರಿ.

ಇತಿ ಜಾಗರಣಂ ತಾಭ್ಯಾಂ ಪ್ರಸಂಗಾತ್ತದನುಷ್ಠಿತಂ ।
ಪ್ರಭಾತೇ ಚ ತಯಾ ದತ್ತಾ ಶಯ್ಯಾ ಸಲವಣಾಚಲಾ    ॥ ೪೪ ॥

ಗ್ರಾಮಶ್ಚ ಗುರವೇ ಭಕ್ತ್ಯಾ ವಿಪ್ರೇಭ್ಯೋ ದ್ವಾದಶೈವ ಹಿ ।
ವಸ್ತ್ರಾಲಂಕಾರಯುಕ್ತಾಂಗಾ ಗಾವಶ್ಚ ಕನಕಾಂಚಿತಾಃ    ॥ ೪೫ ॥

ಭೋಜನಂ ಚ ಸುಹೃನ್ಮಿತ್ರದೀನಾಂಧಕೃಪಣೈಃ ಸಮಂ ।
ತತ್ತು ಲುಬ್ಧಕದಾಂಪತ್ಯಂ ಪೂಜಯಿತ್ವಾ ವಿಸರ್ಜಿತಂ    ॥ ೪೬ ॥

ಭವಾಂಸ್ತು ಲುಬ್ಧಕೋ ಜಾತಃ ಸಪತ್ನೀಕೋ ನರೇಶ್ವರಃ ।
ಪುಷ್ಪಾಣಾಂ ಪ್ರಕರೈರ್ಯಸ್ಮಾತ್ಕೇಶವಸ್ಯ ಪ್ರಪೂಜನಂ    ॥ ೪೭ ॥

---

೪೪. ಈರೀತಿ ಸಂಭಾಷಣೆ ನಡೆಸುವರಾಗಿ ನೀವು ದಂಪತಿಗಳು ಪ್ರಸಂಗ ವಶಾತ್ ಆ ದಿನ ರಾತ್ರೆ ಜಾಗರಣೆಯನ್ನೂ ಮಾಡಿದಿರಿ. ಬೆಳಗಾಗುತ್ತಲು ಆ ಅನಂಗವತಿಯು ಲವಣಾಚಲ ಸಹಿತವಾಗಿ ಶಯ್ಯಾದಾನ ಮಾಡಿದಳು.

೪೫. ಅಲ್ಲದೆ ತನ್ನ ಗುರುವಿಗೆ ಭಕ್ತಿಪೂರ್ವಕವಾಗಿ ಗ್ರಾಮವನ್ನು ದಾನ ಮಾಡಿದಳು. ಬೇರೆ ಹನ್ನೆರಡುಜನ ಬ್ರಾಹ್ಮಣರಿಗೆ ವಸ್ತ್ರಾಲಂಕಾರಾದಿಗಳಿಂದ ಪೂಜೆಮಾಡಿ, ಸುವರ್ಣಾಲಂಕೃತಗಳಾದ ಹನ್ನೆರಡು ಗೋವುಗಳನ್ನು ದಾನ ಮಾಡಿದಳು.

೪೬. ಅನಂತರ ಆ ಅನಂಗವತಿಯು ತನ್ನ ಮಿತ್ರರು, ಬಡವರು, ಕುರುಡರು, ದೀನರು ಇವರುಗಳನ್ನೆಲ್ಲಾ ಸತ್ಕರಿಸಿ ತಾನೂ ಭೋಜನ ಮಾಡಿದಳು. ಮತ್ತು ಆ ವ್ಯಾಧದಂಪತಿಗಳನ್ನೂ ಸತ್ಕರಿಸಿ ಕಳುಹಿಸಿದಳು.

೪೭. ಅಯ್ಯಾ ರಾಜನೇ ! ಪೂರ್ವಜನ್ಮದಲ್ಲಿ ಬೇಡರವನಾಗಿದ್ದ ನೀನು ಈಗ ಈ ಪತ್ನೀಸಹಿತನಾಗಿ ರಾಜನಾಗಿರುವೆ. ನೀನು ಆ ವ್ಯಾಧಜನ್ಮದಲ್ಲಿ ಕಮಲ ಪುಷ್ಪ ಸಮೂಹಗಳಿಂದ ಶ್ರೀಹರಿಯನ್ನು ಅರ್ಚಿಸಿದೆ.

**ಪ್ರಾಪ್ತಂ ಸುದುರ್ಲಭಂ ವೀರ ತ್ವಯಾ ಪುಷ್ಕರಮಂದಿರಂ ।**
**ತಸ್ಯ ಸರ್ವಸ್ಯ ಮಾಹಾತ್ಮ್ಯಾದಲಂ ನ ತಪಸಾ ನೃಪ ॥ ೪೮ ॥**

**ಯಥಾ ಕಾಮಗತಂ ದಕ್ಷಂ ಪದ್ಮಯೋನಿಂ ವಿರಿಂಚಿನಾ ।**
**ಸಂತುಷ್ಟಸ್ತಸ್ಯ ರಾಜೇಂದ್ರ ಬ್ರಹ್ಮರೂಪೀ ಜನಾರ್ದನಃ ॥ ೪೯ ॥**

**ಶಯ್ಯಾನಂಗವತೀ ವೇಶ್ಯಾ ಕೋಮದೇಶಸ್ಯ ಸಾಂಪ್ರತಂ ।**
**ಪತ್ನೀ ಸಪತ್ನೀ ಸಂಜಾತಾ ರತ್ಯಾ ಪ್ರೀತಿರಿತಿ ಶ್ರುತಾ ॥ ೫೦ ॥**

**ಲೋಕೇಷ್ವಾನಂದಜನನೀ ಸಕಲಾಮರಪೂಜಿತಾ ।**
**ತದಪ್ಯುತ್ಸೃಜ್ಯ ರಾಜೇಂದ್ರ ನಿರ್ವಾಣಂ ಸಮವಾಪ್ಸ್ಯತಿ ॥ ೫೧ ॥**

೪೮. ಅದರಿಂದ ದುರ್ಲಭವಾದ ಈ ಪುಷ್ಕರದ್ವೀಪದ ಆಧಿಪತ್ಯವನ್ನು ಪಡೆದಿರುತ್ತೀಯೆ. ಆ ಶ್ರೀಹರಿಯ ಪೂಜೆ, ಉಪವಾಸ, ಇವುಗಳೆಲ್ಲದರ ಪ್ರಭಾವವು ಈ ತರಹವಾದ ನಿನ್ನ ವೃದ್ಧಿಗೆ ಕಾರಣವಾಗಿದೆಯೇ ವಿನಾ, ನಿನ್ನ ತಪಸ್ಸಿನಿಂದಲ್ಲ. ಅದರಿಂದ ಈ ಫಲ ಲಾಭವಾಗಿಲ್ಲ.

೪೯. ಅಯ್ಯಾ ರಾಜೇಂದ್ರನೇ! ಆ ವ್ಯಾಧಜನ್ಮವನ್ನು ಪಡೆದಿದ್ದಾಗ ನಿನಗೆ ಶ್ರೀಹರಿಯು ಸಂತುಷ್ಟನಾಗಿ ವಿರಿಂಚಿಬ್ರಹ್ಮನ ಮೂಲಕ ನಿನಗೆ ಈರೀತಿ ಸರ್ವತ್ರ ಸ್ವೇಚ್ಛಾಗಮನಶಕ್ತಿಯನ್ನೂ, ಕಾರ್ಯನಿರ್ವಹಣ ದಕ್ಷತೆಯನ್ನೂ, ಪುಷ್ಕರದ್ವೀಪದ ಆಧಿಪತ್ಯವನ್ನೂ, ಕೊಟ್ಟಿರುತ್ತಾನೆ.

೫೦. ಆ ಅನಂಗವತೀ ವೇಶ್ಯೆಯು ಶಯ್ಯಾದಿ ದಾನವನ್ನು ಮಾಡಿ ವ್ರತ ವನ್ನು ಆಚರಿಸಿದ್ದರಿಂದ ಆಕೆ ಈಗ ಕೋಮದೇಶಾಧಿಪತಿಯ ಪತ್ನಿಗೆ ಸವತಿಯೂ ಆ ರಾಜನ ಭೋಗಿನಿಯೂ ಆಗಿ, ಪ್ರೀತಿ ಎಂಬ ನಾಮಧೇಯದಿಂದ ಪ್ರಸಿದ್ಧ ಳಾಗಿದ್ದಾಳೆ.

೫೧. ಅಯ್ಯಾ ರಾಜೇಂದ್ರನೇ ! ಅವಳು ಲೋಕಗಳಿಗೆ ಆನಂದದಾಯಕ ಳಾಗಿದ್ದು, ಕೊನೆಗೆ ಸ್ವರ್ಗಕ್ಕೆ ಹೋಗಿ ಅಲ್ಲಿ ಸಕಲದೇವತೆಗಳಿಗೂ ಪೂಜ್ಯಳೆನಿಸಿ ಅನಂತರ ಮೋಕ್ಷವನ್ನು ಪಡೆಯುತ್ತಾಳೆ.

ಇತ್ಯುಕ್ತ್ವಾ ಸ ಮುನಿಸ್ಸರ್ವಂ ತತ್ರೈವಾಂತರ್ಹಿತೋಽಭವತ್ ।
ರಾಜಾ ಯಥೋಕ್ತಂ ಚ ಪುನಃ ಸ ಚಕ್ರೇ ಪುಷ್ಪವಾಹನಃ ॥ ೫೨ ॥

ಇಮಾಮಾಚರತೋ ಬ್ರಹ್ಮನ್ನಖಂಡವ್ರತಮಾಚರೇತ್ ।
ಯಥಾಕಥಂಚಿತ್ಕಾಲೇನ ದ್ವಾದಶ ದ್ವಾದಶೀರ್ಮುನೇ ।
ಕರ್ತವ್ಯಾಃ ಶಕ್ತಿತೋ ದೇಯಾಃ ವಿಪ್ರೇಭ್ಯೋ ದಕ್ಷಿಣಾ ನೃಪ ॥ ೫೩ ॥

ಇತಿ ಕಲುಷವಿದಾರಣಂ ಜನಾನಾ- ।
ಮಿತಿ ಪಠತಿ ಶೃಣೋತಿ ಚಾತಿಭಕ್ತ್ಯಾ ।
ಮತಿಮಪಿ ಚ ದದಾತಿ ದೇವಲೋಕೇ ।
ವಸತಿ ಸ ಪರಃಶತಾನಿ ವತ್ಸರಾಣಾಂ ॥ ೫೪ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣ ಯುಧಿಷ್ಠಿರಸಂವಾದೇ ವಿಭೂತಿದ್ವಾದಶೀ ವ್ರತವರ್ಣನಂ ನಾಮ ಪಂಚಾಶೀತಿತಮೋಽಧ್ಯಾಯಃ

---

೫೨. ಈರೀತಿ ಪ್ರಚೇತಸಮುನಿಯು ಆ ರಾಜನಿಗೆ ಎಲ್ಲವನ್ನೂ ಹೇಳಿ, ಅಲ್ಲಿಯೇ ಅದೃಶ್ಯನಾದನು. ಆ ಪುಷ್ಪವಾಹನ ರಾಜನು ಆ ಋಷಿಯು ಹೇಳಿದ ಎಲ್ಲಾ ಈ ವ್ರತಗಳನ್ನೂ ಸಾಂಗವಾಗಿ ಪುನಃ ಆಚರಿಸಿದನು.

೫೩. ಅಯ್ಯಾ ರಾಜನೇ ! ಇವನ್ನು ಆಚರಿಸುವವನು ಹನ್ನೆರಡು ತಿಂಗಳೂ, ಹನ್ನೆರಡು ದ್ವಾದಶಿಗಳಲ್ಲೂ ಪ್ರಯತ್ನಪೂರ್ವಕವಾಗಿ ಕಷ್ಟಪಟ್ಟಾದರೂ ಸಂಪೂರ್ಣವಾಗಿ ಆಚರಿಸಿ, ಅಖಂಡವ್ರತವನ್ನಾಗಿ ಮಾಡಬೇಕು. ಅಲ್ಲದೆ ಸ್ವಶಕ್ತ್ಯನುಸಾರ ಬ್ರಾಹ್ಮಣರಿಗೆ ದಾನ ಮತ್ತು ದಕ್ಷಿಣೆಗಳನ್ನು ಕೊಡಬೇಕು.

೫೪. ಜನರ ಸರ್ವಪಾಪ ನಿವಾರಕವಾದ ಈ ವ್ರತ ಗ್ರಂಥವನ್ನು ಸಮಗ್ರವಾಗಿ ಯಾವನು ಪಠನಮಾಡುವನೋ, ಮತ್ತು ಯಾವನು ಇದನ್ನು ಅತಿಭಕ್ತಿಯಿಂದ ಶ್ರವಣಮಾಡುವನೋ, ಮತ್ತು ಯಾವನು ಇದರ ತಿಳಿವಳಿಕೆಯನ್ನು ಇತರರಿಗೆ ಹುಟ್ಟಿಸುವನೋ, ಅಂತಹವನು ಅನೇಕವರ್ಷ ಸ್ವರ್ಗದಲ್ಲಿ ವಾಸಿಸುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ವಿಭೂತಿದ್ವಾದಶೀ ವ್ರತವರ್ಣನೆಯೆಂಬ ಎಂಭತ್ತೈದನೆಯ ಅಧ್ಯಾಯವು ಮುಗಿದುದು

|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಷಡಶೀತಿತಮೋಽಧ್ಯಾಯಃ

---

|| ಯುಧಿಷ್ಠಿರ ಉವಾಚ ||

ಶ್ರೋತುಮಿಚ್ಛಾಮಿ ಭಗವನ್ಮದನದ್ವಾದಶೀವ್ರತಂ ।
ಸುತಾನೇಕೋನಪಂಚಾಶದ್ಯೇನ ಲೇಭೇ ದಿತಿಃ ಪುರಾ || ೧ ||

|| ಶ್ರೀಕೃಷ್ಣ ಉವಾಚ ||

ತದ್ವಶಿಷ್ಠಾದಿಭಿಃ ಪ್ರೋಕ್ತಮಿತ್ಯೇಕಾ ತಿಥಿರುತ್ತಮಾ ।
ವಿಸ್ತರೇಣ ತದೇವೇದಂ ಮತ್ಸಕಾಶಾನ್ನಿಬೋಧತ || ೨ ||

ಚೈತ್ರೇ ಮಾಸೇ ಸಿತೇ ಪಕ್ಷೇ ದ್ವಾದಶ್ಯಾಂ ನಿಯತವ್ರತಃ ।
ಸ್ಥಾಪಯೇದವ್ರಣಂ ಕುಂಭಂ ಸಿತತಂಡುಲಪೂರಿತಂ || ೩ ||

---

## ಎಂಭತ್ತಾರನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ಭಗವಂತನೇ! ಮದನದ್ವಾದಶೀ ವ್ರತವನ್ನು ಶ್ರವಣಮಾಡಬೇಕೆಂದು ಇಚ್ಛೆಯುಳ್ಳವನಾಗಿದೇನೆ. ಆ ವ್ರತದಿಂದ ದಿತಿದೇವಿಯು ಪೂರ್ವದಲ್ಲಿ ನಲವತ್ತೊಂಭತ್ತು ಪುತ್ರರನ್ನು ಪಡೆದಳಂತೆ ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ರಾಜನೇ ! ಆ ಮದನ ದ್ವಾದಶೀ ತಿಥಿಯು ಸರ್ವೋತ್ತಮವೆಂದು ವಸಿಷ್ಠಾದಿ ಮಹರ್ಷಿಗಳು ಉಪದೇಶಿಸಿರುತ್ತಾರೆ. ಅದರ ವಿಷಯವನ್ನು ವಿಸ್ತಾರವಾಗಿ ಹೇಳುತ್ತೇನೆ ಕೇಳು.

೩. ಚೈತ್ರಮಾಸದ ಶುಕ್ಲಪಕ್ಷದ ದ್ವಾದಶಿಯಲ್ಲಿ ನಿಯಮವುಳ್ಳವನಾಗಿ ಅಚ್ಛಿದ್ರವಾಗಿರುವ ಕುಂಭದಲ್ಲಿ ಬಿಳಿಯ ಅಕ್ಕಿಯನ್ನು ತುಂಬಿಸಿ ಕಲಶಸ್ಥಾಪನೆ ಮಾಡಬೇಕು.

ನಾನಾಫಲಯುತಂ ತದ್ವದಿಕ್ಷುದಂಡಸಮನ್ವಿತಂ ।
ಸಿತವಸ್ತ್ರಯುಗಚ್ಛನ್ನಂ ಸಿತಚಂದನಚರ್ಚಿತಂ ॥ ೪ ॥

ನಾನಾಭಕ್ಷ್ಯಸಮೋಪೇತಂ ಸಹಿರಣ್ಯಂ ಚ ಶಕ್ತಿತಃ ।
ತಾಮ್ರಪಾತ್ರೇ ಗುಡೋಪೇತಂ ತಸ್ಯೋಪರಿ ನಿವೇದಯೇತ್ ॥ ೫ ॥

ತಸ್ಯೋಪರಿ ತಥಾ ಕಾಮಂ ಕದಳೀದಳಸಂಸ್ಥಿತಂ ।
ಕುರ್ಯಾಚ್ಛರ್ಕರಯೋಪೇತಮಿತಿ ತಸ್ಯ ಸಮೀಪತಃ ॥ ೬ ॥

ಗಂಧಂ ಪುಷ್ಪಂ ತಥಾ ದದ್ಯಾದ್ಗೀತಂ ವಾದ್ಯಂ ಚ ಕಾರಯೇತ್ ।
ತದಲಾಭೇ ಕಥಾಂ ಕುರ್ಯಾತ್ಕಾಮಕೇಶವಯೋರ್ನರಃ ॥ ೭ ॥

---

೪. ನಾನಾಫಲಗಳು ಇಕ್ಷುದಂಡ ಇವುಗಳ ಫಲವಸ್ತುಕಟ್ಟಿ, ಶುಭ್ರವಸ್ತ್ರ ಯುಗಳವನ್ನು ಹೊದ್ದಿಸಿ, ಶ್ರೀಗಂಧವನ್ನು ಲೇಪಿಸಿ ಆ ಕುಂಭವನ್ನು ಅಲಂಕರಿಸ ಬೇಕು.

೫. ಅನಂತರ ಒಂದು ತಾಮ್ರದ ಪಾತ್ರೆಯಲ್ಲಿ ನಾನಾಭಕ್ಷ್ಯಗಳನ್ನೂ, ಸ್ವಶಕ್ತ್ಯನುಸಾರವಾಗಿ ಹಿರಣ್ಯವನ್ನೂ, ಬೆಲ್ಲವನ್ನೂ ಇಟ್ಟು ಆ ಪಾತ್ರೆಯನ್ನು ಆ ಪೂರ್ವೋಕ್ತ ಕುಂಭದ ಮೇಲೆ ಇರಿಸಬೇಕು.

೬. ಮತ್ತು ಆ ಪಾತ್ರೆಯ ಮೇಲೆ ಬಾಳೆಯ ಎಲೆಯಲ್ಲಿ ಶ್ರೀ ಕಾಮ ಮೂರ್ತಿಯನ್ನು ಆವಾಹಿಸಿ, ಸ್ಥಾಪನೆಮಾಡಿ ಅದರ ಸಮೀಪದಲ್ಲಿ ಸಕ್ಕರೆಯನ್ನು ಇಡಬೇಕು.

೭. ಈ ವ್ರತಾನುಷ್ಠಾನ ಮಾಡುವವನು ಅನಂತರ ಕಾಮದೇವ ಮತ್ತು ಶ್ರೀಹರಿ ಇವರಿಬ್ಬರಿಗೂ ಗಂಧ, ಪುಷ್ಪ ಇವುಗಳಿಂದ ಅರ್ಚನೆ ಮಾಡಬೇಕು. ಪೂಜಾಕಾಲದಲ್ಲಿ, ಸಂಗೀತ ಮಂಗಳವಾದ್ಯಾದಿಗಳನ್ನು ಏರ್ಪಡಿಸಬೇಕು. ಸಂಗೀತಾದಿಗಳ ಏರ್ಪಾಡಿಗೆ ಅಸಾಧ್ಯವಾದ ಪಕ್ಷದಲ್ಲಿ. ಶ್ರೀಕಾಮದೇವ ಶ್ರೀಹರಿ ಇವರ ಸಂಬಂಧವಾದ ಕಥಾಶ್ರವಣ ಮಾಡಬೇಕು.

ಕಾಮನಾಮ್ನಾ ಹರೇರರ್ಚಾಂ ಸ್ನಾಪಯೇದ್ಗಂಧವಾರಿಣಾ ।
ಶುಕ್ಲಪುಷ್ಪಾಕ್ಷತತಿಲೈರರ್ಚಯೇನ್ಮಧುಸೂದನಂ ॥ ೮ ॥

ಕಾಮಾಯ ಪಾದೌ ಸಂಪೂಜ್ಯ ಜಂಘೇ ಸೌಭಾಗ್ಯದಾಯ ಚ ।
ಮನ್ಮಥಾಯ ತಥಾ ಮೇಢ್ರಂ ಮಾಧವಾಯ ಕಟಿಂ ನಮಃ ॥ ೯ ॥

ಶಾಂತೋದರಾಯೇತ್ಯುದರಮನಂಗಾಯೇತ್ಯುರೋ ಹರೇಃ ।
ಮುಖಂ ಪದ್ಮಮುಖಾಯೇತಿ ಬಾಹುಂ ಪಂಚಶರಾಯ ವೈ ॥ ೧೦ ॥

ನಮಃ ಸರ್ವಾತ್ಮನೇ ಮೌಲಿಮರ್ಚಯೇದಿತಿ ಕೇಶವಂ ।
ತತಃ ಪ್ರಭಾತೇ ಕುಂಭಂ ಚ ಬ್ರಾಹ್ಮಣಾಯ ನಿವೇದಯೇತ್ ॥ ೧೧ ॥

---

೮. ಮತ್ತು ಶ್ರೀ ಕಾಮದೇವ ವಾಚಕವಾದ ನಾಮಮಂತ್ರಗಳಿಂದ ಶ್ರೀ ಹರಿಯ ಪೂಜೆಯನ್ನು ಮಾಡಬೇಕು. ಸುಗಂಧವುಳ್ಳ ಜಲದಿಂದ ಅಭಿಷೇಕ ಮಾಡಬೇಕು. ಶ್ರೀಹರಿಗೆ ಬಿಳಿಯಪುಷ್ಪ, ಅಕ್ಷತೆ, ತಿಲ ಇವುಗಳಿಂದ ಪೂಜೆ ಮಾಡಬೇಕು.

೯. ಕಾಮಾಯನಮಃ ಎಂದು ಶ್ರೀಹರಿಯ ಪಾದಗಳನ್ನೂ, ಸೌಭಾಗ್ಯ ದಾಯ ನಮಃ ಎಂದು ಮೊಣಕಾಲುಗಳನ್ನೂ, ಮನ್ಮಥಾಯ ನಮಃ ಎಂದು ಶಿಷ್ನವನ್ನೂ, ಮಾಧವಾಯ ನಮಃ ಎಂದು ಹೇಳಿ, ಕಟಿಪ್ರದೇಶವನ್ನೂ ಅರ್ಚಿಸ ಬೇಕು.

೧೦. ಶಾಂತೋದರಾಯ ನಮಃ ಎಂದು ಉದರವನ್ನೂ, ಅನಂಗಾಯ ನಮಃ ಎಂಮ ಶ್ರೀಹರಿಯ ವಕ್ಷಸ್ಥಳವನ್ನೂ, ಪದ್ಮಮುಖಾಯ ನಮಃ ಎಂದು ಮುಖವನ್ನೂ, ಪಂಚಶರಾಯ ನಮಃ ಎಂದು ಹೇಳಿ ಬಾಹುವನ್ನೂ, ಪೂಜಿಸ ಬೇಕು.

೧೧. ಸರ್ವಾತ್ಮನೇ ನಮಃ ಎಂದು ಶಿರಸ್ಸನ್ನು ಅರ್ಚಿಸಬೇಕು. ಈರೀತಿ ಶ್ರೀಹರಿಯ ಅರ್ಚನೆಯನ್ನು ಸಾಂಗಗೊಳಿಸಿ ಮರುದಿನ ಬೆಳಗಾದ ಮೇಲೆ ಆ ಕಲಶವನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು.

ಬ್ರಾಹ್ಮಣಾನ್ಭೋಜಯೇದ್ಭಕ್ತ್ಯಾ ಸ್ವಯಂ ಚ ಲವಣಾದೃತೇ ।
ಭಕ್ತ್ಯಾಥ ದಕ್ಷಿಣಾಂ ದದ್ಯಾದಿಮಂ ಮಂತ್ರಮುದೀರಯೇತ್ ॥ ೧೨ ॥

ಪ್ರೀಯತಾಮತ್ರ ಭಗವಾನ್ಕಾಮರೂಪೀ ಜನಾರ್ದನಃ ।
ಹೃದಯೇ ಸರ್ವಭೂತಾನಾಂ ಯಥಾ ದೇವೋಽಭಿಧೀಯತೆ ॥ ೧೩ ॥

ಅನೇನ ವಿಧಿನಾ ಸರ್ವಂ ಮಾಸಿಮಾಸಿ ಸಮಾಚರೇತ್ ।
ಫಲಮಾಮಲಕಂ ಪ್ರಾಶ್ಯ ದ್ವಾದಶ್ಯಾಂ ಭೂತಲೇ ಸ್ವಪೇತ್ ॥ ೧೪ ॥

ತತಸ್ತ್ರಯೋದಶೇ ಮಾಸಿ ಘೃತಧೇನುಸಮನ್ವಿತಾಂ ।
ಶಯ್ಯಾಂ ದದ್ಯಾದ್ದ್ವಿಜೇಂದ್ರಾಯ ಸರ್ವೋಪಸ್ಕರಸಂಯುತಾಂ॥ ೧೫ ॥

---

೧೨. ಆ ಮೇಲೆ ಭಕ್ತಿಪೂರ್ವಕವಾಗಿ ಬ್ರಾಹ್ಮಣರಿಗೆ ಭೋಜನಮಾಡಿಸಿ, ತಾನೂ ಲವಣವರ್ಜಿತವಾಗಿ ಭೋಜನ ಮಾಡಬೇಕು. ಅನಂತರ ಭಕ್ತಿಯಿಂದ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಬೇಕು. ಮತ್ತು ಈ ಅರ್ಥವುಳ್ಳ ಮಂತ್ರವನ್ನು ಪಠಿಸಬೇಕು.

೧೩. ಸರ್ವಪ್ರಾಣಿಗಳ ಹೃದಯ ಗುಹೆಯಲ್ಲಿ ಆವಾಸವಾಗಿರುವನು ಎಂದು ಶಾಸ್ತ್ರದಲ್ಲಿ ಉಕ್ತನಾದವನೂ, ಪರಮಪೂಜ್ಯನೂ ಆಗಿರುವ ಶ್ರೀ ಜನಾರ್ದನನು ಇದರಿಂದ ಸುಪ್ರೀತನಾಗಲಿ ಎಂಬುದು ಈ ಮಂತ್ರಾರ್ಥ. (ಪರಮಾತ್ಮನು ಪ್ರಾಣಿಗಳ ಹೃದಯಾಕಾಶದಲ್ಲಿ ಸನ್ನಿಹಿತನಾಗಿರುವನು ಎಂಬ ವಿಷಯದಲ್ಲಿ— " ಯೋವೇದನಿಹಿತಂ ಗುಹಾಯಾಂ " " ಈಶ್ವರ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ " ಇತ್ಯಾದಿ ಶ್ರುತಿ, ಸ್ಮೃತಿ ವಚನಗಳು ಪ್ರಮಾಣಗಳಾಗಿವೆ.)

೧೪. ಈ ಕ್ರಮವಾಗಿ ಹಿಂದೆ ಹೇಳಿದ ಎಲ್ಲವನ್ನೂ ಪ್ರತಿಮಾಸದಲ್ಲೂ ಆಚರಿಸಬೇಕು. ದ್ವಾದಶಿದಿನ ನೆಲ್ಲಿಯ ಕಾಯಿಯನ್ನು ಪ್ರಾಶನಮಾಡಿ ಭೂಮಿಯಲ್ಲಿ ಶಯನ ಮಾಡಬೇಕು.

೧೫. ಹೀಗೆ ಆಚರಿಸಿ ಹನ್ನೆರಡು ತಿಂಗಳುಗಳು ಕಳೆದ ಮೇಲೆ, ಹದಿಮೂರನೆಯ ತಿಂಗಳಿನಲ್ಲಿ ಘೃತಧೇನು ಸಹಿತ ಸರ್ವಸಂಭಾರ ಯುಕ್ತವಾದ ಶಯ್ಯೆಯನ್ನು ಬ್ರಾಹ್ಮಣೋತ್ತಮನಿಗೆ ದಾನ ಮಾಡಬೇಕು.

ಕಾಂಚನಂ ಕಾಮದೇವಂ ಚ ಶುಕ್ಲಾಂ ಗಾಂ ಚ ಪಯಸ್ವಿನೀಂ ।
ವಾಸೋಭಿರ್ದ್ವಿಜದಾಂಪತ್ಯಂ ಪೂಜ್ಯ ಶಕ್ತ್ಯಾ ವಿಭೂಷಣೈಃ ॥ ೧೬ ॥

ಹೋಮಃ ಶುಕ್ಲತಿಲೈಃ ಕಾರ್ಯಃ ಕಾಮನಾಮಾನಿ ಕೀರ್ತಯೇತ್ ।
ಗವ್ಯೇನ ಸರ್ಪಿಷಾ ತತ್ರ ಪಾಯಸೇನ ಚ ಧರ್ಮವಿತ್ ॥ ೧೭ ॥

ವಿಪ್ರೇಭ್ಯೋ ಭೋಜನಂ ದದ್ಯಾದ್ವಿತ್ತಶಾಠ್ಯಂ ವಿವರ್ಜಯೇತ್ ।
ಇಕ್ಷುದಂಡಾನ್ನರೋ ದದ್ಯಾತ್ಪುಷ್ಪಮಾಲಾಂ ಚ ಶಕ್ತಿತಃ ॥ ೧೮ ॥

ಯಃ ಕುರ್ಯಾದ್ವಿಧಿನಾನೇನ ಮದನದ್ವಾದಶೀಮಿಮಾಂ ।
ಸರ್ವಪಾಪವಿನಿರ್ಮುಕ್ತೋ ಪ್ರಾಪ್ನೋತಿ ಪರಮಂ ಪದಂ ॥ ೧೯ ॥

ಇಹ ಲೋಕೇ ವರಾನ್ಪುತ್ರಾನ್ಸೌಭಾಗ್ಯಂ ಸುಖಮಶ್ನುತೆ ।
ಕಶ್ಯಪೋ ವ್ರತಮಾಹಾತ್ಮ್ಯಾದಾಗತ್ಯ ಪರಯಾ ಮುದಾ ॥ ೨೦ ॥

---

೧೬. ಮತ್ತು ಭಂಗಾರದ ಕಾಮದೇವನ ವಿಗ್ರಹವನ್ನೂ, ಹಾಲುಕರೆಯುವ ಬಿಳೀಹಸುವನ್ನೂ ದಾನ ಮಾಡಬೇಕು. ಸ್ವಶಕ್ತ್ಯಾನುಸಾರವಾಗಿ ವಸ್ತ್ರ ಮತ್ತು ಅಲಂಕಾರಗಳಿಂದ ಬ್ರಾಹ್ಮಣ ದಂಪತಿಗಳಿಗೆ ಪೂಜೆ ಮಾಡಬೇಕು.

೧೭. ಈ ವ್ರತವನ್ನಾಚರಿಸುವ ಪುರುಷನು ಧರ್ಮಜ್ಞನಾದರೆ ಕಾಮದೇವ ವಾಚಕಗಳಾದ ನಾಮಗಳನ್ನು ಹೇಳಿ ಪಾಯಸ, ಹಸುವಿನ ತುಪ್ಪ, ಶುಕ್ಲತಿಲ ಇವುಗಳಿಂದ ಹೋಮ ಮಾಡಬೇಕು.

೧೮. ಧನಲೋಭವನ್ನು ಬಿಟ್ಟು ಬ್ರಾಹ್ಮಣರಿಗೆ ಭೋಜನಮಾಡಿಸಿ, ಸ್ವಶಕ್ತ್ಯಾನುಸಾರವಾಗಿ ಇಕ್ಷುದಂಡ, ಪುಷ್ಪಹಾರ ಇವುಗಳನ್ನು ದಾನ ಕೊಡಬೇಕು.

೧೯. ಈ ಪ್ರಕಾರವಾಗಿ ಈ ಮದನದ್ವಾದಶೀ ವ್ರತವನ್ನು ಯಾವನು ಆಚರಿಸುವನೋ, ಅಂತಹವನು ಸರ್ವಪಾಪವಿನಿರ್ಮುಕ್ತನಾಗಿ ಪರಮಪದವನ್ನು ಹೊಂದುತ್ತಾನೆ.

೨೦. ಮತ್ತು ಇಹಲೋಕದಲ್ಲಿ ಶ್ರೇಷ್ಠಪುತ್ರರನ್ನೂ ಸೌಭಾಗ್ಯವನ್ನೂ ಪಡೆದು ಸುಖವನ್ನು ಅನುಭವಿಸುತ್ತಾನೆ. ಕಶ್ಯಪ ಪ್ರಜಾಪತಿಯು ಈ ವ್ರತಾಚರಣೆಮಾಡಿ ಇದರ ಪ್ರಭಾವದಿಂದ ಪರಮಸಂತೋಷ ಹೊಂದಿದನು.

ಚಕಾರಾಕರ್ಕಶಾಂ ಭೂಯೋ ರೂಪಲಾವಣ್ಯಸಂಯುತಾಂ |
ವರೇಣ ಚ್ಛಂದಯಾಮಾಸ ಯಾ ಚ ವವ್ರೇ ವರಂ ವರಂ || ೨೧ ||

ಪುತ್ರಂ ಶತ್ರುವಧಾರ್ಥಾಯ ಸಮರ್ಥಮಮಿತೌಜಸಂ |
ಪ್ರಾರ್ಥಯಾಮಿ ಮಹಾಭಾಗ್ಯಂ ಸರ್ವಾಮರನಿಷೂದನಂ |
ಕಶ್ಯಪಃ ಪ್ರಾಹ ತಾಂ ಭದ್ರೇ ಏವಮಸ್ತು ಸುಶೋಭನೇ || ೨೨ ||

ಸಂವತ್ಸರಶತಂತ್ವೇಕೋ ಗರ್ಭೋ ಧಾರ್ಯಃ ಸುಖೇಪ್ಸಯಾ |
ಸಂಧ್ಯಾಯಾಂ ನೈವ ಭೋಕ್ತವ್ಯಂ ಗರ್ಭಿಣ್ಯಾ ವರವರ್ಣಿನಿ || ೨೩ ||

ನ ಸ್ಥಾತವ್ಯಂ ನ ಗಂತವ್ಯಂ ವೃಕ್ಷಮೂಲೇಷು ಸರ್ವದಾ |
ನೋಪಸ್ಕರೇ ಭುವಿ ವಿಶೇಸ್ಮ ಸಲೋಲೂಖಲಾದಿಷು || ೨೪ ||

---

೨೧. ಪುನಃ ಈ ವ್ರತಪ್ರಸಾದದಿಂದ ಕಠಿಣಸ್ವಭಾವವಿಲ್ಲದವಳೂ ರೂಪ ಲಾವಣ್ಯಯುತಳೂ ಆಗಿರುವ ದಿತಿ ಎಂಬ ಸುಂದರಿಯನ್ನು ಅವನು ಪತ್ನಿಯಾಗಿ ಪಡೆದನು. ಆ ದಿತಿಯಾದರೋ ಶತ್ರುಸಂಹಾರದಲ್ಲಿ ಸಮರ್ಥರೂ, ಅತಿ ಪರಾಕ್ರಮಶಾಲಿಗಳೂ, ಅತ್ಯುತ್ತಮರೂ ಆಗಿರುವ ಪುತ್ರರನ್ನು ಕರುಣಿಸೆಂದು ತನ್ನ ಪತಿಯಾದ ಕಶ್ಯಪ ಪ್ರಜಾಪತಿಯಲ್ಲಿ ಬೇಡಿಕೊಳ್ಳುವಳಾಗಿ,

೨೨. ಓ ಪತಿಯೇ! ಮಹಾಭಾಗ್ಯವಂತನೂ, ಸರ್ವದೇವತೆಗಳನ್ನು ನಾಶಮಾಡುವವನೂ ಆಗಿರುವ ಪುತ್ರನನ್ನು ಕರುಣಿಸಬೇಕು ಎಂದು ದಿತಿಯು ಪ್ರಾರ್ಥಿಸಲಾಗಿ, ಆ ಕಶ್ಯಪನು "ಎಲೌ ಸೌಭಾಗ್ಯವತಿಯೇ! ಹಾಗೆಯೇ ಆಗಲಿ" ಎಂದು ಅವಳಿಗೆ ಹೇಳಿದನು.

೨೩. ಓ ಉತ್ತಮಸ್ತ್ರೀಯೇ! ಆದರೆ ನೀನು ಮುಂದೆ ಸುಖವಾಗಿರಬೇಕೆಂಬ ಅಭಿಲಾಷೆಯಿದ್ದರೆ ಒಂದು ಗರ್ಭವನ್ನು ನೂರುವರ್ಷಕಾಲ ಧಾರಣೆ ಮಾಡಬೇಕು. ನೀನು ಗರ್ಭಿಣಿಯಾಗಿರುವಾಗ ಸಂಧ್ಯಾಕಾಲದಲ್ಲಿ ಭೋಜನವನ್ನು ಸರ್ವಥಾ ಮಾಡಬಾರದು.

೨೪. ಮತ್ತು ಗರ್ಭಿಣಿಯಾಗಿರುವಾಗ ಯಾವಾಗಲೂ ವೃಕ್ಷಮೂಲಕ್ಕೆ ಹೋಗಬಾರದು. ಒನಕೆ, ಒರಳು ಇತ್ಯಾದಿ ಗೃಹಸಂಭಾರಗಳನ್ನು ಇಟ್ಟಿರುವ ಸ್ಥಳದಲ್ಲಿ ಕೂರುವುದು, ಮಲಗುವುದು ಇವುಗಳನ್ನೆಲ್ಲಾ ತ್ಯಜಿಸಬೇಕು.

ಜಲಂ ನ ಚಾವಗಾಹೇತ ಶೂನ್ಯಾಗಾರಂ ವಿವರ್ಜಯೇತ್ ।
ವರ್ಜಯೇತ್ಕಲಹಂ ಗೇಹೇ ಗಾತ್ರಭಂಗಂ ತಥೈವ ಚ ॥ ೨೫ ॥

ಮುಕ್ತಕೇಶೀ ನ ತಿಷ್ಠೇತ ನಾಶುಚಿಃ ಸ್ಯಾತ್ಕಥಂಚನ ।
ನ ಶಯೀತೋನ್ನತಶಿರಾ ನ ಚಾಪ್ಯಾರ್ದ್ರಶಿರಾಃ ಕ್ವಚಿತ್ ॥ ೨೬ ॥

ನ ವಸ್ತ್ರಹೀನಾ ನೋದ್ವಿಗ್ನಾ ನಾರ್ದ್ರಪಾದಾ ನ ಭೂತಲೇ ।
ನಾಮಂಗಲ್ಯಾಂ ವದೇದ್ವಾಚಂ ನ ಚ ಹಾಸ್ಯಪರಾ ಭವೇತ್ ॥ ೨೭ ॥

ಕುರ್ಯಾಚ್ಚ ಗುರುಶುಶ್ರೂಷಾಂ ನಿತ್ಯಂ ಮಂಗಲತತ್ಪರಾ ।
ಸರ್ವೌಷಧೀಭಿಃ ಕೋಷ್ಣೇನ ವಾರಿಣಾ ಸ್ನಾನಮಾಚರೇತ್ ॥ ೨೮ ॥

---

೨೫. ನೀರಿನೊಳಗೆ ಇಳಿಯಬಾರದು, ಯಾರೂ ವಾಸವಾಗಿಲ್ಲದಿರುವ ಶೂನ್ಯಗೃಹಕ್ಕೆ ಪ್ರವೇಶಮಾಡಬಾರದು, ಮನೆಯಲ್ಲಿ ಕಲಹಮಾಡಬಾರದು, ಮತ್ತು ಆಲಸ್ಯದಿಂದ ಮೈಮುರಿಯುವುದನ್ನು ಬಿಡಬೇಕು.

೨೬. ಮತ್ತು ಗರ್ಭಿಣಿಯಾಗಿರುವಾಗ ತಲೆಯ ಕೂದಲುಗಳನ್ನು ಬಿಚ್ಚಿಕೊಂಡಿರಬಾರದು. ಹೇಗೂ ಯಾವ ತರಹದಲ್ಲೂ ಅಶುಚಿಯಾಗಿರಬಾರದು. ಮತ್ತು ಅತಿ ಎತ್ತರವಾದ ತಲೆದಿಂಬು ಇರಿಸಿಕೊಂಡು ಶಯನಮಾಡಬಾರದು. ಮತ್ತು ಯಾವಾಗಲೂ ಒದ್ದೆಯಾದ ತಲೆಯಲ್ಲಿ ಶಯನಮಾಡಬಾರದು.

೨೭. ಹಾಗೆಯೇ ವಸ್ತ್ರಹೀನಳಾಗಿಯೂ, ಉದ್ವೇಗವುಳ್ಳವಳಾಗಿಯೂ, ಒದ್ದೆಯಾದ ಕಾಲುಗಳುಳ್ಳವಳಾಗಿಯೂ, ಶಯನಮಾಡಬಾರದು. ಅಮಂಗಲಕರವಾದ ವಚನಗಳನ್ನು ನುಡಿಯಬಾರದು. ಅಲ್ಲದೆ ಸದಾ ಪರಿಹಾಸದಲ್ಲಿ ಆಸಕ್ತಳಾಗಿರಬಾರದು.

೨೮. ಯಾವಾಗಲೂ ಮಂಗಳಕಾರ್ಯತತ್ಪರಳಾಗಿ ಗುರುಶುಶ್ರೂಷೆಯನ್ನು ಮಾಡಬೇಕು. ಸರ್ವೌಷಧಿ ಮಿಶ್ರವಾಗಿಯೂ, ಸ್ವಲ್ಪ ಬಿಸಿಯಾಗಿಯೂ ಇರುವ ನೀರಿನಲ್ಲಿ ಸ್ನಾನಮಾಡಬೇಕು.

ಕುಸ್ತ್ರಿಯೋ ನಾಭಿಭಾಷೇತ ವಸ್ತ್ರವಾತಂ ವಿವರ್ಜಯೇತ್ ।
ವ್ಯತವತ್ಸಾದಿಸಂಸರ್ಗಂ ಪರಗೇಹಂ ಚ ಸುಂದರಿ ॥ ೨೯ ॥

ನ ಶೀಘ್ರಂ ಮಾರ್ಗಮಾಕ್ರಾಮೇಲ್ಲಂಘಯೇನ್ನ ಮಹಾನದೀಂ ।
ನ ಚ ಬೀಭತ್ಸಕಂ ಕಿಂಚಿನ್ನ ಚ ವೀಕ್ಷೇದ್ಭಯಾನಕಂ ॥ ೩೦ ॥

ಗುರುವಾತುಲಮಾಹಾರಮಜೀರ್ಣಂ ನ ಸಮಾಚರೇತ್ ।
ಸಂಪೂರ್ಣಗರ್ಭಿಣ್ಯಾಯಾಮಂ ವ್ಯಾಯಾಮಂ ವಾ ವಿವರ್ಜಯೇತ್ ॥

ಗರ್ಭೋ ರಕ್ಷ್ಯಃ ಸದೌಷಧ್ಯಾ ಹೃದಿ ಧಾರ್ಯೋ ನ ಮತ್ಸರಃ ।
ಅನೇನ ವಿಧಿನಾ ಸಾಧ್ವಿ ಶೋಭನಂ ಪುತ್ರಮಾಪ್ನುಯಾತ್ ॥ ೩೨ ॥

---

೨೯. ಕೆಟ್ಟ ಹೆಂಗಸರ ಜತೆಯಲ್ಲಿ ಸಂಭಾಷಣೆ ಮಾಡಬಾರದು. ಬಟ್ಟೆಯಿಂದ ಗಾಳಿಬೀಸಿಕೊಂಡು ಆ ಗಾಳಿಯನ್ನು ಸೇವಿಸಬಾರದು. ಓ ಸುಂದರೀ! ಆದ ಮಕ್ಕಳೆಲ್ಲಾ ಸತ್ತುಹೋಗಿರುವವರ ಸಹವಾಸ ಸಂಸರ್ಗ ಇವುಗಳನ್ನು ತ್ಯಜಿಸಿರಬೇಕು. ಮತ್ತು ಪರರ ಗೃಹಕ್ಕೆ ಹೋಗಬಾರದು.

೩೦. ಅಲ್ಲದೆ ಅತಿವೇಗದಿಂದ ದಾರಿ ನಡೆಯಬಾರದು. ಮಹಾನದಿಯನ್ನು ದಾಟಬಾರದು. ನೋಡಿದರೆ ಅಸಹ್ಯವಾಗಿ ಕಾಣುವ ಯಾವ ವಸ್ತುವನ್ನೂ ನೋಡಬಾರದು. ಹಾಗೆಯೇ ಭಯಂಕರವಾದ ದೃಶ್ಯವನ್ನೂ ನೋಡಬಾರದು.

೩೧. ಮತ್ತು ಸುಲಭವಾಗಿ ಜೀರ್ಣಿಸದ ಗುರುತರವಾದ ಆಹಾರ, ವಾತಜನಕಾಹಾರ, ಇಂತಹ ಆಹಾರವನ್ನು ತ್ಯಜಿಸಬೇಕು. ಅಜೀರ್ಣವಾಗುವ ಮಟ್ಟಿಗೆ ಭೋಜನಾದಿಗಳನ್ನು ಮಾಡಬಾರದು. ಪೂರ್ಣ ಗರ್ಭಿಣಿಯಾಗಿರುವಾಗ ಎತ್ತರವಾದ ಸ್ಥಳ (ಅಟ್ಟಕ್ಕೆ) ಹತ್ತುವುದು, ವ್ಯಾಯಾಮ ಮಾಡುವುದು ಇವನ್ನೆಲ್ಲಾ ವರ್ಜ್ಯಮಾಡಬೇಕು.

೩೨. ಯಾವಾಗಲೂ ಔಷಧ ಸೇವನಾದಿಗಳಿಂದಲೂ ಪೋಷಣೆಯಿಂದಲೂ, ಗರ್ಭವನ್ನು ರಕ್ಷಿಸಬೇಕು. ಹೃದಯದಲ್ಲಿ ಯಾರ ಮೇಲೂ ಮಾತ್ಸರ್ಯವನ್ನು ಇಡಬಾರದು. ಓ ಪತಿವ್ರತೆಯೇ ! ಈ ನಿಯಮವುಳ್ಳವಳಾದರೆ ಅದರಿಂದ ಶುಭ ಪುತ್ರ ಲಾಭವಾಗುವುದು.

ಅನ್ಯಥಾ ಗರ್ಭಪತನಂ ಸ್ತಂಭನಂ ವಾ ಪ್ರವರ್ತತೇ ।
ತಸ್ಮಾತ್ತ್ವಮನಯಾ ವೃತ್ತ್ಯಾ ಗರ್ಭೇಽಸ್ಮಿಂಶ್ಚ ಪ್ರವರ್ತತೇ ।
ಭವಿಷ್ಯತಿ ಶುಭಃ ಪುತ್ರಃ ಸರ್ವಾವಯವಸುಂದರಃ ॥ ೩೩ ॥

ಸ್ವಸ್ತ್ಯಸ್ತು ತೇ ಗಮಿಷ್ಯಾಮಿ ತಥೇತ್ಯುಕ್ತಸ್ತಯಾ ಚ ಸಃ ।
ಪಶ್ಯತಾಂ ಸರ್ವಭೂತಾನಾಂ ತತ್ರೈವಾಂತರ್ಹಿತೋಽಭವತ್ ॥ ೩೪ ॥

ತತಃ ಸಾ ಕಶ್ಯಪೋಕ್ತೇನ ವಿಧಿನಾ ಸಮತಿಷ್ಠತ ।
ಅಥಾಪ ಪುತ್ರಾನ್ಪಂಚಾಶದೇಕೋನಾನ್ಪಾಂಡುನಂದನ ॥ ೩೫ ॥

ಏವಮನ್ಯಾಪಿ ಯಾ ನಾರೀ ಮದನದ್ವಾದಶೀಮಿಮಾಂ ।
ಕರೋತಿ ಪುತ್ರಾನಾಪ್ನೋತಿ ಸಹ ಭರ್ತ್ರಾ ಸುಖೀ ಭವೇತ್ ॥ ೩೬ ॥

---

೩೩. ಈ ನಿಯಮಗಳಿಲ್ಲದಿದ್ದರೆ ಗರ್ಭಪಾತ, ಅಲ್ಲವಾದರೆ ಗರ್ಭಸ್ತಂಭನ, ಇವುಗಳು ಆಗುತ್ತವೆ. ಆದುದರಿಂದ ನೀನು ಈ ಗರ್ಭಧಾರಣೆಮಾಡಿದಾಗ, ಈಗ ನಾನು ಹೇಳಿದ ನಿಯಮಗಳನ್ನು ಉಲ್ಲಂಘಿಸದೆ ಆಚರಿಸುತ್ತಿರು. ಅದರಿಂದ ಸರ್ವಾಂಗ ಸುಂದರನಾದ ಶುಭಪುತ್ರನು ನಿನ್ನಲ್ಲಿ ಜನಿಸುವನು.

೩೪. ನಿನಗೆ ಮಂಗಳವಾಗಲಿ. ನಾನು ಹೋಗುತ್ತೇನೆ. ಎಂದು ಕಶ್ಯಪನು ಹೇಳಿದನು. ಆ ದಿತಿಯು ಹಾಗೆಯೇ ಆಗಲೆಂದು ಸಮ್ಮತಿ ಕೊಟ್ಟಮೇಲೆ ಆ ಕಶ್ಯಪ ಪ್ರಜಾಪತಿಯು ಎಲ್ಲಾ ಪ್ರಾಣಿಗಳೂ ನೋಡುತ್ತಿರುವಾಗಲೇ ಅಲ್ಲಿಯೇ ಅಂತರ್ಧಾನನಾದನು.

೩೫. ಅಯ್ಯಾ ಪಾಂಡುಪುತ್ರನೇ ! ಅನಂತರ ಆ ದಿತಿಯು ಕಶ್ಯಪನು ಹೇಳಿದಂತೆಯೇ ಎಲ್ಲಾ ನಿಯಮಗಳನ್ನೂ ಪರಿಪಾಲಿಸುತ್ತಾ ಇದ್ದಳು. ಅನಂತರ ಅವಳು ನಲವತ್ತೊಂಭತ್ತುಮಂದಿ ಪುತ್ರರನ್ನು ಪಡೆದಳು.

೩೬. ಯಾವ ಸ್ತ್ರೀಯು ಈರೀತಿಯಾಗಿ ಈ ಮದನದ್ವಾದಶೀ ವ್ರತವನ್ನು ಆಚರಿಸುವಳೋ ಅವಳು ಸತ್ಸಂತಾನವನ್ನು ಪಡೆದು ಪತಿಸಮೇತಳಾಗಿ ಸುಖವಾಗಿರುತ್ತಾಳೆ.

ಏಕೋನಮರ್ಧಶತಮಾಪ ದಿತಿಃ ಸುತಾನಾಂ ।
ಯೇನ ವ್ರತೇನ ಬಲವೀರ್ಯಸಮನ್ವಿತಾನಾಂ ।
ಮರ್ತ್ಯಾಃ ಸಮಾಚರತಿ ಪುತ್ರಧನಾಭಿಲಾಷೀ ।
ತತ್ಸರ್ವಮತ್ರ ಸಫಲಂ ಭವತೀಹ ಪುಂಸಃ || ೩೭ ||

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರಸಂವಾದೇ ಮದನದ್ವಾದಶೀವ್ರತವರ್ಣನಂ
ನಾಮ ಷಡಶೀತಿತಮೋಽಧ್ಯಾಯಃ.



೩೭. ದಿತಿದೇವಿಯು ಈ ವ್ರತವನ್ನು ಆಚರಿಸಿ ಅದರಿಂದ ಬಲ ವೀರ್ಯ ಸಮೇತರಾದ ನಲವತ್ತೊಂಭತ್ತು ಮಂದಿ ಪುತ್ರರನ್ನು ಪಡೆದಳು. ಅಂತಹ ಈ ಮದನದ್ವಾದಶೀ ವ್ರತವನ್ನು ಪುತ್ರ, ಧನ, ದ್ರವ್ಯ, ಸಂಪತ್ತು ಇವುಗಳ ಅಭಿಲಾಷೆಯುಳ್ಳವನಾಗಿ ಯಾವ ಪುರುಷನಾದರೂ ಆಚರಿಸಿದರೆ ಈ ಲೋಕದಲ್ಲಿ ಅವನ ಆ ಮನೋರಥಗಳೆಲ್ಲವೂ ಸಫಲವಾಗುತ್ತವೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಮದನ
ದ್ವಾದಶೀ ವ್ರತವರ್ಣನೆಯೆಂಬ ಎಂಭತ್ತಾರನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಸಪ್ತಾಶೀತಿತಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಕಾಂತಾರವನದುರ್ಗೇಷು ಸುಪ್ರಸನ್ನಾಟವೀಷು ಚ ।
ಸಮುದ್ರತರಣೇ ದಾನೇ ಸಂಗ್ರಾಮೇ ತಸ್ಕರಾರ್ದನೇ ॥ ೧ ॥

ಕಾಂ ದೇವತಾಂ ಸ್ಮರೇತ್ಕೃಷ್ಣ ಪರಿತ್ರಾಣಕರೀಮಿಹ ।
ಕಥಂ ಚ ದೇವಃ ಪುರುಷಃ ಪರಿತ್ರಾಣಂ ಸ್ಮೃತೋ ಜನೈಃ ॥ ೨ ॥

॥ ಶ್ರೀಕೃಷ್ಣ ಉವಾಚ ॥

ಸರ್ವಮಂಗಳಮಾಂಗಲ್ಯಾಂ ದುರ್ಗಾಂ ಭಗವತೀಮಿಮಾಂ ।
ನಾಪ್ನೋತಿ ದುಃಖಂ ಪುರುಷಃ ಸಂಸ್ಮರನ್ಸರ್ವಮಂಗಲಾಂ ॥ ೩ ॥

---

## ಎಂಭತ್ತೇಳನೆಯ ಅಧ್ಯಾಯ

೧-೨. ಯುಧಿಷ್ಠಿರನು ಹೇಳುತ್ತಾನೆ—ಅಯ್ಯಾ ಕೃಷ್ಣಪರಮಾತ್ಮಾ ! ಘೋರಾರಣ್ಯ, ವನ, ದುರ್ಗ, ಕಂಟಕ, ಮಹಾವೃಕ್ಷಶ್ರೇಣಿ, ಸಮುದ್ರಯಾನ, ಕಾಡುಕಿಚ್ಚು, ಯುದ್ಧ, ಕಳ್ಳರಕಾಟ, ಇತ್ಯಾದಿಗಳಿಂದ ಹೆದರಿದಾಗ ಪುರುಷನು ತನ್ನ ರಕ್ಷಣೆಗಾಗಿ ಯಾವ ದೇವತೆಯನ್ನು ಸ್ಮರಿಸಬೇಕು ? ಪುರುಷರ ಧ್ಯಾನಕ್ಕೆ ಮಾತ್ರ ವಿಷಯವಾದ ಆ ದೇವತೆ ಅವರನ್ನು ಆಗ ರಕ್ಷಿಸುವುದು ಹೇಗೆ ? ಎಂದನು.

೩. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ರಾಜನೇ ! ಸರ್ವಮಂಗಲ ವಸ್ತುಗಳಿಗೂ ಮಾಂಗಲ್ಯಪ್ರದೆಯೂ, ಪರಮಪೂಜ್ಯೆಯೂ, ಸರ್ವಮಂಗಳೆ ಎಂದು ಪ್ರಸಿದ್ಧಳೂ ಆದ ದುರ್ಗಾದೇವಿಯನ್ನು ಸ್ಮರಿಸಿದ ಪುರುಷನು ಎಂದಿಗೂ ದುಃಖ ಭಾಜನನಾಗುವುದಿಲ್ಲ.

ಅಲಕ್ಷ್ಯಾಂ ಲಕ್ಷ್ಯಭೂತಾನಾಂ ಸಂಸ್ಮರನ್ಸರ್ವಮಂಗಳಾಂ ।
ನ ಭಯಂ ಸಮವಾಪ್ನೋತಿ ಪುರುಷಃ ಪಾರ್ಥ ಕುತ್ರಚಿತ್ ॥ ೪ ॥

ಯದಾ ತಾಂ ಪ್ರತಿಜಿಜ್ಞಾಸುರವಂತ್ಯಾಮಹಮಾಗತಃ ।
ಪುರಾ ಸಂದೀಪನಿಃ ಪಾರ್ಥ ಬಲೇನ ಸಹ ಭಾರ ॥ ೫ ॥

ಪ್ರಾಪ್ತವಿದ್ಯೇನ ಚ ಮಯಾ ಪ್ರತಿಜ್ಞಾತಾಸ್ಯ ದಕ್ಷಿಣಾ ।
ದಿವ್ಯಂ ಸ್ತವಂ ವಿದಿತ್ವಾ ಮೇ ತೇನಾಹಂ ಯಾಚಿತಃ ಪ್ರಭೋ ॥ ೬ ॥

ಪ್ರಭಾಸತೀರ್ಥೇ ಪುತ್ರೋ ಮೇ ಗತಃ ಕೇನಾಪ್ಯಸೌ ಹತಃ ।
ತಮಾನಯ ಮಹಾಬಾಹೋ ಸತ್ಯಂ ಕುರು ವಚೋ ಮಮ ॥ ೭ ॥

---

೪. ಅಯ್ಯಾ ಕುಂತೀಪುತ್ರನೇ ! ನಮಗೆ ಪ್ರತ್ಯಕ್ಷವಾಗಿ ಕಾಣುವ ಈ ಪ್ರಾಣಿವರ್ಗದ ಸಾಮಾನ್ಯ ದೃಷ್ಟಿಗೆ ಗೋಚರವಾಗದೆ, ರಹಸ್ಯವಾಗಿರುವ ಈ ಸರ್ವಮಂಗಳೆಯನ್ನು ಸ್ಮರಿಸಿದ ಪುರುಷರು, ಯಾವ ದೇಶಕಾಲಗಳಲ್ಲೂ ಭಯ ಗ್ರಸ್ತನಾಗುವುದಿಲ್ಲ.

೫. ಅಯ್ಯಾ ಭರತವಂಶಜನೇ! ಪೂರ್ವದಲ್ಲಿ ನಾನು ಆ ಸರ್ವಮಂಗಳೆಯ ಸ್ವರೂಪ ಜ್ಞಾನವನ್ನು ಪಡೆಯಬೇಕೆಂಬ ಅಭಿಪ್ರಾಯವುಳ್ಳವನಾಗಿ ಬಲರಾಮ ಸಮೇತನಾಗಿ ಅವಂತೀಪಟ್ಟಣದಲ್ಲಿರುವ ಸಾಂದೀಪನಿ ಎಂಬ ಮಹರ್ಷಿಯ ಸಮೀಪಕ್ಕೆ ಬಂದೆನು.

೬. ಅಯ್ಯಾ ರಾಜನೇ ! ಆ ಮಹರ್ಷಿಯಿಂದ ಆ ದೇವತೆಯ ವಿಷಯಕ ವಾದ ಪರಿಜ್ಞಾನವನ್ನು ನಾನು ಪಡೆದುಕೊಂಡು, ಅನಂತರ ಅವರನ್ನು ಕುರಿತು ನಿಮಗೆ ಇಷ್ಟವಾದ ಗುರುದಕ್ಷಿಣೆಯನ್ನು ಕೇಳಿ, ತಂದುಕೊಡುವನೆಂದು ಪ್ರತಿಜ್ಞೆ ಮಾಡಿದೆನು. ಆಗ ಆ ಮಹರ್ಷಿಯು ನನ್ನ ದಿವ್ಯಸ್ತೋತ್ರಗಳನ್ನು ಕೇಳಿ ಅದರ ಮುಖಾಂತರ ನನ್ನ ಪ್ರಭಾವಗಳನ್ನು ತಿಳಿದುಕೊಂಡವನಾದುದರಿಂದ, ನನ್ನನ್ನು ಗುರುದಕ್ಷಿಣೆಯನ್ನು ಕೇಳುವನಾಗಿ,

೭. "ಓ ಮಹಾಬಾಹುಶಾಲಿಯೇ ! ನನ್ನ ಮಗನು ಪೂರ್ವದಲ್ಲಿ ಪ್ರಭಾಸ ತೀರ್ಥಕ್ಕೆ ಹೋಗಿದ್ದಾಗ ಅಲ್ಲಿ ಅವನನ್ನು ಯಾವನೋ ಒಬ್ಬನು ಕೊಂದನು. ಆ ನನ್ನ ಮಗನನ್ನು ಪುನಃ ತಂದುಕೊಡು. ಈ ನನ್ನ ಪ್ರಾರ್ಥನಾವಚನವನ್ನು ಸತ್ಯವಾಗಿಸು" ಎಂಬದಾಗಿ ನುಡಿದನು.

ಉಪಾಧ್ಯಾಯಸ್ಯ ವಚನಾದ್ಭೈವಸ್ಥತಪುರೇ ಮಯಾ ।
ಪ್ರಾಪ್ತಃ ಸಂದೀಪನೇಃ ಪುತ್ರಃ ಸಮಾನೀತಃ ಕ್ಷಣಾದಸೌ ॥ ೮ ॥

ದಕ್ಷಿಣಾಂ ತಾಮುದಾಹೃತ್ಯ ಪ್ರಸ್ಥಿತೌ ಪುನರಾಗತೌ ।
ಸ್ಥಾನಮೇತತ್ಸ್ವಪಾದಾಂಕಂ ಕೃತ್ವಾವಾಂ ಗೃಹಮಾಗತೌ ॥ ೯ ॥

ತತಃ ಪ್ರಭೃತಿ ಪುತ್ರಾರ್ಥಾಃ ಪೂಜಯಂತಿ ಜನಾಃ ಸದಾ ।
ಮಾಂ ಚೈವ ಬಲಭದ್ರಂ ಚ ಮಧ್ಯಸ್ಥಾಂ ಸರ್ವಮಂಗಲಾಂ ॥ ೧೦ ॥

ವಾಮೇ ನಾರಾಯಣೋಽಹಂ ಸ ಏವಮೇವ ಚ ಕೇ ಭವೇತ್ ।
ಅಬಾಧಕಂ ಯೋಽರ್ಚಯತೇ ತೃತೀಯಂ ಕುಂತಿನಂದನ ॥ ೧೧ ॥

---

೮. ನನ್ನ ಉಪಾಧ್ಯಾಯನು ನನಗೆ ಈರೀತಿ ಹೇಳಿದುದರಿಂದ ಆ ಗುರ್ವಾಜ್ಞಾನುಸಾರವಾಗಿ ನಾನು ಯಮುನ ಪಟ್ಟಣಕ್ಕೆ ಹೋಗಿ, ಅಲ್ಲಿ ಅತಿಪ್ರಯತ್ನದಿಂದ ಸಾಂದೀಪನಿಯ ಮಗನನ್ನು ಸಂಪಾದಿಸಿ, ಅವನನ್ನು ಅಲ್ಲಿಂದ ತತ್ಕ್ಷಣವೇ ಕರೆದುಕೊಂಡು ಬಂದನು.

೯. ಅನಂತರ ಇದೇ ಗುರುದಕ್ಷಿಣೆ ಎಂದು ಹೇಳಿ, ಆ ಸಂದೀಪನಿಗೆ ಅವನ ಪುತ್ರನನ್ನು ಒಪ್ಪಿಸಿ, ಬಲರಾಮನೂ ನಾನೂ ಆ ಸ್ಥಳದಲ್ಲಿ ನಮ್ಮ ಪಾದಚಿಹ್ನೆಗಳಿರುವಹಾಗೆ ಮಾಡಿ, ಅಲ್ಲಿಂದ ಹೊರಟು ಪುನಃ ನಮ್ಮ ಮನೆಗೆ ಬಂದೆವು.

೧೦. ಅದು ಮೊದಲ್ಗೊಂಡು ಯಾವಾಗಲೂ ಜನರು ಪುತ್ರಾರ್ಥವಾಗಿ [illegible]ವಾಗ ಮಧ್ಯದಲ್ಲಿ ಶ್ರೀ ಸರ್ವಮಂಗಳಾದೇವಿಯನ್ನಿಟ್ಟು ಪಾರ್ಶ್ವಗಳಲ್ಲಿ ನನ್ನ ಮತ್ತು ಬಲರಾಮನ ಪ್ರತಿಮೆಗಳನ್ನಿಟ್ಟು ಪೂಜಿಸುತ್ತಾರೆ.

೧೧. ಅಯ್ಯಾ ಕುಂತೀಪುತ್ರನೇ ! ಆಗ ಎಡಭಾಗದಲ್ಲಿ ನಾರಾಯಣ ಸ್ವರೂಪನಾದ ನನ್ನನ್ನೂ, ಮಧ್ಯದಲ್ಲಿ ದುರ್ಗೆಯನ್ನೂ, ಬಲಭಾಗದಲ್ಲಿ ಬಲಭದ್ರನನ್ನೂ ಸ್ಥಾಪಿಸಿ, ಪ್ರತ್ಯೇಕವಾಗಿ ಅರ್ಚಿಸಿ ಅಬಾಧಕವಾಗಿ ಈ ವ್ರತವನ್ನು ಆಚರಿಸಬೇಕು.

ತ್ರಯೋದಶ್ಯಾಂ ಸಿತೇ ಪಕ್ಷೇ ಮಾಸಿಮಾಸಿ ಯತವ್ರತಃ ।
ನಕ್ತೇನೈವೋಪವಾಸೇನ ಏಕಭಕ್ತೇನ ವಾ ಪುನಃ ॥ ೧೨ ॥

ಗಂಧಪುಷ್ಪೈಶ್ಚ ಮಧುಭಿಃ ಸೀಧುಭಿಶ್ಚ ಸುರಾಸವೈಃ ।
ಮೃನ್ಮಯೀಂ ಕಾಂಚನೀಂ ವಾಪಿ ಕೃತ್ವಾ ಪ್ರತಿಕೃತಿಂ ತು ಯಃ ॥ ೧೩ ॥

ಯಕ್ಷಗಂಧಬಲಿಕ್ಷೇಪೈಃ ಪಲಲೌದನಸಂಸೃಜ್ಯೈಃ ।
ಯೋಽಭ್ಯರ್ಚಯತಿ ರಾಜೇಂದ್ರ ಸರ್ವಪಾಪೈಃ ಪ್ರಮುಚ್ಯತೇ ॥ ೧೪ ॥

ನಾರೀ ವಾ ಭರ್ತೃಸಹಿತಾ ಸ್ವರ್ಗಲೋಕೇ ಮಹೀಯತೇ ॥ ೧೫ ॥

ಅಂಬಾಂಬಿಕೇ ತ್ರಿದಶಮೋಹ್ನಿ ಸಿತೇ ಸದೈವ ।
ಯಃ ಪೂಜಯೇತ್ಕುಸುಮಮಾಂಸಸುರೋಪಹಾರೈಃ ।

---

೧೨. ಈ ವ್ರತಾನುಷ್ಠಾನ ಮಾಡುವವನು ಪ್ರತಿತಿಂಗಳಿನ ಶುಕ್ಲಪಕ್ಷದ ತ್ರಯೋದಶಿಯಲ್ಲಿ, ನಕ್ತೋಪವಾಸದಿಂದಲೋ ಅಥವಾ ಏಕಭುಕ್ತದಿಂದಲೋ ನಿಯಮಪೂರ್ವಕವಾಗಿ ಇದನ್ನು ಆಚರಿಸಬೇಕು.

೧೩. ಭಂಗಾರದಿಂದ ಅಥವಾ ಮಣ್ಣಿನಿಂದ ಪ್ರತಿಮೆಗಳನ್ನು ಮಾಡಿಸಿ, ಗಂಧ, ಪುಷ್ಪ, ಮಧು, ಮದ್ಯ, ಮಾಂಸ ಇತ್ಯಾದಿಗಳ ಸಮರ್ಪಣದಿಂದ ಪೂಜಿಸಬೇಕು.

೧೪. ಅಯ್ಯಾ ರಾಜೇಂದ್ರನೇ! ಕರ್ಪೂರ, ಅಗರು, ಕಸ್ತೂರಿ, ತಕ್ಕೋಲ ಈ ನಾಲ್ಕುರಿಂದೊಡಗೂಡಿದ ಸುಗಂಧ, ಮಾಂಸಮಿಶ್ರಿತವಾದ ಅನ್ನದ ಬಲಿಪದಾ ಇವುಗಳಿಂದ ಯಾವನು ಅರ್ಚಿಸುವನೋ ಅವನು ಸರ್ವಪಾಪಗಳಿಂದಲೂ ಮುಕ್ತನಾಗುತ್ತಾನೆ.

೧೫. ಈ ವ್ರತವನ್ನಾಚರಿಸಿದ ಹೆಂಗಸೂ ಕೂಡ, ಸರ್ವಪಾಪಮುಕ್ತಳಾಗಿ, ತನ್ನ ಪತಿಯೊಡನೆ ಸ್ವರ್ಗಕ್ಕೆ ಹೋಗಿ ಅಲ್ಲಿ ಪೂಜಿತೆಯಾಗುತ್ತಾಳೆ.

೧೬. ಯಾವ ಪುರುಷನು ಶುಕ್ಲಪಕ್ಷದ ತ್ರಯೋದಶಿಯಲ್ಲಿ, ಶ್ರೀ ಅಂಬಿಕಾ ದೇವಿಯನ್ನು ಪುಷ್ಪ, ಮಾಂಸ, ಮದ್ಯೋಪಹಾರಾದಿಗಳಿಂದ ಪೂಜಿಸುವನೋ

ನಶ್ಯಂತಿ ತಸ್ಯ ಭವನೇಷ್ವತಿಭೀಷಣಾನಿ ।
ಚೌರಾಗ್ನಿರಾಜಜನಿತಾನಿ ಭಯಾನಿ ಸದ್ಯಃ ॥ ೧೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರಸಂವಾದೇ ಅಬಾಧಕವ್ರತವರ್ಣನಂ ನಾಮ ಸಪ್ತಾಶೀತಿತಮೋऽಧ್ಯಾಯಃ.



---

ಅಂತಹವನ ಮನೆಯಲ್ಲಿ ಅತಿಭೀಷಣ ಕೃತ್ಯಗಳು, ಚೋರಭಯ, ಅಗ್ನಿಭಯ, ರಾಜಭಯ, ಇವುಗಳು ಯಾವಾಗಲೂ ಉಂಟಾಗುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಅಬಾಧಕ ವ್ರತವರ್ಣನೆಯೆಂಬ ಎಂಭತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಅಷ್ಟಾಶೀತಿತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಬ್ರೂಹಿ ಮೇ ಯದುಶಾರ್ದೂಲ ವ್ರತಂ ಗಂಧವಿನಾಶನಂ ।
ಕಟುತಿಕ್ತಾಮ್ಲದೇಹೋತ್ಥದೌರ್ಭಾಗ್ಯಶಮನಂ ತಥಾ ॥ ೧ ॥

॥ ಶ್ರೀಕೃಷ್ಣ ಉವಾಚ ॥

ಇಮಂ ಪ್ರಶ್ನಂ ಪುರಾ ಪಾರ್ಥ ಜಾತೂಕರ್ಣ್ಯೋ ಮಹಾಮುನಿಃ ।
ಪೃಷ್ಟೋ ರಾಜ್ಞ್ಯಾ ವಿಷ್ಣುಭಕ್ತ್ಯಾ ಕಾಲನಂದನಜಾತಯಾ ॥ ೨ ॥
ಕಥಯಾಮಾಸ ಸಂಪೃಷ್ಟಾ ಸೂಪವಿಷ್ಟಾ ಶೃಣೋತಿ ಸಾ ।
ದೇವೀ ಕೃತಾಂಜಲಿಪುಟಾ ಜಾತೂಕರ್ಣ್ಯೋಽವದದ್ವ್ರತಂ ॥ ೩ ॥

---

### ಎಂಭತ್ತೆಂಟನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ಯಾದವೋತ್ತಮನೇ ! ಕಾರ, ಕಹಿ, ಹುಳಿ ಇತ್ಯಾದಿ ರಸಪದಾರ್ಥಗಳನ್ನು ತಿಂದು ಬೆಳೆದ ದೇಹದಲ್ಲಿ, ಹುಟ್ಟುವ ದೌರ್ಗಂಧ್ಯವನ್ನೂ, ಮತ್ತು ದೌರ್ಭಾಗ್ಯವನ್ನೂ, ನಾಶಮಾಡುವ ಒಂದು ವ್ರತವನ್ನು ನನಗೆ ಹೇಳು ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಕುಂತೀಪುತ್ರನೇ ! ಕಾಲನಂದನನೆಂಬವನ ಮಗಳಾದ ವಿಷ್ಣುಭಕ್ತಿ ಎಂಬ ರಾಣಿಯು ಪೂರ್ವದಲ್ಲಿ ಜಾತೂಕರ್ಣ್ಯನೆಂಬ ಮಹರ್ಷಿಯನ್ನು ಕುರಿತು ಇದೇ ಪ್ರಶ್ನೆಯನ್ನು ಮಾಡಿದ್ದಳು.

೩. ಈರೀತಿ ಪ್ರಶ್ನೆಮಾಡಿ ಅಂಜಲಿಬದ್ಧಳಾಗಿ ಏಕಾಗ್ರತೆಯಿಂದ ಕುಳಿತು ಶ್ರವಣಮಾಡುತ್ತಿರುವ ಆ ರಾಣಿಗೆ ಈ ಜಾತೂಕರ್ಣನು ಈ ವ್ರತವನ್ನು ಹೇಳಿದ್ದನು.

ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ತ್ರಯೋದಶ್ಯಾಂ ಯುಧಿಷ್ಠಿರ ।
ಸ್ನಾತ್ವಾ ಪುಣ್ಯನದೀತೋಯೇ ಪೂಜಯೇಚ್ಛುಭದೇಶಜಂ ॥ ೪ ॥

ಶ್ವೇತಮಂದಾರಮರ್ಕಂ ವಾ ಕರವೀರಂ ಚ ರಕ್ತಕಂ ।
ನಿಂಬಂ ಚ ಸೂರ್ಯದೇವಸ್ಯ ವಲ್ಲಭಂ ದುರ್ಲಭಂ ತಥಾ ॥ ೫ ॥

ಪುಷ್ಪೈರ್ನೈವೇದ್ಯಧೂಪಾದ್ಯೈರ್ಮಂತ್ರೇಣಾನೇನ ಪಾಂಡವ ।
ನಿರೀಕ್ಷ್ಯ ಗಗನೇ ಸೂರ್ಯಂ ಧ್ಯಾತ್ವಾ ಹೃದಿ ಸಮುಚ್ಚರೇತ್ ॥ ೬ ॥

ಸೂರ್ಯಂ ಶ್ವೇತಾರಮಂದಾರಶ್ವೇತಾರ್ಕಾರ್ಕಾಖ್ಯ ರಕ್ತಕಂ ।
ಕರವೀರ ನಮಸ್ತುಭ್ಯಂ ನಿಂಬವೃಕ್ಷ ನಮೋಽಸ್ತು ತೇ ॥ ೭ ॥

---

೪. ಅಯ್ಯಾ ಯುಧಿಷ್ಠಿರನೇ! ಜ್ಯೇಷ್ಠಮಾಸದ ಶುಕ್ಲಪಕ್ಷದ ತ್ರಯೋದಶೀ ದಿನ ಪುಣ್ಯನದೀಜಲದಲ್ಲಿ ಸ್ನಾನಮಾಡಿ ಶುಭಪ್ರದೇಶದಲ್ಲಿ ಬೆಳೆದಿರುವ ಈ ಮುಂದೆ ಹೇಳುವ ವೃಕ್ಷಪೂಜೆಗೆ ಸಿದ್ಧಪಡಿಸಿ,

೫. ಬಿಳಿಯ ಮಂದಾರ, ಬಿಳಿಯ ಎಕ್ಕ, ಕೆಂಪು ಕರವೀರ, ಬೇವು, ಈ ವೃಕ್ಷಗಳನ್ನು ಪೂಜಿಸಬೇಕು. ಇವು ಸೂರ್ಯದೇವನಿಗೆ ಪ್ರೀತಿಪಾತ್ರವಾದುವು. ಮತ್ತು ಸರ್ವತ್ರ ದುರ್ಲಭವಾಗಿ ಇರುವುವು.

೬. ಅಯ್ಯಾ ಪಾಂಡುಪುತ್ರನೇ! ಪುಷ್ಪ, ಧೂಪ ಇವುಗಳಿಂದ ಈ ವೃಕ್ಷ [illegible] ಪೂಜೆಮಾಡಿ ನೈವೇದ್ಯ ಸಮರ್ಪಣೆಯನ್ನು ಮಾಡಿ, ಮನಸ್ಸಿನಲ್ಲಿಯೇ [illegible] [illegible]ರ್ಯದೇವನನ್ನು ಧ್ಯಾನಿಸಿ, ಆಕಾಶದಲ್ಲಿರುವ ಸೂರ್ಯನನ್ನು ದರ್ಶನ [illegible]ಡುತ್ತಾ ಈರೀತಿ ಪ್ರಾರ್ಥನೆ ಮಾಡಬೇಕು.

೭. ಸೂರ್ಯನಿಗೆ ಪ್ರೀತಿಕರವಾಗಿ ಸೂರ್ಯ ದೇವತಾಕವೆನಿಸಿಕೊಂಡ ಬಿಳಿಯ ಮಂದಾರ, ಅರ್ಕ ಎಂಬ ಹೆಸರಿನ ಬಿಳಿಯ ಎಕ್ಕ, ಕೆಂಪು ಕರವೀರ, ನಿಂಬ (ಬೇವು) ಎಂಬ ವೃಕ್ಷಗಳೇ! ನಿಮಗೆ ನಮಸ್ಕಾರ ಎಂದು ಈ ಮಂತ್ರಾರ್ಥ.

ಇತ್ಥಂ ಯೋಽರ್ಕಪತೇರ್ಭಕ್ತ್ಯಾ ವರ್ಷೇವರ್ಷೇ ಪೃಥಙ್ನರಃ ।
ಮೂಲಮಂತ್ರೇಣ ನೃಶ್ರೇಷ್ಠ ನಾರೀ ವಾ ಭಕ್ತಿಸಂಯುತಾ ।
ತಸ್ಯಾಃ ಶರೀರದೌರ್ಗಂಧ್ಯಂ ದೌರ್ಭಾಗ್ಯಂ ವಾ ಅಜಾವಿಕಂ ॥ ೮ ॥

ನಿಂಬಂ ನವಾರ್ಕಕರವೀರಲತಾಂ ಸುಪುಷ್ಪಾಂ ।
ಯಾಃ ಪೂಜಯಂತಿ ಕುಸುಮಾಕ್ಷತಧೂಪದೀಪೈಃ ।
ತಾಃ ಸರ್ವಕಾಮಸುಖಭೋಗಸಮೃದ್ಧಿಭಾಜೋ ।
ದೌರ್ಭಾಗ್ಯದೋಷರಹಿತಾಃ ಸುಭಗಾ ಭವಂತಿ ॥ ೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರಸಂವಾದೇ ಮಂದಾರನಿಂಬಾರ್ಕಕರವೀರವ್ರತವರ್ಣನಂ
ನಾಮ ಅಷ್ಟಾಶೀತಿತಮೋಽಧ್ಯಾಯಃ.



---

೮. ಅಯ್ಯಾ ರಾಜನೇ ! ಈರೀತಿ ಪುರುಷನಾಗಲಿ, ಸ್ತ್ರೀಯಾಗಲಿ ಭಕ್ತಿಯಿಂದ ಪ್ರತಿ ವರ್ಷಗಳಲ್ಲೂ ಸೂರ್ಯದೇವತಾಕವಾದ ಆ ಮಂದಾರಾದಿ ವೃಕ್ಷಗಳನ್ನು ಬೇರೆ ಬೇರೆಯಾಗಿ ಮೂಲಮಂತ್ರಪಠನಪೂರ್ವಕವಾಗಿ ಪೂಜಿಸಿದರೆ ಅವರೆಲ್ಲರಿಗೂ ಶರೀರದ ದೌರ್ಗಂಧ್ಯ ಮತ್ತು ದೌರ್ಭಾಗ್ಯ ಇವುಗಳು ನಾಶವಾಗಿ ಪಶುಸಂಪತ್ತು ವೃದ್ಧಿಯಾಗುವುದು.

೯. ಪುಷ್ಪಸಹಿತವಾದ ಬೇವಿನ ಮರ, ಮತ್ತು ಸಮೀಚೀನವಾದ ಎಕ್ಕೆ, ಪುಷ್ಪಿಸಿದ ಕರವೀರ, ಮತ್ತು ಮಂದಾರ ಈ ವೃಕ್ಷಗಳನ್ನು ಪುಷ್ಪ, ಅಕ್ಷತೆ, ಧೂಪ, ದೀಪ ಇತ್ಯಾದಿಗಳಿಂದ ಹೆಂಗಸರು ಪೂಜಿಸಿದರೆ ಅವರು ದೌರ್ಭಾಗ್ಯದೋಷರಹಿತೆಯರಾಗಿ ಎಲ್ಲಾ ಅಭಿಲಷಿತ ಸುಖಭೋಗಯುಕ್ತರಾಗಿ ಸೌಭಾಗ್ಯವತಿಯರಾಗುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಮಂದಾರ
ನಿಂಬಾರ್ಕ ಕರವೀರ ವ್ರತವರ್ಣನೆಯೆಂಬ ಎಂಭತ್ತೆಂಟನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಏಕೋನನವತಿತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಯಮಸ್ಯಾರಾಧನಂ ಬ್ರೂಹಿ ಶ್ರೀವತ್ಸ ಪುರುಷೋತ್ತಮ ।
ಕಥಂ ನ ಗಮ್ಯತೇ ಕೃಷ್ಣ ನರಕಂ ನರಕೇಸರಿನ್ ॥ ೧ ॥

॥ ಶ್ರೀಕೃಷ್ಣ ಉವಾಚ ॥

ದ್ವಾರವತ್ಯಾಂ ಪುರಾ ಪಾರ್ಥ ಸ್ನಾತೋಽಹಂ ಲವಣಾಂಭಸಿ ।
ದೃಷ್ಟವಾನ್ಮುನಿಮಾಯಾಂತಂ ಮುದ್ಗಲಂ ನಾಮ ಪಾರ್ಥಿವ ॥ ೨ ॥

---

## ಎಂಭತ್ತೊಂಭತ್ತನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—" ಓ ಶ್ರೀವತ್ಸಧಾರಿಯಾದ ಪುರುಷೋ ! ಓ ನರಸಿಂಹಾವತಾರಮಾಡಿದ ಶ್ರೀ ಕೃಷ್ಣ ಪರಮಾತ್ಮನೇ! ಯಾವುದ ಿ ಮಾನವನು ನರಕಗಮನವನ್ನು ತಪ್ಪಿಸಿಕೊಳ್ಳಬಹುದೋ ಅಂಥ ಯಮ ಧರ್ಮರಾಜನನ್ನು ಆರಾಧಿಸುವ ವ್ರತವನ್ನು ಹೇಳು '' ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ರಾಜನೇ ! ಪೂರ್ವದಲ್ಲಿ ನಾನು ದ್ವಾರಕಿಯಲ್ಲಿ ವಾಸಿಸುತ್ತಿದ್ದ ಕಾಲದಲ್ಲಿ, ಲವಣಸಮುದ್ರದಲ್ಲಿ ಸ್ನಾನ ಮಾಡಿ ಬರುವಾಗ, ಮುದ್ಗಲ ಎಂಬ ಮುನಿಯು ಅಭಿಮುಖವಾಗಿ ಬರುತ್ತಿರುವುದನ್ನು ಕಂಡೆನು.

ಪ್ರಜ್ವಲಂತಮಿವಾದಿತ್ಯಂ ತಪಸಾ ದ್ಯೋತಿತಾಂತರಂ ।
ತಂ ಪ್ರಣಮ್ಯಾರ್ಘ್ಯಸತ್ಕಾರೈಃ ಪಪ್ರಚ್ಛಾಹಂ ಯುಧಿಷ್ಠಿರ ॥ ೩ ॥

ಯಮಾದರ್ಶನನಾಮ್ನೈತದ್ವ್ರತಂ ಜಂತುಭಯಾಪಹಂ ।
ಕಥಯಾಮಾಸ ಸಕಲಂ ಮುದ್ಗಲೋ ವಿಸ್ಮಯಾನ್ವಿತಃ ॥ ೪ ॥

॥ ಮುದ್ಗಲ ಉವಾಚ ॥

ಅಕಸ್ಮಾತ್ಕೃಷ್ಣ ಮೂರ್ಛಾರ್ತೋ ಪತಿತೋಽಸ್ಮಿ ಧರಾತಲೇ ।
ಪಶ್ಯಾಮಿ ದಂಡಪುರುಷೈರ್ಮದ್ದೇಹಾತ್ಪ್ರಜ್ವಲನ್ನಿವ ॥ ೫ ॥

ಅಂಗುಷ್ಠಮಾತ್ರಃ ಪುರುಷೋ ಬಲಾದಾಕೃಷ್ಯ ರೋಷಿತೈಃ ।
ಬದ್ಧೋ ಯಮಭಟೈರ್ಗಾಢಂ ನೀಯತೇ ವೇದವಾದಿಭಿಃ ॥ ೬ ॥

---

೩. ಅಯ್ಯಾ ಯುಧಿಷ್ಠಿರನೇ ! ಆ ಋಷಿಯು ತಾನು ಮಾಡಿದ ತಪ್ತೋನುಷ್ಠಾನದ ತೇಜಸ್ಸಿನಿಂದ ದಿಗಂತಗಳನ್ನು ಪ್ರಕಾಶಿಸುತ್ತಿರುವನಾದ ಸೂರ್ಯನಂತೆಯೇ ಇದ್ದನು. ಆ ಮುನಿಗೆ ನಾನು ನಮಸ್ಕಾರಮಾಡಿ ಅರ್ಘ್ಯಾದಿ ಸತ್ಕಾರಗಳನ್ನು ಮಾಡಿ ಇದೇ ಪ್ರಶ್ನೆ ಮಾಡಿದೆನು.

೪. ಆ ನನ್ನ ಪ್ರಶ್ನೆಗೆ ಉತ್ತರವಾಗಿ ಆ ಮುದ್ಗಲ ಮಹರ್ಷಿಯು ಆಶ್ಚರ್ಯಯುಕ್ತನಾಗಿ ಪ್ರಾಣಿಭಯ ನಿವಾರಕನಾಗಿಯೂ ಯಮಾದರ್ಶನ ಎಂಬ ನಾಮಧೇಯವುಳ್ಳದ್ದಾಗಿಯೂ ಇರುವ ಈ ವ್ರತವನ್ನು ಅವನು ಈ ಪ್ರಕಾರ ಹೇಳತೊಡಗಿದನು.

೫-೬. ಮುದ್ಗಲ ಮುನಿವರ್ಯರು ಹೇಳುತ್ತಾರೆ—ಎಲೈ ಶ್ರೀ ಕೃಷ್ಣನೇ ! ಒಂದಾನೊಂದು ಸಮಯದಲ್ಲಿ ನಾನು ಮೂರ್ಛಿತನಾಗಿ ಭೂಮಿಯ ಮೇಲೆ ಬಿದ್ದೆನು. ಆಗ ಅಂಗುಷ್ಠಪರಿಮಾಣಕವಾದ ಹೃದಯದಲ್ಲಿ ವಾಸವಾಗಿರುವುದರಿಂದ ಅಂಗುಷ್ಠಮಾತ್ರನೆಂದು ಶ್ರುತಿಗಳಲ್ಲಿ ಹೇಳಲ್ಪಡುವವನಾಗಿಯೂ, ಅತಿ ಪ್ರಕಾಶ ಸ್ವರೂಪನಾಗಿಯೂ ಇರುವ, ಜೀವಾತ್ಮನನ್ನು ದಂಡಹಸ್ತರಾಗಿಯೂ, ಕೋಪಾಕ್ರಾಂತರಾಗಿಯೂ ಇರುವ ಯಮಭಟರು ನನ್ನ ಶರೀರದಿಂದ ಬಲಾತ್ಕಾರವಾಗಿ ಹೊರಗೆ ಸೆಳೆದು ವೇದವಾದಿಗಳಾದ ಅವರು ಘಟ್ಟಿಯಾಗಿ ಕಟ್ಟಿ ಒಯ್ಯುವುದನ್ನು ನಾನು ನೋಡಿದೆನು.

ಕ್ಷಣಾತ್ಸಭಾಯಾಂ ಪಶ್ಯಾಮಿ ಯಮಂ ಪಿಂಗಲಲೋಚನಂ ।
ಕೃಷ್ಣಾವದಾತಂ ರೌದ್ರಾಸ್ಯಂ ವೃತ್ಯಂ ವ್ಯಾಧಿಶತಾನ್ವಿತಂ ॥ ೭ ॥

ವಾತಪಿತ್ತಮಹಾಶ್ಲೇಷ್ಮೈರ್ಮೂರ್ತಿಮದ್ಭಿರುಪಾಸಿತಂ ।
ಕಾಸಶೋಫಜ್ವರಾತಂಕಸ್ಫೋಟಿಕಾಲೂತಮಾರಿಭಿಃ ॥ ೮ ॥

ಜ್ವರಗರ್ದಭಶೀರ್ಷಾದಿಭಗಂದರಮಲಕ್ಷಯೈ ।
ಗಂಡಮಾಲಾಕ್ಷಿರೋಗೈಶ್ಚ ಮೂತ್ರಕೃಚ್ಛ್ರರಹೋವ್ರಣೈಃ ॥ ೯ ॥

ವೇದನಾಭಿಃ ಪ್ರಮೇಹೈಶ್ಚ ಪಿಟಕೈರ್ಗಂಡಬುದ್ಬುದೈಃ ।
ವಿಷೂಚಿಕಾಗಲಗ್ರಾಹದರಿದ್ರಾಭೂತತಸ್ಕರೈಃ ॥ ೧೦ ॥

---

೭. ಅನಂತರ ಒಂದು ಕ್ಷಣಮಾತ್ರದಲ್ಲಿಯೇ ಪಿಂಗಳವರ್ಣದ ಕಣ್ಣುಗಳುಳ್ಳವನೂ, ಕೃಷ್ಣಗಾತ್ರನೂ, ರೌದ್ರಮುಖನೂ, ನೂರಾರು ವ್ಯಾಧಿಗಳಿಂದ ಸುತ್ತುವರಿಯಲ್ಪಟ್ಟವನೂ, ಆದ ಯಮಧರ್ಮರಾಜನು ಸಭೆಯಲ್ಲಿ ಕುಳಿತಿರುವುದನ್ನು ನಾನು ಕಂಡೆನು.

೮. ಆ ಸಭೆಯಲ್ಲಿ ಯಮನನ್ನು ವಾತ, ಪಿತ್ತ, ಮಹಾಶ್ಲೇಷ್ಮ ಇವುಗಳು ಮೂರ್ತಿಯುತಗಳಾಗಿ ಶರೀರಧಾರಣೆಮಾಡಿ ಸೇವಿಸುತ್ತಿದ್ದುವು. ಮತ್ತು ಗೂರಲು ಉಬ್ಬಸ, ಶೋಥೆ, ಜ್ವರ, ಸಂಧಿವಾತ, ಮಹೋದರ (ಊತ) ಮಾರೀರೋಗ ಇವುಗಳು ಆ ಯಮಧರ್ಮನ ಸಭೆಯಲ್ಲಿ ಅವನನ್ನು ಸೇವಿಸುತ್ತಿದ್ದುವು.

೯. ಅಲ್ಲದೆ ಜ್ವರ ಗರ್ಧಭಶೀರ್ಷ, ಭಗಂದರ, ಕ್ಷಯ, ಗಂಡಮಾಲೆ, ನೇತ್ರರೋಗ, ಮೂತ್ರಕೃಛ್ರ, ರಹೋವ್ರಣ,

೧೦. ಮತ್ತು ವೇದನೆಕೊಡುವ ಇತರ ರೋಗಗಳು, ಪ್ರಮೇಹ, ರಾಜಹುಣ್ಣು, ಗಂಡಬುದ್ಬುದ, ಸಿಡಬು, ಗಲಗ್ರಾಹ, ಗಂಡಾಮಾಲೆ, ಇತ್ಯಾದಿ ರೋಗವಿಶೇಷಗಳೂ, ಮತ್ತು ಭೂತವರ್ಗ, ತಸ್ಕರವರ್ಗ, ಇವುಗಳೂ ಅವನನ್ನು ಸೇವಿಸುತ್ತಿದ್ದುವು.

ಇತ್ಥಂ ಬಹುವಿಧೈ ರೌದ್ರೈರ್ನಾನಾರೂಪಭಯಂಕರೈಃ ।
ಕರಾಲಶಸ್ತ್ರಹಸ್ತೈಶ್ಚ ಸಂಗ್ರಾಮ್ಯೈರ್ನರಕೈಸ್ತಥಾ　　　॥ ೧೧ ॥

ರಾಕ್ಷಸೈರ್ದಾನವೈರುಗ್ರೈರುಪವಿಷ್ಟೈ ಪುರಃಸ್ಥಿತೈಃ ।
ಧರ್ಮಾಧಿಕರಣಸ್ಥೈಶ್ಚ ಚಿತ್ರಗುಪ್ತಾದಿಲೇಖಕೈಃ　　　॥ ೧೨ ॥

ಸಿಂಹೈರ್ವ್ಯಾಘ್ರೈರ್ವರಾಹೈಶ್ಚ ತರಕ್ಷೈರ್ಜಾನುಜಂಬುಕೈಃ ।
ವೃಶ್ಚಿಕೈರ್ದಂಶಮಶಕೈಃ ಶಿವಾಸರ್ಪೈಃ ಸಡುಂಡುಭೈ　　　॥ ೧೩ ॥

ಗೃಧ್ರೈರುಲೂಕೈರ್ಬಹುಭಿರ್ಮತ್ಕುಣೈರ್ಡಾಕಿನೀಗ್ರಹೈಃ ।
ಅಪಸ್ಮಾರಸ್ಮರೋನ್ಮಾದವೃದ್ಧಿಕಾರೇವತೀಗ್ರಹೈಃ　　　॥ ೧೪ ॥

---

೧೧. ಈ ರೀತಿ ಆ ಯಮನು ಬಹುವಿಧವಾದ ಕ್ರೂರರೋಗಗಳಿಂದಲೂ, ನಾನಾವಿಧ ರೂಪಿಗಳೂ, ಭಯಂಕರರೂ, ಕರಾಲಶಸ್ತ್ರಧಾರಿಗಳೂ, ಆಗಿರುವ ಭಟರಿಂದಲೂ, ಸಮೀಪದಲ್ಲಿ ರೌರವಾದಿ ಅನೇಕ ನರಕಗಳಿಂದಲೂ ಸಹಿತನಾಗಿದ್ದನು.

೧೨. ಮತ್ತು ಉಗ್ರರಾದ ರಾಕ್ಷಸರು, ದಾನವರು, ಮುಂತಾದವರಲ್ಲಿ ಕೆಲವರು ಕುಳಿತುಕೊಂಡೂ ಮುಂಭಾಗದಲ್ಲಿ ಕೆಲವರು ನಿಂತುಕೊಂಡೂ ಇರುವ ಆ ಸಭೆಯಲ್ಲಿ ಯಮನು ವಿರಾಜಿಸುತ್ತಿದ್ದನು. ಮತ್ತು ಅವನ ನ್ಯಾಯಸ್ಥಾನಕ್ಕೆ ಚಿತ್ರಗುಪ್ತಾದಿ ಲೇಖಕರುಗಳು ಬಂದಿದ್ದರು.

೧೩. ಮತ್ತು ಆ ಯಮನ ಆಸ್ಥಾನದಲ್ಲಿ ಅವನು ಸಿಂಹ, ಹುಲಿ, ಹಂದಿ, ಶಿವಂಗಿ, ಜಾನುಜಂಬುಕ, ಚೇಳು, ಕಾಡುನೊಣ, ನೊಣ, ಸೊಳ್ಳೆ, ಸರ್ಪ, ಮತ್ತು ಎರಡುತಲೆ ಉರಶಿಂಗಿ ಹಾವು,

೧೪. ಹದ್ದು, ಗೂಬೆ, ಅನೇಕ ತಗಣೆಗಳು, ಡಾಕಿನೀಗ್ರಹ, ಅಪಸ್ಮಾರ, ದದ್ರು, ಉನ್ಮಾದ, ವೃದ್ಧಿಕಾರೇವತೀಗ್ರಹ,

ಪಿಶಾಚೈರ್ಯಕ್ಷಕೂಷ್ಮಾಂಡೈಃ ಪಾಶಖಡ್ಗಧನುರ್ಧರೈಃ ।
ಮುಕ್ತಕೇಶೈಸ್ತ್ರಾಸಕರೈರ್ಭ್ರುಕುಟೀಕುಟಿಲಾನನೈಃ ॥ ೧೫ ॥

ಬೃಹತ್ಕಾಯೈರ್ನಾರಕೀಯೈಃ ಪಾಪಿಷ್ಠಾನಾಂ ನಿಯಾಮಕೈ ।
ಅಸಿಪತ್ರವನಾಂಗಾರೈಃ ಕ್ಷಾರಗರ್ತಾಂಡದಾರಕೈಃ ॥ ೧೬ ॥

ಅಸಿಭಂಗಾಮಿಷಚ್ಛೇದರುಧಿರಸ್ರಾವಕಾದಿಭಿಃ ।
ಆಸ್ಥಾನೇ ಸಂಭೃತೋ ಭಾತಿ ಯಮೋ ಮೃತ್ಯೂಪಮೋಪಮಃ ॥ ೧೭ ॥

ಸ ಆಹ ಕಿಂಕರಾನ್ಸರ್ವಾನ್ಧರ್ಮರಾಜೋ ಜನಾರ್ದನ ।
ಕಿಮಯಂ ಮುನಿರಾನೀತೋ ಯುಷ್ಮಾಭಿರ್ಭ್ರಾಂತಮಾನಸೈಃ ॥ ೧೮ ॥

---

೧೫. ಮತ್ತು ಪಿಶಾಚಿಗಳು, ಯಕ್ಷಗಣ, ಕೂಷ್ಮಾಂಡಗ್ರಹಾದಿಗಳು, ತಮ್ಮ ಹಸ್ತಗಳಲ್ಲಿ ಪಾಶ, ಖಡ್ಗ, ಧನುಸ್ಸು ಇವುಗಳನ್ನು ಧರಿಸಿದವರೂ ಕೇಶಗಳನ್ನು ಕೆದರಿಕೊಂಡವರೂ ಹುಬ್ಬುಗಂಟಿಕ್ಕಿದ ಮುಖಗಳಿಂದ ಭಯಪಡಿಸುವವರೂ,

೧೬. ಮತ್ತು ದೊಡ್ಡಶರೀರವುಳ್ಳವರೂ ಆಗಿದ್ದರು. ಪಾಪಿಷ್ಠರಿಗೆ ನಿಯಾಮಕರಾಗಿ ಇರುತ್ತ, ನರಕಗಳಲ್ಲಿ ಪಾಪಿಗಳಿಗೆ ಯಾತನೆಕೊಡುವ ನಾರಕ ಪುರುಷರೂ ಆ ಸಭೆಯಲ್ಲಿದ್ದರು. ಮತ್ತು ಅಸಿಪತ್ರವನ, ಅಂಗಾರರಾಶಿ, ಉಪ್ಪು ನೀರು ತುಂಬಿಸಿದ ಗುಣಿ, ಅಂಡದಾರಕಾಯಂತ್ರ,

೧೭. ಮತ್ತು ಖಡ್ಗದಂತೆ ತುಂಡುಮಾಡುವ ಯಂತ್ರ, ಮಾಂಸಕತ್ತರಿಸುವ ಯಂತ್ರ, ರಕ್ತಸುರಿಸುವ ಯಂತ್ರ, ಇತ್ಯಾದಿಗಳನ್ನು ತನ್ನ ಆಸ್ಥಾನದಲ್ಲಿ ಇಟ್ಟುಕೊಂಡಿರುವ ಆ ಯಮನು, ಮೃತ್ಯುವಿಗೂ ಮೃತ್ಯುಸ್ವರೂಪನೆಂದು ಹೇಳುವಮಟ್ಟಿಗೆ ಅಸಾಧಾರಣನಾಗಿ ಪ್ರಕಾಶಿಸುತ್ತಿದ್ದನು.

೧೮. ಓ ಕೃಷ್ಣನೇ ! ಆಗ ಆ ಯಮಧರ್ಮರಾಜನು ಎಲ್ಲಾ ಭಟರನ್ನೂ ಕರೆದು " ಓ ಭಟರೇ ! ನೀವು ಚಿತ್ತವಿಭ್ರಾಂತರಾಗಿ ಈ ಮುದ್ಗಲಮುನಿಯನ್ನು ಏತಕ್ಕೆ ಕರೆದುಕೊಂಡು ಬಂದಿರಿ ? " ಎಂದನು.

ಮುದ್ಗಲೋ ನಾಮ ಕೌಂಡಿನ್ಯೇ ನಗರೇ ಭೀಷ್ಮಕಾತ್ಮಜಃ ।
ಕ್ಷತ್ರಿಯೋಽಸ್ತಿ ಸ ಆನೇಯಃ ಕ್ಷೀಣಾಯುಸ್ತ್ಯಜ್ಯತಾಂ ಮುನಿಃ ॥ ೧೯ ॥

ಇತ್ಯುಕ್ತಾಸ್ತೇ ಗತಾಸ್ತಸ್ಮಾದಾಯಾತಾಃ ಪುನರೇವ ತೇ ।
ಊಚುರ್ಯಮಭಟಾಃ ಪ್ರಹ್ವಾ ಧರ್ಮರಾಜಂ ಸವಿಸ್ಮಯಾಃ ॥ ೨೦ ॥

ಅಸ್ಮಾಭಿಸ್ತತ್ರ ಕ್ಷೀಣಾಯುರ್ನ ದೇಹೀ ಲಕ್ಷಿತೋ ಗತೈಃ ।
ನ ಜಾನೀಮೋ ಭಾನುಸೂನೋ ಕಥಂಚಿದ್ಭ್ರಾಂತಮಾನಸಾಃ ॥ ೨೧ ॥

॥ ಯಮರಾಜ ಉವಾಚ ॥

ಪ್ರಾಯೇಣ ತೇ ನ ದೃಶ್ಯಂತೇ ಪುರುಷೈರ್ಯಮಕಿಂಕರೈಃ ।
ಕೃತಾ ತ್ರಯೋದಶೀ ಯೈಸ್ತು ನರಕಾರ್ತಿವಿನಾಶಿನೀ ॥ ೨೨ ॥

---

೧೯. ಕೌಂಡಿನ್ಯವೆಂಬ ನಗರದಲ್ಲಿ ಭೀಷ್ಮಕನ ಮಗನಾದ ಮುದ್ಗಲನೆಂಬ ಒಬ್ಬ ಕ್ಷತ್ರಿಯನು ಕ್ಷೀಣಾಯುಷ್ಯನಾಗಿದ್ದಾನೆ. ಅವನನ್ನು ಸೆಳೆದುಕೊಂಡು ಬನ್ನಿ ಈ ಮುನಿಯನ್ನು ಬಿಟ್ಟುಬಿಡಿ. ಎಂದು ಹೇಳಲು ಅದರಂತೆ ಮಾಡಿದರು.

೨೦. ಯಮಧರ್ಮರಾಜನ ಅಪ್ಪಣೆಯನ್ನು ಪಡೆದ ಆ ಯಮಭಟರು ಆ ನಗರಿಗೆ ಹೋಗಿ, ಪುನಃ ಅಲ್ಲಿಂದ ಹಿಂದಿರುಗಿ ಬಂದು ನಮ್ರರಾಗಿ ಆಶ್ಚರ್ಯದಿಂದ ಯಮಧರ್ಮರಾಜನಲ್ಲಿ ಇಂತು ವಿಜ್ಞಾಪಿಸಿದರು.

೨೧. ಸ್ವಾಮಿ ಸೂರ್ಯಪುತ್ರನಾದ ಯಮನೇ ! ನಾವು ಕೌಂಡಿನ್ಯನಗರಿಗೆ ಹೋಗಿ ನೋಡಿದಾಗ ಅಲ್ಲಿ ಕ್ಷೀಣಾಯುವಾದ ಒಬ್ಬ ಪುರುಷನೂ ಇರಲಿಲ್ಲ. ಅಂತಹವನು ಯಾವನೆಂದು ನಮಗೆ ತಿಳಿಯದು. ಇದರಿಂದ ನಾವು ಭ್ರಾಂತ ಮನಸ್ಕರಾಗಿರುವೆವು ಎಂದರು.

೨೨. ಯಮರಾಜನು ಹೇಳುತ್ತಾನೆ—ಎಲೈ ಭಟರೇ ! ನರಕಪೀಡಾ ನಿವಾರಕವಾದ ತ್ರಯೋದಶೀ ವ್ರತವನ್ನು ಯಾರು ಆಚರಿಸಿರುತ್ತಾರೋ ಅಂತಹ ವರು ಪ್ರಾಯಃ ಯಮಕಿಂಕರರಿಗೆ ದೃಗ್ಗೋಚರರಾಗುವುದಿಲ್ಲ.

ಉಜ್ಜಯಿನ್ಯಾಂ ಪ್ರಯಾಗೇ ವಾ ಭೈರವೇ ವಾಥ ಯೇ ಮೃತಾಃ ।
ತಿಲಾನ್ನಗೋಹಿರಣ್ಯಾದಿ ದತ್ತಂ ಯೈಶ್ಚ ಗವಾಹ್ನಿಕಂ ॥ ೨೩ ॥

॥ ದೂತ ಉವಾಚ ॥

ಕೀದೃಶಂ ತದ್ವ್ರತಂ ಸ್ವಾಮಿಞ್ಶಂಸ ನೋ ಭಾಸ್ಕರಾತ್ಮಜ ।
ಕಿಂ ತತ್ರ ವದ ಕರ್ತವ್ಯಂ ಪುರುಷೈಸ್ತವ ತುಷ್ಟಿದಂ ॥ ೨೪ ॥

॥ ಯಮ ಉವಾಚ ॥

ಪೂರ್ವಾಹ್ಣೇ ಮಾರ್ಗಶೀರ್ಷಾದೌ ವರ್ಷಮೇಕಂ ನಿರಂತರಂ ।
ತ್ರಯೋದಶ್ಯಾಂ ಸೌಮ್ಯದಿನೇ ಸೂರ್ಯಾಂಗಾರಕವರ್ಜಿತಃ ॥ ೨೫ ॥

ಮಮ ನಾಮ್ನಾ ದ್ವಿಜಾನಷ್ಟೌ ಪಂಚ ಚೈವ ಸಮಾಹ್ವಯೇತ್ ।
ವೇದಾಂತಗಾಞ್ಜಾತಿಶುದ್ಧಾಞ್ಶಾಂತಚಿತ್ತಾನ್ಸುಶೋಭನಾನ್ ॥ ೨೬ ॥

---

೨೩. ಮತ್ತು ಉಜ್ಜಯಿನಿ, ಪ್ರಯಾಗ, ಕಾಲಭೈರವ (ಕಾಶಿ) ಈ ಕ್ಷೇತ್ರಗಳಲ್ಲಿ ಮರಣಹೊಂದಿದವರು; ತಿಲ, ಅನ್ನ, ಗೋವು, ಹಿರಣ್ಯ ಇವುಗಳನ್ನು ದಾನಮಾಡಿದವರು; ಮತ್ತು ಗವಾಹ್ನಿಕವನ್ನು ಆಚರಿಸುವರು; ಇವರೆಲ್ಲರೂ ಪ್ರಾಯಶಃ ಯಮಭಟರಿಗೆ ಕಾಣಿಸಿಕೊಳ್ಳುವುದಿಲ್ಲ ಎಂದನು.

೨೪. ಯಮದೂತನು ಹೇಳುತ್ತಾನೆ—"ಸೂರ್ಯಪುತ್ರನಾದ ಓ ಸ್ವಾಮಿಯೇ! ತ್ರಯೋದಶಿಯಲ್ಲಿ ಆಚರಣೀಯವೆಂದು ನೀನು ಹೇಳಿದ ಆ ವ್ರತವು ಯಾವುದು? ನಿನಗೆ ಸಂತೋಷದಾಯಕವಾದ ಆ ವ್ರತದಲ್ಲಿ ಪುರುಷನು ಏನುಮಾಡಬೇಕೆಂಬುದನ್ನು ಹೇಳು" ಎಂದನು.

೨೫. ಯಮಧರ್ಮರಾಜನು ಹೇಳುತ್ತಾನೆ—ಓ ದೂತನೇ! ಮಾರ್ಗಶೀರ್ಷಮಾಸದಲ್ಲಿ ಬುಧವಾರಯುಕ್ತವಾಗಿ ತ್ರಯೋದಶೀ ತಿಥಿಯು ಬಂದಾಗ ಅಂದಿನಿಂದ ಮೊದಲ್ಗೊಂಡು ಒಂದುವರ್ಷದವರೆಗೆ, ಮಧ್ಯೆ ಬಿಡದೆ ನಿರಂತರವಾಗಿ ಪ್ರತಿತ್ರಯೋದಶಿಯಲ್ಲೂ ಪೂರ್ವಾಹ್ಣದಲ್ಲಿ ಈ ವ್ರತವನ್ನು ಆಚರಿಸಬೇಕು. ಭಾನುವಾರ ಅಥವಾ ಮಂಗಳವಾರ ಇವು, ತ್ರಯೋದಶೀ ತಿಥಿಯೊಡನೆ ಸೇರಿ ಬಂದರೆ ಆಗ ಈ ವ್ರತವನ್ನು ಆಚರಿಸಬಾರದು.

೨೬. ವೇದಾಂತಶಾಸ್ತ್ರಜ್ಞರೂ ಸತ್ಕುಲಪ್ರಸೂತರೂ, ಪರಿಶುದ್ಧರೂ, ಶಾಂತಚಿತ್ತರೂ, ಮಂಗಳಮೂರ್ತಿಗಳೂ, ಆಗಿರುವ ಹದಿಮೂರುಜನ ಬ್ರಾಹ್ಮಣರನ್ನು ನನ್ನ ಪ್ರೀತ್ಯರ್ಥವಾಗಿ ಭೋಜನಕ್ಕೆ ಆಹ್ವಾನಿಸಬೇಕು.

ವಾಚಕಶ್ಚಾಪಿ ತನ್ಮಧ್ಯೇ ಸದಾ ಭಾಸ್ಕರವಲ್ಲಭಾ೯ |
ದಿನಸ್ಯ ಪ್ರಥಮೇ ಯಾಮೇ ಶುಚೌ ದೇಶೇ ಸಮಾಸ್ಥಿತಾ೯ || ೨೭ ||

ಅಂತರ್ವಾಸೋವೃತಾನ್ಸ್ವಕ್ತಾನ್ಸ್ವೋಪದಿಷ್ಟದಿಗುನ್ಮುಖಾ೯ |
ಅಭ್ಯಂಗಯೇಚ್ಛಿರೋದೇಶಾತ್ತಿಲತೈಲೇನ ಮರ್ದಯೇತ್ || ೨೮ ||

ಸ್ನಾಪಯೇದ್ಗಂಧಕಾಷಾಯೈಃ ಸುಖೋಷ್ಣಾಂಬುಭಿರೇವ ಚ |
ಪೃಥಕ್ಪೃಥಕ್ಸ್ನಾಪಯಿತ್ವಾ ಸರ್ವಾನೇವ ದ್ವಿಜೋತ್ತಮಾನ್ || ೨೯ ||

ಶುಚಿರ್ಭೂತ್ವಾ ತಥಾಚಾಂತೋ ವ್ರತೀ ಭಕ್ತಿಪರಾಯಣಃ |
ಸ್ವಯಂ ಸಂಭೃತ್ಯ ಶುಶ್ರೂಷಾಂ ತೇಷಾಂ ಕೃತ್ವಾ ನರೋತ್ತಮ || ೩೦ ||

---

೨೭. ಆ ಹದಿಮೂರು ಜನರಲ್ಲಿ ಒಬ್ಬನು ವ್ರತವಾಚಕನಾಗಿರಬೇಕು. ಪ್ರಾಯಃ ಸೂರ್ಯಾರಾಧನೆಮಾಡಿ ಆ ಸೂರ್ಯನ ಪ್ರಸಾದ ಸಂಪಾದಿಸಿದವರಾಗಿ ಇರುವವರನ್ನೇ ಹುಡುಕಿ ಕರೆದಿರಬೇಕು. ಆ ದಿನ ಅವರನ್ನು ಕುಳ್ಳಿರಿಸಲು ಶುಚಿಯಾದ ಸ್ಥಳ ಮಾಡಿರಬೇಕು.

೨೮. ಸೂರ್ಯಭಕ್ತರಾದ ಆ ಬ್ರಾಹ್ಮಣರನ್ನು ಶುಭಕಾರ್ಯಗಳಿಗೆ ಉಕ್ತವಾದ ಪೂರ್ವ ಅಥವಾ ಉತ್ತರದಿಕ್ಕಿಗೆ ಅಭಿಮುಖವಾಗಿ ಕುಳ್ಳಿರಿಸಬೇಕು. ಆ ವಿಪ್ರರು ಒಳಗೆ ಕೌಪೀನವನ್ನು ಧರಿಸಿದವರಾಗಿರಬೇಕು. ಅಂತಹ ಬ್ರಾಹ್ಮಣರಿಗೆ ಎಳ್ಳೆಣ್ಣೆಯನ್ನು ಶಿರಸ್ಸಿನಿಂದ ಮೊದಲ್ಗೊಂಡು ಸರ್ವಾಂಗಗಳಿಗೂ ಹಚ್ಚಬೇಕು.

೨೯. ಆ ಎಲ್ಲ ಬ್ರಾಹ್ಮಣೋತ್ತಮರಿಗೂ ಬೇರೆಬೇರೆಯಾಗಿ ಸುಗಂಧ ಕಷಾಯಯುಕ್ತವಾಗಿಯೂ, ಸುಖೋಷ್ಣವಾಗಿಯೂ ಇರುವ, ಜಲದಿಂದ ಅಭ್ಯಂಗ ಸ್ನಾನವನ್ನು ಮಾಡಿಸಬೇಕು.

೩೦. ಅಯ್ಯಾ ರಾಜನೇ ! ಈ ವ್ರತಾನುಷ್ಠಾನಮಾಡುವ ಪುರುಷನು ಸ್ವತಃ ಆ ಬ್ರಾಹ್ಮಣೋತ್ತಮರ ಶುಶ್ರೂಷೆಯನ್ನು ಭಕ್ತಿಯಿಂದ ಮಾಡಿ, ಆಮೇಲೆ ತಾನು ಸ್ನಾನ ಮತ್ತು ಆಚಮನಮಾಡಿ ಶುಚಿಯಾಗಬೇಕು.

ಪ್ರಾಙ್ಮುಖಾನುಪವಿಷ್ಟಾಂಶ್ಚ ತ್ರಯೋದಶ ಪೃಥಕ್ಪೃಥಕ್ ।
ಭೋಜಯೇಚ್ಛಾಲಿಮುದ್ಗಾದ್ಯಂ ಗುಡಪೂಪಾನ್ಸುಪಾಚಿತಾನ್ ॥ ೩೧ ॥

ಸುವ್ಯಂಜನಂ ಸುಪಕ್ವಾನ್ನಂ ಭೂಯೋಭೂಯೋ ನಿವೇದಯೇತ್ ।
ಶುಚಿರ್ಭೂತ್ವಾ ತಥಾಚಾಂತೋ ಹ್ಯರ್ಚಯೇತ್ತಿಲತಂಡುಲೈಃ ॥ ೩೨ ॥

ಪ್ರಸ್ಥಮಾತ್ರೈರಥೈಕೈಕಂ ತಾಮ್ರಪಾತ್ರಸಮನ್ವಿತೈಃ ।
ಸದಕ್ಷಿಣೈಃ ಸಚ್ಛತ್ರೈಶ್ಚ ಜಲಕುಂಭೈಃ ಪವಿತ್ರಕೈಃ ॥ ೩೩ ॥

ಚರ್ಮಪ್ರಾವರಣೈಃ ಶ್ರೇಷ್ಠೈಸ್ತೇಷಾಂ ದತ್ವಾ ವಿಸರ್ಜಯೇತ್ ।
ಮಂತ್ರೇಣಾನೇನ ರಾಜೇಂದ್ರ ಅರ್ಚಯೇತ್ತಾನ್ಪೃಥಕ್ಸುಧೀಃ ।
ಬ್ರಾಹ್ಮಣಾನ್ವಾಚಕಂ ವಾಪಿ ಪಂಕ್ತಿಭೇದಂ ನ ಕಾರಯೇತ್ ॥ ೩೪ ॥

---

೩೧. ಆಮೇಲೆ ಆ ಹದಿಮೂರುಮಂದಿ ಬ್ರಾಹ್ಮಣರನ್ನೂ ಬೇರೆಬೇರೆ ಆಸನದಲ್ಲಿ ಪೂರ್ವಾಭಿಮುಖವಾಗಿ ಕುಳ್ಳಿರಿಸಿ ಶಾಲ್ಯಾನ್ನ, ಉದ್ದಿನಭಕ್ಷ್ಯ, ಸುಪಕ್ವಗಳಾದ ಗುಡಾಪೂಪ ಇವುಗಳಿಂದ ಭೋಜನಮಾಡಿಸಬೇಕು.

೩೨. ಮತ್ತು ಚೆನ್ನಾಗಿರುವ ವ್ಯಂಜನ, ಮೊಸರು, ಮೊದಲಾದ ಪದಾರ್ಥಗಳನ್ನೂ, ಪಕ್ವಾನ್ನವನ್ನೂ ಅವರಿಗೆ ಸಮೃದ್ಧಿಯಾಗಿ ಬಡಿಸಬೇಕು. ಈ ರೀತಿ ಭೋಜನ ಮಾಡಿಸಿದ ಮೇಲೆ ತಾನೂ ಆಚಮನಮಾಡಿ, ಪರಿಶುದ್ಧನಾಗಿ ತಿಲಮಿಶ್ರಮಾಡಿದ ಅಕ್ಷತೆಗಳಿಂದ ಅವರಿಗೆ ಪೂಜೆಮಾಡಬೇಕು.

೩೩. ಅನಂತರ ಆ ಬ್ರಾಹ್ಮಣರಿಗೆ ಪ್ರತ್ಯೇಕವಾಗಿ ಒಂದುಸೇರು ಹಿಡಿಯುವ ಒಡೊಂದು ತಾಮ್ರಪಾತ್ರೆಯು ಪವಿತ್ರವಾದ ಉದಕುಂಭೆ, ದಕ್ಷಿಣೆ, ಛತ್ರಿ, ಇವುಗಳನ್ನೂ,

೩೪. ಮತ್ತು ಶ್ರೇಷ್ಠವಾದ ಕೃಷ್ಣಾಜಿನದ ಮೇಲುಹೊದ್ದಿಕೆಯನ್ನೂ ಆ ಮಂತ್ರವತ್ತಾಗಿ ದಾನಮಾಡಿ ಕಳುಹಿಸಬೇಕು. ಅಯ್ಯಾ ರಾಜೇಂದ್ರನೇ! ಆ ಬ್ರಾಹ್ಮಣ ಪೂಜೆಯ ಕಾಲದಲ್ಲಿಯೂ ಪಂಡಿತನಾದ ವ್ರತಿಯು ಈ ಮುಂದಿನ ಮಂತ್ರಪೂರ್ವಕ ಪೂಜಿಸಬೇಕು. ಭೋಜನಕಾಲದಲ್ಲಿ ಬಡಿಸುವಾಗ ಆ ಬ್ರಾಹ್ಮಣರಿಗೂ ಈ ವ್ರತವಾಚಕನಾದ ವಿಪ್ರನಿಗೂ ಏಕರೀತಿಯಾಗಿ, ಪರಿವೇಷಣ ಪೂಜೆ ಇತ್ಯಾದಿಗಳನ್ನು ಮಾಡಿ ಸತ್ಕರಿಸಬೇಕು. ಪಂಕ್ತಿಭೇದ ಮಾಡಬಾರದು.

" ಓಂ ನಮಃ ಶನೈಶ್ಚರೋ ಮೃತ್ಯುರ್ದಂಡಹಸ್ತೋ ವಿನಾಶಕಃ ।
ಅಭಾವಃ ಪ್ರಲಯಃ ಸೌರಿರ್ದುಃಖಘ್ನಃ ಶಮನೋಂತಕಃ ॥ ೩೫ ॥

ಲೋಕಪಾಲೋ ಹ್ಯತಿಕ್ರೂರೋ ರೌದ್ರೋ ಘೋರಾನನಃ ಶಿವಃ ।
ಯಮಃ ಪ್ರಸನ್ನಮಾನಸ್ಕೋ ದದ್ಯಾನ್ಮೇಽಭಯದಕ್ಷಿಣಾಂ (ಸ್ವಾಹಾ) ॥

ಇತ್ಯುಕ್ತ್ವಾ ಸಂಪ್ರಯಚ್ಛೇಚ್ಚ ದೇಯಂ ದತ್ವಾ ವ್ರತೀ ಪುನಃ ।
ದ್ವಿಜಾಂಶ್ಚಾನುವ್ರಜೇತ್ತೃಪ್ತಾನ್ಗೃಹಾಂಶ್ಚಾರ್ಚಿತಚರ್ಚಿತಾನ್ ॥೩೭॥

ಏವಂ ಯಃ ಪುರುಷಃ ಕಂಚಿತ್ಸಕೃದ್ವ್ರತಮಿದಂ ಚರೇತ್ ।
ಸ ಮೃತೋಽಪಿ ನರೋ ಮರ್ತ್ಯೋ ನಾಯಾತಿ ಮಮ ಮಂದಿರಂ ॥೩೮॥

---

೩೫. ನಿದಾನವಾಗಿ ಸಂಚರಿಸುವವನೂ, ದಂಡಹಸ್ತನೂ, ಸರ್ವಪ್ರಾಣಿ ಸಂಹಾರಕನಾದುದರಿಂದ; ಮೃತ್ಯು, ವಿನಾಶಕ, ಅಭಾವ, ಪ್ರಳಯ ಈ ನಾಮಧೇಯಗಳುಳ್ಳವನೂ, ಸೂರ್ಯಪುತ್ರನೂ, ದುಃಖನಿವಾರಕನೂ, ಪ್ರಾಣಿಗಳಿಗೆ ಅಂತಕನೂ, ಆಗಿರುವ ಯಮನೇ ! ನಿನಗೆ ನಮಸ್ಕಾರ ಎಂದು ಈ ಮಂತ್ರದ ಅರ್ಥ.

೩೬. "ಲೋಕಪಾಲೋಽಹ್ಯತಿ ಕ್ರೂರೋ ರೌದ್ರೋ ಘೋರಾನನಃ ಶಿವಃ ಯಮಃ ಪ್ರಸನ್ನಮಾನಸ್ಕೋ ದದ್ಯಾನ್ಮೇಽಭಯದಕ್ಷಿಣಾಂ " ಇದು ಪ್ರಾರ್ಥನಾ ಮಂತ್ರ. ಲೋಕಪಾಲಕನೂ, ಅತಿಕ್ರೂರನೂ, ಭಯಂಕರನೂ, ಆಗಿರುವ ಯಮ ಧರ್ಮರಾಜನು ನನ್ನಲ್ಲಿ ಪ್ರಸನ್ನವಾದ ಮನಸುಳ್ಳವನಾಗಿ, ನನಗೆ ಅಭಯದಕ್ಷಿಣೆ ಯನ್ನು ಕರುಣಿಸಲಿ ಎಂದು ಈ ಶ್ಲೋಕದ ಅರ್ಥ.

೩೭. ವ್ರತಾನುಷ್ಠಾನ ಮಾಡುವಾತನು ಈ ಮಂತ್ರವನ್ನು ಪಠಿಸಿ ಬ್ರಾಹ್ಮಣರನ್ನು ಪೂಜೆಮಾಡಿ, ಅವರಿಗೆ ಕೊಡಬೇಕಾದ ದಾನವನ್ನು ಕೊಟ್ಟು, ಗಂಧಾನುಲಿಪ್ತರಾಗಿಯೂ ಪೂಜಿತರಾಗಿಯೂ ತೃಪ್ತರಾಗಿಯೂ ಇರುವ ಆ ಬ್ರಾಹ್ಮಣರನ್ನು, ಅವರ ಗೃಹಗಳವರೆಗೆ ಹಿಂಬಾಲಿಸಿ ಹೋಗಿ ಕಳುಹಿಸಬೇಕು.

೩೮. ಈ ರೀತಿಯಾಗಿ ಈ ವ್ರತವನ್ನು ಯಾವನು ಒಂದುಸಲ ಆಚರಿಸು ವನೋ, ಆ ಪುರುಷನು ಮರಣಹೊಂದಿದ ಮೇಲೆ ಯಮಪುರಿಗೆ ಬರುವುದಿಲ್ಲ.

ಅದೃಷ್ಟೋ ಮಮ ಮಾಯಾಭಿರ್ವಿಮಾನೇನಾರ್ಕಮಂಡಲಂ ।
ಸ ಚಾಯಾತಿ ಪುರೀಂ ವಿಷ್ಣೋಸ್ತತಃ ಶಿವಪುರಂ ವ್ರಜೇತ್ ॥ ೩೯ ॥

ಕೃತಂ ಚೀರ್ಣಂ ವ್ರತಂ ತೇನ ಮುದ್ಗಲೇನ ಮಮೋದಿತಂ ।
ತೇನ ನಾಯಾತ್ಯಸೌ ಲೋಕೇ ಮಮ ಕ್ಷತ್ರಿಯಪುಂಗವಃ ॥ ೪೦ ॥

ಇತಿ ಕಾಲವಚಃ ಶ್ರುತ್ವಾ ತ್ಯೇಪಿ ದೂತಾ ಗತಾಸ್ತು ಮೇ ।
ಅಹಂ ಪುನಃ ಸಮಾಪನ್ನಸ್ತೂರ್ಣಂ ಕಾಲೈರ್ವಿಸರ್ಜಿತಃ ।
ಸ್ವಶರೀರಂ ಪುನಃ ಪ್ರಾಪ್ಯ ನೀರೋಗಃ ಪುನರುತ್ಥಿತಃ ॥ ೪೧ ॥

ತ್ವಾಂ ದೃಷ್ಟುಮಾಗತಃ ಪ್ರೋಕ್ತಮೇತದ್ವೃತ್ತಂ ಮಯಾ ತವ ।
ಇತ್ಯುಕ್ತ್ವಾ ಮುದ್ಗಲೋ ರಾಜನ್ಪ್ರಯಾತಃ ಸ್ವಗೃಹಂ ಪ್ರತಿ ॥ ೪೨ ॥

---

೩೯. ಮತ್ತು ಆ ಪುರುಷನು ಮಾಯಾವಿಗಳಾದ ನನ್ನ ದೂತರ ದೃಷ್ಟಿಗೆ ಗೋಚರನಾಗದೆ, ವಿಮಾನಾರೂಢನಾಗಿ ಸೂರ್ಯಮಂಡಲಕ್ಕೆ ಹೋಗಿ, ಅಲ್ಲಿಂದ ವಿಷ್ಣುಪುರಕ್ಕೆ ಬರುವನು. ಅನಂತರ ಅಲ್ಲಿಂದ ಶಿವಪುರಕ್ಕೆ ಹೋಗುವನು.

೪೦. ಯಾವ ಮಹಾತ್ಮನು ನಾನು ಹೇಳಿದ ಈ ವ್ರತವನ್ನು ಆಚರಿಸುತ್ತಾನೆಯೋ ಅವನು ಆದ್ದರಿಂದ ನನ್ನ ಲೋಕಕ್ಕೆ ತಕ್ಕವನಲ್ಲ. ಪ್ರಕೃತ ಭೀಷ್ಮಕ ಪುತ್ರನೂ ಕ್ಷತ್ರಿಯಶ್ರೇಷ್ಠನೂ ಆದ ಈ ಮುದ್ಗಲನು, ಈ ವ್ರತಾಚರಣೆ ಮಾಡಿದ್ದರಿಂದ ನನ್ನ ಲೋಕಕ್ಕೆ ಬರುವವನಲ್ಲ ಎಂದನು.

೪೧. ಈ ರೀತಿ ಯಮನು ಹೇಳಿದ ಮಾತನ್ನು ಕೇಳಿ, ಆ ಯಮದೂತರು ನನ್ನ ಸಮೀಪಕ್ಕೆ ಬಂದು ನನ್ನನ್ನು ಬಿಟ್ಟುಬಿಟ್ಟರು. ನಾನು ಆ ಯಮಕಿಂಕರರ ಬಂಧನದಿಂದ ಮುಕ್ತನಾಗಿ, ಶೀಘ್ರವಾಗಿ ಅಲ್ಲಿಂದ ಈ ಲೋಕಕ್ಕೆ ಬಂದು, ಪುನಃ ಸ್ವಶರೀರದಲ್ಲಿ ಪ್ರವೇಶಮಾಡಿ, ನೀರೋಗಿಯಾಗಿ ಪುನಃ ಎದ್ದೆನು.

೪೨. ಅಯ್ಯಾ ಧರ್ಮರಾಜನೇ ! ಆ ಮುದ್ಗಲಮಹರ್ಷಿಯು ನನ್ನಲ್ಲಿ ಇಷ್ಟು ಹೇಳಿದ್ದಲ್ಲದೆ " ಓ ಕೃಷ್ಣ ! ಈಗ ನಿನ್ನ ದರ್ಶನಾಕಾಂಕ್ಷೆಯಿಂದ ನಾನು ಇಲ್ಲಿಗೆ ಬಂದೆನು. ನನ್ನ ವಿಷಯವನ್ನೆಲ್ಲಾ ನಿನಗೆ ಹೇಳಿದೆನು " ಎಂದು ಹೇಳಿ ತನ್ನ ಮನೆಗೆ ಹೊರಟುಹೋದನು.

ಇದಂ ಕುರುಷ್ವ ಕೌಂತೇಯ ತ್ವಮಪ್ಯತ್ರ ಮಹೀತಲೇ ।
ತತೋ ಯಾಸ್ಯಸ್ಯಸಂದಿಗ್ಧಂ ವಂಚಯಿತ್ವಾ ಯಮಂ ಮೃತಃ ॥ ೪೩ ॥

ಏವಂ ಯೇಽನ್ಯೇಽಪಿ ಪುರುಷಾಃ ಸ್ತ್ರಿಯೋ ವಾಪಿ ಯುಧಿಷ್ಠಿರ ।
ತ್ರಯೋದಶ್ಯಾಂ ತ್ರಯೋದಶ್ಯಾಂ ಯೇ ಚರಿಷ್ಯಂತಿ ಭೂತಳೇ ॥ ೪೪ ॥

ಏಕಭಕ್ತೇನ ನಕ್ತೇನ ಉಪವಾಸೇನ ವಾ ಪುನಃ ।
ಯಮಾದರ್ಶನಮಾಖ್ಯಾತಂ ವ್ರತಂ ಸರ್ವವ್ರತೋತ್ತಮಂ ॥ ೪೫ ॥

ಸರ್ವಪಾಪವಿನಿರ್ಮುಕ್ತಾ ದಿವ್ಯಯಾನಂ ಸಮಾಶ್ರಿತಾಃ ।
ಯಾಸ್ಯಂತೀಂದ್ರಪುರಂ ಹೃಷ್ಟಾ ಅಪ್ಸರೋಗಣಸಂವೃತಾಃ ॥ ೪೬ ॥

ದೋಧೂಯಮಾನಾಶ್ಚಮರೈಃ ಸ್ತೂಯಮಾನಾಃ ಸುರಾಸುರೈಃ ।
ಗಂಧರ್ವತೂರ್ಯನಾದೇನ ಛತ್ರಪಂಕ್ತಿವಿರಾಜಿತಾಃ ॥ ೪೭ ॥

೪೩. ಅಯ್ಯಾ ಕುಂತೀಪುತ್ರನೇ! ನೀನೂ ಭೂಲೋಕದಲ್ಲಿ ಈ ವ್ರತವನ್ನು ಆಚರಿಸು. ಮರಣಹೊಂದಿದಮೇಲೆ ನೀನು ಈ ವ್ರತಪ್ರಭಾವದಿಂದ ನಿಸ್ಸಂದೇಹವಾಗಿ ಆ ಯಮನಿಗೆ ವಶನಾಗದೆ ಉತ್ತಮಲೋಕಕ್ಕೆ ಹೋಗುವೆ.

೪೪. ಅಯ್ಯಾ ಯುಧಿಷ್ಠಿರನೇ! ಭೂಲೋಕದಲ್ಲಿ ಪುರುಷರಾಗಲಿ ಅಥವಾ ಸ್ತ್ರೀಯರಾಗಲಿ ಈ ರೀತಿಯಾಗಿ ಪ್ರತಿತ್ರಯೋದಶಿಯಲ್ಲೂ,

೪೫. ಏಕಭುಕ್ತ, ನಕ್ತಭೋಜನ, ಅಥವಾ ಪೂರ್ತ ಉಪವಾಸಮಾಡಿ, ಸರ್ವೋತ್ತಮವಾದ ಈ ಯಮಾದರ್ಶನವೆಂಬ ವ್ರತವನ್ನು ಆಚರಿಸಿದರೆ,

೪೬. ಅಂತಹವರು ಸರ್ವಪಾಪನಿರ್ಮುಕ್ತರಾಗಿ, ದಿವ್ಯವಿಮಾನವನ್ನೇರಿ, ಅಪ್ಸರೋಗಣ ಪರಿವೃತರೂ, ಸಂತುಷ್ಟರೂ, ಆಗಿ, ಇಂದ್ರನ ನಗರಿಯಾದ ಅಮರಾವತಿಗೆ ಹೋಗುತ್ತಾರೆ.

೪೭. ಅಯ್ಯಾ ಯುಧಿಷ್ಠಿರನೇ! ಅವರು ಆಗ ಚಾಮರಗಳಿಂದ ಬೀಸಲ್ಪಡುವವರೂ, ಸುರಾಸುರರಿಂದ ಸ್ತುತಿಸಲ್ಪಡುವವರೂ, ಗಂಧರ್ವರ ವಾದ್ಯನಾದಗಳ ಸಮೇತರೂ, ಶ್ವೇತಛತ್ರಗಳ ಸಾಲುಗಳಿಂದ ಅಲಂಕೃತರೂ,

ಅದೃಷ್ಟಾ ಘೋರರೂಪಾಸ್ಯೈರ್ಯಮದೂತೈರ್ಯುಧಿಷ್ಠಿರ ।
ಅನರ್ದಿತಾ ವ್ಯಾಧಿಗಣೈರದೃಷ್ಟಾ ಯಮಕಿಂಕರೈಃ ॥ ೪೮ ॥

ಅದಾರಿತಾ ಮಹಾರೌದ್ರೈರ್ನಾನಾಪ್ರಹರಣೋತ್ತಮೈಃ ।
ಯಮದೃಷ್ಟಿಪಥಾನ್ಮುಕ್ತಾಃ ಸರ್ವಸೌಖ್ಯಸಮನ್ವಿತಾಃ ॥ ೪೯ ॥

ಸ್ವರ್ಗಸೌಖ್ಯಸಮಾಯುಕ್ತಾಃ ಶಿವವತ್ಸೌಮ್ಯದರ್ಶನಾಃ ।
ಸ್ವರ್ಗೇ ವಸಂತಿ ಸುಚಿರಂ ಭಾವಿತಾಃ ಸ್ವೇನ ಕರ್ಮಣಾ ॥ ೫೦ ॥

ಸ್ನಾಪ್ಯ ತ್ರಯೋದಶ ಮುನೀನ್ಘೃತಪಾಯಸೇನ ।
ಸಂಪೂಜ್ಯ ಪೂಜ್ಯ ತಿಲತಂಡುಲವಸ್ತ್ರದಾನೈಃ ।

---

೪೮. ಘೋರವಾದ ರೂಪ, ಘೋರವಾದ ಮುಖ, ಇವುಗಳುಳ್ಳ ಯಮದೂತರ ದೃಷ್ಟಿಗೆ ಬೀಳದವರೂ, ವ್ಯಾಧಿಸಮೂಹಗಳಿಂದ ಪೀಡಿಸಲ್ಪಡದವರೂ, ಯಮಕಿಂಕರರಿಗೆ ಅಗೋಚರರೂ, (ಎನಿಸಿ)

೪೯. ಮಹಾಭಯಂಕರಗಳಾದ ನಾನಾವಿಧವಾದ ಉತ್ತಮ ಆಯುಧಗಳಿಂದ ಸೀಳಿಸಿಕೊಳ್ಳದವರೂ, ಯಮನ ದೃಷ್ಟಿಗೆ ಕೂಡ ಗೋಚರವಾಗದವರೂ ಆಗಿ,

೫೦. ಸರ್ವಸೌಖ್ಯದಿಂದಕೂಡಿ ಸ್ವರ್ಗಕ್ಕೆ ಹೋಗಿ, ಎಲ್ಲೆಲ್ಲಿಯೂ ಸಮಸ್ತ ಸಂಪತ್ ಸೌಭಾಗ್ಯಯುಕ್ತರೂ, ಶ್ರೀ ಪರಮೇಶ್ವರನಂತೆಯೇ ಸೌಮ್ಯದೃಷ್ಟಿಯುಳ್ಳವರೂ ಆಗಿದ್ದು, ತಾವು ಮಾಡಿದ ಈ ಪುಣ್ಯಕರ್ಮದಿಂದ ಸನ್ಮಾನಿತರಾಗುತ್ತಾ, ಬಹುಕಾಲ ಸ್ವರ್ಗದಲ್ಲಿ ವಾಸಿಸುತ್ತಾರೆ.

೫೧. ಯಾವ ಪುರುಷನು ತ್ರಯೋದಶಿಯದಿನ ಹದಿಮೂರುಜನ ಬ್ರಾಹ್ಮಣರಿಗೆ ಅಭ್ಯಂಗಸ್ನಾನಮಾಡಿಸಿ, ಅವರಿಗೆ ಪೂಜೆಯನ್ನು ಮಾಡಿ, ಘೃತಪಾಯಸಾದಿಗಳಿಂದ ಭೋಜನಮಾಡಿಸಿ, ತಿಲ, ತಂಡುಲ, ವಸ್ತ್ರ ಇವೇ ಮೊದಲಾದುವು

**ಕುರ್ವಂತಿ ಯೇ ವ್ರತಮಿದಂ ತ್ರಿದಶೇಹ್ನಿ ಪೂತಾಃ**
**ಪಶ್ಯಂತಿ ತೇ ಯಮಮುಖಂ ನ ಕದಾಚಿದೇವ　　　　|| ೫೧ ||**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರಸಂವಾದೇ ಯಮಾದರ್ಶನತ್ರಯೋದಶೀ ವ್ರತ ವರ್ಣನಂ ನಾಮೈಕೋನನವತಿತಮೋಽಧ್ಯಾಯಃ.**



---

ಗಳನ್ನೂ ದಾನಮಾಡಿ, ಈ ವ್ರತವನ್ನು ಆಚರಿಸುವರೋ, ಅಂತಹವರು ಪವಿತ್ರರಾಗಿ ಯಾವಾಗಲೂ ಯಮನ ಮುಖವನ್ನು ನೋಡುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಯಮಾದರ್ಶನ ವ್ರತವರ್ಣನೆಯೆಂಬ ಎಂಭತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ನವತಿತಮೋಽಧ್ಯಾಯಃ

---

॥ ಯುಧಿಷ್ಠಿರ ಉವಾಚ ॥

ಭಗವನ್ಭೂತಭವ್ಯೇಶ ಸಂಸಾರಾರ್ಣವತಾರಕ ।
ವ್ರತಂ ಕಥಯ ಕಿಂಚಿನ್ಮೇ ರೂಪಸೌಭಾಗ್ಯದಾಯಕಂ ॥ ೧ ॥

॥ ಶ್ರೀ ಕೃಷ್ಣ ಉವಾಚ ॥

ಕಿಂ ಕೃತೈರ್ಬಹುಭಿಃ ಪಾರ್ಥ ವ್ರತೈರುನ್ಮತ್ತಚೇಷ್ಟಿತೈಃ ।
ಕಾಯಕ್ಲೇಶಕರೈಃ ಕ್ರೂರೈರಸಾರೈಃ ಫಲಸಾಧನೈಃ ॥ ೨ ॥

---

## ತೊಂಭತ್ತನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಭೂತಭವಿಷ್ಯದ್ವರ್ತಮಾನಗಳೆಂಬ ಕಾಲತ್ರಯಗಳಿಗೆ ನಿಯಾಮಕನೂ, ಸಂಸಾರಸಾಗರವನ್ನು ದಾಟಿಸುವವನೂ, ಆಗಿರುವ ಓ ಭಗವಂತನೇ ! ರೂಪ ಮತ್ತು ಸೌಭಾಗ್ಯವನ್ನು ಕೊಡುವ ಒಂದು ವ್ರತವನ್ನು ನನಗೆ ಹೇಳು ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಪಾರ್ಥನೇ ! ಅಸಾರಗಳಾದ ಫಲಗಳಿಗೆ ಸಾಧನಗಳೂ ಕ್ರೂರಗಳೂ ಕಾಯಕ್ಲೇಶಕರಗಳೂ ಆಗಿ ಹುಚ್ಚರು ಮಾಡುವ ಕೆಲಸಗಳಂತೆ ಇರುವ ಹಲವು ವ್ರತಾಚರಣಗಳಿಂದ ಏನು ಪ್ರಯೋಜನ ?

ವರಮೇಕಾಪಿ ವರದಾ ಕೃತಾನಂಗತ್ರಯೋದಶೀ ।
ಪ್ರಸಿದ್ಧಿಂ ಸಮನುಪ್ರಾಪ್ತಾ ಮರ್ತ್ಯೇ ಕಾಮಪ್ರದಾಯಿನೀ ॥ ೩ ॥

ಸೌಭಾಗ್ಯಾರೋಗ್ಯಜಯದಾ ಸರ್ವಾಶಂಕನಿವಾರಿಣೀ ।
ಸರ್ವದುಷ್ಟೋಪಶಮನೀ ಸರ್ವಮಂಗಲವರ್ಧನೀ ॥ ೪ ॥

ಶೃಣುಷ್ವ ತಾಂ ಮಹಾಬಾಹೋ ಕಥಯಾಮಿ ಸವಿಸ್ತರಂ ।
ಪುರಾ ದಗ್ಧೇನ ಕಾಮೇನ ತ್ರಿನೇತ್ರನಯನಾಗ್ನಿನಾ ॥ ೫ ॥

ಭಸ್ಮೀಭೂತೇನ ಲೋಕಾನಾಂ ಸಂಕಲ್ಪಿತಾ ಪುರಾನಘ ।
ಅನಂಗೇನ ಕೃತಾ ಹ್ಯೇಷಾ ತೇನಾನಂಗತ್ರಯೋದಶೀ ॥ ೬ ॥

---

೩. ಭೂಲೋಕದಲ್ಲಿ ಇಷ್ಟಾರ್ಥವನ್ನು ಕೊಡತಕ್ಕುದೆಂದು ಪ್ರಸಿದ್ಧಿ ಹೊಂದಿದುದೂ, ವರಪ್ರದವೂ ಆದ ಅನಂಗತ್ರಯೋದಶೀ ವ್ರತವೊಂದನ್ನು ಆಚರಿಸಿದರೆ ಸಾಕು.

೪. ಈ ವ್ರತವು ಸೌಭಾಗ್ಯ ಆರೋಗ್ಯ ಕಾರ್ಯಜಯ ಇವುಗಳನ್ನು ಕೊಡುವುದೂ, ಸರ್ವೋಪದ್ರವ ನಿವಾರಕವೂ, ಸರ್ವದೋಷಶಾಮಕವೂ ಸರ್ವ ಮಂಗಲವರ್ಧಕವೂ ಆಗಿದೆ.

೫. ಅಯ್ಯಾ ಮಹಾಬಾಹುಶಾಲಿಯೇ ! ಈ ಅನಂಗತ್ರಯೋದಶೀ ವ್ರತವನ್ನು ವಿಸ್ತಾರವಾಗಿ ಹೇಳುತ್ತೇನೆ ಶ್ರವಣಮಾಡು. ಪೂರ್ವದಲ್ಲಿ ಮೂರು ಕಣ್ಣುಳ್ಳ ಶ್ರೀ ಪರಮೇಶ್ವರನ ತೃತೀಯ ನೇತ್ರಾಗ್ನಿಯಿಂದ ಮನ್ಮಥನು ದಗ್ಧನಾದ ನಷ್ಟೆ.

೬. ನಿಷ್ಕಲ್ಮಷನಾದ ರಾಜನೇ ! ಕೇಳು. ಪೂರ್ವದಲ್ಲಿ ಹರನೇತ್ರಾಗ್ನಿ ದಗ್ಧನಾದ ಆ ಮನ್ಮಥನು ಲೋಕಹಿತಾರ್ಥವಾಗಿ ಈ ವ್ರತವನ್ನು ಸಂಕಲ್ಪ ಪೂರ್ವಕವಾಗಿ ಆಚರಿಸಿದನು. ಪ್ರಥಮದಲ್ಲಿ ಅನಂಗ (ಮನ್ಮಥ) ನಿಂದ ಈ ವ್ರತವು ಆಚರಿತವಾದುದರಿಂದ ಇದಕ್ಕೆ ಅನಂಗತ್ರಯೋದಶೀ ವ್ರತವೆಂಬ ಹೆಸರು ಬಂದಿದೆ.

ಹೇಮಂತೇ ಸಮನುಪ್ರಾಪ್ತೇ ಮಾಸಿ ಮಾರ್ಗಶಿರೇ ಶುಭೇ ।
ಶುಕ್ಲಪಕ್ಷೇ ತ್ರಯೋದಶ್ಯಾಂ ಸೋಪವಾಸೋ ಜಿತೇಂದ್ರಿಯಃ ॥ ೭ ॥

ಸ್ನಾನಂ ನದ್ಯಾಂ ತಡಾಗೇ ಚ ಗೃಹೇ ವಾ ನಿಯತಾತ್ಮವಾನ್ ।
ಕೃತ್ವಾ ಸಮಭ್ಯರ್ಚ್ಯ ವಿಭುಂ ವಿಧಿನಾ ಶಶಿಶೇಖರಂ ॥ ೮ ॥

ಧೂಪದೀಪೈಃ ಸನೈವೇದ್ಯೈಃ ಪುಷ್ಪೈಃ ಕಾಲೋದ್ಭವೈಸ್ತಥಾ ।
ಶಂಭುನಾಮಾನ್ಯಥೋಚ್ಚಾರ್ಯ ಹೋಮಃ ಕಾರ್ಯಸ್ತಿಲಾಕ್ಷತೈಃ ॥ ೯ ॥

ಅನಂಗನಾಮ್ನಾ ಸಂಪೂಜ್ಯ ಮಧು ಪ್ರಾಶ್ಯ ಸ್ವಪೇನ್ನಿಶಿ ।
ನೈವೇದ್ಯೈರ್ಮಧುರೈರ್ದಿವ್ಯೈಃ ಸುಸ್ವಾದ್ಯೈರ್ಘೃತಪಾಚಿತೈಃ ॥ ೧೦ ॥

ಧೂಪಂ ಸುಗಧಿಂ ದದ್ಯಾಚ್ಚ ರಕ್ತಪುಷ್ಪೈಸ್ತು ಪೂಜನಂ ।
ರಂಭಾತುಲ್ಯಾ ಭವೇತ್ಸಾ ತು ರೂಪಯೌವನಶಾಲಿನೀ ॥ ೧೧ ॥

---

೭. ಹೇಮಂತಋತುವು ಪ್ರಾಪ್ತವಾಗುತ್ತಲೆ ಶುಭಮಾರ್ಗಶೀರ್ಷಮಾಸದ ಶುಕ್ಲಪಕ್ಷ ತ್ರಯೋದಶೀದಿನ, ಜಿತೇಂದ್ರಿಯನಾಗಿ ಉಪವಾಸವನ್ನು ಆಚರಿಸಬೇಕು.

೮. ಆದಿನ ನದಿಗೋ ಕೊಳಕ್ಕೋ ಹೋಗಿಯಾಗಲಿ, ಅಥವಾ ಮನೆಯಲ್ಲಿಯೇ ಆಗಲಿ, ನಿಯಮಪೂರ್ವಕವಾಗಿ ಸ್ನಾನಮಾಡಿ ಶಾಸ್ತ್ರಪ್ರಕಾರವಾಗಿ ಸ್ವಾಮಿಯಾದ ಶ್ರೀ ಚಂದ್ರಮೌಳೀಶ್ವರನಿಗೆ ಪೂಜೆಮಾಡಬೇಕು.

೯. ಆಗ ತತ್ಕಾಲೋದ್ಭವಗಳಾದ ಪುಷ್ಪ, ಧೂಪ ದೀಪ ಇವುಗಳಿಂದ ಪೂಜೆಮಾಡಿ, ನೈವೇದ್ಯವನ್ನು ಸಮರ್ಪಿಸಿ, ಪೂಜೆಮುಗಿದ ಮೇಲೆ ಅಗ್ನಿಯನ್ನು ಪ್ರತಿಷ್ಠಿಸಿ, ಶ್ರೀ ಶಂಭುನಾಮಗಳನ್ನು ಹೇಳಿಕೊಂಡು, ತಿಲಮಿಶ್ರಿತ ಅಕ್ಷತೆಗಳಿಂದ ಮಂತ್ರಪೂರ್ವಕವಾಗಿ ಹೋಮಮಾಡಬೇಕು.

೧೦-೧೧. ಮತ್ತು ಅನಂಗನಾಮಗಳನ್ನು ಹೇಳಿ ಪೂಜಿಸಬೇಕು. ಈ ಪೂಜೆಯಲ್ಲಿ ಕೆಂಪು ಪುಷ್ಪಗಳನ್ನೇ ಉಪಯೋಗಿಸಬೇಕು. ಸುಗಂಧವುಳ್ಳ ಧೂಪವನ್ನು ಹಾಕಬೇಕು. ಅತ್ಯುತ್ಕೃಷ್ಟವೂ ರುಚಿಕರವೂ ಘೃತಪಕ್ವವೂ ಮಧುರವೂ ಆಗಿರುವ ನೈವೇದ್ಯಗಳನ್ನು ಸಮರ್ಪಿಸಿ ಪೂಜಿಸಬೇಕು. ಆ ದಿನರಾತ್ರಿ ಮಧುಪ್ರಾಶನೆಮಾಡಿ ಶಯನಮಾಡಬೇಕು. ಈ ರೀತಿ ಆಚರಿಸಿದ ಆ ಹೆಂಗಸು ಯೌವನವತಿಯೂ ಸೌಂದರ್ಯವತಿಯೂ ಆಗಿ ರಂಭೆಗೆ ಸಮಾನಳಾಗುತ್ತಾಳೆ.

ಮಧುವತ್ಸಾತ್ಸ್ಯೈಸಮಧುರಃ ಕಾಮರೂಪಧರಸ್ತಥಾ ।
ದಶಾನಾಮಶ್ವಮೇಧಾನಾಂ ಫಲಂ ಪ್ರಾಪ್ನೋತಿ ಮಾನವಃ ॥ ೧೨ ॥

ಪುಷ್ಯಮಾಸಸ್ಯ ಚೈವೋಕ್ತಂ ಚಂದನಂ ಪ್ರಾಶಯೇನ್ನಿಶಿ ।
ಯೋಗೇಶ್ವರಂ ತು ಸಂಪೂಜ್ಯ ಮಾಲತೀಕುಸುಮೈಃ ಶುಭೈಃ ॥ ೧೩ ॥

ನೈವೇದ್ಯಂ ಘೃತಪೂರಾಶ್ಚ ದಮಶಾನ್ತಾಸ್ತು ತಾಃ ಸ್ತ್ರಿಯಃ ।
ಸೌಮ್ಯಶೀತಸುಗಂಧಾಢ್ಯಚಂದನಪ್ರಾಶನೋದ್ಭವೈಃ ॥ ೧೪ ॥

ರಾಜಸೂಯಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತ್ಯನುತ್ತಮಂ ।
ಮಾಘೇ ನಟೇಶ್ವರಂ ನಾಮ ಪೂಜಯೇತ್ಪಂಕಜೇನ ತು ॥ ೧೫ ॥

---

೧೨. ಇವನ್ನು ಆಚರಿಸಿದ ಪುರುಷನು ಮಧುವಿನ ಹಾಗೆ ಸಮಧುರನೂ, ಮನ್ಮಥಸಮಾನವಾದ ರೂಪವುಳ್ಳವನೂ ಆಗುತ್ತಾನೆ. ಮತ್ತು ಈ ವ್ರತಾಚರಣದಿಂದ ಹತ್ತು ಅಶ್ವಮೇಧಯಾಗಗಳನ್ನು ಆಚರಿಸಿದ್ದರಿಂದ ಬರುವಷ್ಟು ಪುಣ್ಯಫಲವನ್ನು ಹೊಂದುತ್ತಾನೆ.

೧೩. ಬಳಿಕ ಪುಷ್ಯಮಾಸದ ಶುಕ್ಲಪಕ್ಷದ ತ್ರಯೋದಶಿಯಲ್ಲಿ ಯೋಗೇಶ್ವರ ಎಂಬ ನಾಮವನ್ನು ಹೇಳಿ, ಇರುವಂತಿಗೆ ಹೂವುಗಳಿಂದ ಪರಮೇಶ್ವರನನ್ನು ಅರ್ಚಿಸಿ, ಹಿಂದೆ ಹೇಳಿದ ಕ್ರಮದಿಂದ ಎಲ್ಲವನ್ನೂ ಆಚರಿಸಿ ಘೃತಪಕ್ವವಾದ ಪೂರಿಗಳನ್ನು ನೈವೇದ್ಯ ಮಾಡಬೇಕು.

೧೪. ಆ ದಿನರಾತ್ರಿ ಚಂದನವನ್ನು ಪ್ರಾಶನೆಮಾಡಿ ಶಯನಮಾಡಬೇಕು. ಸೌಮ್ಯವೂ ತಣ್ಣಗೂ ಸುಗಂಧಪರಿಪೂರ್ಣವೂ ಆಗಿರುವ ಚಂದನ ಪ್ರಾಶನಮಾಡಿ ಈ ವ್ರತವನ್ನು ಆಚರಿಸಿದ ಸ್ತ್ರೀಯರು ನಿಗ್ರಹೀತೇಂದ್ರಿಯರೂ ಮತ್ತು ಶಾಂತತೆಯುಳ್ಳವರೂ ಆಗುತ್ತಾರೆ.

೧೫. ಈ ಮಾಸದವ್ರತಾಚರಣದಿಂದ ಸರ್ವೋತ್ತಮವಾದ ರಾಜಸೂಯಯಾಗದ ಪುಣ್ಯಫಲ ಪ್ರಾಪ್ತಿಯಾಗುವುದು. ಮಾಘಮಾಸದ ತ್ರಯೋದಶಿಯಲ್ಲಿ ನಟೇಶ್ವರ ಎಂಬ ನಾಮವನ್ನು ಹೇಳಿ ಕಮಲಪುಷ್ಪಗಳಿಂದ ಪೂಜಿಸಬೇಕು.

ನೈವೇದ್ಯಂ ಕ್ಷೀರಖಂಡಾದ್ಯೈರ್ಮೌಕ್ತಿಕಂ ಪ್ರಾಶಯೇನ್ನಿಶಿ ।
ಬಹುಪುತ್ರಾ ಭವೇತ್ಸಾ ತು ಧನಂ ಸೌಭಾಗ್ಯಮುತ್ತಮಂ ॥ ೧೬ ॥

ಮುಕ್ತಾಚೂರ್ಣನಿಭೈರ್ನೇತ್ರೈರ್ಯದ್ವಾ ಸ್ಯಾತ್ತದ್ವದೇವ ಹಿ ।
ಗೌರೀತುಲ್ಯಾ ಭವೇತ್ಸಾ ತು ಕೋಮಲಾಂಗೀ ಪ್ರಜಾಯತೆ ॥ ೧೭ ॥

ತಪ್ತಜಾಂಬೂನದಾಭಾಸೋ ಭವೇದ್ದಿವ್ಯತನುರ್ಮಹಾನ್ ।
ಗೋಮೇಧಸ್ಯ ಸಹಸ್ರಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೧೮ ॥

ಫಾಲ್ಗುನೇ ಮಾಸಿ ಸಂಪೂಜ್ಯ ದೇವದೇವಂ ಮಹೇಶ್ವರಂ ।
ಕರ್ಣಿಕಾರಸ್ಯ ಪುಷ್ಪಾಣಿ ನೈವೇದ್ಯೇ ಬೀಜಪೂರಕಂ ॥ ೧೯ ॥

---

೧೬. ಈ ಮಾಘಮಾಸದ ಪೂಜೆಯಲ್ಲಿ ಕ್ಷೀರಖಂಡಾದಿಗಳನ್ನು ನೈವೇದ್ಯ ಸಮರ್ಪಣೆ ಮಾಡಬೇಕು. ಆ ದಿನ ರಾತ್ರಿಯಲ್ಲಿ ಮುಕ್ತೋದಕವನ್ನು ಪ್ರಾಶನೆ ಮಾಡಬೇಕು. ಹೀಗೆ ಆಚರಿಸಿದ ಸ್ತ್ರೀಯು ಬಹುಪುತ್ರವತಿಯೂ ಧನವತಿಯೂ ಉತ್ತಮ ಸೌಭಾಗ್ಯವತಿಯೂ ಆಗುತ್ತಾಳೆ.

೧೭. ಈ ಮುಕ್ತಾಫಲೋದಕ ಪ್ರಾಶನೆಮಾಡಿದ ಸ್ತ್ರೀಯು ಮುತ್ತುಗಳಿಗೆ ಸಮಾನವಾದ ನಯನಗಳುಳ್ಳವಳೂ, ಅಥವಾ ಸರ್ವಾಯವಗಳೂ ಮುತ್ತಿನ ಸಮಾನವರ್ಣಯುಕ್ತಳೂ, ಮತ್ತು ಪಾರ್ವತಿಗೆ ಸಮಾನಳಾದ ಕೋಮಲಾಂಗಿಯೂ ಆಗುವಳು.

೧೮. ಈ ವ್ರತವನ್ನು ಗಂಡಸು ಆಚರಿಸಿದರೆ ಆ ಮನುಷ್ಯನು ಪುಟಪಾಕ ಮಾಡಿದ ಚಿನ್ನದ ಬಣ್ಣದ ದಿವ್ಯಶರೀರವುಳ್ಳ ಮಹಾಪುರುಷನಾಗುತ್ತಾನೆ. ಪ್ರತಿಗೆ ಸಹಸ್ರ ಗೋಮೇಧ ಯಾಗಮಾಡಿದ ಫಲವುಂಟಾಗುವುದು.

೧೯. ಫಾಲ್ಗುಣಮಾಸದ ತ್ರಯೋದಶಿಯಲ್ಲಿ ಮಹೇಶ್ವರ ಎಂಬ ನಾಮ ವನ್ನು ಹೇಳಿ ಪೂಜಿಸಬೇಕು. ಈ ಮಾಸದ ಪೂಜೆಯಲ್ಲಿ ಬೆಟ್ಟದಾವರೆಯ ಹೂವನ್ನು ಪೂಜೆಗೂ, ಮಾದಲಫಲವನ್ನು ನೈವೇದ್ಯಕ್ಕೂ ಉಪಯೋಗಿಸಬೇಕು.

ಕಂಕೋಲಂ ಪ್ರಾಶಯೇದ್ರಾತ್ರೌ ಸೌಂದರ್ಯಮತುಲಂ ಲಭೇತ್ ।
ಚೈತ್ರೇ ಸುರೂಪಕಂ ನಾಮ ಪೂಜಯೇದ್ದಮನೇನ ತು　　॥ ೨೦ ॥

ನೈವೇದ್ಯಂ ಧೂಪಕಂ ದದ್ಯಾದ್ಘೃತಖಂಡವಿಪಾಚಿತಂ ।
ಕರ್ಪೂರಂ ಪ್ರಾಶಯೇದ್ರಾತ್ರೌ ಸೌಭಾಗ್ಯಂ ಮಹದಾಪ್ನುಯಾತ್॥೨೧॥

ಚಂದ್ರಶ್ಚ ಚಂದ್ರಕಾಂತಿಶ್ಚ ಚಂದ್ರವತ್ಯರ್ಹರಾವೃತೇ ।
ನರಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಶೋಭನಂ　　॥ ೨೨ ॥

ವೈಶಾಖೇ ಚ ಮಹಾರೂಪಂ ಪುಷ್ಪೈರ್ನವಮಾಲಿಕಾರ್ಚನಂ ।
ಕಾರಂಬಕೈಸ್ತು ನೈವೇದ್ಯಂ ದಾತವ್ಯಂ ಚಾತಿಶೋಭನಂ　　॥ ೨೩ ॥

---

೨೦. ಆ ದಿನ ರಾತ್ರಿ ತಕ್ಕೋಲದ ಮಯಣವನ್ನು ಪ್ರಾಶನೆಮಾಡಬೇಕು. ಹೀಗೆ ಮಾಡುವುದರಿಂದ ಅಸದೃಶವಾದ ಸೌಂದರ್ಯವು ಲಭಿಸುವುದು. ಬಳಿಕ ಚೈತ್ರಮಾಸದಲ್ಲಿ ಸುರೂಪಕ ಎಂಬ ನಾಮವನ್ನು ಪಠಿಸಿ, ಈಶ್ವರನನ್ನು ದಮನಕ ಪುಷ್ಪದಿಂದ ಪೂಜಿಸಬೇಕು.

೨೧. ಧೂಪವನ್ನು ಬೆಳಗಿದ ಮೇಲೆ, ಘೃತಪಕ್ವವಾದ ನೈವೇದ್ಯವನ್ನು ಸಮರ್ಪಿಸಬೇಕು. ಆ ದಿನ ರಾತ್ರಿ ಪಚ್ಚಕರ್ಪೂರವನ್ನು ಪ್ರಾಶನೆಮಾಡಿ, ಮಲಗಬೇಕು. ಇದರಿಂದ ಮಹಾಸೌಭಾಗ್ಯ ಪ್ರಾಪ್ತಿಯಾಗುವುದು.

೨೨. ಮತ್ತು ಚಂದ್ರಸಮಾನವಾದ ಕಾಂತಿಯುಳ್ಳ, ಶಿವನ ಶಿರಸ್ಸಿನಲ್ಲಿ ಶೇಖರನಾಗಿರುವ ಚಂದ್ರನಂತೆ ತೇಜಸ್ವಿಯೂ, ಅತ್ಯುತ್ತಮವಾದ ನರಮೇಧ ಯಾಗಮಾಡಿದ ಮಹಾಫಲಪ್ರಾಪ್ತಿಯುಳ್ಳವನೂ ಆಗುತ್ತಾನೆ.

೨೩. ವೈಶಾಖಮಾಸದಲ್ಲಿ ಮಹಾರೂಪನೆಂಬ ನಾಮವನ್ನು ಪಠಿಸಿ ಅರ್ಚನೆ ಮಾಡಬೇಕು. ಆಗ ನವಮಾಲಿಕಾ ಪುಷ್ಪವನ್ನು ಪೂಜೆಗೆ ಉಪಯೋಗಿಸಬೇಕು. ಮತ್ತು ಅತಿಮನೋಹರವಾದ ಕಾರಂಬಕ ಎಂಬ ಭಕ್ಷ್ಯವನ್ನು ನೈವೇದ್ಯ ಮಾಡಬೇಕು.

ಜಾತೀಫಲಂ ತು ಸಂಪ್ರಾಶ್ಯ ಜಾತಿಮಾಪ್ನೋತ್ಯನುತ್ತಮಾಂ ।
ಸಫಲಾಸ್ತಸ್ಯ ಸರ್ವಾಶಾ ಭವಂತಿ ಭುವಿ ಭಾರತ ॥ ೨೪ ॥

ಗೋಸಹಸ್ರಫಲಂ ಪ್ರಾಪ್ಯ ಬ್ರಹ್ಮಲೋಕೇ ಮಹೀಯತೇ ।
ಜ್ಯೇಷ್ಠೇ ಮಾಸೇ ತು ಪ್ರದ್ಯುಮ್ನಂ ಪೂಜಯೇನ್ಮಲ್ಲಿಕಾಸುಮೈಃ ॥೨೫॥

ನೈವೇದ್ಯಂ ಖಂಡವರ್ತಿಂ ಚ ಲವಂಗಂ ಪ್ರಾಶಯೇನ್ನಿಶಿ ।
ಜ್ಯೇಷ್ಠಂ ಪದಮ ಪ್ನೋತಿ ತಥಾ ಲಕ್ಷ್ಮೀಂ ಜನಾರ್ದನಾತ್ ॥ ೨೬ ॥

ಸರ್ವಸೌಖ್ಯಸಮೋಪೇತಃ ಸ್ಥಿತ್ವಾ ಭುವಿ ಶತಂ ಸಮಾಃ ।
ವಾಜಪೇಯಸ್ಯ ಯಜ್ಞಸ್ಯ ಶತಮಷ್ಟಗುಣೋತ್ತರಂ ॥ ೨೭ ॥

---

೨೪. ಆ ದಿನ ರಾತ್ರಿ ಜಾಯಿಕಾಯಿಯನ್ನು ಪ್ರಾಶನೆಮಾಡಬೇಕು. ಅಯ್ಯಾ ಭರತವಂಶಜನೇ ! ಹೀಗೆ ಆಚರಿಸಿದವನಿಗೆ ಉತ್ತಮ ಜಾತಿತ್ವಪ್ರಾಪ್ತ ವಾಗುವುದು. ಮತ್ತು ಈ ಭೂಲೋಕದಲ್ಲಿ ಅವನ ಸಕಲ ಮನೋರಥಗಳೂ ಸಫಲಗಳಾಗುತ್ತವೆ.

೨೫. ಆ ವ್ರತಿಗೆ ಸಹಸ್ರ ಗೋದಾನದ ಫಲವು ಲಭಿಸಿ ಆತನು ಬ್ರಹ್ಮ ಲೋಕದಲ್ಲಿ ಪೂಜಿತನಾಗುತ್ತಾನೆ. ಜ್ಯೇಷ್ಠಮಾಸದಲ್ಲಿ ಪ್ರದ್ಯುಮ್ನ ನಾಮವನ್ನು ಪಠಿಸಿ ಮಲ್ಲಿಗೆ ಹೂವುಗಳಿಂದ ಶ್ರೀ ಪರಮೇಶ್ವರನನ್ನು ಪೂಜಿಸಬೇಕು.

೨೬. ಆಗ ಖಂಡವರ್ತಿ ಎಂಬ ಭಕ್ಷ್ಯವನ್ನು ನೈವೇದ್ಯಕ್ಕೆ ಉಪಯೋಗಿಸ ಬೇಕು. ಆ ದಿನ ರಾತ್ರಿ ಲವಂಗವನ್ನು ಪ್ರಾಶನೆಮಾಡಬೇಕು. ಇದರಿಂದ ಶ್ರೀ ಜನಾರ್ದನನು ಸುಪ್ರೀತನಾಗಿ ಆ ದೇವನಿಂದ ಈ ವ್ರತಾನುಷ್ಠಾತೃವಿಗೆ ಉತ್ತಮಪದಪ್ರಾಪ್ತಿಯೂ ಸಂಪಲ್ಲಾಭವೂ ಆಗುವುದು.

೨೭. ಅಲ್ಲದೆ ಆತನು ಭೂಲೋಕದಲ್ಲಿ ಸರ್ವಸೌಖ್ಯಸಮನ್ವಿತನಾಗಿ ನೂರು ವರ್ಷಕಾಲ ಬಾಳುವನು. ಮತ್ತು ಅವನಿಗೆ ವಾಜಪೇಯಯಾಗದ ಫಲದ ನೂರೆಂಟರಷ್ಟು ಅಧಿಕವಾದ ಫಲ ಲಭಿಸುವುದು.

ಆಷಾಢೇ ಚೈವ ಸಂಪ್ರಾಪ್ತೇ ಉಮಾಭರ್ತಾರಮರ್ಚಯೇತ್ ।
ಪುಷ್ಪಧೂಪಾದಿನೈವೇದ್ಯೈಃ ಪ್ರಾಶ್ನೀಯಾಚ್ಚ ತಿಲೋದಕಂ ॥ ೨೮ ॥

ತಿಲೋತ್ತಮಾ ರೂಪಧರಾ ಸುಖೀ ಸ್ಯಾಚ್ಛರದಃ ಶತಂ ।
ಶ್ರಾವಣೇ ಉಮಾಪತಿಂ ನಾಮ ತಿಲಪುಷ್ಪೈಸ್ತು ಪೂಜಯೇತ್ ॥ ೨೯ ॥

ನೈವೇದ್ಯಂ ಲಡ್ಡುಕಾನ್ದದ್ಯಾತ್ಕೃಷ್ಣಾಂಶ್ಚ ಪ್ರಾಶಯೇತ್ತಿಲಾನ್ ।
ಪೌಂಡರೀಕಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತ್ಯನಾಕುಲಂ ॥ ೩೦ ॥

ತದಂತೇ ರಾಜರಾಜಃ ಸ್ಯಾಚ್ಛತ್ರುಪಕ್ಷಕ್ಷಯಂಕರಃ ।
ಸದ್ಯೋಜಾತಂ ಭಾದ್ರಪದೇ ಪೂಜ್ಯ ಕುಂಕುಮಕೇಸರೈಃ ॥ ೩೧ ॥

ನೈವೇದ್ಯಂ ಸೋಲಿಕಾಂ ದದ್ಯಾತ್ಪ್ರಾಶಯೇದಗುರುಂ ನಿಶಿ ।
ಅಗುರುಂ ಪ್ರಾಶಯಿತ್ವಾ ತು ಗುರುರ್ಭವತಿ ಭೂತಳೇ ॥ ೩೨ ॥

---

೨೮. ಆಷಾಢಮಾಸದ ತ್ರಯೋದಶಿಯ ಪೂಜೆಯಲ್ಲಿ ಉಮಾಭರ್ತಾ ಎಂಬ ನಾಮವನ್ನು ಉಚ್ಚರಿಸಿ ಪುಷ್ಪ ಧೂಪಾದಿಗಳಿಂದ ಪೂಜಿಸಿ, ಆ ದಿನ ರಾತ್ರಿ ತಿಲೋದಕವನ್ನು ಪ್ರಾಶನೆಮಾಡಬೇಕು.

೨೯. ಈ ರೀತಿ ಪೂಜಿಸಿದ ಹೆಂಗಸು ತಿಲೋತ್ತಮೆ ಎಂಬ ಅಪ್ಸರ ಸ್ತ್ರೀಯ ಸೌಂದರ್ಯಕ್ಕೆ ಸಮಾನವಾದ ಸೌಂದರ್ಯವನ್ನು ಪಡೆದು, ನೂರುವರ್ಷಕಾಲ ಸುಖವಾಗಿ ಬಾಳುವರು. ಶ್ರಾವಣಮಾಸದಲ್ಲಿ ಉಮಾಪತಿ ಎಂಬ ನಾಮಧೇಯವನ್ನುಚ್ಚರಿಸಿ ತಿಲಪುಷ್ಪಗಳಿಂದ ಪೂಜಿಸಬೇಕು.

೩೦. ನೈವೇದ್ಯಕ್ಕೆ ಲಡ್ಡುಗೆಗಳನ್ನು ಮಾಡಬೇಕು. ಆ ದಿನ ರಾತ್ರಿ ಕರೀ ಎಳ್ಳುಗಳನ್ನು ಪ್ರಾಶನೆಮಾಡಿ ಮಲಗಬೇಕು. ಇದರಿಂದ ಪೌಂಡರೀಕ ಯಾಗದ ಫಲವು ಪ್ರಾಪ್ತಿಯಾಗುವುದು.

೩೧. ಅಲ್ಲದೆ ಆತನು ಶತ್ರುನಾಶಕನಾದ ಸರ್ವೋತ್ತಮ ರಾಜನಾಗುವನು. ಭಾದ್ರಪದಮಾಸದಲ್ಲಿ ಸದ್ಯೋಜಾತ ಎಂಬ ನಾಮಧೇಯದಿಂದ ಶ್ರೀ ಶಿವನನ್ನು ಕುಂಕುಮಕೇಸರಿಗಳಿಂದ ಅರ್ಚಿಸಬೇಕು.

೩೨. ಸೋಹಾಲಿಕಾ ಎಂಬ ಭಕ್ಷ್ಯವನ್ನು ನೈವೇದ್ಯಕ್ಕೆ ಉಪಯೋಗಿಸಬೇಕು. ಆ ದಿನ ರಾತ್ರಿ ಅಗರನ್ನು ಪ್ರಾಶನೆಮಾಡಬೇಕು. ಇದರಿಂದ ಅವನು ಭೂತಲದಲ್ಲಿ ಆಚಾರ್ಯನಾಗುವನು.

ಪುತ್ರಪೌತ್ರೈಃ ಪರಿವೃತೋ ಭುಕ್ತ್ವಾ ಭೋಗಾನ್ಮನೋನುಗಾನ್ ।
ಉಕ್ಥ್ಯಯಜ್ಞಫಲಂ ಪ್ರಾಪ್ಯ ವಿಷ್ಣುಲೋಕೇ ಮಹೀಯತೆ ॥ ೩೩ ॥

ತ್ರಿದಶಾಧಿಪಮಶ್ವಯುಜಿ ಪೂಜ್ಯ ಸಿಂದೂರಕಪ್ರಜೈಃ ।
ಸ್ವರ್ಣಾದಿಕಂ ತು ಸಂಪ್ರಾಶ್ಯ ಸ್ವರ್ಣವರ್ಣಃ ಪ್ರಜಾಯತೆ ॥ ೩೪ ॥

ರೂಪವಾನ್ಸುಭಗೋ ವಾಗ್ಮೀ ಭುಕ್ತ್ವಾಭೋಗಾನ್ಮಹೀತಲೇ ।
ಸುವರ್ಣಕೋಟಿದಾನಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೩೫ ॥

ವಿಶ್ವೇಶ್ವರಂ ಕಾರ್ತಿಕೇ ತು ಸರ್ವಪುಷ್ಪೈಸ್ತು ಪೂಜಯೇತ್ ।
ಮದನಸ್ಯ ಫಲಂ ಪ್ರಾಶ್ಯ ಮದನೇನ ಪುಮಾನ್ಭವೇತ್ ॥ ೩೬ ॥

---

೩೩. ಮತ್ತು ಪುತ್ರಪೌತ್ರ ಪರಿವೃತನಾಗಿ ಮನಸ್ಸಿನಲ್ಲಿ ಎಣಿಸಿದ ಎಲ್ಲಾ ಭೋಗಗಳನ್ನೂ ಅನುಭವಿಸುವುದಲ್ಲದೆ, ಉಕ್ಥ್ಯ ಎಂಬ ಯಾಗದ ಫಲವನ್ನು ಹೊಂದಿ, ವಿಷ್ಣುಲೋಕಕ್ಕೆ ಹೋಗಿ ಅಲ್ಲಿ ಸರ್ವೋತ್ಕೃಷ್ಟನಾಗಿರುತ್ತಾನೆ.

೩೪. ಆಶ್ವಯುಜಮಾಸದ ತ್ರಯೋದಶಿಯಲ್ಲಿ ತ್ರಿದಶಾಧಿಪ ಎಂಬ ನಾಮಪೂರ್ವಕವಾಗಿ ಚಂದಿರದ ಪುಡಿಯಿಂದ ಪೂಜಿಸಬೇಕು. ರಾತ್ರಿಯಲ್ಲಿ ಸುವರ್ಣಪ್ರಾಶನೆಯನ್ನು ಮಾಡಬೇಕು. ಇದರಿಂದ ಆ ಅನುಷ್ಠಾತೃವು ಸ್ವರ್ಣವರ್ಣನಾಗುತ್ತಾನೆ.

೩೫. ಅಲ್ಲದೆ ಸುರೂಪಿಯೂ, ಸೌಭಾಗ್ಯಸಂಪನ್ನನೂ, ವಾಗ್ಮಿಯೂ, ಆಗಿ ಭೂತಲದಲ್ಲಿ ಸಕಲ ಭೋಗಗಳನ್ನೂ ಉಪಭೋಗಿಸುತ್ತಾನೆ. ಮತ್ತು ಆ ಪುರುಷನು ಕೋಟಿ ಸುವರ್ಣದಾನದ ಫಲವನ್ನು ಹೊಂದುತ್ತಾನೆ.

೩೬. ಕಾರ್ತಿಕಮಾಸದ ತ್ರಯೋದಶಿಯಲ್ಲಿ ವಿಶ್ವೇಶ್ವರ ಎಂಬ ನಾಮವನ್ನು ಹೇಳಿ ಸರ್ವಪುಷ್ಪಗಳಿಂದಲೂ ಪೂಜಿಸಬೇಕು. ಆ ರಾತ್ರಿ ಮದನಫಲವ (ಉಮ್ಮತ್ತದ ಗಿಡದ ಕಾಯಿ) ನ್ನು ಪ್ರಾಶನೆಮಾಡಬೇಕು. ಈ ಫಲಪ್ರಾಶನೆಮಾಡಿದ್ದರಿಂದ ಮನ್ಮಥ ಸಮಾನನಾಗುತ್ತಾನೆ.

ಮದನೋನ್ಮಾದಕರ್ತಾ ಚ ಸರ್ವಸ್ಯ ಜಗತಃ ಪ್ರಭುಃ ।
ಭವೇದ್ಭುಜಬಲೋಪೇತಸ್ತತಃ ಶಿವಪುರಂ ವ್ರಜೇತ್ ॥ ೩೭ ॥

ಏವಂ ಸಂವತ್ಸರಸ್ಯಾಂತೇ ಪಾರಿತೇಽಸ್ಮಿನ್ವ್ರತೋತ್ತಮೇ ।
ಯತ್ಕರ್ತವ್ಯಂ ತದಧುನಾ ಶ್ರೂಯತಾಂ ಕುರುನಂದನ ॥ ೩೮ ॥

ವ್ರತೇ ವಿಘ್ನೋ ಯದಾ ಚ ಸ್ಯಾದಶಕ್ತ್ಯಾ ಸೂತಕೇನ ವಾ ।
ಉಪೋಷ್ಯಮೇವೋಪವಸೇತ್ತದಾ ದ್ರುಮಪುರಃ ಪುನಃ ॥ ೩೯ ॥

ಪೂರ್ವೋಕ್ತಮೇವಂ ನಿರ್ವರ್ತ್ಯ ಸೌವರ್ಣಂ ಕಾರಯೇಚ್ಛಿವಂ ।
ತಾಮ್ರಪಾತ್ರೇ ತು ಸಂಸ್ಥಾಪ್ಯ ಕಲಶೋಪರಿ ವಿನ್ಯಸೇತ್ ॥ ೪೦ ॥

---

೩೭. ಮತ್ತು ಸೌಂದರ್ಯದಿಂದ ಮದನನಿಗೂ ಉನ್ಮಾದ ಬರುವಹಾಗೆ ಮಾಡುತ್ತಾನೆ. ಮತ್ತು ಅತಿ ಭುಜಬಲೋಪೇತನಾಗಿ ಸರ್ವಜಗತ್ತಿಗೂ ಸ್ವಾಮಿಯಾಗುತ್ತಾನೆ. ದೇಹಾಂತದಲ್ಲಿ ಅವನಿಗೆ ಶಿವಲೋಕ ಪ್ರಾಪ್ತಿಯಾಗುತ್ತದೆ.

೩೮. ಅಯ್ಯಾ ಕುರುವಂಶಜನೇ ! ಈ ಉತ್ತಮವ್ರತವನ್ನು ಈರೀತಿ ಆಚರಿಸಿ, ಒಂದುವರ್ಷ ಪೂರ್ತವಾದ ಮೇಲೆ, ಕೊನೆಗೆ ಮಾಡತಕ್ಕದ್ದನ್ನು ಹೇಳುತ್ತೇನೆ ಶ್ರವಣಮಾಡು ಎಂದನು.

೩೯. ಈ ವ್ರತವನ್ನು ಮಾರ್ಗಶೀರ್ಷಮಾಸದಲ್ಲಿ ಪ್ರಾರಂಭಿಸಿದ ಮೇಲೆ ಮಧ್ಯೇ ಅಶಕ್ತಿ, ಸೂತಕ, ಇತ್ಯಾದಿ ವಿಘ್ನಗಳು ಬಂದು ಆಚರಿಸಲಾಗದೆ ನಿಂತುಹೋದಾಗ, ಆ ದಿನ ಉಪವಾಸಮಾತ್ರಮಾಡಿ ವಿಘ್ನ ಪರಿಹಾರವಾದ ಮೇಲೆ ಪುನಃ ಪೂಜಿಸಬೇಕು.

೪೦. ಈ ಹಿಂದೆ ಮೊದಲು ಹೇಳಿದ್ದನ್ನೆಲ್ಲಾ ಆಚರಿಸಿ, ಭಂಗಾರದಿಂದ ಶ್ರೀ ಶಿವಪ್ರತಿಮೆಯನ್ನು ಮಾಡಿಸಬೇಕು. ಆ ಪ್ರತಿಮೆಯನ್ನು ತಾಮ್ರದ ಪಾತ್ರೆಯಲ್ಲಿ ಸ್ಥಾಪಿಸಿ ಅದನ್ನು ಕಲಶದ ಮೇಲೆ ಇಡಬೇಕು.

ಶುಕ್ಲವಸ್ತ್ರೇಣ ಸಂಛಾದ್ಯ ಪುಷ್ಪನೈವೇದ್ಯಪೂಜಿತಂ ।
ಬ್ರಾಹ್ಮಣಾಯ ಪ್ರದಾತವ್ಯಂ ಶಿವಭಕ್ತಾಯ ಸುವ್ರತ ॥ ೪೧ ॥

ಶಕ್ತಿಮಾಞ್ಛಯನಂ ದದ್ಯಾದ್ಗಾಂ ಸವತ್ಸಾಂ ಪಯಸ್ವಿನೀಂ ।
ಛತ್ರೋಪಾನತ್ಪ್ರದಾತವ್ಯಂ ಕಲಶಾಃ ಸೋದಕಾಸ್ತಥಾ ॥ ೪೨ ॥

ಶಾಂತಾಶ್ಚ ಕೇಚಿದಿಚ್ಛಂತಿ ಶಕ್ತ್ಯಾ ದದ್ಯಾಚ್ಚ ದಕ್ಷಿಣಾಂ ।
ಪಂಚಾಮೃತೇನ ಸ್ನಾನಂ ಚ ತಸ್ಮಿನ್ನಹನಿ ಕಾರಯೇತ್ ॥ ೪೩ ॥

ದೇವದೇವಸ್ಯ ರಾಜೇಂದ್ರ ಪುಷ್ಪದೀಪಾನ್ನಸಂಯುತಂ ।
ಭೋಜನಂ ಚ ಯಥಾಶಕ್ತ್ಯಾ ಷಡ್ರಸಂ ಮಧುರೋತ್ತರಂ ॥ ೪೪ ॥

---

೪೧. ಅಯ್ಯಾ ನಿಯಮಶಾಲಿಯೇ ! ಆ ಪ್ರತಿಮೆಗೆ ಶುಕ್ಲವಸ್ತ್ರವನ್ನು ಹೊದ್ದಿಸಿ, ಪುಷ್ಪಗಳಿಂದ ಪೂಜೆಮಾಡಿ, ನೈವೇದ್ಯ ಸಮರ್ಪಣೆಮಾಡಬೇಕು. ಅನಂತರ ಅದನ್ನು ಶಿವನಲ್ಲಿ ಭಕ್ತಿಯುಳ್ಳ ಬ್ರಾಹ್ಮಣನಿಗೆ ದಾನಕೊಡಬೇಕು.

೪೨. ಧನಸಮೃದ್ಧಿಯಿದ್ದು ಶಕ್ತಿಯುಳ್ಳ ಧನಿಕನಾದರೆ, ಶಯ್ಯಾ, ಕರು ಸಹಿತವಾದ ಹಾಲುಕರೆಯುವ ಹಸು, ಛತ್ರಿ, ಪಾದುಕೆಗಳು, ಮತ್ತು ಉದಕ ಪರಿಪೂರ್ಣವಾದ ಕಲಶ, ಇವುಗಳನ್ನು ದಾನಮಾಡಬೇಕು.

೪೩. ಧನಿಕನಾದರೆ ಈ ರೀತಿ ಶಯ್ಯಾದಾನಾದಿಗಳನ್ನೂ ಕೊಡಬೇಕೆಂದು ಕೆಲವರು ಶಾಂತರಾದ ಋಷಿಗಳು ಅಭಿಪ್ರಾಯ ಪಟ್ಟಿರುತ್ತಾರೆ. ಮತ್ತು ಸ್ವಶಕ್ತ್ಯನುಸಾರವಾಗಿ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಬೇಕು. ಆ ದಿನ ಪರಮೇಶ್ವರನಿಗೆ ಪಂಚಾಮೃತಾಭಿಷೇಕ ಮಾಡಬೇಕು.

೪೪-೪೫. ಅಯ್ಯಾ ರಾಜೇಂದ್ರನೇ ! ಬಳಿಕ ದೇವದೇವನಾದ ಶ್ರೀ ಶಿವನನ್ನು ಪುಷ್ಪ, ಧೂಪ, ದೀಪ, ನೈವೇದ್ಯ, ಇತ್ಯಾದಿಗಳಿಂದ ಪೂಜಿಸಬೇಕು. ಶಿವನಲ್ಲಿ ಭಕ್ತಿತತ್ಪರರಾದ ಬ್ರಾಹ್ಮಣರಿಗೆ, ಸ್ವಶಕ್ತ್ಯನುಸಾರವಾಗಿ ಉತ್ಕೃಷ್ಟವೂ

ಪ್ರದದ್ಯಾಚ್ಛಿವಭಕ್ತೇಭ್ಯೋ ವಿಶುದ್ಧೇನಾಂತರಾತ್ಮನಾ ।
ಏವಂ ನಿರ್ವರ್ತ್ಯ ವಿಧಿವತ್ಕೃತಕೃತ್ಯಃ ಪುಮಾನ್ಭವೇತ್ ॥ ೪೫ ॥

ನಾರೀ ವಾ ಭರತಶ್ರೇಷ್ಠ ಕುಮಾರೀ ವಾ ಯತವ್ರತಾ ।
ಪಾರಿತೇ ತು ವ್ರತೇ ಪಶ್ಚಾತ್ಕುರ್ಯಾಚ್ಚ ಸುಮಹೋತ್ಸವಂ ॥ ೪೬ ॥

ಅನೇನ ವಿಧಿನಾ ಕುರ್ಯಾದ್ಯಸ್ತ್ವನಂಗತ್ರಯೋದಶೀಂ ।
ಸ ರಾಜ್ಯಂ ನಿಹತಾಮಿತ್ರಂ ಕೀರ್ತಿಮಾಯುರ್ಯಶೋ ಬಲಂ ॥ ೪೭ ॥

ಸೌಭಾಗ್ಯಂ ಮಹದಾಪ್ನೋತಿ ಯಾವಜ್ಜನ್ಮಶತಂ ನೃಪ ।
ತತೋ ನಿರ್ವಾಣಮಾಯಾತಿ ಶಿವಲೋಕಂ ಚ ಗಚ್ಛತಿ ॥ ೪೮ ॥

---

ಮಧುರರಸಭೂಯಿಷ್ಟವೂ ಷಡ್ರಸೋಪೇತವೂ ಆದ ಭೋಜನವನ್ನು ಶುದ್ಧಾಂತಃ ಕರಣದಿಂದ ಮಾಡಿಸಬೇಕು. ಪುರುಷನು ಈರೀತಿ ವಿಧಿವತ್ತಾಗಿ ಈ ವ್ರತವನ್ನು ಆಚರಿಸಿದುದರಿಂದ ಕೃತಕೃತ್ಯನಾಗುತ್ತಾನೆ.

೪೬. ಅಯ್ಯಾ ಭರತಶ್ರೇಷ್ಠನೇ ! ಹೆಂಗಸು ಅಥವಾ ಅವಿವಾಹಿತಳಾದ ಕನ್ನಿಕೆ ಇವರು ಈ ನಿಯಮಯುಕ್ತರಾಗಿ ಇದನ್ನು ಆಚರಿಸಿದರೆ, ಅವರೂ ಕೃತ ಕೃತ್ಯರಾಗುತ್ತಾರೆ. ಈ ವ್ರತವನ್ನು ಒಂದುವರ್ಷ ಈರೀತಿ ಆಚರಿಸಿ ಪೂರ್ತಿ ಯಾದ ಮೇಲೆ ವರ್ಷಾಂತದಲ್ಲಿ ಶಿವಮಹೋತ್ಸವವನ್ನು ಮಾಡಬೇಕು.

೪೭. ಅಯ್ಯಾ ರಾಜನೇ ! ಯಾವ ಪುರುಷನು ಈ ಅನಂಗತ್ರಯೋದಶೀ ವ್ರತವನ್ನು ಈ ಕ್ರಮದಲ್ಲಿ ಆಚರಿಸುವನೋ, ಅವನು ನೂರುಜನ್ಮಗಳವರೆಗೂ ಶತ್ರುಬಾಧೆ ಕ್ಷಾಮಬಾಧೆ ಇತ್ಯಾದಿಗಳಿಲ್ಲದೆ ನಿಷ್ಕಂಟಕವಾದ ರಾಜ್ಯವನ್ನು ಅನು ಭವಿಸುತ್ತಾನೆ.

೪೮. ಅಲ್ಲದೆ ಕೀರ್ತಿ, ಆಯುಷ್ಯ, ಯಶಸ್ಸು, ಬಲ, ಮಹಾಸೌಭಾಗ್ಯ ಇವುಗಳನ್ನು ಪಡೆಯುತ್ತಾನೆ. ಅನಂತರ ಶಿವಲೋಕಕ್ಕೆ ಹೋಗಿ, ಅಲ್ಲಿ ಸುಖ ವನ್ನನುಭವಿಸಿ ಕೊನೆಗೆ ಮುಕ್ತನಾಗುತ್ತಾನೆ.

ಕಾಮೇನ ಯಾ ಕಿಲ ಪುರಾ ಸಮುಪೋಷಿತಾಸೀ- ।
ಚ್ಛುಭ್ರಾ ತಿಥಿಸ್ತ್ರಿದಶಮೀ ಸುಶುಭಾಂಗಹೇತೋಃ ।
ತಾಂ ಪ್ರಾಶನೈರುದಿತನಾಮಯುತೈರುಪೇತಾಂ ।
ಕೃತ್ವಾ ಪ್ರಯಾತಿ ಪರಮಂ ಪದಮಿಂದುಮೌಲೇಃ ॥ ೪೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರಸಂವಾದೇ ಅನಂಗತ್ರಯೋದಶೀ ವ್ರತವರ್ಣನಂ ನಾಮ ನವತಿತಮೋಧ್ಯಾಯಃ.



೪೯. ಪೂರ್ವದಲ್ಲಿ ಮನ್ಮಥನು ಸುಂದರವಾದ ಶರೀರಪ್ರಾಪ್ತಿಯಾಗುವ ಉದ್ದೇಶದಿಂದ ಶುಕ್ಲಪಕ್ಷದ ತ್ರಯೋದಶಿಯಲ್ಲಿ ಉಪವಾಸಪೂರ್ವಕ ಆಚರಿಸಿದ ಅನಂಗತ್ರಯೋದಶೀ ವ್ರತವನ್ನು, ಮಾಸಕ್ರಮದಲ್ಲಿ ಹೇಳಿದ ಈಶ್ವರನ ನಾಮವಿಶೇಷಗಳನ್ನು ಹೇಳಿ ಪೂಜೆ, ಹಾಗೆಯೇ ಮಾಸಕ್ರಮದಿಂದಲೇ ಹೇಳಿದ ಪ್ರಾಶನಾದ್ರವ್ಯಗಳ ಪ್ರಾಶನೆ, ಇವುಗಳ ಸಹಿತವಾಗಿ ಆಚರಿಸಿದವನು ಶ್ರೀ ಚಂದ್ರಶೇಖರಸ್ವಾಮಿಯ ಉತ್ತಮಪದವನ್ನು ಪಡೆಯುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಅನಂಗ ತ್ರಯೋದಶೀ ವ್ರತವರ್ಣನೆಯೆಂಬ ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಏಕನವತಿತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಅಂಬುಪೂರ್ಣತಡಾಗೇಷು ಮಹಾತೋಯಾಶಯೇಷು ಚ ।
ಕಸ್ಯಾರ್ಥಂ ಸಂಪ್ರಯಚ್ಛಂತಿ ಕೃಷ್ಣೈತಾಃ ಕುಲಯೋಷಿತಃ ॥ ೧ ॥

॥ ಶ್ರೀ ಕೃಷ್ಣ ಉವಾಚ ॥

ಮಾಸಿ ಭಾದ್ರಪದೇ ಪ್ರಾಪ್ತೇ ಶುಕ್ಲೇ ಭೂತತಿಥೌ ನೃಪ ।
ತಡಾಗಪಾಲ್ಯಾಂ ದಾತವ್ಯಂ ವರುಣಾಯಾರ್ಘ್ಯಮುತ್ತಮಂ ॥ ೨ ॥

---

## ತೊಂಭತ್ತೊಂದನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಅಯ್ಯಾ ಕೃಷ್ಣನೇ ! ನೀರುತುಂಬಿದ ಕೊಳಗಳಲ್ಲೂ, ದೊಡ್ಡ ಜಲಾಶಯಗಳಲ್ಲೂ, ಕುಲಸ್ತ್ರೀಯರು ಯಾರಿಗೆ ಅರ್ಘ್ಯ ಪ್ರದಾನ ಮಾಡುವರು ? ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ರಾಜನೇ ! ಭಾದ್ರಪದ ಮಾಸದ ಶುಕ್ಲಪಕ್ಷದ ಚತುರ್ದಶಿಯು ಬಂದಾಗ (ಪ್ರಾಪ್ತವಾದಾಗ) ಕೆರೆಗೋ, ನದಿಗೋ ಹೋಗಿ, ಅಲ್ಲಿ ವರುಣದೇವನಿಗೆ ಉತ್ತಮವಾದ ಅರ್ಘ್ಯಪ್ರದಾನವನ್ನು ಮಾಡಬೇಕು.

ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈಃ ಸ್ತ್ರೀಭಿಸ್ತಥೈವ ಚ ।
ತಸ್ಮಿನ್ದಿನೇ ಭಕ್ತಿನಮ್ರೈರ್ದದ್ಯಾದರ್ಘ್ಯಂ ಯುಧಿಷ್ಠಿರ ॥ ೩ ॥

ಪುಷ್ಪೈಃ ಫಲೈಸ್ತಥಾ ವಸ್ತ್ರೈರ್ದೀಪಾಲಕ್ತಕಚಂದನೈಃ ।
ಅನಗ್ನಿಪಾಕಸಿದ್ಧಾನ್ನೈಸ್ತಿಲತಂಡುಲಮಿಶ್ರಕೈಃ ॥ ೪ ॥

ಖರ್ಜೂರೈರ್ನಾಲಿಕೇರೈಶ್ಚ ಬೀಜಪೂರ್ಣಾರಕೈಸ್ತಥಾ ।
ದ್ರಾಕ್ಷಾದಾಡಿಮಪೂಗೈಶ್ಚ ತ್ರಪುಸೈಶ್ಚಾಪಿ ಪೂಜಯೇತ್ ॥ ೫ ॥

ಆಲಿಖ್ಯ ಮಂಡಲೇ ದೇವಂ ವರುಣಂ ವಾರುಣೀಯುತಂ ।
ಮಂತ್ರೇಣಾನೇನ ರಾಜೇಂದ್ರ ಪೂಜಯೇದ್ಭಕ್ತಿಭಾವತಃ ॥ ೬ ॥

ವರುಣಾಯ ನಮಸ್ತುಭ್ಯಂ ನಮಸ್ತೇ ಯಾದಸಾಂಪತೇ ।
ಅಪಾಂಪತೇ ನಮಸ್ತೇಽಸ್ತು ರಸಾನಾಂಪತಯೇ ನಮಃ ॥ ೭ ॥

---

೩. ಅಯ್ಯಾ ಯುಧಿಷ್ಠಿರನೇ ! ಆ ದಿನ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಇವರಲ್ಲಿ ಹೆಂಗಸರೂ ಗಂಡಸರೂ ಭಕ್ತಿಯಿಂದ ನಮ್ರರಾಗಿ ವರುಣನಿಗೆ ಅರ್ಘ್ಯವನ್ನು ಕೊಡಬೇಕು.

೪-೫. ಮತ್ತು ಪುಷ್ಪ, ವಸ್ತ್ರ, ಅರಗು, ಚಂದನ ಇವುಗಳಿಂದಲೂ ಫಲ, ಅಗ್ನಿಪಾಕಮಾಡದಿರುವ ಇತರ ಖಾದ್ಯವಸ್ತುಗಳು, ತಿಲಮಿಶ್ರಿತ ತಂಡುಲ, ಖರ್ಜೂರ, ನಾಳಿಕೇರ, ಮಾದಲ, ದ್ರಾಕ್ಷೆ, ದಾಳಿಂಬ, ಅಡಿಕೆ ಇತ್ಯಾದಿ ಫಲಗಳನ್ನೆಲ್ಲಾ ಸಮರ್ಪಣೆಮಾಡಿ ಪೂಜಿಸಬೇಕು.

೬. ಅಯ್ಯಾ ರಾಜೇಂದ್ರನೇ ! ಮಂಡಲದಲ್ಲಿ ವಾರುಣೀಸಹಿತವಾಗಿ ವರುಣನ ವಿಗ್ರಹವನ್ನು ಬರೆದು ಭಕ್ತಿಯುತಮನಸ್ಕನಾಗಿ ಈ ಮಂತ್ರದಿಂದ ಪೂಜಿಸಿ ಪ್ರಾರ್ಥಿಸಬೇಕು.

೭-೮. ಓ ವರುಣನೇ ! ಜಲಜಂತುಗಳಿಗೆ ಅಧಿಪತಿಯಾದ ನಿನಗೆ ನಮಸ್ಕಾರಗಳು. ಮತ್ತು ಜಲಾಧಿಪತಿಯಾದ ನಿನಗೆ ಅನಂತನಮಸ್ಕಾರಗಳು

ಮಾ ಕ್ಲೇದಂ ಮಾ ಚ ದೌರ್ಗಂಧ್ಯಂ ವಿರಸ್ಯಂ ಮಾ ಮುಖೇಽಸ್ತುಮೇ ।
ವರುಣೋ ವಾರುಣೀಭರ್ತಾ ವರದೋಽಸ್ತು ಸದಾ ಮಮ (ಸ್ವಾಹಾ)

ಏವಂ ಯಃ ಪೂಜಯೇದ್ಭಕ್ತ್ಯಾ ವರುಣಂ ವರುಣಾಲಯಂ ।
ಮಧ್ಯಾಹ್ನೇ ಸರಸಿ ಸ್ನಾತ್ವಾಽನಗ್ನಿಪಾಕೀ ವ್ರತೀ ನೃಪ ॥ ೯ ॥

ಚಾತುರ್ವರ್ಣ್ಯಾಥ ವೈ ನಾರೀ ವ್ರತೇನಾನೇನ ಪಾಂಡವ ।
ನೈವೇದ್ಯಂ ಬ್ರಾಹ್ಮಣೇ ದೇಯಂ ಯನ್ನೈವೇದ್ಯೇ ಪ್ರಕಲ್ಪಿತಂ ॥ ೧೦ ॥

ಏವಂ ಯಃ ಕುರುತೇ ಪಾರ್ಥ ಪಾಲೀವ್ರತಮನುತ್ತಮಂ ।
ತತ್ಕ್ಷಣಾತ್ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೧೧ ॥

---

ಮತ್ತು ರಸಾಧಿಪತಿಯಾದ ನಿನಗೆ ವಂದನೆ. ನನ್ನ ಶರೀರದಲ್ಲಿ ಬೆವರಿನ ಹನಿ ಮತ್ತು ಅದರ ದುರ್ಗಂಧ, ಮತ್ತು ನನ್ನ ಬಾಯಿಯಲ್ಲಿ ದುರ್ವಾಸನೆಯ ರಸ, ಇವು ಎಂದಿಗೂ ಬಾರದಿರಲಿ. ವಾರುಣೀಪತಿಯಾದ ವರುಣನು ನನಗೆ ಯಾವಾಗಲೂ ವರದಾತೃವಾಗಲಿ ಎಂದು ಪ್ರಾರ್ಥನಾಮಂತ್ರದ ಅರ್ಥ.

೯. ಅಯ್ಯಾ ರಾಜನೇ ! ವ್ರತಿಯು ಮಧ್ಯಾಹ್ನದಲ್ಲಿ ಸರೋವರದಲ್ಲಿ ಸ್ನಾನಮಾಡಿ, ಜಲಾಧಿವಾಸನಾಗಿರುವ ಶ್ರೀ ವರುಣದೇವನನ್ನು ಈ ಪ್ರಕಾರವಾಗಿ ಭಕ್ತಿಯಿಂದ ಪ್ರಾರ್ಥಿಸಿ ಆ ದಿನ ಅಗ್ನಿಪಾಕವನ್ನು ತ್ಯಜಿಸಿರಬೇಕು.

೧೦. ಅಯ್ಯಾ ಪಾಂಡವನೇ! ಬ್ರಾಹ್ಮಣಾದಿ ನಾಲ್ಕುವರ್ಣದ ಗಂಡಸರೂ, ಹೆಂಗಸರೂ, ಈ ವ್ರತದಿಂದ ವರುಣನನ್ನು ಆರಾಧಿಸಬೇಕು ನೈವೇದ್ಯಸಮರ್ಪಣೆಗೆ ಇಟ್ಟ ಫಲಾದಿಗಳನ್ನೆಲ್ಲಾ ಬ್ರಾಹ್ಮಣನಿಗೆ ದಾನಕೊಡಬೇಕು.

೧೧. ಅಯ್ಯಾ ಧರ್ಮರಾಜನೇ ! ಅತಿ ಉತ್ತಮವಾದ ಈ ಪಾಲೀ ವ್ರತವನ್ನು ಈ ಕ್ರಮದಿಂದ ಯಾವನು ಆಚರಿಸುವನೋ, ಅವನು ತಕ್ಷಣದಲ್ಲೇ ಸರ್ವಪಾಪಗಳಿಂದಲೂ ಮುಕ್ತನಾಗುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

ಸಂರುದ್ಧಶುದ್ಧಸಲಿಲಾತಿಬಲಾಂ ವಿಶಾಲಾಂ ।
ಪಾಲೀಮುಪೇತ್ಯ ಬಹುಭಿಸ್ತರುಭಿಃ ಕೃತಾಲೀಂ ।
ಯೇ ಪೂಜಯಂತಿ ವರುಣಂ ಸಹಿತಂ ಸಮುದ್ರೈ- ।
ಸ್ತೇಷಾಂ ಗೃಹೇ ಭವತಿ ಭೂತಿರಲಬ್ಧನಾಶಾ ॥ ೧೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿಸಂವಾದೇ ಪಾಲೀವ್ರತವರ್ಣನಂ
ನಾಮ್ಯೈಕನವತಿತಮೋಽಧ್ಯಾಯಃ.



---

೧೨. ಶುದ್ಧವಾದ ಜಲವನ್ನು ತಡೆದುನಿಲ್ಲುವಂತೆ ಅತಿಬಲವಾಗಿ ಕಟ್ಟಿಕಟ್ಟಿ ಅತಿ ವಿಶಾಲವಾಗಿಯೂ, ಅನೇಕ ವೃಕ್ಷಗಳ ಪಂಕ್ತಿಗಳಿಂದ ಸಹಿತವಾಗಿಯೂ ಇರುವ ಜಲಾಶಯಕ್ಕೆ ಹೋಗಿ, ಯಾರು ಸಮುದ್ರಾಧಿಪನಾದ ವರುಣದೇವನನ್ನು ಪೂಜಿಸುವರೋ, ಅವರ ಮನೆಯಲ್ಲಿ ಸಂಪತ್ತು ಪ್ರಾಪ್ತವಾಗಿ ಎಂದೂ ನಾಶವಾಗದೆ ಸ್ಥಿರವಾಗಿರುವುದು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಪಾಲೀ
ವ್ರತವರ್ಣನೆಯೆಂಬ ತೊಂಭತ್ತೊಂದನೆಯ
ಅಧ್ಯಾಯವು ಮುಗಿದುದು.

|| ಶ್ರೀ ||

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ದ್ವಿನವತಿತಮೋಽಧ್ಯಾಯಃ

---

|| ಶ್ರೀ ಕೃಷ್ಣ ಉವಾಚ
**ಅಸ್ಮಿನ್ನೇವ ದಿನೇ ಪಾರ್ಥ ಶೃಣು ಬ್ರಹ್ಮಸಭಾತಲೇ |**
**ದೇವಲೇನ ಪುರಾ ಗೀತಂ ದೇವರ್ಷಿಗಣಸನ್ನಿಧೌ || ೧ ||**

**ಅಪ್ಸರೋಗಣಗಂಧರ್ವೈರ್ದೇವೈಃ ಸರ್ವೈಃ ಸಮರ್ಚಿತಂ |**
**ಸಂಸಾರಾಸಾರತಾಂ ದೃಷ್ಟ್ವಾ ತತ್ರಸ್ಥಕದಲೀದ್ರುಮೇ || ೨ ||**

**ಶುಕ್ಲಪಕ್ಷೇ ಚತುರ್ದಶ್ಯಾಂ ಮಾಸಿ ಭಾದ್ರಪದೇ ನೃಪ |**
**ದತ್ತಮರ್ಘ್ಯಂ ವರಸ್ತ್ರೀಭಿಃ ಫಲೈರ್ನಾನಾವಿಧೈಃ ಶುಭೈಃ |**
**ವಿರೂಢೈಃ ಸಪ್ತಧಾನ್ಯೈಶ್ಚ ದೀಪಾಲಕ್ತಕಚಂದನೈಃ || ೩ ||**

.... .... .... .

### ತೊಂಭತ್ತೆರಡನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಕುಂತೀಪುತ್ರನೇ ! ಪೂರ್ವದಲ್ಲಿ ಬ್ರಹ್ಮಸಭೆಯಲ್ಲಿ ದೇವತೆಗಳು, ಋಷಿಗಳು, ಇವರ ಸನ್ನಿಧಿಯಲ್ಲಿ, ಭಾದ್ರಪದ ಶುಕ್ಲ ಚತುರ್ದಶಿಯಲ್ಲಿ ದೇವಲನು ಹೇಳಿದ್ದನ್ನು ಶ್ರವಣಮಾಡು ಎಂದನು.

೨-೩. ಅಯ್ಯಾ ರಾಜನೇ ! ಸಂಸಾರವು ನಿಸ್ಸಾರವಾದುದ್ದು ಎಂದು ತಿಳಿದು, ಪೂರ್ವದಲ್ಲಿ ಉತ್ತಮ ಸ್ತ್ರೀಯರು ಭಾದ್ರಪದಮಾಸದ ಶುಕ್ಲಪಕ್ಷದ ಚತುರ್ದಶಿಯಲ್ಲಿ, ಅಪ್ಸರರು ಗಂಧರ್ವರು ಎಲ್ಲಾ ದೇವತೆಗಳು ಇವರಿಂದ ಪೂಜಿತವಾದ, ಕದಲೀವೃಕ್ಷಕ್ಕೆ (ಬಾಳೆಗಿಡ) ಅರ್ಘ್ಯಪ್ರದಾನಮಾಡಿ, ನಾನಾವಿಧವಾದ ಶುಭಫಲಗಳು, ಅಂಕುರಿಸಿದ ಸಪ್ತಧಾನ್ಯಗಳು, ದೀಪ, ಮತ್ತು ಅಲಕ್ತಕಚಂದನ ಇವುಗಳಿಂದ ಪೂಜೆಮಾಡಿದರು.

ದಧಿದೂರ್ವಾಕ್ಷತೈರ್ವಸ್ತ್ರೈರ್ನೈವೇದ್ಯೈರ್ಘೃತಪಾಚಿತೈಃ ।
ಜಾತೀಫಲೈರ್ಲವಂಗೈಶ್ಚ ತಥೈಲಾಲವಲೀಫಲೈಃ ॥ ೪ ॥

ಕದಲ್ಯೈಃ ಕಂದರಭಟ್ಯೈರ್ಮೋಚಾ ಸಾತ್ರ ನಿಗದ್ಯತೆ ।
ತಸ್ಮಿನ್ನಹನಿ ದಾತವ್ಯಂ ಸ್ತ್ರೀಭಿಃ ಸರ್ವಾಭಿರಪ್ಯಲಂ ॥ ೫ ॥

ಮಂತ್ರೇಣಾನೇನ ಚೈವಾರ್ಘ್ಯಂ ಶೃಣುಷ್ವ ಚ ನರಾಧಿಪ ।
ಚಿತ್ಯಾ ಸ್ಥಂ ಕಂದಲದಲ್ಯೈಃ ಕದಲೇ ಕಾಮದಾಯಿನಿ ।
ಶರೀರಾರೋಗ್ಯಲಾವಣ್ಯಂ ದೇಹಿ ದೇವಿ ನಮೋಽಸ್ತು ತೇ ॥ ೬ ॥

ಇತ್ಥಂ ಯಃ ಪೂಜಯೇದ್ರಾಜಾ ಪುರುಷೋ ಭಕ್ತಿಮಾನ್ನೃಪ ।
ನಾರೀ ವಾನಗ್ನಿಪಾಕಾಂತಾ ಚಾತುರ್ವರ್ಣ್ಯಾ ಯುಧಿಷ್ಠಿರ ॥ ೭ ॥

---

೪-೫. ಆದುದರಿಂದ ಎಲ್ಲಾ ಹೆಂಗಸರೂ ಆ ದಿನದಲ್ಲಿ ಕದಳೀವೃಕ್ಷಕ್ಕೆ ಮೊಸರು, ಗರಿಕೆ, ಅಕ್ಷತೆ, ವಸ್ತ್ರ, ಘೃತಪಕ್ವವಾದ ನೈವೇದ್ಯ, ಜಾಜೀಕಾಯಿ, ಲವಂಗ, ಏಲಕ್ಕಿ, ಬಾಳೇಹಣ್ಣು, ಸುವರ್ಣಗಡ್ಡೆ, ಇವುಗಳಿಂದ ಪೂಜೆಮಾಡ ಬೇಕು. ಮೋಚಾಫಲವು (ರಸಬಾಳೆಯಹಣ್ಣು) ಈ ಪೂಜೆಯಲ್ಲಿ ಫಲಸಮರ್ಪಣೆ ಗಾಗಿ ಉಕ್ತವಾಗಿದೆ.

೬. ಅಯ್ಯಾ ರಾಜನೇ ! ಆ ಪೂಜೆಯಲ್ಲಿ ಈ ಮುಂದೆ ಹೇಳಿರುವ ಅರ್ಥ ವುಳ್ಳ ಮಂತ್ರವನ್ನು ಹೇಳಿ ಅರ್ಘ್ಯಕೊಡಬೇಕು. ಓ ಇಷ್ಟಾರ್ಥಪ್ರದಳಾಗಿರುವ ಕದಳೀದೇವಿಯೇ ! ಎಲೆಗಳು ಒಟ್ಟಾಗಿ ಸೇರಿ ಬೆಳೆದಿರುವುದರಿಂದ ನೀನು ಮನೋಹರವಾಗಿ ಕಾಣುವೆ. ಅಂತಹ ನೀನು ನನಗೆ ಶರೀರಾರೋಗ್ಯ, ದೇಹ ಲಾವಣ್ಯಾದಿಗಳನ್ನು ದಯೆಪಾಲಿಸು. ನಿನಗೆ ಮತ್ತೆ ವಂದಿಸುತ್ತೇನೆ.

೭-೮. ಅಯ್ಯಾ ರಾಜನೇ ! ಈರೀತಿ ಭಕ್ತಿಯಿಂದ ಕೂಡಿ ರಾಜ ಮನೆತನದವರು, ಬ್ರಾಹ್ಮಣಾದಿ ನಾಲ್ಕುವರ್ಣದ ಗಂಡಸರು ಅಥವಾ ಹೆಂಗಸರು ಅಗ್ನಿಯಿಂದ ಪಕ್ವಮಾಡಿದ ಪದಾರ್ಥಗಳನ್ನು ತಿನ್ನದೆ, ಫಲಾಹಾರ ಅಥವಾ ಉಪ ವಾಸವನ್ನುಆಚರಿಸಿ, ಪೂಜಿಸುವರೋ ಅವರ ವಂಶದಲ್ಲಿ ಯಾವಳೂ ವ್ಯಭಿಚಾರಿಣಿ

ತಸ್ಯಾಃ ಕುಲೇ ನ ಭವತಿ ಕ್ವಚಿನ್ನಾರೀ ಕುಲಾಟನೀ ।
ದುರ್ಗತಾ ದುರ್ಭಗಾ ವಂಧ್ಯಾ ಸ್ವೈರಿಣೀ ಪಾಪಕಾರಿಣೀ ॥ ೮ ॥

ವಿಲಾಸಿನೀ ವಾ ವೃಷಲೀ ಪುನರ್ಭೂಃ ಪುನರೇನಸೀ ।
ಗಣಿಕಾ ಸ್ವೈರಿಣೀ ವೋಢಾ ಮೂಲ್ಯಕರ್ಮಕರೀ ಖಲಾ ॥ ೯ ॥

ಭರ್ತೃವ್ರತಾತ್ಪ್ರಚಲಿತಾ ನ ಕದಾಚಿತ್ಪ್ರಜಾಯತೇ ।
ಭವೇತ್ಸೌಭಾಗ್ಯಸೌಖ್ಯಾಢ್ಯಾ ಪುತ್ರಪೌತ್ರೈಸ್ತಥಾವೃತಾ ॥ ೧೦ ॥
ಆಯುಷ್ಮತೀ ಕೀರ್ತಿಮತೀ ರಮೇದ್ವರ್ಷಶತೈರ್ಭುವಿ ।

ಏಕಂ ರಂಭಾವ್ರತಂ ಚೀರ್ಣಂ ಗಾಯತ್ರ್ಯಾ ಸ್ವರ್ಗಸಂಸ್ಥಯಾ ।
ತಥಾ ಗೌರ್ಯಾ ಚ ಕೈಲಾಸ ಇಂದ್ರಾಣ್ಯಾ ನಂದನೇ ವನೇ ॥ ೧೧ ॥

---

ಯಾಗಲಿ, ಮನೆಮನೆಗೆ ಅಲೆಯುವ ದುರ್ನಡತೆಯವಳಾಗಲಿ, ದೌರ್ಭಾಗ್ಯಳಾಗಲಿ, ಬಂಜೆಯಾಗಲಿ, ಸ್ವೇಚ್ಛಾನುವರ್ತಿಯಾಗಲಿ, ಪಾಪಮಾಡುವವಳಾಗಲಿ ಇರುವುದಿಲ್ಲ.

೯. ಮತ್ತು ಬೆಡಗುಳ್ಳವರು, ವಿಲಾಸವತಿ, ಶೂದ್ರಸ್ತ್ರೀಯ ಆಚಾರವುಳ್ಳವಳು, ಮೊದಲಿನ ಗಂಡನು ಮೃತನಾದ ಮೇಲೆ ಪುನರ್ವಿವಾಹ ಮಾಡಿಕೊಳ್ಳುವಳು, ಪಾಪಿಷ್ಠಳು, ವೇಶ್ಯಾವೃತ್ತಿಯುಳ್ಳವಳು, ಮದುವೆಯಾಗಿದ್ದೂ ದುರ್ನಡತೆಗೆ ಬಿದ್ದವಳು, ಹಣತೆಗೆದುಕೊಂಡು ಕೆಲಸಮಾಡುವವಳು, ದುಷ್ಟಳು, ದುಷ್ಟಳು, ಇಂಥ ಸ್ತ್ರೀಯು ಅವರ ವಂಶದಲ್ಲಿ ಎಂದಿಗೂ ಜನಿಸುವುದಿಲ್ಲ.

೧೦. ಮತ್ತು ಅವಳೂ ಪಾತಿವ್ರತ್ಯದಿಂದ ಯಾವಾಗಲೂ ಪ್ರಚಲಿತಳಾಗುವುದಿಲ್ಲ. ಮತ್ತು ಈ ಭೂಲೋಕದಲ್ಲಿ ಸೌಭಾಗ್ಯ ಸೌಖ್ಯಾದಿಗಳಿಂದ ಯುಕ್ತಳೂ, ಮತ್ತು ಪುತ್ರಪೌತ್ರಾದಿ ಪರಿವೃತಳೂ, ಆಯುಷ್ಮತಿಯೂ ಕೀರ್ತಿವಂತೆಯೂ, ಆಗಿ ನೂರುವರ್ಷಗಳವರೆಗೆ ಸಂತೋಷದಿಂದ ಕ್ರೀಡಿಸುತ್ತ ಇರುತ್ತಾಳೆ.

೧೧. ಈ ರಂಭಾವ್ರತವನ್ನು ಪೂರ್ವದಲ್ಲಿ ಸ್ವರ್ಗದಲ್ಲಿದ್ದುಕೊಂಡು ಗಾಯತ್ರೀದೇವಿಯು ಆಚರಿಸಿರುತ್ತಾಳೆ. ಹಾಗೆಯೇ ಪಾರ್ವತಿಯು ಕೈಲಾಸದಲ್ಲೂ, ಶಚೀದೇವಿಯು ನಂದನವನದಲ್ಲಿಯೂ, ಆಚರಿಸಿರುತ್ತಾಳೆ.

ಶ್ವೇತದ್ವೀಪೇ ತಥಾ ಲಕ್ಷ್ಮ್ಯಾ ರಾಜ್ಞ್ಯಾ ಚ ರವಿಮಂಡಲೇ ।
ಅರುಂಧತ್ಯಾ ದಾರುವನೇ ಸ್ವಾಹಯಾ ಮೇರುಪರ್ವತೇ ॥ ೧೨ ॥

ಸೀತಾದೇವ್ಯಾ ತ್ವಯೋಧ್ಯಾಯಾಂ ವೇದವತ್ಯಾ ಹಿಮಾಚಲೇ ।
ಭಾನುಮತ್ಯಾ ನಾಗಪುರೇ ವ್ರತಮೇತದನುಷ್ಠಿತಂ ॥ ೧೩ ॥

ಏತದ್ವ್ರತಂ ಪಾರ್ಥಿವೇಂದ್ರ ಮಾಸಿ ಭಾದ್ರಪದೇ ಸಿತೇ ।
ಯಾ ಕರೋತಿ ನ ಸಾ ದುಃಖೈಃ ಕದಾಚಿದಪಿ ಪೀಡ್ಯತೇ ॥ ೧೪ ॥

ಸಂಭಿನ್ನಕಂದಕದಲೀಂ ಚ ಮನೋಜ್ಞರೂಪಾಂ ।
ಯಾಃ ಪೂಜಯಂತಿ ಕುಸುಮಾಕ್ಷತಧೂಪದೀಪೈಃ ।

---

೧೨. ಅಲ್ಲದೆ ಲಕ್ಷ್ಮೀದೇವಿಯು ಶ್ವೇತದ್ವೀಪದಲ್ಲೂ, ಸೂರ್ಯಪತ್ನಿಯಾದ ರಾಜ್ಞೀದೇವಿಯು ಸೂರ್ಯಮಂಡಲದಲ್ಲೂ, ವಸಿಷ್ಠಪತ್ನಿಯಾದ ಅರುಂಧತಿಯು ದೇವದಾರು ವನದಲ್ಲೂ, ಅಗ್ನಿಪತ್ನಿಯಾದ ಸ್ವಾಹಾದೇವಿಯು ಮೇರುಪರ್ವತದಲ್ಲೂ ಆಚರಿಸಿರುತ್ತಾರೆ.

೧೩. ಮತ್ತು ಶ್ರೀರಾಮ ಪತ್ನಿಯಾದ ಸೀತಾದೇವಿಯು ಅಯೋಧ್ಯಾ ನಗರಿಯಲ್ಲೂ, ವೇದವತಿಯು ಹಿಮಾಚಲದಲ್ಲೂ, ಭಾನುಮತಿಯು ಹಸ್ತಿನಾನಗರಿಯಲ್ಲಿಯೂ, ಈ ವ್ರತವನ್ನು ಆಚರಿಸಿರುವರು.

೧೪. ಅಯ್ಯಾ ರಾಜೇಂದ್ರನೇ ! ಭಾದ್ರಪದಮಾಸದ ಶುಕ್ಲಪಕ್ಷದ ಚತುರ್ದಶಿಯಲ್ಲಿ ಈ ವ್ರತವನ್ನು ಯಾವ ಹೆಂಗಸು ಮಾಡುವಳೋ, ಅವಳು ಯಾವ ಕಾಲದಲ್ಲೂ ದುಃಖಗಳಿಂದ ಪೀಡಿತಳಾಗುವುದಿಲ್ಲ.

೧೫. ಯಾವ ಸ್ತ್ರೀಯರು ಮನೋಹರವಾದ ರೂಪವುಳ್ಳ, ಮೊಳಕೆಯಾಗಿರುವ ಕದಳೀವೃಕ್ಷವನ್ನು, ಪುಷ್ಪ, ಅಕ್ಷತೆ, ಧೂಪ, ದೀಪಾದಿಗಳಿಂದ ಪೂಜಿಸು

ತಾಸಾಂ ಗೃಹೇಷು ನ ಭವಂತಿ ಕದಾಚಿದೇವ ।
ನಾರ್ಯಸ್ತ್ವನಾರ್ಯಚರಿತಾ ವಿಧವಾ ವಿರೂಪಾಃ ॥ ೧೫ ।

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರಸಂವಾದೇ ರಂಭಾವ್ರತಂ ನಾಮ
ದ್ವಿನವತಿತಮೋಽಧ್ಯಾಯಃ.



---

ತ್ತಾರೋ, ಅವರ ಮನೆಗಳಲ್ಲಿ ಯಾವಾಗಲೂ ಹೆಂಗಸರು ದುರ್ನಡತೆಯುಳ್ಳವರೂ, ವಿಧವೆಯರೂ, ಕುರೂಪಿಣಿಯರೂ ಆಗುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ರಂಭಾ
ವ್ರತವರ್ಣನೆಯೆಂಬ ತೊಂಭತ್ತೆರಡನೆಯ
ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ತ್ರಿನವತಿತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ಚತುರ್ದಶೀ ಮಹಾರಾಜ ಹುತಭುಗ್ದಯಿತಾ ಶುಭಾ ।
ನಷ್ಟಸ್ತದಾ ಹವ್ಯವಾಹಃ ಪುನರಸ್ತಿತ್ವಮಾಪ್ತವಾನ್ ॥ ೧ ॥

॥ ಯುಧಿಷ್ಠಿರ ಉವಾಚ ॥

ಕಥಮಗ್ನಿಃ ಪುರಾ ನಷ್ಟೋ ದೇವಕಾರ್ಯೇಪ್ಯುಪಸ್ಥಿತಃ ।
ಕೇನಾಗ್ನಿತ್ವಂ ಕೃತಂ ತತ್ರ ಕಥಂ ಹಿ ವಿದಿತೋಽನಲಃ ।
ಏತದ್ವದಸ್ವ ದೇವೇಶ ಸರ್ವಂ ಹಿ ವಿದಿತಂ ತವ ॥ ೨ ॥

---

### ತೊಂಭತ್ತಮೂರನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಮಹಾರಾಜನೇ ! ಅಗ್ನಿ ದೇವನಿಗೆ ಪ್ರೀತಿಪಾತ್ರವಾದ ಇನ್ನೊಂದು ಚತುರ್ದಶಿಯು ಇದೆ. ನಷ್ಟನಾದ (ಕಾಣಿಸಿಕೊಳ್ಳದೇ ಅದೃಶ್ಯನಾಗಿದ್ದ) ಅಗ್ನಿಯು ಆ ದಿನ ಪುನಃ ದೃಗ್ಗೋಚರ ನಾದನು ಎಂದನು.

೨. ಯುಧಿಷ್ಠಿರನು ಹೇಳುತ್ತಾನೆ—ಎಲೈ ದೇವಾಧೀಶನೇ ! ದೇವಕಾರ್ಯ ಗಳಲ್ಲಿ ಉದ್ಯುಕ್ತನಾಗಿದ್ದರೂ ಪೂರ್ವದಲ್ಲಿ ಅಗ್ನಿಯು ಹೇಗೆ ನಷ್ಟನಾದನು ? ಆ ಅಗ್ನಿಯು ನಷ್ಟನಾದಾಗ ಅಗ್ನಿಯ ಕೆಲಸವನ್ನು ಯಾವನು ಮಾಡುತ್ತಿದ್ದನು ? ಅನಂತರ ಹೇಗೆ ಅಗ್ನಿಯು ಎಲ್ಲರ ತಿಳುವಳಿಕೆಗೂ ಬಂದನು ? ಈ ವಿಷಯವನ್ನು ನನಗೆ ಹೇಳು, ನೀನು ಸರ್ವಜ್ಞನು ಆದ್ದರಿಂದ ಕೃಪೆಮಾಡು ಎಂದನು.

॥ ಶ್ರೀ ಕೃಷ್ಣ ಉವಾಚ ॥

**ಪುರಾ ಸುರಾ ಮಹಾರಾಜ ತಾರಕೇಣ ಪರಾಜಿತಾಃ ।**
**ಅಪೃಚ್ಛನ್ವಿಶ್ವಕರ್ತಾರಂ ತಾರಕಂ ಕೋ ವಧಿಷ್ಯತಿ ॥ ೩ ॥**

**ಉವಾಚಾಸೌ ಚಿರಂ ಧ್ಯಾತ್ವಾ ರುದ್ರೋಮಾಶುಕ್ರಸಂಭವಃ ।**
**ಗಂಗಾಸ್ವಾಹಾಗ್ನಿತೇಜೋಜಃ ಶಿಶುರ್ದೈತ್ಯಂ ವಧಿಷ್ಯತಿ ॥ ೪ ॥**

**ಏವಂ ಶ್ರುತ್ವಾ ಗತಾ ದೇವಾ ಯತ್ರ ಶಂಭುಃ ಸಹೋಮಯಾ ।**
**ಪ್ರಣಮ್ಯ ತೇ ತಮೂಚುರ್ಹಿ ಯದುಕ್ತಂ ಬ್ರಹ್ಮಣಾ ತದಾ ॥ ೫ ॥**

**ಪ್ರತಿಪನ್ನಂ ಚ ರುದ್ರೇಣ ಉಮಯಾ ಸಹಿತೇನ ತತ್ ।**
**ಪ್ರಯತ್ನಮಕರೋತ್ತಂ ಚ ಯ ಉಕ್ತೋಮರಸತ್ತಮೈಃ ॥ ೬ ॥**

---

೩. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಮಹಾರಾಜನೇ ! ಪೂರ್ವದಲ್ಲಿ ದೇವತೆಗಳು ಯುದ್ಧದಲ್ಲಿ ತಾರಕಾಸುರನಿಂದ ಸೋತರು. ಅನಂತರ ಆ ದೇವತೆಗಳು ಪ್ರಪಂಚ ನಿರ್ಮಾಣಮಾಡಿದ ಬ್ರಹ್ಮನಿದ್ದಲ್ಲಿಗೆ ಹೋಗಿ ಆತನನ್ನು ಕುರಿತು " ಸ್ವಾಮಿನ್ ! ತಾರಕಾಸುರನನ್ನು ಯಾವನು ಕೊಲ್ಲುತ್ತಾನೆ ? " ಎಂದು ಪ್ರಶ್ನೆ ಮಾಡಿದರು.

೪. ಆಗ ಬ್ರಹ್ಮನು ಬಹುಕಾಲ ಧ್ಯಾನಿಸಿ ಆ ಧ್ಯಾನದೃಷ್ಟಿಯಿಂದ ತಿಳಿದು, " ಶ್ರೀ ಉಮಾಮಹೇಶ್ವರರ ಶುಕ್ರಶೋಣಿತಗಳು, ಗಂಗೆ, ಸ್ವಾಹಾಗ್ನಿ ಇವರ ತೇಜೋಬಲದಿಂದ ಧಾರಣೆಮಾಡಲ್ಪಟ್ಟು, ಅದರಿಂದ ಜನಿಸುವ ಬಾಲಕನು ಈ ತಾರಕಾಸುರನನ್ನು ಸಂಹರಿಸುವನು " ಎಂದು ಹೇಳಿದನು.

೫. ಆಗ ದೇವತೆಗಳು ಬ್ರಹ್ಮನು ಹೇಳಿದ ಮಾತನ್ನು ಕೇಳಿ, ಶ್ರೀ ಪರಮೇಶ್ವರ ಉಮಾದೇವಿ ಇವರು ಇರುವಲ್ಲಿಗೆ ಹೋಗಿ, ಅವರಿಗೆ ನಮಸ್ಕಾರಮಾಡಿ ಬ್ರಹ್ಮನು ಹೇಳಿದುದನ್ನು ಆ ಈಶ್ವರನಲ್ಲಿ ವಿಜ್ಞಾಪಿಸಿದರು.

೬. ಉಮಾಸಹಿತನಾದ ಆ ಪರಮೇಶ್ವರನು ಆ ದೇವತೆಗಳ ಪ್ರಾರ್ಥನೆಯನ್ನು ಅಂಗೀಕರಿಸಿ ಆ ದೇವತೋತ್ತಮರಿಂದ ಪ್ರಾರ್ಥಿತವಾದ ಪುತ್ರೋತ್ಪಾದನಕ್ಕಾಗಿ ಪ್ರಯತ್ನವನ್ನು ಮಾಡಿದನು.

ದಿವ್ಯಂ ವರ್ಷಶತಂ ಸಾಗ್ರಂ ಗತಃ ಕಾಲೋಽಥ ಮೈಥುನೇ ।
ನ ಚಾಪ್ಯುಪರಮಸ್ತತ್ರ ತಯೋರಾಸೀತ್ಕಥಂಚನ ।
ಭಯಂ ಚ ಸುಮಹತ್ತೇಷಾಂ ದೇವಾನಾಂ ಸಮಜಾಯತ ॥ ೭ ॥

ಸ ರುದ್ರಸಂಭವೋ ಯೋ ವೈ ಭವಿಷ್ಯತಿ ಮಹಾಬಲಃ ।
ಸ ದೈತ್ಯಾನ್ದಾನವಗಣಾನ್ವಧಿಷ್ಯತಿ ನ ಸಂಶಯಃ ॥ ೮ ॥

ಕೇನ ಕಾಲೇನ ಭವತಿ ರತೇರ್ವಿರತಿರೇತಯೋಃ ।
ಏತದ್ವಿಚಿಂತ್ಯ ಪ್ರಹಿತೌ ದೇವೈಸ್ತತ್ರಾನಿಲಾನಲೌ ॥ ೯ ॥

ಗತೌ ತೌ ಚೋಮಯಾ ದೃಷ್ಟೌ ಸಮಸ್ಥೌ ವಿಷಮಸ್ಥಯಾ ।
ಶಶಾಪ ಚ ರುಷಾ ದೇವೀ ದೇವಾನ್ಗರ್ಭವಿವರ್ಜಿತಾ ॥ ೧೦ ॥

---

೭. ಅನಂತರ ಆ ಪಾರ್ವತೀಪರಮೇಶ್ವರರ ಮಹಾಮೈಥುನ ಪ್ರಾರಂಭ ವಾಗಿ ನೂರುದಿವ್ಯವರ್ಷಗಳು ಪೂರ್ತಾ ಕಳೆದುವು. ಅಷ್ಟುಕಾಲ ಕಳೆದರೂ ಅವರ ಮೈಥುನೋಪರಮವು ಆಗಲಿಲ್ಲ. ಆದುದರಿಂದ ಆ ದೇವತೆಗಳಿಗೆಲ್ಲಾ ಮಹಾ ಭಯವು ಹುಟ್ಟಿತು.

೮. "ರುದ್ರನಿಂದ ಜನಿಸುವವನು ಮಹಾಬಲಶಾಲಿಯಾಗುವನು. ಅಲ್ಲದೆ ದೈತ್ಯರನ್ನೂ ದಾನವ ಸಮೂಹಗಳನ್ನೂ ಅವನು ನಿಸ್ಸಂಶಯವಾಗಿ ಸಂಹ ರಿಸುವನು."

೯. "ಆದರೆ ಈ ಪಾರ್ವತೀಪರಮೇಶ್ವರರ ರತಿಯ ವಿಲಾಸವು ಯಾವಾಗ ಮುಗಿಯುವುದು ಎಂಬುದೇ ಅನಿರ್ಧಾರಿತವಾಗಿದೆಯಲ್ಲಾ !" ಎಂದು ಆಲೋ ಚಿಸಿ ದೇವತೆಗಳು ಆ ಪಾರ್ವತೀಪರಮೇಶ್ವರರ ಏಕಾಂತಸ್ಥಳಕ್ಕೆ ವಾಯು ಮತ್ತು ಅಗ್ನಿ ಇವರನ್ನು ಕಳುಹಿಸಿದರು.

೧೦. ಆ ವಾಯ್ವಗ್ನಿಗಳು ಆ ಸ್ಥಳಕ್ಕೆ ಹೋಗಲಾಗಿ ರತಿಕಾಲದಲ್ಲಿ ಏಕತ್ರ ಅವರಲ್ಲಿ ಪಾರ್ವತಿಯು ವಿಷಮಸ್ಥಳಾಗಿ ನೋಡಿದಳು. ಅನಂತರ ಆ ಪಾರ್ವತೀ ದೇವಿಯು ಗರ್ಭರಹಿತಳಾಗಿ ತನ್ನ ಗರ್ಭಧಾರಣೆಗೆ ಈ ದೇವತೆಗಳು ಪ್ರತಿಬಂಧಕ ರಾದರೆಂದು ಅವರಲ್ಲಿ ಕುಪಿತಳಾಗಿ.

ಯಸ್ಮಾತ್ತ್ವೈರ್ಜನಿತೋ ವಿಘ್ನೋ ಮೋಽಪತ್ಯಾರ್ಥೇ ದಿವೌಕಸಾಂ ।
ತಸ್ಮಾತ್ತೇ ಸ್ವೇಷು ದಾರೇಷು ಜನಯಿಷ್ಯಂತಿ ನ ಪ್ರಜಾಃ ॥ ೧೧ ॥

ಅಥೋವಾಚ ತದಾ ದೇವೋ ದೇವಾನ್ಸರ್ವಗಣಾಞ್ಛನೈಃ ।
ಅಗ್ನಿರ್ಗೃಹ್ಣಾತು ವೀರ್ಯಂ ಮೇ ಸಂಭೃತಂ ಸುಚಿರಂ ಹಿ ಯತ್ ॥ ೧೨ ॥

ಏವಮುಕ್ತೋಽಥ ರುದ್ರೇಣ ನಷ್ಟೋಽಗ್ನಿರ್ದೇವಸಂಕುಲಾತ್ ।
ನ ಸ್ವಸ್ಥೋ ನ ಭುವಿಸ್ಥೋ ವಾ ನ ಸೂರ್ಯಸ್ಥೋ ನ ಭೂತಲೇ ॥ ೧೩ ॥

ದೇವಾ ಅನ್ವೇಷಣೇ ಯತ್ನಮಕುರ್ವನ್ನಗ್ನಿದರ್ಶನೇ ।
ಕೃಮಿಕೀಟಪತಂಗಾಶ್ಚ ಅಷ್ಟೌ ಚ ತ್ರಿದಿವೌಕಸಃ ॥ ೧೪ ॥

---

೧೧. ಬಳಿಕ ಆಕೆ " ಈ ದೇವತೆಗಳು ತನ್ನ ಸಂತತಿಗೆ ವಿಘ್ನಮಾಡಿದ್ದ ರಿಂದ ಆ ದೇವತೆಗಳಿಗೆ ತಮ್ಮ ಪತ್ನಿಯರಲ್ಲಿ ಪ್ರಜೋತ್ಪಾದನೆಯಾಗದೆ ಹೋಗಲಿ'' ಎಂಬದಾಗಿ ಶಾಪವನ್ನು ಕೊಟ್ಟಳು.

೧೨. ಅನಂತರ ಆ ಪರಮೇಶ್ವರನು ಎಲ್ಲಾ ದೇವತೆಗಳನ್ನೂ ಕರೆದು " ಓದೇವತೆಗಳಿರಾ ! ಬಹುಕಾಲದಿಂದ ಗಳಿಸಲ್ಪಟ್ಟು ಈಗ ಸ್ಖಲಿತವಾದ ನನ್ನ ವೀರ್ಯವನ್ನು ಅಗ್ನಿಯು ಧರಿಸಲಿ " ಎಂದು ಮೆಲ್ಲಗೆ ನುಡಿದನು.

೧೩. ಈ ರೀತಿ ಪರಮೇಶ್ವರನು ಹೇಳಿದೊಡನೆ ಅಗ್ನಿಯು ಆ ಪ್ರದೇಶ ವನ್ನು ತ್ಯಜಿಸಿ ಅದೃಶ್ಯನಾದನು. ಆ ಅಗ್ನಿಯು ಸ್ವರ್ಗದಲ್ಲೂ ಇರಲಿಲ್ಲ. ಭೂಮಿ ಯಲ್ಲೂ ಇರಲಿಲ್ಲ. ಸೂರ್ಯನಲ್ಲೂ ಇರಲಿಲ್ಲ. ಭೂಮಿಯ ಅಧೋಭಾಗವಾದ ಪಾತಾಳದಲ್ಲೂ ಇರಲಿಲ್ಲ.

೧೪-೧೫. ಆಗ ದೇವತೆಗಳು ಅಗ್ನಿಯನ್ನು ನೋಡಬೇಕೆಂದು ಹುಡುಕು ವುದಕ್ಕೆ ಪ್ರಯತ್ನಮಾಡಿದರು. ಆಗ ಕ್ರಿಮಿ, ಕೀಟ, ದೀಪವಹುಳು, ಸ್ವರ್ಗನಿವಾಸಿ ಗಳಾದ ಎಂಟುಮಂದಿ ವಸುಗಳು, ಹಂಸಗಳು, ನವಿಲುಗಳು, ಗಿಣಿಗಳು, ಇವು ಗಳೆಲ್ಲಾ " ಅಗ್ನಿಯು ಶೀಘ್ರವಾಗಿ ಶರವಣ ಎಂಬ ಪ್ರದೇಶಕ್ಕೆ (ಕಾಡಿಗೆ) ಓಡಿ ಹೋದನು'' ಎಂದು ಹೇಳಿದುವು. ಆಗ ಅಗ್ನಿಯು ಅವುಗಳನ್ನು ಕುರಿತು "ಎಲಾ

ಹಂಸಾಃ ಕೇಕಾಃ ಶುಕಾ ವಹ್ನಿಃ ಶೀಘ್ರಂ ಸರವಣಂ ಗತಃ ।
ಶಶಾಪಾಗ್ನಿರ್ಗಜಾ ಜಿಹ್ವಾ ದ್ವಿಗುಣೋ ವಾ ಭವಿಷ್ಯತಿ ॥ ೧೫ ॥

ದೃಷ್ಟ್ವಾಥ ವಿಬುಧಾಃ ಸರ್ವೇ ಪಕ್ಷಿಣಂ ಪಕ್ಷಿಣಾಂ ವರಂ ।
ಜೀವಂಜೀವಕನಾಮಾನಂ ಭೋ ಭೋಃ ಸತ್ಯಂ ವದಸ್ವ ನಃ ॥ ೧೬ ॥

ಕಚ್ಚಿದ್ದೃಷ್ಟಸ್ತ್ವಯಾ ವಹ್ನಿರ್ವನೇಽಸ್ಮಿನ್ನಟತಾ ಸದಾ ।
ನಾಭದ್ರಂ ನಾಪಿ ಭದ್ರಂ ವಾ ಕಿಂಚಿದೇವ ವಚೋಽಬ್ರವೀತ್ ॥ ೧೭ ॥

ಭೂಯೋ ಭೂಯಸ್ತು ಪೃಷ್ಟೋಽಪಿ ನ ಗಾಮುಚ್ಚಾರಯೇಚ್ಚಿರಂ ।
ತುಷ್ಟಸ್ತಸ್ಯಾಬ್ರವೀದ್ವಹ್ನಿರ್ಜೀವಂಜೀವ ವದಾಮಿ ತೇ ॥ ೧೮ ॥

ಯಸ್ಮಾನ್ನ ಕಿಂಚಿದುಕ್ತಂ ತೇ ತಸ್ಮಾಚ್ಚಿತ್ರತನೂರುಹಾಃ ।
ಜೀವ ಜೀವ ಪುನರ್ಜೀವ ಯಾವದಿಚ್ಛಾ ತಥಾಯುಷಃ ॥ ೧೯ ॥

---

ವ್ಯಕ್ತಿಗಳೇ ! ನಿಮಗೆ ಗಜಜನ್ಮ ಅಥವಾ ಎರಡು ನಾಗೆಯುಳ್ಳ ಸರ್ಪಗಳ ಜನ್ಮವು ಬರಲಿ '' ಎಂಬದಾಗಿ ಶಾಪಕೊಟ್ಟನು.

೧೬. ಅನಂತರ ಎಲ್ಲಾ ದೇವತೆಗಳೂ ಪಕ್ಷಿಶ್ರೇಷ್ಠವಾದ ಜೀವಂಜೀವಕ ಎಂಬ ಪಕ್ಷಿ (ನೌಲುರೆಕ್ಕೆಯ ಹೆಬ್ಬಕ್ಕಿ) ಯನ್ನು ನೋಡಿ ಓ ಪಕ್ಷಿಯೇ ! ನೀನು ನಮಗೆ ಸತ್ಯವನ್ನು ಹೇಳು.

೧೭. ಈ ಶರವಣವೆಂಬ ಕಾಡಿನಲ್ಲಿ ಯಾವಾಗಲೂ ತಿರುಗಾಡುತ್ತಿರುವ ನೀನು ಅಗ್ನಿಯನ್ನು ಕಂಡಿರುವೆಯಾ ? ಎಂದು ಕೇಳಿದರು. ಈ ಪ್ರಶ್ನೆಗೆ ಆ ಪಕ್ಷಿಯು ನೋಡಿಲ್ಲವೆಂಬ ಅಮಂಗಲ ಶಬ್ದವನ್ನಾಗಲಿ ನೋಡಿದ್ದೇನೆ ಎಂಬ ಮಂಗಳವಚನವನ್ನಾಗಲಿ ಹೇಳಲಿಲ್ಲ.

೧೮. ಮತ್ತೆ ಮತ್ತೆ ಆ ದೇವತೆಗಳು ಬಹುಕಾಲ ಪ್ರಶ್ನೆಮಾಡಿದರೂ ಆ ಪಕ್ಷಿಯು ಮಾತನ್ನೇ ಆಡಲಿಲ್ಲ. ಅದರಿಂದ ಸಂತುಷ್ಟನಾಗಿ ಅಗ್ನಿಯು "ಓ ಜೀವಂ ಜೀವಕವೇ ! ನಿನಗೆ ಒಂದು ವಚನವನ್ನು ಹೇಳುತ್ತೇನೆ ಕೇಳು.''

೧೯. "ನೀನು ದೇವತೆಗಳು ಎಷ್ಟು ಕೇಳಿದರೂ ಒಂದು ಮಾತನ್ನೂ ಆಡ ದಿದ್ದ ಕಾರಣ ನಿನಗೆ ವಿಚಿತ್ರವೂ ಸುಂದರವೂ ಆಗಿರುವ ಗರಿಗಳು ಬರಲಿ. ಎಲ್ಲಿಯವರೆಗೆ ನಿನಗೆ ಬದುಕಬೇಕೆಂಬ ಆಶೆಯು ಇರುವುದೋ ಅಲ್ಲಿಯವರೆಗೆ ಚಿರಾಯುವಾಗಿ ಜೀವಿಸು. ನಿನ್ನ ಆಯುಸ್ಸಿನ ಪರಮಾವಧಿಯವರೆಗೆ ಬದುಕು.''

ದ್ವಿತೀಯಂ ತೇ ವರಂ ದದ್ಮೋ ಜೀವಂಜೀವಕ ಶೋಭನಂ ।
ವ್ಯಕ್ತಾ ತೇ ಮಾನುಷೀ ವಾಚಾ ಸ್ಪಷ್ಟಾರ್ಥಾ ಚ ಭವಿಷ್ಯತಿ ॥ ೨೦ ॥

ಕಶ್ಚಿದ್ಯತಿ ತವಾಧಸ್ತಾದ್ವೃದ್ಧಃ ಸ್ನಾನಂ ಕರಿಷ್ಯತಿ ।
ವಂಧ್ಯಾ ವಾ ಷೋಡಶಾಬ್ದೀಯಾ ಕ್ಷಣಾದ್ಬಾಲೋ ಭವಿಷ್ಯತಿ ॥ ೨೧ ॥

ಮಾಂಸಂ ಯಶ್ಚ ತೃತೀಯಂ ವೈ ಭಕ್ಷಯಿಷ್ಯತ್ಯನಿಂದಿತಂ ।
ಅಜರಃ ಸೋಽಮರಶ್ಚೈವ ಸರ್ವಕಾಲಂ ಭವಿಷ್ಯತಿ ॥ ೨೨ ॥

ಇದಂ ದತ್ವಾ ವರಾಂಸ್ತಸ್ಯ ವಹ್ನಿತ್ವಮಥ ಆಪ್ತವಾನ್ ।
ವಿಬುಧಾ ಅಪಿ ತತ್ರೈವ ತನುದೃಶ್ಯಂತ ವಂಶಗಂ ॥ ೨೩ ॥

---

೨೦. ಮತ್ತು ಓ ಜೀವಂಜೀವಕನೇ ! ಉತ್ತಮವಾದ ಇನ್ನೊಂದು ವರವನ್ನು ಕೊಡುತ್ತೇವೆ. ಮನುಷ್ಯರ ವಚನವು ವ್ಯಕ್ತವಾಗಿ ನಿನ್ನ ಬಾಯಿಯಿಂದ ಹೊರಟು ಸ್ಪಷ್ಟವಾಗಿ ಅರ್ಥವಾಗುವ ಹಾಗೆ ಆಗಲಿ.

೨೧. ನೀನು ಜಲಾಶಯಪಾರ್ಶ್ವದ ವೃಕ್ಷಾದಿಗಳ ಮೇಲಿರುವಾಗ ಯಾವನಾದರೂ ಮುದುಕನು ನೀನಿರುವ ವೃಕ್ಷದ ಕೆಳಗಡೆಯಲ್ಲಿ ಸ್ನಾನಮಾಡಿದರೆ ಅವನು ಕ್ಷಣಮಾತ್ರಕ್ಕೆ ಹುಡುಗನಾಗುತ್ತಾನೆ. ಹಾಗೆಯೇ ನೀನು ಕುಳಿತಿರುವ ವೃಕ್ಷದ ಕೆಳಗಡೆ ಜಲದಲ್ಲಿ ಸ್ನಾನಮಾಡಿದಮಾತ್ರಕ್ಕೆ ಬಂಜೆಯಾದ ಮುದಿಹೆಂಗಸು ಕ್ಷಣಮಾತ್ರದಲ್ಲಿ ಹದಿನಾರುವರ್ಷದ ಯುವತಿಯಾಗುತ್ತಾಳೆ.

೨೨. ಮತ್ತು ಅನಿಷಿದ್ಧವಾದ ನಿನ್ನ ಮಾಂಸವನ್ನು ಯಾವನು ಭಕ್ಷಣೆ ಮಾಡುತ್ತಾನೋ, ಅವನು ಮುದಿತನ ಮತ್ತು ಮರಣ ಇವುಗಳಿಂದ ಯಾವಾಗಲೂ ರಹಿತನಾಗುವನು. ಇದೇ ಮತ್ತೊಂದು ವರ.

೨೩. ಅಗ್ನಿಯು ಆ ಜೀವಂಜೀವಕ ಪಕ್ಷಿಗೆ ಈ ಮೂರುವರಗಳನ್ನು ಕೊಟ್ಟು, ಅನಂತರ ಅಗ್ನಿರೂಪವನ್ನು ಧರಿಸಿದನು. ಆಗ ದೇವತೆಗಳು ಆ ಶರವಣದಲ್ಲಿ ಬಿದಿರುಮೆಳೆಯ ಮೇಲೆ ಕುಳಿತಿರುವ ಅಗ್ನಿಯನ್ನು ನೋಡಿದರು.

ಊಷ್ಮಯಾ ಜಾತಕಲ್ಮಾಷಂ ಜ್ಞಾತ್ವಾ ಸಂಹೃಷ್ಟಮಾನಸಃ ।
ತುಷ್ಟ್ವಾ ವಂಶಮಥೋಚುಸ್ತೇ ದೇವಾಸ್ತ್ರಿಭುವನೇಶ್ವರಾಃ ॥ ೨೪ ॥

ಊಷ್ಮಯಾ ಕಲ್ಮಷೀಭೂಯ ಹ್ಯಗ್ನಿರ್ಗರ್ಭಂ ಧರಿಷ್ಯತಿ ।
ಯೋ ಗೃಹೀ ವೈಣವೀಂ ಯಷ್ಟಿಂ ಬ್ರಹ್ಮಚಾರೀ ಚ ನೈಷ್ಠಿಕಃ ॥ ೨೫ ॥

ಪಂಡಾಗ್ನಿಪಾಲನೇ ಪುಣ್ಯಂ ಯದ್ದೃಷ್ಟಂ ಬ್ರಹ್ಮವಾದಿಭಿಃ ।
ವಹಂತಂ ಕಲ್ಮಷೀಯಷ್ಟಿಂತಂ ಪ್ರಾಪ್ನೋತಿ ದ್ವಿಜೋತ್ತಮಂ ॥ ೨೬ ॥

ವಂಶಸ್ಯಾನುಗ್ರಹಂ ಕೃತ್ವಾ ದೇವ್ಯಾದ್ಧೃತಿಮಥಾಬ್ರುವನ್ ।
ಗೃಹ್ಣೀಷ್ವ ಶುಕ್ರಂ ಭದ್ರ ತ್ವಂ ತವ ಪುತ್ರೋ ಭವಿಷ್ಯತಿ ॥ ೨೭ ॥

---

೨೪. ಆಗ ಆ ವಂಶವು (ಬಿದಿರುಮೆಳೆಯು) ಅಗ್ನಿಯ ಔಷ್ಣ್ಯದಿಂದ ಸುಟ್ಟು ಕಪ್ಪಾಗಿದೆ ಎಂದು ಆ ತ್ರಿಲೋಕಾಧೀಶರಾದ-ದೇವತೆಗಳು ತಿಳಿದು, ಸಂತುಷ್ಟವಾದ ಮನಸ್ಸುಳ್ಳವರಾಗಿ ಆ ಬಿದಿರನ್ನು ಕುರಿತು ಹೀಗೆಂದರು.

೨೫. ಅಗ್ನಿ ಗರ್ಭವಾದುದರಿಂದ ಆ ಅಗ್ನಿಯ ಶಕೆಯಿಂದ ಕಲ್ಮಾಷವರ್ಣ ವನ್ನು ತಾಳಿರುವ ಆ ವೇಣುದಂಡವನ್ನು ಗೃಹಸ್ಥನೂ ಮತ್ತು ನೈಷ್ಠಿಕ ಬ್ರಹ್ಮ ಚಾರಿಯೂ ಧರಿಸಲಿ.

೨೬. ಹಾಗೆ ಧರಿಸಿದ ಬ್ರಾಹ್ಮಣೋತ್ತಮನಿಗೆ ಬ್ರಹ್ಮಜ್ಞಾನಿಗಳಾದ ಪಂಡಿತೋತ್ತಮರು ಪಂಡಾಗ್ನಿರಕ್ಷಣೆ ಮಾಡಿದುದರಿಂದ ಯಾವ ಪುಣ್ಯವು ಬರು ವುದೆಂದು ಹೇಳಿದ್ದಾರೋ ಆ ಪುಣ್ಯವು ಲಭಿಸಲಿ.''

೨೭. ಅಗ್ನ್ಯಧಿಷ್ಠಿತವಾದ ಬಿದಿರಿಗೆ ಈರೀತಿ ಅನುಗ್ರಹಮಾಡಿ, ಅನಂತರ ದೇವತೆಗಳು " ಓ ಮಂಗಳಮೂರ್ತಿಯಾದ ಅಗ್ನಿಯೇ ! ನೀನು ಈಶ್ವರನ ವೀರ್ಯ ವನ್ನು ಧಾರಣೆಮಾಡು. ಇದರಿಂದ ನಿನಗೆ ಪುತ್ರನು ಜನಿಸುವನು '' ಎಂದು ಶ್ರೀ ಪರಮೇಶ್ವರನು ಹೇಳಿದ್ದ ವಚನವನ್ನು ನುಡಿದರು.

|| ಯುಧಿಷ್ಠಿರ ಉವಾಚ ||
ಯದಾಗ್ನಿರ್ನಷ್ಟೋ ದೇವಾನಾಂ ಕೇನಾಗ್ನಿತ್ವಂ ತದಾ ಕೃತಂ |
ಭೂಯೋಽಪಿ ಕೇನ ಕಾಲೇನ ಅಗ್ನಿರಗ್ನಿತ್ವಮಾಪ್ತವಾನ್ || ೨೮ ||

|| ಕೃಷ್ಣ ಉವಾಚ ||
ಶೃಣು ರಾಜನ್ಪ್ರಣಷ್ಟೇಽಗ್ನೌ ಕೇನಾಗ್ನಿತ್ವಂ ತದಾ ಕೃತಂ |
ಕಸ್ಮಿನ್ಕಾಲೇ ತಿಥೌ ಕಸ್ಯಾಂ ಪುನರಗ್ನಿತ್ವಮಾಪ್ತವಾನ್ || ೨೯ ||

ಉತಥ್ಯಾಂಗಿರಸೋಃ ಪೂರ್ವಮಾಸೀದ್ವ್ಯತಿಕರೋ ಮಹಾನ್ |
ಅಹಂ ವಿದ್ಯಾತಪೋಭ್ಯಾಂ ವೈ ತವ ಜ್ಯಾಯಾಞ್ಛ್ರುತೇನ ಚ
ಉತಥ್ಯೇನೈವಮುಕ್ತಸ್ತು ಅಂಗಿರಾಃ ಪ್ರಾಹ ತಂ ಮುನಿಂ || ೩೦ ||

ಗಚ್ಛಾವೋ ಬ್ರಹ್ಮಸದನಂ ಮರೀಚಿಪ್ರಮುಖೈರ್ದ್ವಿಜೈಃ |
ಉಪೇತಂ ಚಾನ್ಯಮುನಿಭಿರ್ಬ್ರಹ್ಮರಾಜರ್ಷಿಸತ್ತಮೈಃ ||
ಉತಥ್ಯಃ ಪ್ರಾಹ ಸಬ್ರಹ್ಮನ್ನೃಷೀಂಸ್ತಾನ್ಸ್ತಬ್ಧಮಾನಸಃ || ೩೧ ||

---

೨೮. ಯುಧಿಷ್ಠಿರನು ಹೇಳುತ್ತಾನೆ—"ಎಲೈ ಕೃಷ್ಣನೇ! ಯಾವಾಗ ಅಗ್ನಿಯು ದೇವಸಮೂಹದಿಂದ ಜಾರಿ ಅದೃಶ್ಯನಾದನೋ ಆಗ ಅಗ್ನಿಯ ಕಾರ್ಯವನ್ನು ಯಾವನು ಮಾಡುತ್ತಿದ್ದನು? ಪುನಃ ಎಷ್ಟುಕಾಲ ಕಳೆದ ಮೇಲೆ ಅಗ್ನಿಯು ಸ್ವಸ್ವರೂಪವನ್ನು ಹೊಂದಿದನು?" ಎಂದು ಕೇಳಿದನು.

೨೯. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ರಾಜನೇ! ಅಗ್ನಿಯು ತನ್ನ ಸ್ಥಾನವನ್ನು ಬಿಟ್ಟು ಅದೃಶ್ಯನಾದಾಗ ಯಾವನು ಅಗ್ನಿಯ ಕಾರ್ಯನಿರ್ವಹಣವನ್ನು ಮಾಡುತ್ತಿದ್ದನು? ಪುನಃ ಆ ಅಗ್ನಿಯು ಅಗ್ನಿತ್ವವನ್ನು ಯಾವ ಕಾಲದಲ್ಲಿ ಯಾವ ತಿಥಿಯಲ್ಲಿ ಪಡೆದನು? ಎಂಬುದನ್ನು ಹೇಳುತ್ತೇನೆ ಕೇಳು.

೩೦. ಪೂರ್ವದಲ್ಲಿ ಉತಥ್ಯ ಮತ್ತು ಆಂಗಿರಸ ಮಹರ್ಷಿಗಳಿಗೆ ಅನ್ಯೋನ್ಯವಾಗಿ ದೊಡ್ಡ ವಿವಾದವು ನಡೆಯಿತು. ಆಗ ಉತಥ್ಯನು ಆಂಗೀರಸ ಮಹರ್ಷಿಯನ್ನು ಕುರಿತು "ನಾನು ವಿದ್ಯೆ ತಪಸ್ಸು ಶಾಸ್ತ್ರಶ್ರವಣ ಇವುಗಳಲ್ಲಿ ನಿನಗಿಂತ ಎಷ್ಟೋ ಮಿಗಿಲಾಗಿರುವೆನು" ಎಂದು ಹೇಳಿಕೊಂಡನು. ಆಗ ಆಂಗೀರಸನು ಆ ಉತಥ್ಯಮುನಿಯನ್ನು ಕುರಿತು,

೩೧. "ಎಲೈ ಉತಥ್ಯನೇ! ಈ ನಮ್ಮ ವಿವಾದವನ್ನು ತೀರ್ಮಾನಮಾಡಿಕೊಳ್ಳುವುದಕ್ಕಾಗಿ ಮರೀಚಿ ಮೊದಲಾದ ಬ್ರಹ್ಮರ್ಷಿಗಳು, ಇತರ ಋಷಿಗಳು,

ಜ್ಯಾಯಾನ್ವಾ ಕತರೋಽಸ್ಮಾಕಮಿತಿ ನಃ ಕಥ್ಯತಾಂ ಸ್ಫುಟಂ ॥ ೩೨ ॥

ಅಥೋವಾಚ ಮುನಿರ್ಬ್ರಹ್ಮಾ ತಾವುಭೌ ಕ್ರುದ್ಧಮಾನಸೌ ।
ಆನಯಧ್ವಂ ದ್ರುತಂ ಗತ್ವಾ ವಿಬುಧಾನ್ಭುವನೇಶ್ವರಾನ್ ॥ ೩೩ ॥

ತತೋ ವಿವಾದಂ ಪಶ್ಯಾಮಿ ಭವತಾಂ ತೈಃ ಸಮೇತ್ಯ ಚ ।
ತತಸ್ತೌ ಸಹಿತೌ ನತ್ವಾಽಽನಿನ್ಯತುಶ್ಚ ಋಷೀಂಸ್ತದಾ ॥ ೩೪ ॥

ಲೋಕಪಾಲಾನ್ಮಹೇಂದ್ರಾದೀನ್ಸಯಮಾನ್ವರುಣಾನಿಲಾನ್ ।
ಸಾಧ್ಯಾನ್ಮರುದ್ಗಣಾನ್ವಿಶ್ವಾನೃಷೀನ್ಭೃಗ್ವಗ್ನಿನಾರದಾನ್ ॥ ೩೫ ॥

---

ರಾಜರ್ಷಿಗಳು, ಬ್ರಹ್ಮದೇವ, ಇವರುಗಳಿಂದ ಕೂಡಿದ ಬ್ರಹ್ಮಲೋಕಕ್ಕೆ ಹೋಗೋಣ '' ಎಂದನು. ಆಗ ಅವರಿಬ್ಬರೂ ಬ್ರಹ್ಮನಿದ್ದಲ್ಲಿಗೆ ಹೋದರು.

೩೨. ಅವರಲ್ಲಿ ಉತಥ್ಯನು ಅಲ್ಲಿರುವ ಋಷಿಗಳನ್ನೆಲ್ಲಾ ಸ್ತಬ್ಧರನ್ನಾಗಿ ಮಾಡುತ್ತಾ " ಓ ನಿಷ್ಪಕ್ಷಪಾತಿಯಾದ ಬ್ರಹ್ಮನೇ ! ನಮ್ಮಲ್ಲಿ ಯಾವನು ಉತ್ತಮ ನೆಂಬುದನ್ನು ನಮಗೆ ಸ್ಪಷ್ಟವಾಗಿ ಹೇಳು '' ಎಂದು ಕೇಳಿದನು.

೩೩. ಆಗ ಪರಮಾತ್ಮಮನನದಲ್ಲಿ ನಿರತನಾಗಿದ್ದ ಬ್ರಹ್ಮನು, ತಾನು ಶ್ರೇಷ್ಠ ಎಂದು ಜಗಳವಾಡುತ್ತಾ ಕೋಪಭರಿತ ಮನಸ್ಸುಳ್ಳ ಆ ಋಷಿಗಳಿಬ್ಬರನ್ನೂ ಕರೆದು " ನೀವು ಶೀಘ್ರವಾಗಿ ಹೋಗಿ ಲೋಕಾಧೀಶರಾದ ಎಲ್ಲಾ ದೇವತೆಗಳನ್ನೂ ಕರೆದುಕೊಂಡು ಬನ್ನಿ.''

೩೪. " ಅನಂತರ ದೇವತೆಗಳ ಸಮುಖದಲ್ಲಿ ನಾನು ನಿಮ್ಮಿಬ್ಬರ ವಿವಾದ ವನ್ನು ವಿಚಾರಿಸಿ ತೀರ್ಮಾನ ಮಾಡುವೆನು '' ಎಂದು ಹೇಳಿದನು. ಆಗ ಅವರುಗಳು ಬ್ರಹ್ಮನಿಗೆ ನಮಸ್ಕಾರವನ್ನು ಮಾಡಿ ಅಲ್ಲಿಂದ ಹೊರಟು ಹೋಗಿ ಋಷಿಗಳನ್ನೆಲ್ಲಾ ಕರೆತಂದರು.

೩೫. ಮತ್ತು ಇಂದ್ರಾದಿ ಲೋಕಪಾಲಕರು, ಯಮ, ವರುಣ, ವಾಯು, ಸಾಧ್ಯರೆಂಬ ದೇವಯೋನಿಜಾತರು, ಸಪ್ತಮರುದ್ಗಣಗಳು, ಭೃಗು, ಅಗ್ನಿ, ನಾರದಾದಿ ಮುನಿಗಳ ಇವರನ್ನೆಲ್ಲಾ ಕರೆದುಕೊಂಡು ಬಂದರು.

ಗಂಧರ್ವಾನ್ವಿತ್ತರಕ್ಷೋಘ್ನಾನ್ರಾಕ್ಷಸಾನ್ದೈತ್ಯದಾನವಾನ್ ।
ನಾಯಾತಸ್ತತ್ರ ತಿಗ್ಮಾಂಶುಃ ಸರ್ವೇ ಚಾನ್ಯೇ ಸಮಾಗತಾಃ　　॥ ೩೬ ॥

ದೃಷ್ಟ್ವಾ ತು ವಿಬುಧಾನ್ಸರ್ವಾನ್ಬ್ರಹ್ಮಾ ಪ್ರೋವಾಚತಾನ್ಋಷೀನ್ ।
ಆನಯಧ್ವಮಿತಃ ಸೂರ್ಯಂ ಸಾಮ್ನಾ ದಂಡೇನ ವಾ ಪುನಃ　　॥ ೩೭ ॥

ಏವಮುಕ್ತೋ ಗತಸ್ತಾವದುತಥ್ಯಃ ಸೂರ್ಯಮಂಡಲಂ ।
ಸ ಗತ್ವಾ ಪ್ರಾಹ ಮಾರ್ತಂಡಂ ಶೀಘ್ರಮೇಹ್ಯೇವಸಂವಿದಂ　　॥ ೩೮ ॥

ಸ ಉತಥ್ಯಮಥೋವಾಚ ಕಥಂ ಬ್ರಹ್ಮನ್ವ್ರಜಾಮ್ಯಹಂ ।
ಏವಮುಕ್ತ್ವಾ ತತಃ ಸೂರ್ಯೋ ಭುವನೇ ಮಯಿ ನಿರ್ಗತೇ　　॥ ೩೯ ॥

---

೩೬. ಮತ್ತು ಗಂಧರ್ವರು, ವಿತ್ತೇಶನಾದ ಕುಬೇರ, ರಕ್ಷೋಘ್ನದೇವತೆಗಳು, ರಾಕ್ಷಸರು, ದಾನವರು, ದೈತ್ಯರು, ಮತ್ತು ಮಿಕ್ಕುಳಿದ ಎಲ್ಲರೂ ಅಲ್ಲಿಗೆ ಬಂದರು. ಆದರೆ ಅವರ ಗುಂಪಿನಲ್ಲಿ ಸೂರ್ಯನು ಮಾತ್ರ ಕಾಣುತ್ತಿರಲಿಲ್ಲ.

೩೭. ಆಗ ಬ್ರಹ್ಮನು ತನ್ನಲ್ಲಿಗೆ ಬಂದಿರುವ ಆ ಎಲ್ಲಾ ದೇವತೆಗಳನ್ನೂ ನೋಡಿ, ಸೂರ್ಯನು ಮಾತ್ರ ಬಾರದಿರುವುದನ್ನು ಕಂಡು, ಆ ಉತಥ್ಯ ಆಂಗೀರಸ ಮುನಿಗಳನ್ನು ಕುರಿತು " ಇಲ್ಲಿಂದ ನೀವೀಗ ಸೂರ್ಯನಿದ್ದಲ್ಲಿಗೆ ಹೋಗಿ ಅವನನ್ನು ಸಮಾಧಾನವಾದ ವಚನಗಳಿಂದ ಕರೆದುತನ್ನಿ. ಆ ಸಾಮ್ಯವಚನಗಳಿಂದ ಕರೆತರಲು ಸಾಧ್ಯವಾಗದಿದ್ದರೆ ದಂಡಪ್ರಯೋಗಮಾಡಿ ಕರೆದುಕೊಂಡು ಬನ್ನಿರಿ " ಎಂದು ಹೇಳಿದನು.

೩೮. ಬ್ರಹ್ಮನು ಈರೀತಿ ಹೇಳಿದ ಮೇಲೆ ಆ ಋಷಿಗಳಲ್ಲಿ ಉತಥ್ಯಮಹರ್ಷಿಯು ತಾನು ಮೊದಲು ಸೂರ್ಯಮಂಡಲಕ್ಕೆ ಹೋಗಿ ಅಲ್ಲಿ ಸೂರ್ಯನನ್ನು ಕುರಿತು " ಓ ಸೂರ್ಯದೇವಾ ! ನನ್ನ ವಚನವನ್ನು ಅಂಗೀಕರಿಸಿ ಶೀಘ್ರವಾಗಿ ಬ್ರಹ್ಮಸಭೆಗೆ ಬರಬೇಕು " ಎಂದು ಹೇಳಿದನು.

೩೯. ಆಗ ಸೂರ್ಯನು ಉತಥ್ಯ ಋಷಿಯನ್ನು ಕುರಿತು " ಅಯ್ಯಾ ಬ್ರಾಹ್ಮಣೋತ್ತಮ ! ನಾನು ಹೇಗೆ ಬರಲಿ ? ನೀವೇ ಹೇಳಿ, ನಾನು ಇಲ್ಲಿಂದ ಹೊರಟರೆ ಈ ಲೋಕವು ನಡೆಯುವುದು ಹೇಗೆ ? ಇದರ ಸ್ಥಿತಿ ಏನಾದೀತು ? ಎಂದು ಹೇಳಿದನು.

ಏವಮುಕ್ತ್ವೋ ಮುನಿಃ ಪ್ರಾಯಾತ್ಸರ್ವದೇವಸಮಾಗಮಂ ।
ಆಚಚಕ್ಷೇ ಚ ಯತ್ಪ್ರೋಕ್ತಂ ಭಾಸ್ವತಾ ತಪನೇನ ತು ॥ ೪೦ ॥

ಉವಾಚಾಂಗಿರಸಂ ಬ್ರಹ್ಮಾ ಶೀಘ್ರಮೇನಂ ತ್ವಮಾನಯ ।
ಸ ತಥೋಕ್ತೋ ಗತಸ್ತತ್ರ ಯತ್ರಾಸೌ ತಪತೇ ರವಿ ॥ ೪೧ ॥

ಏಹ್ಯೇಹಿ ಭಗವನ್ಸೂರ್ಯ ತಪ್ಯತೇ ಭವತಾನ್ವಹಂ ।
ಏವಮುಕ್ತೋ ಗತಃ ಸೂರ್ಯೋ ಯತ್ರ ದೇವಾಃ ಸಮಾಗತಾಃ ॥ ೪೨ ॥

ಸ್ಥಿತ್ವಾ ಮುಹೂರ್ತಂ ಪ್ರೋವಾಚ ಕಿಂ ವಾ ಕಾರ್ಯಮುಪಸ್ಥಿತಂ ।
ಪೃಚ್ಛಂತಮೇವ ಮಾರ್ತಂಡಂ ಬ್ರಹ್ಮಾಪ್ರೋವಾಚ ಸಾದರಂ ॥ ೪೩ ॥

---

೪೦. ಈರೀತಿ ಆ ಸೂರ್ಯನು ಹೇಳಿದ ಮೇಲೆ ಆ ಮುನಿಯು ಅಲ್ಲಿಂದ ಹೊರಟು ಸರ್ವದೇವತೆಗಳೂ ಸೇರಿರುವ ಬ್ರಹ್ಮಸಭೆಗೆ ಬಂದು ಸೂರ್ಯನು ತನ್ನೊಡನೆ ಹೇಳಿದ ವಚನವನ್ನು ಬ್ರಹ್ಮನಿಗೆ ಶ್ರುತಪಡಿಸಿದನು.

೪೧. ಅದನ್ನು ಕೇಳಿದ ಬ್ರಹ್ಮನು ಆಂಗಿರಸಮುನಿಯನ್ನು ಕರೆದು " ಎಲೈ ಮುನಿವರ್ಯನೇ ! ನೀನು ಶೀಘ್ರವಾಗಿ ಹೋಗಿ ಸೂರ್ಯನನ್ನು ಕರೆದುಕೊಂಡು ಬಾ'' ಎಂದು ಹೇಳಿದನು. ಆ ಮುನಿಯು ಹಾಗೆಯೇ ಆಗಲೆಂದು ಹೇಳಿ ಎಲ್ಲಿ ಸೂರ್ಯನು ತನ್ನ ಕಿರಣಗಳಿಂದ ತಾಪವನ್ನುಂಟುಮಾಡುತ್ತಿರುವನೋ ಅಲ್ಲಿಗೆ ಬಂದನು.

೪೨. ಅಲ್ಲಿ ಅವನನ್ನು ಕುರಿತು " ಎಲೈ ಪೂಜ್ಯನಾದ ಸೂರ್ಯನೇ ! ನೀನು ಎಡೆಬಿಡದೆ ಯಾವಾಗಲೂ ತಪಿಸುತ್ತಿರುತ್ತೀಯೆ. ಆ ಕೆಲಸವನ್ನು ನಾನು ಮಾಡುತ್ತೇನೆ. ನೀನು ಈ ಸಮಯದಲ್ಲಿ ಬ್ರಹ್ಮನ ಸಭೆಗೆ ಬರಬೇಕು '' ಎಂದು ಹೇಳಿದನು. ಈರೀತಿ ಆಂಗಿರಸನಿಂದ ಹೇಳಿಸಿಕೊಂಡ ಆ ಸೂರ್ಯನು ಸಮಸ್ತ ದೇವತೆಗಳೂ ಸೇರಿದ್ದ ಬ್ರಹ್ಮನ ಸಭೆಗೆ ಬಂದನು.

೪೩. ಸೂರ್ಯನು ಬ್ರಹ್ಮನಿದ್ದಲ್ಲಿಗೆ ಬಂದು, ಒಂದು ಮುಹೂರ್ತವಾಗುವವರೆಗೂ ಅಲ್ಲಿಯೇ ಇದ್ದು ಅನಂತರ "ಓ ಬ್ರಹ್ಮನೇ! ನಾನು ಯಾವ ಕಾರ್ಯವನ್ನು ಮಾಡಬೇಕಾಗಿ ಸಂಭವಿಸಿದೆ? ಏತಕ್ಕೆ ನನ್ನನ್ನು ಕರೆಯಿಸಿದೆ? '' ಎಂದು ಕೇಳಿದನು. ಹೀಗೆ ಪ್ರಶ್ನೆಮಾಡಲಾಗಿ ಬ್ರಹ್ಮನು ಆ ಸೂರ್ಯನನ್ನು ಕುರಿತು ಆದರಪೂರ್ವಕವಾಗಿ ಇಂತೆಂದನು.

ಗಚ್ಛ ಶೀಘ್ರಂ ನ ದಹತೇ ಭುವನಂ ಯಾವದಂಗಿರಾಃ ।
ದಗ್ಧ ಪ್ರಾಯಂ ತು ಗೋಲೋಕಂ ವರ್ತತೇ ಕೃಷ್ಣಪಿಂಗಳಂ ॥ ೪೪ ॥

ಪಾಟಲೋ ಹರಿತಃ ಶೋಣಃ ಶ್ವೇತೋ ವರ್ಣಃ ಪ್ರಣಾಶಿತಃ ।
ಶಾಕದ್ವೀಪಂ ಕುಶದ್ವೀಪಂ ಕ್ರೌಂಚದ್ವೀಪಂ ಸಪನ್ನಗಂ ।
ದಗ್ಧಮಂಗಿರಸಾ ಸರ್ವಂ ಭೂಯೋಽಪಿ ಪ್ರದಹಿಷ್ಯತಿ ॥ ೪೫ ॥

ಯಾವಚ್ಚ ದಹತೇ ಸರ್ವಂ ಭುವನಂ ತಪಸಾಂಗಿರಾಃ ।
ಗಚ್ಛ ತಾವದಿತಃ ಶೀಘ್ರಂ ಸ್ವಸ್ಥಾನೇ ತಪ ಭಾಸ್ಕರ ॥ ೪೬ ॥

ಏವಮುಕ್ತಃ ಸ ವಿಭುನಾ ಸ್ವಸ್ಥಾನಮಧಿರೂಢವಾನ್ ।
ವಿಸೃಷ್ಟವಾನಂಗಿರಸಂ ಸಕಾಶಮಮೃತಾಶಿನಾಂ ॥ ೪೭ ॥

---

೪೪. " ಓ ಸೂರ್ಯನೇ ! ಆ ಆಂಗಿರಸಮುನಿಯು ಭೂಲೋಕವನ್ನು ಸುಡುವುದರೊಳಗಾಗಿ ಶೀಘ್ರವಾಗಿ ಹೋಗು. ಗೋಲೋಕವೆಲ್ಲಾ (ಗೋಸಮುದಾಯವೆಲ್ಲಾ) ಅವನ ತೇಜಸ್ಸಿನಿಂದ ಇಷ್ಟರಲ್ಲೇ ಬಹಳ ದಗ್ಧವಾಗಿ ಕಪ್ಪುಬಣ್ಣವೂ ಹೊಂಬಣ್ಣವೂ ಉಳ್ಳದ್ದಾಗಿದೆ.

೪೫. " ಮತ್ತು ಕೆಂಪು, ಪಚ್ಚೆ, (ಹಸುರು) ಕೆಂಪುದಾವರೆಬಣ್ಣ, ಬಿಳಿಯ ಬಣ್ಣ ಈ ಎಲ್ಲಾ ಬಣ್ಣಗಳೂ ನಷ್ಟವಾಗಿವೆ. ಮತ್ತು ಆ ಆಂಗಿರಸನು ತನ್ನ ತಪೋವರ್ಚಸ್ಸಿನಿಂದ ಶಾಕದ್ವೀಪ, ಕುಶದ್ವೀಪ, ಕ್ರೌಂಚದ್ವೀಪ, ಸರ್ಪಸಹಿತವಾದ ನಾಗಲೋಕ ಇವುಗಳನ್ನೆಲ್ಲಾ ತನ್ನ ತೇಜಸ್ಸಿನಿಂದ ದಹಿಸಿರುತ್ತಾನೆ. ನೀನು ಸಾವಕಾಶಮಾಡಿದರೆ ಇನ್ನೂ ಸುಡುತ್ತಾನೆ.''

೪೬. " ಓ ಭಾಸ್ಕರನೇ ! ಆ ಆಂಗಿರಸನು ಎಲ್ಲಾ ಭುವನವನ್ನೂ ತನ್ನ ತಪಃಪ್ರಭಾವದಿಂದ ಸುಡುವುದರೊಳಗಾಗಿ ಇಲ್ಲಿಂದ ನೀನು ಶೀಘ್ರವಾಗಿ ನಿನ್ನ ಸ್ಥಾನಕ್ಕೆ ಹೋಗಿ ಅಲ್ಲಿ ನಿನ್ನ ಪ್ರಕಾಶನ ಕಾರ್ಯವನ್ನು ವಹಿಸಿಕೊ '' ಎಂದನು.

೪೭. ಈರೀತಿ ಪ್ರಭುವಾದ ಆ ಬ್ರಹ್ಮನು ಹೇಳಿದ ಮೇಲೆ ಸೂರ್ಯನು ಸ್ವಸ್ಥಾನಕ್ಕೆ ಬಂದು ತನ್ನ ಅಧಿಕಾರವನ್ನು ಆಂಗಿರಸನಿಂದ ವಹಿಸಿಕೊಂಡು ಕೂಡಲೆ ಆ ಆಂಗಿರಸ ಮಹಾಮುನಿಯನ್ನು ದೇವತೆಗಳ ಸಮೀಪಕ್ಕೆ ಕಳುಹಿಸಿ ಕೊಟ್ಟನು.

ಗತ್ವಾಂಗಿರಾ ಉವಾಚೇದಂ ಗತಃ ಕಿಂ ಕರವಾಣ್ಯಹಂ ।
ದೇವಾ ಅಂಗಿರಸಂ ಪ್ರಾಹುಸ್ತಪೋರಾಶಿಮಕಲ್ಮಷಂ ॥ ೪೮ ॥

ಸಂಪ್ರಶಶ್ಯೋಚುರಗ್ನಿತ್ವಂ ಕುರು ತಾವನ್ಮಹೀತಲೇ ।
ಪೂರ್ವಂ ಯಥಾಗ್ನಿಃ ಕೃತವಾಂಸ್ತಥಾ ತ್ವಮಪಿ ಸತ್ತಮ ॥ ೪೯ ॥

ಯಾವದಗ್ನಿಂ ಪ್ರಪಶ್ಯಾಮಃ ಕ್ವಾಸೌ ನಷ್ಟಃ ಕ್ವ ತಿಷ್ಠತಿ ।
ಏವಮುಕ್ತಃ ಸದೇವೈಸ್ತು ಅಗ್ನಿತ್ವಂ ಕೃತವಾಂಸ್ತದಾ ॥ ೫೦ ॥

ದೇವೈರ್ದೃಷ್ಟೋ ಯಥಾಹ್ಯಗ್ನಿಸ್ತತ್ರೇ ಸರ್ವಂ ನಿವೇದಿತಂ ।
ದೇವಕಾರ್ಯೇ ಕೃತೇ ತಸ್ಮಿನ್ದೇವಾ ವಹ್ನಿಮಥಾಬ್ರುವನ್ ॥ ೫೧ ॥

---

೪೮. ಆ ಅಂಗಿರಸ ಮಹರ್ಷಿಯು ದೇವತಾಸಮೂಹಭರಿತವಾದ ಬ್ರಹ್ಮ ಸಭೆಗೆ ಹೋಗಿ "ನಾನು ಇನ್ನೇನು ಮಾಡಲಿ ?" ಎಂದು ಕೇಳಿದನು. ಆಗ ಆ ದೇವತೆಗಳು, ತಪೋನಿಧಿಯೂ ನಿಷ್ಕಲ್ಮಷನೂ ಆಗಿರುವ ಅಂಗಿರಸನನ್ನು ಶ್ಲಾಘಿಸಿದರು.

೪೯. ಮತ್ತು ಆ ದೇವತೆಗಳು ಉತಥ್ಯ ಅಂಗಿರಸ ಇವರಿಬ್ಬರಲ್ಲಿ ಅಂಗಿರಸ ಮಹರ್ಷಿಯನ್ನು ಬಹಳವಾಗಿ ಹೊಗಳಿ "ಅಯ್ಯಾ ತೇಜೋಮಯನಾದ ಮುನಿವರ್ಯನೇ ! ಅಗ್ನಿಯು ಪೂರ್ವದಲ್ಲಿ ಹೇಗೆ ತನ್ನ ಕಾರ್ಯವನ್ನು ನಿರ್ವಹಿಸುತ್ತಿದ್ದನೋ ಹಾಗೆಯೇ ನೀನೂ ಕೂಡ ಆ ಅಗ್ನಿಯ ಸ್ಥಾನದಲ್ಲಿದ್ದುಕೊಂಡು ಭೂಲೋಕದಲ್ಲಿ ಅಗ್ನಿಯ ಕಾರ್ಯನಿರ್ವಹಣೆಯನ್ನು ಮಾಡು."

೫೦. "ಅಗ್ನಿಯು ಈಗ ಎಲ್ಲಿದ್ದಾನೆ ? ಎಲ್ಲಿ ಅವನು ಅದೃಶ್ಯನಾದನು ? ಎಂಬುದನ್ನು ವಿಚಾರಿಸಿ, ಆ ಅಗ್ನಿಯನ್ನು ನಾವು ಕಂಡುಹಿಡಿಯುವವರೆಗೂ ನೀನು ಆ ಅಗ್ನಿಯ ಕಾರ್ಯವನ್ನು ನೆರವೇರಿಸು" ಎಂದು ಹೇಳಿದರು. ಈರೀತಿ ಆ ದೇವತೆಗಳಿಂದ ಆಜ್ಞಪ್ತನಾದ ಆ ಅಂಗಿರಸ ಮಹಾಮುನಿಯು ಆಗ ಅಗ್ನಿಯ ಕಾರ್ಯವನ್ನು ನಿರ್ವಹಿಸುತ್ತಿದ್ದನು.

೫೧. ಅಯ್ಯಾ ರಾಜನೇ ! ಅಗ್ನಿಯು ನಷ್ಟನಾದಾಗ ಅಗ್ನಿಯ ಕಾರ್ಯವನ್ನು ಯಾವನು ಮಾಡುತ್ತಿದ್ದನು ಎಂಬುದನ್ನು ಹೇಳಿದ್ದಾಯಿತು. ನಷ್ಟನಾದ ಆ ಅಗ್ನಿಯನ್ನು ದೇವತೆಗಳು ಹೇಗೆ ಕಂಡುಹಿಡಿದರು ? ಎಂಬುದನ್ನು ಈ ಮೊದಲೇ ನಿನಗೆ ನಾನು ಹೇಳಿರುತ್ತೇನೆ. ದೇವತೆಗಳ ಕಾರ್ಯಸಾಧನೆಗಾಗಿ ಈಶ್ವರನ

ಅಗ್ನೇಽಗ್ನಿತ್ವಂ ಕುರುಷ್ವತ್ವಮಂಗಿರಾಸ್ತು ಯಥಾ ಪುರಾ ।
ಏವಮುಕ್ತಃ ಸುರೈರ್ವಹ್ನಿಃ ಚಿಂತಯಾಮಾಸ ದುಃಖಿತಃ ॥ ೫೨ ॥

ಕೇನ ಮೇಽಪಹೃತಂ ತೇಜಃ ಕೇನಾಗ್ನಿತ್ವಂ ಕೃತಂ ತ್ವಿಹ ।
ದೃಷ್ಟ್ವಾಽಥಾಗ್ನಿರಂಗಿರಸಂ ತೇಜೋರಾಶಿಮಕಲ್ಮಷಂ ॥ ೫೩ ॥

ಉವಾಚ ಮುಂಚ ಮತ್ಸ್ಥಾನಂ ವಚಸ್ತೋಷಕರಂ ಶೃಣು ।
ಅಹಂ ತೇ ತನಯಶ್ಚೇಷ್ಟೋ ಭವಿಷ್ಯೇ ಪ್ರಥಮೇ ಶುಭೇ ॥ ೫೪ ॥

ಬೃಹಸ್ಪತೀತಿ ನಾಮಾ ವೈ ತಥಾನ್ಯೇ ಬಹವಃ ಸುತಾಃ ।
ಏವಮುಕ್ತೋ ಮುನಿಸ್ತುಷ್ಟೋ ಬಹೂಂಶ್ಚಾಜನಯತ್ಸುತಾನ್ ॥೫೫॥

---

ವೀರ್ಯಧಾರಣೆಮಾಡಿ, ಅವರ ಕೆಲಸವು ಪೂರ್ತಿಯಾದ ಮೇಲೆ ದೇವತೆಗಳು ಅಗ್ನಿಯನ್ನು ಕುರಿತು ಇಂತೆಂದರು.

೫೨. "ಓ ಅಗ್ನಿಯೇ! ನೀನು ನಿನ್ನ ಕೆಲಸವನ್ನು ಮೊದಲಿನಂತೆಯೇ ನಿರ್ವಹಿಸು. ಈವರೆಗೆ ನಿನ್ನ ಕಾರ್ಯವನ್ನು ನಿರ್ವಹಿಸುತ್ತಿರುವ ಆಂಗಿರಸ ಮಹರ್ಷಿಯು ಮೊದಲಿನಂತೆ ತನ್ನ ತಪೋನುಷ್ಠಾನಾದಿಗಳಲ್ಲಿ ನಿರತನಾಗಲಿ" ಎಂಬದಾಗಿ ದೇವತೆಗಳಿಂದ ನಿರೂಪಿತನಾದ ಅಗ್ನಿಯು ಬಹು ದುಃಖಿತನಾಗಿ ಮನದಲ್ಲೇ ಚಿಂತಿಸಿದನು.

೫೩–೫೪. "ಎಲಾ! ನನ್ನ ತೇಜಸ್ಸನ್ನು ಯಾವನು ಅಪಹರಿಸಿದನು? ನಾನು ಅದೃಶ್ಯನಾದಾಗ ಈ ಲೋಕದಲ್ಲಿ ನನ್ನ ಕಾರ್ಯವನ್ನು ಯಾವನು ಮಾಡುತ್ತಿದ್ದನು? ಹೀಗೆ ಯೋಚಿಸುತ್ತಾ ಬಂದು, ತನ್ನ ಕಾರ್ಯವನ್ನು ನಿರ್ವಹಿಸುತ್ತಿರುವ ತೇಜೋರಾಶಿಯೂ ನಿಷ್ಕಲ್ಮಷನೂ ಆಗಿರುವ ಆಂಗೀರಸ ಮುನಿಯನ್ನು ನೋಡಿ, "ಓ ಮುನಿಯೇ! ನನ್ನ ಸ್ಥಾನವನ್ನು ಬಿಟ್ಟುಕೊಡು, ಸಂತೋಷದಾಯಕವಾದ ಮತ್ತೊಂದು ಸುದ್ದಿ ಹೇಳುತ್ತೇನೆ ಶ್ರವಣಮಾಡು. ಈ ಸ್ಥಾನವನ್ನು ಬಿಟ್ಟುಕೊಟ್ಟರೆ ನಾನು ನಿನಗೆ ಇಷ್ಟನೂ ಶುಭಕರನೂ ಆದ ಸಂತತಿಯೆನಿಸುವೆನು.

೫೫. ನಾನು ಬೃಹಸ್ಪತಿ ಎಂಬ ಹೆಸರಿನ ಪುತ್ರನಾಗಿ ಜನಿಸುವುದಲ್ಲದೆ, ನಿನಗೆ ಇತರ ಅನೇಕ ಶುಭಪುತ್ರರೂ ಜನಿಸುವರು" ಎಂದು ಹೇಳಿದನು. ಈ ಪ್ರಕಾರ ಆ ಅಗ್ನಿಯು ಹೇಳಲಾಗಿ ಆಂಗೀರಸಮುನಿಯು ಸಂತುಷ್ಟನಾಗಿ ಅಗ್ನಿಸ್ಥಾನವನ್ನು ಆ ಅಗ್ನಿಗೇ ಬಿಟ್ಟುಕೊಟ್ಟು ಅನೇಕ ಪುತ್ರರನ್ನು ಪಡೆದನು.

ವಹ್ನಿಂ ಸಂಜನಯಾಮಾಸ ಪುತ್ರಾನ್ಪೌತ್ರಾಂಸ್ತದಾಂಗಿರಾಃ ।
ಅವಾಪ ಪುನರಗ್ನಿತ್ವಮಗ್ನಿಸ್ತಸ್ಯಾಂ ತಿಥೌ ನೃಪ ॥ ೫೬ ॥

ಸರ್ವಮೇವ ಚತುರ್ದಶ್ಯಾಂ ಸಂಜಾತಂ ಹವ್ಯವಾಹನಂ ।
ಹವ್ಯವಾಹನದೇವಾನಾಂ ಭೂತಾನಾಂ ಗುಹ್ಯಚಾರಿತಂ ॥ ೫೭ ॥

ತತೋಽಷ್ಟಪತಿಪತ್ವೇ ಚ ರುದ್ರೇಣ ಪ್ರತಿಪಾದಿತಂ ।
ಪೂಜಿತೇಯಂ ತಿಥಿರ್ದೇವೈರ್ದಿವಿಸ್ಥೈಶ್ಚ ನೃಪೈರಪಿ ॥ ೫೮ ॥

ಪೈಲಜಾಬಾಲಿಮನ್ವಾದ್ಯೈರನ್ಯೈಶ್ಚ ನಹುಷಾದಿಭಿಃ ।
ವಿಷಶಸ್ತ್ರಹತಾನಾಂ ಚ ಸಂಗ್ರಾಮೇಽನ್ಯತ್ರ ತೇ ಕ್ವಚಿತ್ ॥ ೫೯ ॥

ಅಜ್ಞಾತವೃಷಪಾಪೈಶ್ಚ ವ್ಯಾಲೈರ್ಯೇ ವ್ಯಾಪ್ಯ ಹಿಂಸಿತಾಃ ।
ನದೀಪ್ರವಾಹಪತಿತಃ ಸಮುದ್ರೇ ಪರ್ವತೇಽಧ್ವನಿ ॥ ೬೦ ॥

---

೫೬. ಆ ಸಮಯದಲ್ಲಿ ಆಂಗೀರಸನು ಅಗ್ನಿಯನ್ನೇ ಪ್ರಥಮಪುತ್ರನನ್ನಾಗಿ ಪಡೆದುದಲ್ಲದೆ, ಇತರ ಪುತ್ರರನ್ನೂ ಪೌತ್ರರನ್ನೂ ಪಡೆದನು. ಅಯ್ಯಾ ರಾಜನೇ! ಅಗ್ನಿಯು ಪುನಃ ಅಗ್ನಿತ್ವವನ್ನು ಪಡೆದುದು ಚತುರ್ದಶೀತಿಥಿಯಲ್ಲಿ.

೫೭. ಹವ್ಯವಾಹನಾದ ಅಗ್ನಿಗೆ ಸಹಾಯಕರಾಗಿ ದೇವತೆಗಳು ಮತ್ತು ಭೂತಗಳು ಇವರ ಗೋಪ್ಯಚರಿತ್ರೆಯೆಲ್ಲವೂ ಚತುರ್ದಶೀತಿಥಿಯಲ್ಲಿ ನಡೆಯಿತು.

೫೮. ಅನಂತರ ಶ್ರೀ ಪರಮೇಶ್ವರನು ಅಗ್ನಿಗೆ ದಿಕ್ಪತಿತ್ವವನ್ನು ಕೊಟ್ಟನು. ಆದುದರಿಂದ ಈ ಚತುರ್ದಶೀತಿಥಿಯು ಸ್ವರ್ಗಲೋಕವಾಸಿಗಳಾದ ದೇವತೆಗಳಿಂದಲೂ, ಇಲ್ಲಿ ರಾಜರಿಂದಲೂ ಪೂಜಿತವಾಗಿದೆ.

೫೯-೬೧. ಮತ್ತು ಪೈಲ, ಜಾಬಾಲಿ, ಮನು, ಮೊದಲಾದ ಮಹಾತ್ಮರಿಂದಲೂ, ನಹುಷಾದಿ ಇತರ ಚಕ್ರವರ್ತಿಗಳಿಂದಲೂ, ಈ ತಿಥಿಯು ಪೂಜಿತವಾಗಿದೆ. ಯುದ್ಧದಲ್ಲಿ ಅಥವಾ ಇತರ ಸ್ಥಳಗಳಲ್ಲಿ ವಿಷ ಶಸ್ತ್ರ ಇವುಗಳಿಂದ ಮರಣಹೊಂದಿದವರಿಗೂ, ಸ್ವಭಾವ ತಿಳಿಯದೆ ಅಜ್ಞಾತವಾದ ಕ್ರೂರವಾದ ಗೂಳಿ, ಸರ್ಪ ಇವುಗಳಿಂದ ಆಕ್ರಾಂತರಾಗಿ ಮೃತರಾದವರಿಗೂ, ನದೀಪ್ರವಾಹದಲ್ಲಿ ಬಿದ್ದು ಸತ್ತವರಿಗೂ, ಸಮುದ್ರ, ಪರ್ವತಮಾರ್ಗ, ಇವುಗಳಲ್ಲಿ ಮೃತಿಹೊಂದಿದವರಿಗೂ,

**ಪತಿತಾಃ ಪರ್ವತೇಭ್ಯಶ್ಚ ತೋಯಾಗ್ನಿಗಹನೇ ಮೃತಾಃ ।**
**ಉದಧ್ಯಾಂ ಪತಿತಾ ಯೇ ಚ ಯೇ ಕೇ ಚಾತ್ಮಹನೋ ಜನಾಃ ।**
**ತೇಷಾಂ ಶಸ್ತಂ ಚತುರ್ದಶ್ಯಾಂ ಶ್ರಾದ್ಧಂ ಸ್ವರ್ಗಸುಖಪ್ರದಂ ॥ ೬೧ ॥**

**ಶ್ರಾದ್ಧಾನಿ ಚೈವ ದತ್ತಾನಿ ದಾನಾನಿ ಸುಲಘೂನ್ಯಪಿ ।**
**ಪ್ರಸೂನಫಲಭೋಜ್ಯಾನಿ ಉಪತಿಷ್ಠಂತಿ ತಾನ್ನರಾನ್ ॥ ೬೨ ॥**

**ಏವಂ ತಿಥಿರಿಯಂ ರಾಜನ್ನಾಗ್ನೇಯೀ ಪ್ರೋಚ್ಯತೇ ಜನೈಃ ।**
**ರೌದ್ರೀಂ ಚ ಕೇಚಿದಿತ್ಯಾಹೂ ರುದ್ರೋಗ್ನಿಃ ಸ ಚ ಪಠ್ಯತೆ ॥ ೬೩ ॥**

**ಯಸ್ಯಾಂ ಮನೋರಥಂ ಯಂಯಂ ಸಮುದ್ದಿಶ್ಯ ಹ್ಯುಪೋಷತಿ ।**
**ದದಾತಿ ತಸ್ಯ ತದ್ವಹ್ನಿಃ ಸಾಗ್ರೇ ಸಂವತ್ಸರೇ ಗತೇ ॥ ೬೪ ॥**

ಪರ್ವತಗಳಿಂದ ಬಿದ್ದು ಮೃತರಾದವರಿಗೂ, ನೀರು, ಬೆಂಕಿ, ಕಾಡು, ಇವುಗಳಲ್ಲಿ ಸಿಕ್ಕಿ ಮೃತರಾದವರಿಗೂ, ಮತ್ತು ಇತರರಿಂದ ಸಮುದ್ರಕ್ಕೆ ತಳ್ಳಲ್ಪಟ್ಟು ಮರಣ ಹೊಂದಿದವರಿಗೂ ಆತ್ಮಹತ್ಯೆಮಾಡಿಕೊಂಡವರಿಗೂ ಈ ಚತುರ್ದಶೀತಿಥಿಯಲ್ಲಿ ಶ್ರಾದ್ಧ ಮಾಡುವುದೂ ಸಹ ಪ್ರಶಸ್ತವೆನಿಸಿದೆ. ಈರೀತಿಯ ದುರ್ಮರಣ ಹೊಂದಿದವರಿಗೆ ಈ ದಿನದ ಶ್ರಾದ್ಧವು ಸ್ವರ್ಗಸುಖಪ್ರದವಾಗುವುದು.

೬೨. ಈ ಚತುರ್ದಶಿಯಲ್ಲಿ ಮಾಡಿದ ಶ್ರಾದ್ಧಗಳು ಅತ್ಯಲ್ಪವಾಗಿದ್ದರೂ, ಮತ್ತ ಅವರನ್ನು ಉದ್ದೇಶಿಸಿಕೊಟ್ಟ ಆ ದಾನಗಳು, ಪುಷ್ಪ, ಫಲ, ಭೋಜ್ಯವಸ್ತು, ಇವುಗಳೆಲ್ಲವೂ ಮೃತರಾದವರ ಆತ್ಮಕ್ಕೆ ತೃಪ್ತಿಯನ್ನು ಉಂಟುಮಾಡುವುವು.

೬೩. ಅಯ್ಯಾ ರಾಜನೇ ! ಈರೀತಿ ಪ್ರಶಸ್ತವಾದ ಈ ಚತುರ್ದಶೀತಿಥಿಯನ್ನು ಜನರು " ಆಗ್ನೇಯೀ " (ಅಗ್ನಿಸಂಬಧಿ, ಅಗ್ನಿ ಪ್ರೀತಿಕಾರಕ) ಎಂದು ಹೇಳುತ್ತಾರೆ. ಮತ್ತೆ ಕೆಲವರು ಆ ತಿಥಿಯನ್ನು " ರೌದ್ರೀ " ಎಂದೂ ಹೇಳುತ್ತಾರೆ. ಅಗ್ನಿಗೂ ರುದ್ರ ಎಂಬ ನಾಮವು ಶ್ರುತಿಯಲ್ಲಿ ಉಕ್ತವಾಗಿದೆ.

೬೪. ಯಾವ ಯಾವ ಚತುರ್ದಶಿಯಲ್ಲಿ ಪುರುಷನು ಯಾವ ಯಾವ ಇಷ್ಟಾರ್ಥವನ್ನುದ್ದೇಶಿಸಿ, ಉಪವಾಸ ಮಾಡುವನೋ,ಅವನ ಆಯಾ ಮನೋರಥಗಳನ್ನು ಅಗ್ನಿಯು ಒಂದುವರ್ಷದಲ್ಲಿ ಪೂರೈಸುತ್ತಾನೆ.

ಚತುರ್ದಶ್ಯಾಂ ನಿರಾಹಾರಃ ಸಮಭ್ಯರ್ಚ್ಯ ತ್ರಿಲೋಚನಂ ।
ಪುಷ್ಪಧೂಪಾದಿನೈವೇದ್ಯೈ ರಾತ್ರೌ ಜಾಗರಣಾನ್ನರಃ ।
ಪಂಚಗವ್ಯಂ ನಿಶಿ ಪ್ರಾಶ್ಯ ಸ್ವಪ್ಯಾದ್ಭೂಮೌ ವಿಮತ್ಸರಃ ॥ ೬೫ ॥

ಶ್ಯಾಮಾಕಮಥ ವಾ ಭುಕ್ತ್ವಾ ತೈಲಕ್ಷಾರವಿವರ್ಜಿತಂ ।
ಹೋಮಃ ಕೃಷ್ಣತಿಲೈಃ ಕಾರ್ಯಃ ಶತಮಷ್ಟೋತ್ತರಂ ನೃಪ ॥ ೬೬ ॥

ಅಗ್ನಯೇ ಹವ್ಯವಾಹನಾಯ ಸೋಮಾಯಾಂಗಿರಸೇ ನಮಃ ।
ತತಃ ಪ್ರಭಾತೇ ವಿಮಲೇ ಸ್ನಾಪ್ಯ ಪಂಚಾಮೃತೈಃ ಶಿವಂ ॥ ೬೭ ॥

ಪೂಜಯಿತ್ವಾ ವಿಧಾನೇನ ಹೋಮಂ ಕೃತ್ವಾ ತಥೈವ ಚ ।
ಉದೀರಯೇನ್ಮಂತ್ರಮೇತಂ ಕೃತ್ವಾ ಶಿರಸಿ ಚಾಂಜಲಿಂ ॥ ೬೮ ॥

---

೬೫. ವ್ರತಿಯಾದವನು ಚತುರ್ದಶಿಯಲ್ಲಿ ನಿರಾಹಾರವಾಗಿದ್ದು, ತ್ರಿಲೋಚನವಾದ ಶ್ರೀ ಪರಮೇಶ್ವರನನ್ನು ಪುಷ್ಪಧೂಪಾದಿಗಳಿಂದ ಚೆನ್ನಾಗಿ ಪೂಜೆಮಾಡಿ, ನೈವೇದ್ಯ ಸಮರ್ಪಣೆಮಾಡಿ, ಜಾಗರಣೆಮಾಡಬೇಕು. ಅಥವಾ ಮಾತ್ಸರ್ಯಾದಿ ಷಡ್ವರ್ಗಗಳನ್ನು ವರ್ಜಿಸಿ ಬರಿಯ ನೆಲದಮೇಲೆ ಶಯನಮಾಡಬೇಕು.

೬೬. ಅಯ್ಯಾ ರಾಜನೇ ! ಆ ದಿನ ಶ್ಯಾಮಕ (ನವಣೆಯ ಅಕ್ಕಿ) ಯನ್ನು ಪಾಕಮಾಡಿ, ಎಣ್ಣೆ ಉಪ್ಪು ಇವುಗಳನ್ನು ಉಪಯೋಗಿಸದೆ ಅದನ್ನು ಭುಂಜಿಸಬೇಕು. ಮತ್ತು ಕರಿಯ ಎಳ್ಳುಗಳ ಹವಿಸ್ಸಿನಿಂದ ನೂರೆಂಟು ಹೋಮಗಳನ್ನು ಆಚರಿಸಬೇಕು.

೬೭. ಅಗ್ನಯೇ ಹವ್ಯವಾಹನಾಯನಮಃ, ಸೋಮಯಾಂಗಿರಸೇನಮಃ, ಎಂಬ ಮಂತ್ರವನ್ನು ಹೋಮದಲ್ಲೂ ಪೂಜೆಯಲ್ಲೂ ಹೇಳಬೇಕು. ಅನಂತರ ಚೆನ್ನಾಗಿ ಬೆಳಗಾದ ಮೇಲೆ ಶ್ರೀ ಪರಮೇಶ್ವರನಿಗೆ ಪಂಚಾಮೃತಾಭಿಷೇಕವನ್ನು ಮಾಡಿಸಬೇಕು.

೬೮. ಈ ಹಿಂದೆ ಹೇಳಿದ ಹಾಗೆ ವಿಧಿವತ್ತಾಗಿ ಪೂಜೆಮಾಡಿದ ಮೇಲೆ ಶಿರಸ್ಸಿನಲ್ಲಿ ಅಂಜಲಿಯನ್ನಿಟ್ಟುಕೊಂಡು ಈರೀತಿ ಪ್ರಾರ್ಥಿಸಬೇಕು.

ನಮಸ್ತ್ರಿಮೂರ್ತಯೇ ತುಭ್ಯಂ ನಮಸ್ಸೂರಾಗ್ನಿ ರೂಪಿಣೇ ।
ಪುತ್ರಾನ್ಯಚ್ಛ ಸುಖಂ ಯಚ್ಛ ಮೋಕ್ಷಂ ಯಚ್ಛ ನಮೋಽಸ್ತುತೇ ॥೬೯॥

ನೀರಾಜನಂ ತತಃ ಕೃತ್ವಾ ಪಶ್ಚಾದ್ಭುಂಜೀತ ವಾಗ್ಯತಃ ।
ಏವಂ ಸಂವತ್ಸರಸ್ಯಾಂತೇ ಕೃತ್ವಾ ಸರ್ವಂ ಯಥೋದಿತಂ ॥ ೭೦ ॥

ಸೌವರ್ಣಂ ಕಾರಯೇದ್ದೇವಂ ತ್ರಿನೇತ್ರಂ ಶೂಲಪಾಣಿನಂ ।
ವೃಷಸ್ಕಂಧಗತಂ ಸೌಮ್ಯಂ ಸಿತವಸ್ತ್ರಯುಗಾನ್ವಿತಂ ॥ ೭೧ ॥

ಚಂದನೇನಾನುಲಿಪ್ತಾಂಗಂ ಸಿತಮಾಲ್ಯೋಪಶೋಭಿತಂ ।
ಸ್ಥಾಪಯಿತ್ವಾ ತಾಮ್ರಪಾತ್ರೇ ಬ್ರಾಹ್ಮಣಾಯ ನಿವೇದಯೇತ್ ।
ಸರ್ವಕಾಲಿಕಮೇತತ್ತೇ ಕಥಿತಂ ವ್ರತಮುತ್ತಮಂ ॥ ೭೨ ॥

---

೬೯. ಓ ಶಿವನೇ ! ತ್ರಿಮೂರ್ತಿಸ್ವರೂಪನಾದ ನಿನಗೆ ನಮಸ್ಕಾರ. ಸೂರ್ಯ ಅಗ್ನಿ ಇವರ ಸ್ವರೂಪಿಯಾದ ನಿನಗೆ ನನ್ನ ವಂದನೆಗಳು. ನನಗೆ ಮಕ್ಕಳನ್ನು ಕೊಡು. ಮತ್ತು ಸುಖವನ್ನು ಕೊಡು. ಕೊನೆಗೆ ಮೋಕ್ಷವನ್ನು ಕೊಡು. ನಿನಗೆ ಪುನಃ ನಮಸ್ಕಾರ ಎಂದು ಪ್ರಾರ್ಥನಾಮಂತ್ರಾರ್ಥ.

೭೦. ಅನಂತರ ಮಂಗಳ ನೀರಾಜನವನ್ನು ಮಾಡಿ, ಆಮೇಲೆ ಮೌನದಿಂದ ಭುಂಜಿಸಬೇಕು. ಈರೀತಿ ಒಂದುವರ್ಷ ಆಚರಿಸಿದಮೇಲೆ ವರ್ಷಾಂತದಲ್ಲಿ ಹಿಂದೆ ಹೇಳಿದಂತೆಯೇ ಎಲ್ಲವನ್ನೂ ಮಾಡಬೇಕು.

೭೧. ಆ ವರ್ಷದ ಕೊನೆಯಲ್ಲಿ ತ್ರಿಶೂಲಪಾಣಿಯೂ ತ್ರಿನೇತ್ರನೂ ಆಗಿರುವ, ಶ್ರೀ ಪರಮೇಶ್ವರನ ಪ್ರತಿಮೆಯನ್ನು ಭಂಗಾರದಿಂದ ಮಾಡಿಸಬೇಕು. ಆ ಶಿವನು ವೃಷಭದ ಮೇಲೆ ಕುಳಿತಿರುವನೂ ಸೌಮ್ಯಕಾರನೂ ಆಗಿರುವಂತೆ ಮಾಡಿಸಬೇಕು. ಅಂತಹ ದೇವಪ್ರತಿಮೆಗೆ ಬಿಳಿಯ ವಸ್ತ್ರಯುಗಳವನ್ನು ಹೊದ್ದಿಸಬೇಕು.

೭೨. ಅನಂತರ ಆ ದೇವನ ಸರ್ವಾಂಗಗಳಿಗೂ ಚಂದನವನ್ನು ಲೇಪಿಸಬೇಕು. ಮತ್ತು ಬಿಳಿಯ ಪುಷ್ಪಮಾಲಿಕೆಗಳಿಂದ ಅಲಂಕರಿಸಿ, ತಾಮ್ರಪಾತ್ರೆಯ ಮೇಲಿಟ್ಟು, ಅದನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಅಯ್ಯಾ ಯುಧಿಷ್ಠಿರನೇ ! ಯಾವಾಗ ಬೇಕಾದರೂ ಆಚರಿಸಬಹುದಾದ ಈ ಉತ್ತಮ ವ್ರತವನ್ನು ನಿನಗೆ ನಾನು ಹೇಳಿದೆನು.

ಸಂವತ್ಸರಂ ಸಮಾಪ್ತಂ ಹಿ ವ್ರತಸ್ಯ ತು ಯದಾ ಭವೇತ್ ।
ಕಾಲೇ ಗತೇ ಬಹುತಿಥೇ ತೀರ್ಥಸ್ಯ ಶರಣಂ ಭವೇತ್ ।
ಮೃತಸ್ಯ ದೇಹೋ ದಿವ್ಯಸ್ಸ್ಯಾದ್ ದಿವ್ಯಾಲಂಕಾರಭೂಷಿತಃ ॥ ೭೩ ॥

ದಿವ್ಯನಾರೀಗಣವೃತೋ ವಿಮಾನವರಮಾಸ್ಥಿತಃ ।
ದೇವದೇವ್ಯೈಃ ಸಮಃ ಶಂಭೋಃ ಕ್ರೀಡತಿ ತ್ರಿಪುರೇ ಚಿರಂ ॥ ೭೪ ॥

ಇಹ ಚಾಗತ್ಯ ಕಾಲಾಂತೇ ಜಾತಃ ಸ ಚ ನೃಪೋ ಭವೇತ್ ।
ದಾತಾ ಯಜ್ವಾ ಧನೀ ದಕ್ಷೋ ಬ್ರಾಹ್ಮಣೋ ಬ್ರಾಹ್ಮಣಪ್ರಿಯಃ॥೭೫॥

ಶ್ರೀಮಾನ್ವಾಗ್ಮೀ ಕೃತೀ ಧೀಮಾನ್ಪುತ್ರಪೌತ್ರಸಮನ್ವಿತಃ ।
ಪತ್ನೀಗಣಸಮಾಯುಕ್ತಶ್ಚಿರಂ ಭದ್ರಾಣಿ ಪಶ್ಯತಿ ॥ ೭೬ ॥

---

೭೩. ಈ ವ್ರತವನ್ನು ಪ್ರಾರಂಭಿಸಿ ಒಂದು ಸಂವತ್ಸರ ಪೂರ್ತಿಯಾಗಿ ಆಚರಿಸಿ, ಸಮಾಪ್ತಿಯಾಗುವಾಗಲೋ, ಸಮಾಪ್ತಿಯಾಗಿ ಬಹುಕಾಲ ಕಳೆದ ಮೇಲೋ, ಯಾವುದಾದರೂ ಒಂದು ಪುಣ್ಯತೀರ್ಥಕ್ಕೆ ಹೋಗಿ ಆ ತೀರ್ಥಶರಣ ನಾಗಿ ಅಲ್ಲಿ ವಾಸಿಸಬೇಕು.

೭೪. ಈ ವ್ರತಾನುಷ್ಠಾತೃವು ಆ ಪುಣ್ಯಕ್ಷೇತ್ರದಲ್ಲಿ ಮೃತನಾದರೆ ಆತನಿಗೆ ದಿವ್ಯಶರೀರ ಬಂದು, ದಿವ್ಯಾಭರಣಗಳಿಂದ ಅಲಂಕೃತವಾಗಿಯೂ, ದಿವ್ಯಸ್ತ್ರೀಗಣ ಪರಿವೃತವಾಗಿಯೂ ಇರುವ, ಉತ್ತಮ ವಿಮಾನವನ್ನು ಇವನು ಹತ್ತಿಕೊಂಡು, ಈಶ್ವರನ ಲೋಕಕ್ಕೆ ಹೋಗಿ ಅಲ್ಲಿ ದೇವತೆಗಳಿಗೂ ದೇವನಾಗಿ ಈಶ್ವರಸಮಾನ ನಾಗಿ ಕ್ರೀಡಿಸುತ್ತಿರುವನು.

೭೫. ಕಾಲಾಂತರದಲ್ಲಿ ಅವನು ಈ ಭೂಲೋಕಕ್ಕೆ ಬಂದರೂ, ರಾಜನಾಗಿ ಜನಿಸುವನು. ಆಗ ದಾನಮಾಡುವ ಸ್ವಭಾವವುಳ್ಳವನೂ, ವಿಧಿವತ್ತಾಗಿ ಯಾಗಮಾಡುವವನೂ, ಧನಿಕನೂ, ಕಾರ್ಯನಿರ್ವಹಣದಕ್ಷನೂ,

೭೬. ಬ್ರಾಹ್ಮಣ ಜಾತಿಯಲ್ಲಿ ಜನಿಸಿದವನೂ, ಬ್ರಾಹ್ಮಣಪ್ರಿಯನೂ, ಶ್ರೀಮಂತನೂ, ವಾಗ್ಮಿಯೂ, ಕೃತಕೃತ್ಯನೂ, ಬುದ್ಧಿವಂತನೂ, ಪುತ್ರಪೌತ್ರ ಸಮನ್ವಿತನೂ, ಪತ್ನೀಸಮೂಹಯುಕ್ತನೂ ಆಗಿ, ಬಹುಕಾಲ ಅನೇಕ ಮಂಗಳ ಕಾರ್ಯಗಳನ್ನು ಮಾಡುವವನಾಗುತ್ತಾನೆ.

ಯೇ ದುರ್ಲಭಾ ಭುವಿ ಸುರೋರಗಮಾನವಾನಾಂ ।
ಕಾಮಾ ಹ್ಯನುತ್ತಮಗುಣೇನ ಯುತಾಃ ಸದೈವ ।
ತಾನಾಪ್ನುವಂತಿ ಸಿತಭೂತತಿಥೌ ಸುರೇಶಂ ।
ಸಂಪೂಜ್ಯ ಸೋಮತಿಲಕಂ ವಿಧಿವನ್ಮನುಷ್ಯಾಃ ॥ ೭೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರಸಂವಾದೇ ಆಗ್ನೇಯೀಚತುರ್ದಶೀ ವ್ರತ ವರ್ಣನಂ ನಾಮ ತ್ರಿನವತಿತಮೋಽಧ್ಯಾಯಃ.



---

೭೭. ಮನುಷ್ಯರು ಯಾವಾಗಲೂ ಉತ್ತಮೋತ್ತಮ ಗುಣಗಣಯುತರಾಗಿ, ಚಂದ್ರಶೇಖರನೂ ದೇವಾಧೀಶನೂ ಆಗಿರುವ ಶ್ರೀ ಪರಮೇಶ್ವರನಿಗೆ ಶುಕ್ಲಪಕ್ಷದ ಚತುರ್ದಶೀತಿಥಿಯಲ್ಲಿ, ವಿಧಿವತ್ತಾಗಿ ಪೂಜೆಮಾಡಿದರೆ, ಆ ಪುರುಷರಿಗೆ; ದೇವತೆಗಳು, ನಾಗರು ಇವರುಗಳಿಗೆ ದುರ್ಲಭವೂ, ಭೂಲೋಕದಲ್ಲೇ ಇತರ ಮನುಷ್ಯರಿಗೆ ದುರ್ಲಭವೂ ಆಗಿರುವ ಇಷ್ಟಾರ್ಥಗಳು ಪ್ರಾಪ್ತವಾಗುವುವು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಆಗ್ನೇಯೀ ಚತುರ್ದಶೀ ವ್ರತವರ್ಣನೆಯೆಂಬ ತೊಂಭತ್ತಮೂರನೆಯ ಅಧ್ಯಾಯವು ಸಮಾಪ್ತವು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಚತುರ್ನವತಿತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

ಅನಂತವ್ರತಮಸ್ತ್ಯನ್ಯತ್ಸರ್ವಪಾಪಹರಂ ಶಿವಂ ।
ಸರ್ವಕಾಮಪ್ರದಂ ನೃಣಾಂ ಸ್ತ್ರೀಣಾಂ ಚೈವ ಯುಧಿಷ್ಠಿರ ॥ ೧ ॥

ಶುಕ್ಲಪಕ್ಷೇ ಚತುರ್ದಶ್ಯಾಂ ಮಾಸಿ ಭಾದ್ರಪದೇ ಶುಭೇ ।
ತಸ್ಯಾನುಷ್ಠಾನಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ॥ ೨ ॥

॥ ಯುಧಿಷ್ಠಿರ ಉವಾಚ ॥

ಕೃಷ್ಣ ಕೋಽಯಂ ತ್ವಯಾಖ್ಯಾತೋ ಹ್ಯನಂತ ಇತಿ ವಿಶ್ರುತಃ ।
ಕಿಂ ಶೇಷನಾಗ ಆಹೋಸ್ವಿದನಂತಸ್ತಕ್ಷಕಃ ಸ್ಮೃತಃ ॥ ೩ ॥

---

### ತೊಂಭತ್ತನಾಲ್ಕನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಯುಧಿಷ್ಠಿರನೇ ! ಸರ್ವಪಾಪ ನಿವಾರಕವೂ, ಮಂಗಳಕರವೂ, ಗಂಡಸರಿಗೂ ಮತ್ತುಹೆಂಗಸರಿಗೂ ಸರ್ವೇಷ್ಟಾರ್ಥ ಗಳನ್ನು ಕೊಡತಕ್ಕುದೂ ಮತ್ತು ಚತುರ್ದಶಿಯಲ್ಲಿ ಆಚರಿಸತಕ್ಕುದೂ ಅನಂತವ್ರತ ವೆಂಬ ಇನ್ನೊಂದು ವ್ರತವಿದೆ.

೨. ಶುಭ ಭಾದ್ರಪದಮಾಸದ ಶುಕ್ಲಪಕ್ಷದ ಚತುರ್ದಶಿಯಲ್ಲಿ ಆ ವ್ರತಾನು ಷ್ಠಾನಮಾಡಿದ ಮಾತ್ರದಿಂದ ಪುರುಷನು ಸರ್ವಪಾಪಗಳಿಂದಲೂ ವಿನಿರ್ಮುಕ್ತ ನಾಗುತ್ತಾನೆ ಎಂದನು.

೩. ಯುಧಿಷ್ಠಿರನು ಹೇಳುತ್ತಾನೆ—ಹೇ ಕೃಷ್ಣಪರಮಾತ್ಮಾ ! ನೀನು ಹೇಳಿದ ಅನಂತನೆಂದು ಪ್ರಸಿದ್ಧನಾದವನು ಯಾರು ? ಅನಂತನೆಂದರೆ ಸರ್ಪ

**ಪರಮಾತ್ಮಾಥ ವಾನಂತ ಉತಾಹೋ ಬ್ರಹ್ಮ ಉಚ್ಯತೇ ।**
**ಕ ಏಷೋಽನಂತಸಂಜ್ಞೋ ವೈ ತಥ್ಯಂ ಚ ಬ್ರೂಹಿ ಕೇಶವ ॥ ೪ ॥**

**॥ ಶ್ರೀ ಕೃಷ್ಣ ಉವಾಚ ॥**

**ಅನಂತ ಇತ್ಯಹಂ ಪಾರ್ಥ ಮಮ ನಾಮ ನಿಬೋಧಯ ।**
**ಆದಿತ್ಯಾದಿಷು ವಾರೇಷು ಯಃ ಕಾಲ ಉಪಪದ್ಯತೆ ॥ ೫ ॥**

**ಕಲಾಕಾಷ್ಠಾಮುಹೂರ್ತಾದಿದಿಸರಾತ್ರಿಶರೀರವಾನ್ ।**
**ಪಕ್ಷಮಾಸರ್ತುವರ್ಷಾದಿಯುಗಕಲ್ಪವ್ಯವಸ್ಥಯಾ ॥ ೬ ॥**

**ಯೋಽಯಂ ಕಾಲೋ ಮಯಾಖ್ಯಾತಸ್ತವ ಧರ್ಮಭೃತಾಂ ವರ ।**
**ಸೋಽಹಂ ಕಾಲೋವತೀರ್ಣೋತ್ರ ಭುವೋ ಭಾರಾವತಾರಣಾತ್ ॥೭॥**

---

ಜಾತಿಗೆ ಸೇರಿದ ಆದಿಶೇಷನೆಂಬವನೋ ? ಅಥವಾ ತಕ್ಷಕನೆಂಬ ನಾಗನಿಗೆ ಅನಂತನೆಂದು ಹೇಳುವರೋ ?

೪. ಅಥವಾ ನೀನು ಹೇಳಿದ ಅನಂತನೆಂಬುವನು ಪರಮಾತ್ಮನೋ? ಇಲ್ಲವಾದರೆ ಬ್ರಹ್ಮದೇವನಿಗೇ ಅನಂತನೆಂದು ಹೇಳುತ್ತಾರೆಯೋ ? ಎಲೈ ಕೇಶವನೇ ! ನೀನು ಹೇಳಿದ ಈ ವ್ರತದಲ್ಲಿ ಅನಂತನೆಂಬ ಪೂಜ್ಯವಾದ ನಾಮವುಳ್ಳವನು ಯಾವನೆಂಬುದನ್ನು ಸತ್ಯವಾಗಿ ಹೇಳು ಎಂದನು.

೫-೭. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಪಾಂಡುನಂದನ ! ಅನಂತನೆಂದರೆ ನಾನೇ; ಅದನ್ನು ನನ್ನ ನಾಮಧೇಯವೆಂದೇ ತಿಳಿದುಕೋ. ಅಯ್ಯಾ ಧರ್ಮಿಷ್ಠರಲ್ಲಿ ಉತ್ತಮನಾದ ಯುಧಿಷ್ಠಿರನೇ ! ಆದಿತ್ಯವಾರ ಮೊದಲ್ಗೊಂಡು ಎಲ್ಲಾ ವಾರಗಳಲ್ಲಿ ಕ್ಲುಪ್ತವಾಗಿರುವ ಕಾಲವು ಕಲಾ, ಕಾಷ್ಠಾ, ಮುಹೂರ್ತ, ಹಗಲು, ರಾತ್ರಿ ಈ ರೂಪಗಳಾಗಿಯೂ ಮತ್ತು ಪಕ್ಷ, ಮಾಸ, ಋತು, ವರ್ಷ, ಯುಗ, ಕಲ್ಪ, ಎಂಬ ಈ ವ್ಯವಸ್ಥೆಯುಳ್ಳದ್ದಾಗಿಯೂ ಇದೆಯೆಂದು ನಾನು ಈ ಹಿಂದೆ ನಿನಗೆ ಹೇಳಿದ್ದೆನು ಅಂತಹ ಕಾಲಸ್ವರೂಪನಾಗಿ ನಾನು ಈ ಭೂಭಾರವನ್ನು ಇಳಿಸುವುದಕ್ಕಾಗಿ ಭೂಲೋಕದಲ್ಲಿ ಅವತರಿಸಿರುತ್ತೇನೆ.

ದಾನವಾನಾಂ ವಿನಾಶಾಯ ವಸುದೇವಕುಲೋದ್ಭವಂ ।
ಮಾಂ ವಿದ್ಧ್ಯನಂತಂ ಪಾರ್ಥ ತ್ವಂ ವಿಷ್ಣುಂ ಜಿಷ್ಣುಂ ಹರಂ ಶಿವಂ ॥ ೮ ॥

ಬ್ರಹ್ಮಾಣಂ ಭಾಸ್ಕರಂ ಶೇಷಂ ಸರ್ವವ್ಯಾಪಿನಮೀಶ್ವರಂ ।
ವಿಶ್ವರೂಪಂ ಮಹಾತ್ಮಾನಂ ಸೃಷ್ಟಿಸಂಹಾರಕಾರಕಂ ॥ ೯ ॥

॥ ಯುಧಿಷ್ಠಿರ ಉವಾಚ ॥
ಪ್ರತ್ಯಯಾರ್ಥಂ ಮಯಾಖ್ಯಾತಂ ಸೋಽಹಂ ಪಾರ್ಥ ನ ಸಂಶಯಃ ।
ಅನಂತವ್ರತಮಾಹಾತ್ಮ್ಯವಿಧಿಂ ವದ ವಿದಾಂವರ ॥ ೧೦ ॥

ಕಿಂ ಪುಣ್ಯಂ ಕಿಂ ಫಲಂ ಚಾಸ್ಯ ಹ್ಯನುಷ್ಠಾನವತಾಂ ನೃಣಾಂ ।
ಕೇನ ಚಾದೌ ಪುರಾ ಚೀರ್ಣಂ ಮರ್ತ್ಯೇ ಕೇನ ಪ್ರಕಾಶಿತಂ ॥ ೧೧ ॥

---

೮. ಅಯ್ಯಾ ಧರ್ಮಜನೇ ! ಧರ್ಮವಿರೋಧಿಗಳೆನಿಸಿ, ಭೂಮಿಗೆ ಭಾರವಾಗಿರುವ ದಾನವರನ್ನು ನಾಶಮಾಡುವುದಕ್ಕಾಗಿ, ವಸುದೇವನ ಮನೆಯಲ್ಲಿ ಉದ್ಭವಿಸಿದ ನನ್ನನ್ನೇ ಅನಂತನೆಂದೂ, ವಿಷ್ಣು, ಇಂದ್ರ, ಹರ, ಶಿವ ಈ ದೇವತೆಗಳ ಸ್ವರೂಪನೆಂದೂ ನೀನು ತಿಳಿ.

೯. ಮತ್ತು ಬ್ರಹ್ಮನೂ, ಸೂರ್ಯನೂ, ಆದಿಶೇಷನೂ, ಎಲ್ಲಾ ಕಡೆಗಳಲ್ಲೂ ವ್ಯಾಪಕನಾಗಿರುವ ಪರಮೇಶ್ವರನೂ, ವಿಶ್ವರೂಪನೂ, ಸೃಷ್ಟಿಪ್ರಳಯಗಳಿಗೆ ಕಾರಣನಾದ ಮಹಾಮಹಿಮೆಯುಳ್ಳ ಪರಮಾತ್ಮನೂ, ನಾನೇ ಆಗಿರುತ್ತೇನೆಂದು ತಿಳಿ.

೧೦. ಅಯ್ಯಾ ಕುಂತೀಪುತ್ರನೇ ! ನಿನ್ನ ತಿಳಿವಳಿಕೆಗಾಗಿ ಈಗ ನಾನು ಆ ವಿಷಯವನ್ನು ಹೇಳಿದ್ದೇನೆ. ಈ ವಿಷಯದಲ್ಲಿ ಸಂದೇಹಪಡಬೇಡ ಎಂದನು.

೧೧. ಯುಧಿಷ್ಠಿರನು ಹೇಳುತ್ತಾನೆ—ಓ ಪಂಡಿತೋತ್ತಮನೇ! ಆ ಅನಂತ ಚತುರ್ದಶೀ ವ್ರತಪ್ರಭಾವ, ಮತ್ತು ವಿಧಾನ, ಇವುಗಳನ್ನು ಹೇಳು. ಅದರ ಆಚರಣೆಯಿಂದ ಯಾವ ಪುಣ್ಯವು ಲಭಿಸುವುದು? ಮತ್ತು ಈ ವ್ರತವನ್ನು ಆಚರಿಸಿದ ಪುರುಷರಿಗೆ ಲಭಿಸುವ ಫಲವೇನು ? ಪೂರ್ವದಲ್ಲಿ ಈ ವ್ರತವನ್ನು ಮೊದಲು ಆಚರಿಸಿದವರು ಯಾರು ? ಈ ಭೂಲೋಕದಲ್ಲಿ ಇದನ್ನು ಪ್ರಸಿದ್ಧಿಗೆ ತಂದವನು ಯಾರು ?

ಏವಂ ಸಮಸ್ತಂ ವಿಸ್ತಾರ್ಯ ಬ್ರೂಹ್ಯನಂತವ್ರತಂ ಹರೇ ।

॥ ಶ್ರೀ ಕೃಷ್ಣ ಉವಾಚ ॥

ಆಸೀತ್ಪುರಾ ಕೃತಯುಗೇ ಸುಮಂತೋ ನಾಮ ವೈ ದ್ವಿಜಃ ॥ ೧೨ ॥

ವಶಿಷ್ಠಗೋತ್ರೇ ಚೋತ್ಪನ್ನಃ ಸುರೂಪಶ್ಚ ಭೃಗೋಃ ಸುತಾಂ ।
ದೀಕ್ಷಾಂ ನಾಮೋಪಯೇಮೇ ತಾಂ ವೇದೋಕ್ತವಿಧಿನಾ ತತಃ ॥ ೧೩ ॥

ತಸ್ಯಾಃ ಕಾಲೇನ ಸಂಜಾತಾ ದುಹಿತಾನಂತಲಕ್ಷಣಾ ।
ಶೀಲಾ ನಾಮ ಸುಶೀಲಾ ಸಾ ವರ್ಧತೇ ಪಿತೃಸದ್ಮನಿ ॥ ೧೪ ॥

ಮಾತಾ ಚ ತಸ್ಯಾಃ ಕಾಲೇನ ಹರದಾಹೇನ ಪೀಡಿತಾ ।
ವಿನನಾಶ ನದೀತೀರೇ ಮೃತಾ ಸ್ವರ್ಗಪುರಂ ಯಯೌ ॥ ೧೫ ॥

---

೧೨. "ಎಲೈ ಹರಿಯೇ ! ಈ ಅನಂತವ್ರತದ ಎಲ್ಲಾ ವಿಷಯವನ್ನೂ ನನಗೆ ವಿಸ್ತಾರವಾಗಿ ಹೇಳು" ಎಂದನು. ಶ್ರೀ ಕೃಷ್ಣನು ಹೇಳುತ್ತಾನೆ—ಓ ಧರ್ಮರಾಜನೇ ! ಪೂರ್ವದಲ್ಲಿ ಕೃತಯುಗದಲ್ಲಿ ಸುಮಂತನೆಂಬ ಒಬ್ಬ ಬ್ರಾಹ್ಮಣ ನಿದ್ದನು.

೧೩. ಅವನು ವಶಿಷ್ಠಗೋತ್ರದಲ್ಲಿ ಜನಿಸಿದವನೂ, ಸುಂದರನೂ, ಆಗಿದ್ದನು. ಆ ವಿಪ್ರನು ಭೃಗುವಿನ ಮಗಳಾದ ದೀಕ್ಷೆಯೆಂಬ ಒಬ್ಬ ಕನ್ನಿಕೆಯನ್ನು ವೇದೋಕ್ತಕ್ರಮದಲ್ಲಿ ಮದುವೆ ಮಾಡಿಕೊಂಡನು.

೧೪. ಕೆಲವುಕಾಲ ಕಳೆದಮೇಲೆ ಆ ದೀಕ್ಷೆಗೆ ಸರ್ವಲಕ್ಷಣ ಸಂಪನ್ನೆಯಾದ ಒಬ್ಬಳು ಮಗಳು ಜನಿಸಿದಳು. ಅವಳಿಗೆ ಶೀಲೆಯೆಂದು ನಾಮಕರಣಮಾಡಿದರು. ಆ ಮಗಳು ಹೆಸರಿಗೆ ತಕ್ಕಂತೆ ಒಳ್ಳೆಯ ಶೀಲಸಂಪನ್ನೆಯೆನಿಸಿ ತಂದೆಯ ಮನೆಯಲ್ಲಿ ಬೆಳೆಯುತ್ತಿದ್ದಳು.

೧೫. ಹಾಗೆ ಕಾಲಕಳೆಯುತ್ತಿರುವಾಗ ಆ ಶೀಲೆಯ ತಾಯಿಯಾದ ದೀಕ್ಷೆಯು ಹರದಾಹದಿಂದ ಪೀಡಿತಳಾಗಿ ನದೀತೀರದಲ್ಲಿ, ಮರಣಹೊಂದಿ ಅವಳು ಸ್ವರ್ಗಕ್ಕೆ ಹೋದಳು.

ಸುಮಂತೋಽಪಿ ತತೋಽನ್ಯಾಂ ವೈ ಧರ್ಮಪುಂಸಃ ಸುತಾಂ ಪುನಃ ।
ಉಪಯೇಮೇ ವಿಧಾನೇನ ಕರ್ಕಶಾಂ ನಾಮ ನಾಮತಃ ॥ ೧೬ ॥

ದುಃಶೀಲಾಂ ಕರ್ಕಶಾಂ ಚಂಡೀಂ ನಿತ್ಯಂ ಕಲಹಕಾರಿಣೀಂ ।
ಸಾಪಿ ಶೀಲಾ ಪಿತುರ್ಗೇಹೇ ಗೃಹಾರ್ಚನರತಾ ವಿಭೋ ॥ ೧೭ ॥

ಕುಡ್ಯಸ್ತಂಭತುಲಾಧಾರದೇಹಲೀತೋರಣಾದಿಷು ।
ಚಾತುರ್ವರ್ಣಕರಂ ವೈಶ್ಯನೀಲಪೀತಸಿತಾಸಿತೈಃ ॥ ೧೮ ॥

ಸ್ವಸ್ತಿಕೈಃ ಶಂಖಪದ್ಮೈಶ್ಚ ಅರ್ಚಯಂತೀ ಪುನಃಪುನಃ ।
ಪಿತ್ರಾ ದೃಷ್ಟ್ವಾ ಸುಮಂತೇನ ಸ್ತ್ರೀಚಿಹ್ನಾ ಯೌವನೇ ಸ್ಥಿತಾ ॥ ೧೯ ॥

---

೧೬. ಅನಂತರ ಸುಮಂತನೂ ಕೂಡ, ಧರ್ಮಶರ್ಮ ಎಂಬವನ ಮಗಳಾದ ಇನ್ನೊಬ್ಬ ಕನ್ನಿಕೆಯನ್ನು ಪುನಃ ವಿಧ್ಯುಕ್ತರೀತಿಯಲ್ಲಿ ವಿವಾಹಮಾಡಿಕೊಂಡನು. ಆ ಎರಡನೆಯ ಪತ್ನಿಯು ಕರ್ಕಶ ಎಂಬ ಹೆಸರುಳ್ಳವಳಾಗಿದ್ದಳು. ನಾಮಧೇಯಕ್ಕೆ ತಕ್ಕಂತೆಯೇ ಅವಳು ಗುಣದಲ್ಲೂ ಕರ್ಕಶೆಯೇ ಆಗಿದ್ದಳು.

೧೭. ಮತ್ತು ಆ ಕರ್ಕಶೆಯು ಕೆಟ್ಟಸ್ವಭಾವದವಳು. ಕಠಿಣಳು. ಹಠವಾದಿನಿ. ಮತ್ತು ಯಾವಾಗಲೂ ಕಲಹಕ್ಕೆ ಸನ್ನದ್ಧೆಯಾಗಿದ್ದಳು. ಅಯ್ಯಾ ಧರ್ಮರಾಜನೇ ! ಹಿರಿಯ ಹೆಂಡತಿಯ ಮಗಳಾದ ಶೀಲೆಗೆ ಪಿತೃಗೃಹದಲ್ಲಿ ಮನೆಯನ್ನು ಶೃಂಗರಿಸುವುದರಲ್ಲಿ ಆಸಕ್ತಿ ಹೆಚ್ಚು.

೧೮–೧೯. ಆ ಶೀಲೆಯು ಮನೆಯ ಗೋಡೆ, ಕಂಭ, ತೊಲೆಗೆ ಆಧಾರವಾದ ಬೋದಿಗೆ, ಹೊಸ್ತಿಲು, ಹೊರಬಾಗಿಲು, ಇವುಗಳಲ್ಲಿ ನೀಲ, ಹಳದಿ, ಬಿಳುಪು, ಕಪ್ಪು, ಈ ನಾಲ್ಕು ಬಣ್ಣಗಳಿಂದ ಸ್ವಸ್ತಿಕ, ಶಂಖ, ಪದ್ಮ ಇವುಗಳನ್ನು ಬರೆದು, ಪುನಃ ಪುನಃ ಪೂಜಿಸುತ್ತಿದ್ದಳು. ಕದಾಚಿತ್ ಇವಳ ತಂದೆಯಾದ ಸುಮಂತನು ಇವಳು ಯೌವನಾವಸ್ಥೆಗೆ ಬಂದುದನ್ನು ಅರಿತನು.

೨೦. ಅನಂತರ ಆತನು " ನಾನು ಈ ಸುಶೀಲೆಯನ್ನು ಯಾವನಿಗೆ ಮದುವೆಮಾಡಿಕೊಡಲಿ " ಎಂದು ಯೋಚಿಸತೊಡಗಿದನು. ಬಹುವಾಗಿ ಚಿಂತಿಸಿ

ಕಸ್ಮೈ ದೇಯಾ ಮಯಾ ಶೀಲಾ ವಿಚಾರ್ಯೈವಂ ಸುದುಃಖಿತಃ ।
ಪಿತಾ ದದೌ ಮುನೀಂದ್ರಾಯ ಕೌಂಡಿನ್ಯಾಯ ಶುಭೇ ದಿನೇ ॥ ೨೦ ॥

ಸ್ಮೃತ್ಯುಕ್ತಶಾಸ್ತ್ರವಿಧಿನಾ ವಿವಾಹಮಕರೋತ್ತದಾ ।
ನಿರ್ವರ್ತ್ಯೋದ್ವಾಹಿಕಂ ಸರ್ವಂ ಪ್ರೋಕ್ತವಾನ್ಕರ್ಕಶಾಂ ದ್ವಿಜಃ ॥೨೧॥

ಕಿಂಚಿದಾಯಾದಿಕಂ ದೇಯಂ ಜಾಮಾತುಃ ಪಾರಿತೋಷಕಂ ।
ತಚ್ಛ್ರುತ್ವಾ ಕರ್ಕಶಾ ಕ್ರುದ್ಧಾ ಪ್ರೋದ್ಧೃತ್ಯ ಗೃಹಮಂಟಪಾತ್॥೨೨॥

ಕಪಾಟೇ ಸುಸ್ಥಿರಂ ಕೃತ್ವಾ ಗಮ್ಯತಾಮಿತ್ಯುವಾಚ ಹ ।
ಭೋಜ್ಯಾವಶಿಷ್ಟಚೂರ್ಣೇನ ಪಾಥೇಯಂ ಚ ಚಕಾರ ಸಾ ॥ ೨೩ ॥

ಕೌಂಡಿನ್ಯೋಽಪಿ ವಿವಾಹ್ಯೇನಾಂ ಪಥಿ ಗಚ್ಛಞ್ಛನೈಃಶನೈಃ ।
ಶೀಲಾಂ ಸುಶೀಲಾಮಾದಾಯ ನವೋಢಾಂ ಗೋರಥೇನ ಹಿ ॥ ೨೪ ॥

---

ಕೊನೆಗೆ ಒಂದು ಶುಭದಿನದಲ್ಲಿ ಅವಳನ್ನು ಋಷಿವರ್ಯನಾದ ಕೌಂಡಿನ್ಯನಿಗೆ ಮದುವೆ ಮಾಡಿಕೊಟ್ಟನು.

೨೧. ಆ ಕನ್ಯಾಪಿತೃವಾದ ಸುಮಂತು ಬ್ರಾಹ್ಮಣನು ಶ್ರುತಿಸ್ಮೃತಿಗಳಲ್ಲಿ ಹೇಳಿದ ಪ್ರಕಾರವಾಗಿ ಆ ವಿವಾಹ ಮಹೋತ್ಸವವನ್ನು ಸಾಂಗವಾಗಿ ಪೂರಯಿಸಿ ಆಗ ತನ್ನ ಪತ್ನಿಯಾದ ಕರ್ಕಶೆಯನ್ನು ಕರೆದು ಈ ಪ್ರಕಾರ ಹೇಳಿದನು.

೨೨. ಎಲೌ ಕರ್ಕಶೆಯೇ ! ಅಳಿಯನಿಗೂ ಬಂಧುಗಳಿಗೂ ಏನಾದರೂ ಸ್ವಲ್ಪ ಪಾರಿತೋಷಕ ಕೊಡಬೇಕು ಎಂದನು. ಗಂಡನ ಈ ಮಾತನ್ನು ಕೇಳಿ ಕರ್ಕಶೆಯು ಕುಪಿತಳಾಗಿ, ಮನೆಯ ಹಜಾರದಲ್ಲಿರುತ್ತಿದ್ದ ಸಾಮಾನುಗಳನ್ನೆಲ್ಲಾ ಎತ್ತಿ ಒಳಗಿಟ್ಟುಕೊಂಡಳು.

೨೩. ಅಲ್ಲದೆದೃಢವಾಗಿ ಬಾಗಿಲುಗಳನ್ನು ಹಾಕಿ, ಊಟಕ್ಕೆ ಬಡಿಸಿ ಉಳಿದಿದ್ದ ಹರಕುಮುರುಕು ಭಕ್ಷ್ಯಗಳನ್ನು ದಾರಿಯ ಪ್ರಯಾಣಕ್ಕೆ ಬುತ್ತಿ ಕಟ್ಟಿಕೊಟ್ಟು, ಇನ್ನು ಹೊರಡಬಹುದು ಎಂದು ಹೇಳಿದಳು.

೨೪. ಕೌಂಡಿನ್ಯ ಮಹರ್ಷಿವರ್ಯನು ಒಳ್ಳೆಯ ಶೀಲಸಂಪನ್ನೆಯೂ ಹೊಸದಾಗಿ ವಿವಾಹಿತಳೂ ಆಗಿರುವ, ಈ ಶೀಲೆ ಎಂಬ ಪತ್ನಿಯೊಡನೆ ಎತ್ತಿನ ಗಾಡಿಯಲ್ಲಿ ಕುಳಿತು, ಮೆಲ್ಲಮೆಲ್ಲನೆ ಪ್ರಯಾಣಮಾಡುತ್ತಿದ್ದನು.

ಮಧ್ಯಾಹ್ನೇ ಭೋಜ್ಯವೇಲಾಯಾಂ ಸಮುತ್ತೀರ್ಯ ಸರಿತ್ತಟೇ ।
ದದರ್ಶ ಶೀಲಾ ಸಾ ಸ್ತ್ರೀಣಾಂ ಸಮೂಹಂ ರಕ್ತವಾಸಸಾಂ ॥ ೨೫ ॥

ಚತುರ್ದಶ್ಯಾಮರ್ಚಯಂತಂ ಭಕ್ತ್ಯಾ ದೇವಂ ಪೃಥಕ್ಪೃಥಕ್ ।
ಉಪಗಮ್ಯ ಶನೈಃ ಶೀಲಾ ಪಪ್ರಚ್ಛ ಸ್ತ್ರೀಕದಂಬಕಂ ॥ ೨೬ ॥

ನಾರ್ಯಃ ಕಿಮೇತನ್ಮೇ ಬ್ರೂತ ಕಿಂ ನಾಮ ವ್ರತಮೀದೃಶಂ ।
ತಾ ಊಚುರ್ಯೋಷಿತಃ ಸರ್ವಾ ಅನಂತೋ ನಾಮ ವಿಶ್ರುತಃ ॥ ೨೭ ॥

ಸಾಬ್ರವೀದಹಮಪ್ಯೇವಂ ಕರಿಷ್ಯೇ ವ್ರತಮುತ್ತಮಂ ।
ವಿಧಾನಂ ಕೀದೃಶಂ ತತ್ರ ಕಿಂ ದಾನಂ ಕಸ್ಯ ಪೂಜನಂ ॥ ೨೮ ॥

---

೨೫. ಮಧ್ಯಾಹ್ನವಾಗುತ್ತ ಬಂದು ಊಟದ ಹೊತ್ತಾಗಲು, ಆ ಮುನಿಯು ಒಂದು ನದಿಯ ದಡದಲ್ಲಿಳಿದು, ಮಾಧ್ಯಾಹ್ನಿಕ ಕರ್ಮವನ್ನು ಆಚರಿಸುವುದಕ್ಕಾಗಿ ನದಿಗೆ ಹೋದನು. ಆಗ ಕೆಂಪುಪಟ್ಟೇಶೀರೆಗಳನ್ನು ಉಟ್ಟು ವ್ರತ ಮಾಡುತ್ತಿರುವ ಒಂದು ಸ್ತ್ರೀಯರ ಗುಂಪನ್ನು ಆ ಶೀಲೆಯು ನೋಡಿದಳು.

೨೬. ಅಂದು ಚತುರ್ದಶಿಯಾಗಿತ್ತು. ಆ ಸ್ತ್ರೀಸಮುದಾಯದಲ್ಲಿ ಸೇರಿದವರೆಲ್ಲ ಭಕ್ತಿಯಿಂದ ದೇವನನ್ನು ಬೇರೆಬೇರೆಯಾಗಿ ಅರ್ಚಿಸುತ್ತಿದ್ದರು. ಶೀಲೆಯು ಅದನ್ನು ಕಂಡು ಮೆಲ್ಲನೆ ಅಲ್ಲಿಗೆ ಹೋಗಿ ಆ ಸ್ತ್ರೀಸಮುದಾಯದಲ್ಲಿ ಈರೀತಿ ಪ್ರಶ್ನೆಮಾಡಿದಳು.

೨೭. " ಓ ಸ್ತ್ರೀಯರೇ ! ನೀವು ಮಾಡುತ್ತಿರುವುದೇನೆಂಬುದನ್ನು ನನಗೆ ಸ್ವಲ್ಪ ಹೇಳಿರಿ. ನೀವು ಆಚರಿಸುವ ಈ ವ್ರತಕ್ಕೆ ಹೆಸರು ಏನು ? " ಎಂದಳು. ಆಗ ಎಲ್ಲಾ ಸ್ತ್ರೀಯರೂ " ನಾವು ಆಚರಿಸುವುದು ಪ್ರಸಿದ್ಧವಾದ ಅನಂತನ ವ್ರತ " ಎಂದು ಉತ್ತರ ಹೇಳಿದರು.

೨೮. ಆಗ ಆ ಶೀಲೆಯು " ಎಲೌ ಸ್ತ್ರೀಯರೇ ! ಈ ಉತ್ತಮವಾದ ವ್ರತವನ್ನು ನಾನೂ ಹೀಗೆಯೇ ಮಾಡಬೇಕೆಂದಿರುತ್ತೇನೆ. ಆದುದರಿಂದ ಈ ವ್ರತವನ್ನಾಚರಿಸುವ ಕ್ರಮವೇನು ? ಅದರಲ್ಲಿ ಯಾವ ದಾನವನ್ನು ಕೊಡಬೇಕು ? ಮತ್ತು ಅದರಲ್ಲಿ ಯಾವ ದೇವನನ್ನು ಪೂಜೆಮಾಡುವುದು ? " ಎಂದಳು.

॥ ಸ್ತ್ರಿಯ ಊಚುಃ ॥

ಶೀಲೇ ಪಕ್ವಾನ್ನಪ್ರಸ್ಥಸ್ಯ ಪುನ್ನಾಮ್ನಃ ಸುಕೃತಸ್ಯ ತು ।
ಅರ್ಧಂ ವಿಪ್ರಾಯ ದಾತವ್ಯಮರ್ಧಮಾತ್ಮನಿ ಭೋಜನಂ ॥ ೨೯ ॥

ಕರ್ತವ್ಯಂ ತು ಸರಿತ್ತೀರೇ ಕಥಾಂ ಶ್ರುತ್ವಾ ಹರೇರಿಮಾಂ ।
ಅನಂತಾನಂತಮಭ್ಯರ್ಚ್ಯ ಮಂಡಲೇ ಗಂಧದೀಪಕೈಃ ॥ ೩೦ ॥

ಧೂಪೈಃ ಪುಷ್ಪೈಃ ಸನ್ನೈವೇದ್ಯೈಃ ಪೀತಾಲಕ್ತೈಶ್ಚತುಃ ಶತೈಃ ।
ತಸ್ಯಾಗ್ರತೋ ದೃಢಂ ಸೂತ್ರಂ ಕುಂಕುಮಾಕ್ತಂ ಸುದೋರಕಂ ॥ ೩೧ ॥

ಚತುರ್ದಶಗ್ರಂಥಿಯುತಂ ವಾಮೇ ಸ್ತ್ರೀ ದಕ್ಷಿಣೇ ಪುಮಾನ್ ।
ಮಂತ್ರೇಣಾನೇನ ರಾಜೇಂದ್ರ ಯಾವದ್ವರ್ಷಂ ಸಮಾಪ್ಯತೆ ॥ ೩೨ ॥

---

೨೯. ಆಗ ಸ್ತ್ರೀಯರು ಹೇಳುತ್ತಾರೆ—ಓ ಶೀಲೆಯೇ ! ಪುನ್ನಾಮಕದಿಂದ ಚೆನ್ನಾಗಿ ಪಾಕಮಾಡಿದ-ಒಂದು ಸೇರು ಅಕ್ಕಿಯ ಅನ್ನವನ್ನು ಸ್ವಾಮಿಗೆ ನಿವೇದನೆ ಮಾಡಿ ಅದರಲ್ಲಿ ಅರ್ಧಭಾಗವನ್ನು ಬ್ರಾಹ್ಮಣನಿಗೆ ಕೊಟ್ಟು, ಉಳಿದರ್ಧವನ್ನು ತಾನು ಭುಂಜಿಸಬೇಕು.

೩೦. ಈ ವ್ರತವನ್ನು ನದೀತೀರದಲ್ಲಿ ಆಚರಿಸಿ, ಶ್ರೀ ಹರಿಯ ಕಥಾಶ್ರವಣ ವನ್ನು ತಪ್ಪದೆ ಮಾಡಬೇಕು. ಸಾರಿಸಿದ ನೆಲದಲ್ಲಿ ಮಂಡಲವನ್ನು ಬರೆದು, ಅದರಲ್ಲಿ ಅಪರಿಚ್ಛಿನ್ನನಾದ ಶ್ರೀ ಅನಂತಪದ್ಮನಾಭನನ್ನು ಆವಾಹಿಸಿ, ಗಂಧ ದೀಪಗಳಿಂದ ಪೂಜಿಸಬೇಕು.

೩೧. ಮತ್ತು ಧೂಪ, ಪುಷ್ಪ, ನೈವೇದ್ಯ, ಕೆಂಪುಅರಗು, ಕಮಲಪುಷ್ಪ ಇವುಗಳಿಂದ ಅರ್ಚಿಸಬೇಕು. ಅಯ್ಯಾ ರಾಜೇಂದ್ರನೇ ! ಕೇಳು. ದೃಢವಾದ ತಂತುಗಳಿಂದ ಕೂಡಿದುದೂ, ಕುಂಕುಮಲಿಪ್ತವೂ, ಹದಿನಾಲ್ಕು ಗ್ರಂಥಿಗಳಿಂದ ಸಹಿತವೂ ಆಗಿರುವ ಸುಂದರವಾದ ದೋರಕವನ್ನು

೩೨. ಆ ದೇವನ ಮುಂಭಾಗದಲ್ಲಿ ಇಟ್ಟು ಪೂಜಿಸಿ, ಅವನ್ನು ಮಂತ್ರ ವತ್ತಾಗಿ ಸ್ತ್ರೀಯು ಎಡಗೈಯಲ್ಲೂ, ಪುರುಷನು ಬಲಗೈಯಲ್ಲೂ ಕಟ್ಟಿಕೊಂಡು, ಒಂದು ವರ್ಷವಾಗುವವರೆಗೂ ಧರಿಸಿರಬೇಕು.

ಅನಂತಸಂಸಾರಮಹಾಸಮುದ್ರೇ ।
ಮಗ್ನಾನ್ಸಮಭ್ಯುದ್ಧರ ವಾಸುದೇವ ।
ಅನಂತರೂಪೇ ವಿನಿಯೋಜಿತಾತ್ಮಾ ।
ಹ್ಯನಂತರೂಪಾಯ ನಮೋ ನಮಸ್ತೇ ॥ ೩೩ ॥

ಅನೇನ ದೋರಕಂ ಬಧ್ವಾ ಭೋಕ್ತವ್ಯಂ ಸ್ವಸ್ಥಮಾನಸೈಃ ।
ಧ್ಯಾತ್ವಾ ನಾರಾಯಣಂ ದೇವಮನಂತಂ ವಿಶ್ವರೂಪಿಣಂ ॥ ೩೪ ॥

ಭುಕ್ತ್ವಾ ಚಾಂತೇ ವ್ರಜೇದ್ವೇಶ್ಮ ಹೀದಂ ಪ್ರೋಕ್ತಂ ವ್ರತಂ ತವ ।
ಸಾಪಿ ಶ್ರುತ್ವಾ ವ್ರತಂ ಚಕ್ರೇ ಶೀಲಾ ಬದ್ಧ್ವಾ ಸುದೋರಕಂ ॥ ೩೫ ॥

---

೩೩. ಇದು ದೋರಕವನ್ನು ಕಟ್ಟಿಕೊಳ್ಳುವಾಗ ಹೇಳುವ ಮಂತ್ರ. ಓ ವಾಸುದೇವನೇ ! ನಾಶವಾಗದಿರುವುದಾಗಿ ಅನಂತವಾಗಿರುವ ಈ ಸಂಸ್ಸಾರ ಮಹಾ ಸಾಗರದಲ್ಲಿ, ಜ್ಞಾನವಿಲ್ಲದೆ ಮುಳುಗಿ, ದುಃಖಪಡುತ್ತಿರುವ ನಮ್ಮನ್ನು ಆ ಸಮುದ್ರ ದಿಂದ ಮೇಲಕ್ಕೆ ಎತ್ತು. ಅದಕ್ಕಾಗಿ ನಾನು ತ್ರಿವಿಧಪರಿಚ್ಛೇದರಹಿತವಾದ ನಿನ್ನ ಪಾರಮಾರ್ಥಿಕ ಸ್ವರೂಪದಲ್ಲೇ ಮನಸ್ಸನ್ನು ಏಕಾಗ್ರತೆಯಿಂದ ನಿಲ್ಲಿಸಿರುವೆನು. ಅಂತಹ ಅನಂತರೂಪನಾದ ನಿನಗೆ ಅನೇಕ ನಮಸ್ಕಾರಮಾಡುತ್ತೇನೆ. ಎಂಬುದು ಈ ಧಾರಣಮಂತ್ರದ ಅರ್ಥ.

೩೪. ಈ ಮಂತ್ರವನ್ನು ಹೇಳಿ ದೋರಕವನ್ನು ಕಯ್ಯಲ್ಲಿ ಕಟ್ಟಿಕೊಂಡು, ಪ್ರಪಂಚಸ್ವರೂಪಿಯೂ, ಅಪರಿಚ್ಛಿನ್ನನೂ, ಜೀವಾಧಿಷ್ಠಾತೃವೂ ಆಗಿರುವ, ಶ್ರೀ ಅನಂತಪದ್ಮನಾಭ ದೇವನನ್ನು ಧ್ಯಾನಮಾಡಿ ಅನಂತರ ಸ್ವಸ್ಥಚಿತ್ತರಾಗಿ ಪುನಃ ಪೂಜೆ, ಕಥಾಶ್ರವಣಾದಿಗಳನ್ನು ಮಾಡಬೇಕು.

೩೫. ಈರೀತಿ ಈ ವ್ರತವನ್ನಾಚರಿಸಿ ಮುಗಿದ ಮೇಲೆ ಭೋಜನ ಮಾಡಿ, ಆ ನದೀತೀರದಿಂದ ಸ್ವಗೃಹಕ್ಕೆ ಹೋಗಬೇಕು. ಓ ಶೀಲೆಯೇ ! ನಾವು ಈಗ ಆಚರಿಸುತ್ತಿರುವ ಅನಂತನವ್ರತವನ್ನು ನಿನಗೆ ಹೇಳಿದ್ದಾಯಿತು ಎಂದರು. ಆ ಶೀಲೆಯು ಆ ಸ್ತ್ರೀಯರಿಂದ ಈ ವ್ರತವಿಧಾನ ಶ್ರವಣಮಾಡಿದನಂತರ, ತಾನೂ ದೋರಬಂಧನ ಪೂರ್ವಕವಾಗಿ ಆ ವ್ರತವನ್ನು ಆಚರಿಸಿದಳು.

**ಭರ್ತಾ ತಸ್ಯಾಃ ಸಮಾಗತ್ಯ ತಾಂ ದದರ್ಶ ಮಹಾಧನಾಂ |**
**ಪಾಥೇಯಶೇಷಂ ವಿಪ್ರಾಯ ದತ್ವಾ ಭುಕ್ತ್ವಾ ತಥೈವ ಚ　|| ೩೬ ||**

**ಪುನರ್ಜಗಾಮ ಸಾ ಹೃಷ್ಟಾ ಗೋರಥೇನ ಸ್ವಮಾಶ್ರಮಂ |**
**ಭರ್ತ್ರಾ ಸಹೈವ ಶನಕೈಃ ಪ್ರತ್ಯಕ್ಷಂ ತತ್ಕ್ಷಣಾದಭೂತ್　|| ೩೭ ||**

**ತೇನಾನಂತಪ್ರಭಾವೇಣ ಶುಭಗೋಧನಸಂಕುಲಃ |**
**ಗೃಹಾಶ್ರಮಃ ಶ್ರಿಯಾ ಯುಕ್ತೋ ಧನಧಾನ್ಯಸಮಾಯುತಃ　|| ೩೮ ||**

**ಅಕುಲೋऽವ್ಯಾಕುಲೋ ರಮ್ಯಃ ಸರ್ವತ್ರಾತಿಥಿಪೂಜನಃ |**
**ಸಾಪಿ ಮಾಣಿಕ್ಯಕಾಂಚೀಭಿರ್ಮುಕ್ತಾಹಾರವಿಭೂಷಿತಾ |**
**ದಿವ್ಯಾಂಗವಸ್ತ್ರಸಂಛನ್ನಾ ಸಾವಿತ್ರೀಪ್ರತಿಮಾಭವತ್　|| ೩೯ ||**

---

೩೬. ಅನಂತರ ಅವಳ ಪತಿಯಾದ ಕೌಂಡಿನ್ಯನು ಮಾಧ್ಯಾಹ್ನಿಕವನ್ನು ಪೂರಯಿಸಿ ಬಂದು, ಮಹಾಧನದಂತೆ ತನ್ನ ಸುಖಸಾಧನಳಾದ ಆ ಶೀಲೆಯನ್ನು ನೋಡಿದನು. ಆಗ ಆ ಶೀಲೆಯು ಪ್ರಯಾಣಕಾಲದಲ್ಲಿ ತಂದೆಯ ಮನೆಯಲ್ಲಿ ಕಟ್ಟಿಕೊಟ್ಟ ಪಾಥೇಯಶೇಷವನ್ನು ಬ್ರಾಹ್ಮಣನಿಗೆ ದಾನಮಾಡಿ, ವ್ರತವನ್ನು ನೆರವೇರಿಸಿದ್ದಳು. ಉಳಿದ ಪಾಥೇಯವನ್ನು ತಾವು ತಿಂದು ಅದರಿಂದಲೇ ಸಂತುಷ್ಟರಾದರು.

೩೭. ಬಳಿಕ ಪುನಃ ಆ ಎತ್ತಿನ ಗಾಡಿಯನ್ನು ಹತ್ತಿಕೊಂಡು ತನ್ನ ಪತಿಸಹಿತಳಾಗಿ ಮೆಲ್ಲನೆ ಸಾಗಿ ಆಶ್ರಮ ಪ್ರವೇಶಮಾಡಿದಳು. ಈ ವ್ರತಮಹಿಮೆಯು ಅಲ್ಲಿ ತತ್ಕ್ಷಣದಲ್ಲೇ ಪ್ರತ್ಯಕ್ಷವಾಯಿತು. ಈ ಅನಂತಚತುರ್ದಶೀ ವ್ರತಾಚರಣ ಪ್ರಭಾವದಿಂದ ಆ ಋಷ್ಯಾಶ್ರಮವು ಶುಭಕರವಾದ ಗೋಧನಯುಕ್ತವೂ,

೩೮. ಸಂಪತ್ಸಮೃದ್ಧವೂ, ಧನಧಾನ್ಯಸಮೇತವೂ, ಬಂಧುಜನಾಕುಲವೂ, ಉಪದ್ರವ ಮನೋವ್ಯಾಕುಲತೆ ಇವು ಇಲ್ಲದುದೂ, ಸುಂದರವೂ ಆಗಿದ್ದಿತು. ಆ ಆಶ್ರಮದ ಎಲ್ಲಾ ಕಡೆಗಳಲ್ಲೂ ಯಾವಾಗಲೂ ಅತಿಥಿ ಸತ್ಕಾರವು ನಡೆಯುತ್ತಾ ಇತ್ತು

೩೯. ಈ ವ್ರತಪ್ರಭಾವದಿಂದ ಆ ಶೀಲೆಯು ಮಾಣಿಕ್ಯದ ಕಾಂಚಿಯಿಂದ ಸಹಿತಳೂ, ಮುತ್ತಿನಹಾರಗಳಿಂದ ಅಲಂಕೃತೆಯೂ, ದಿವ್ಯಾಂಬರವನ್ನು ಉಟ್ಟವಳೂ ಆಗಿ, ಸತೀಸಾವಿತ್ರಿಗೆ ಸಮಾನಳಾಗಿದ್ದಳು.

ಕದಾಚಿದುಪವಿಷ್ಟೇನ ದೃಷ್ಟಂ ಬದ್ಧಂ ಸುದೋರಕಂ ।
ಶೀಲಾಯಾ ಹಸ್ತಮೂಲೇ ತು ಸಾಕ್ಷೇಪಂ ತ್ರೋಟಿತಂ ರುಷಾ ॥ ೪೦ ॥

ತೇನ ಕರ್ಮವಿಪಾಕೇನ ತಸ್ಯ ಸಾ ಶ್ರೀಃ ಕ್ಷಯಂ ಗತಾ ।
ಗೋಧನಂ ತಸ್ಕರೈರ್ನೀತಂ ಗೃಹಂ ಚಾಗ್ನಿವಿದಾಹಿತಂ ॥ ೪೧ ॥

ಯದ್ಯದೇವಾಗತಂ ಗೇಹೇ ತತ್ರತತ್ರೈವ ನಶ್ಯತಿ ।
ಸ್ವಜನೈಃ ಕಲಹೋ ಮಿತ್ರೈರ್ವಚನಂ ನ ಜನೈಸ್ತಥಾ ॥ ೪೨ ॥

ಅನಂತಾಕ್ಷೇಪದೋಷೇಣ ದಾರಿದ್ರ್ಯಂ ಪತಿತಂ ಗೃಹೇ ।
ನ ಕಶ್ಚಿದ್ವದತೇ ಲೋಕಸ್ತೇನ ಸಾರ್ಧಂ ಯುಧಿಷ್ಠಿರ ॥ ೪೩ ॥

---

೪೦. ಹೀಗಿರುವಲ್ಲಿ ಒಂದಾನೊಂದುದಿನ ಆ ಕೌಂಡಿನ್ಯಮಹರ್ಷಿಯು ಕುಳಿತಿರುವಾಗ ತನ್ನ ಹೆಂಡತಿಯಾದ ಶೀಲೆಯು, ತನ್ನ ಹಸ್ತಮೂಲದಲ್ಲಿ ದೃಢವಾಗಿ ಕಟ್ಟಿಕೊಂಡಿರುವ ಸುಂದರವಾದ ದೋರಕವನ್ನು ನೋಡಿ, ಕುಪಿತನಾಗಿ ಆಕ್ಷೇಪಣ ವಚನಗಳನ್ನಾಡಿ, ಅದನ್ನು ಕತ್ತರಿಸಿ ಬಿಸುಟನು.

೪೧. ಆ ದುಷ್ಕರ್ಮವಿಪಾಕದಿಂದ ಆ ಋಷಿಯ ಸಂಪತ್ತೆಲ್ಲಾ ನಾಶವಾಯಿತು. ಅವನ ಗೋಧನವನ್ನು ಕಳ್ಳರು ಅಪಹರಿಸಿದರು, ಮನೆಯು ಬೆಂಕಿಯಿಂದ ದಗ್ಧವಾಯಿತು.

೪೨. ಯಾವ ಯಾವ ವಸ್ತುವನ್ನು ಮನೆಗೆ ತಂದರೂ ಅದು ಅಲ್ಲಲ್ಲೇ ನಾಶವಾಗುತ್ತಿತ್ತು. ಅಲ್ಲದೆ ಬಂಧುಜನರೊಡನೆ ಕಲಹಗಳಾದುವು. ಮತ್ತು ಮಿತ್ರರಾಗಿದ್ದ ಜನರು ಶತ್ರುಗಳಾಗಿ ಮಾತನಾಡುವುದನ್ನೇ ಬಿಟ್ಟರು.

೪೩. ಅಯ್ಯಾ ಯುಧಿಷ್ಠಿರನೇ ! ಶ್ರೀ ಅನಂತಪದ್ಮನಾಭದೇವನನ್ನು ಆಕ್ಷೇಪಿಸಿ ಮಾತನಾಡಿದ ಈ ಅಪರಾಧಕ್ಕಾಗಿ, ಆ ಮುನಿಯ ಮನೆಯಲ್ಲಿ ದಾರಿದ್ರ್ಯವು ಆವರಿಸಿತು. ಆ ಮುನಿಯೊಡನೆ ಯಾವ ಮನುಷ್ಯನೂ ಮಾತನಾಡುತ್ತಿರಲಿಲ್ಲ.

ತತೋ ಜಗಾಮ ಕೌಂಡಿನ್ಯೋ ನಿರ್ವೇದಾದ್ವನಗಹ್ವರಂ ।
ಮನಸಾ ಧ್ಯಾಯತೇಽನಂತಂ ಕದಾ ದ್ರಕ್ಷ್ಯಾಮಿ ಕೇಶವಂ ॥ ೪೪ ॥

ವ್ರತಂ ನಿರಶನಂ ಗೃಹ್ಯ ಬ್ರಹ್ಮಚರ್ಯಂ ಜಪನ್ ಹರಿಂ ।
ವಿಹ್ವಲಃ ಪ್ರಯಯೌ ಪಾರ್ಥ ಅರಣ್ಯಂ ಜನವರ್ಜಿತಂ ॥ ೪೫ ॥

ತತ್ರಾಪಶ್ಯನ್ಮಹಾವೃಕ್ಷಂ ಫಲಿತಂ ಪುಷ್ಪಿತಂ ತಥಾ ।
ತಮಪೃಚ್ಛತ್ತ್ವಯಾಽನಂತಃ ಕಚ್ಚಿದ್ದೃಷ್ಟೋ ಮಹಾದ್ರುಮ ।
ತದ್ಬ್ರೂಹಿ ಸೋಽಪ್ಯುವಾಚೇದಂ ನಾಽನಂತಂ ವೇದ್ಮ್ಯಹಂ ದ್ವಿಜ ॥೪೬॥

ಏವಂ ನಿರೀಕ್ಷಿತಸ್ತೇನ ಗಾಂ ದದರ್ಶ ಸವತ್ಸಕಾಂ ।
ತೃಣಮಧ್ಯೇ ಪ್ರಧಾವಂತೀಮಿತಶ್ಚೇತಶ್ಚ ಪಾಂಡವ ॥ ೪೭ ॥

---

೪೪. ಆ ಕೌಂಡಿನ್ಯನು ಈ ದುಃಖಜನಿತ ವೈರಾಗ್ಯದಿಂದ ಮಹಾಟವಿಗೆ ಹೋದನು. ಆಗ ಮನಸ್ಸಿನಲ್ಲಿ ಅವನು "ನಾನು ಶ್ರೀ ಅನಂತನನ್ನು ಎಂದಿಗೆ ಕಂಡೇನು" ಎಂದು ಯಾವಾಗಲೂ ಶ್ರೀ ಹರಿಯನ್ನೇ ಧ್ಯಾನಿಸುತ್ತಿದ್ದನು.

೪೫. ಅಯ್ಯಾ ಕುಂತೀಪುತ್ರನೇ! ಅವನು ಶ್ರೀ ಅನಂತಪದ್ಮನಾಭನ ಸಂದರ್ಶನವಾಗುವವರೆಗೂ ನಿರಶನ ವ್ರತವನ್ನೂ ಬ್ರಹ್ಮಚರ್ಯೆಯನ್ನೂ ಕೈಗೊಂಡವನಾಗಿ ಶ್ರೀ ಹರಿಯನ್ನೇ ಧ್ಯಾನಿಸುತ್ತಾ, ವಿಹ್ವಲನಾಗಿ ನಿರ್ಜನವಾದ ಘೋರಾರಣ್ಯಕ್ಕೆ ಹೊರಟು ಹೋದನು.

೪೬. ಆ ಕಾಡಿನಲ್ಲಿ ಆ ಮುನಿಯು ಫಲಪುಷ್ಪಗಳಿಂದ ಪರಿಪೂರ್ಣವಾಗಿರುವ ಒಂದು ದೊಡ್ಡ ಚೂತವೃಕ್ಷವನ್ನು ನೋಡಿದನು. ಅದನ್ನು ನೋಡಿ "ಓ ಮಹಾವೃಕ್ಷವೇ! ನೀನು ಅನಂತನನ್ನು ನೋಡಿರುವೆಯಾ? ಹಾಗೆ ನೋಡಿದ್ದರೆ ನನಗೆ ಹೇಳು" ಎಂದು ಪ್ರಶ್ನೆಮಾಡಿದನು. ಆಗ ಆ ಚೂತವೃಕ್ಷವು "ಓ ಬ್ರಾಹ್ಮಣನೇ! ನಾನು ಅನಂತನ ವಿಚಾರವನ್ನು ತಿಳಿದಿಲ್ಲ" ಎಂದು ಉತ್ತರ ಕೊಟ್ಟಿತು.

೪೭. ಅಯ್ಯಾ ಪಾಂಡವನೇ! ಹಾಗೆಯೇ ಮುಂದೆ ಹೋಗುತ್ತಾ ಆ ಕೌಂಡಿನ್ಯನು ಒಂದು ಹುಲ್ಲುಗಾವಲಿನಲ್ಲಿ ಕರುಸಹಿತವಾಗಿ ಅತ್ತಿತ್ತ ಓಡಾಡುತ್ತಿರುವ ಒಂದು ಹಸುವನ್ನು ನೋಡಿದನು.

ಸೋಬ್ರವೀದ್ಧೇನುಕೇ ಬ್ರೂಹಿ ಯದ್ಯನಂತಸ್ತ್ವಯೇಕ್ಷಿತಃ ।
ಗೌರುವಾಚಾಥ ಕೌಂಡಿನ್ಯಂ ನಾನಂತಂ ವೇದ್ಮ್ಯಹಂ ವಿಭೋ ॥ ೪೮ ॥

ತತೋ ಜಗಾಮಾಥ ವನೇ ಗೋವೃಷಂ ಶಾದ್ವಲೇ ಸ್ಥಿತಂ ।
ದೃಷ್ಟ್ವಾ ಪಪ್ರಚ್ಛ ಗೋಸ್ವಾಮಿನ್ನನಂತೋ ಲಕ್ಷಿತಸ್ತ್ವಯಾ ॥ ೪೯ ॥

ಗೋವೃಷಸ್ತಮುವಾಚಾಥ ನಾನಂತೋ ವೀಕ್ಷಿತೋ ಮಯಾ ।
ತತೋ ವ್ರಜನ್ದದರ್ಶಾಗ್ರೇ ರಮ್ಯಂ ಪುಷ್ಕರಣೀದ್ವಯಂ ॥ ೫೦ ॥

ಅನ್ಯೋನ್ಯಜಲಕಲ್ಲೋಲವೀಚಿಭಿಃ ಪರಿಶೋಭಿತಂ ।
ಛನ್ನಂ ಕುಮುದಕಲ್ಹಾರೈಃ ಕುಮುದೋತ್ಪಲಮಂಡಿತಂ ॥ ೫೧ ॥

---

೪೮. ಆಗ ಅವನು " ಓ ಧೇನುವೇ ! ನೀನು ಅನಂತನನ್ನು ನೋಡಿದ್ದರೆ ನನಗೆ ಹೇಳು '' ಎಂದು ಕೇಳಿದನು. ಅದಕ್ಕೆ ಆ ಹಸುವು " ಓ ವಿಭುವೇ ! ನಾನು ಅನಂತನ ವಿಚಾರವನ್ನು ತಿಳಿದಿಲ್ಲ '' ಎಂದು ಆತನಿಗೆ ಉತ್ತರ ಹೇಳಿತು.

೪೯. ಅನಂತರ ಆ ಮುನಿಯು ಆ ಕಾಡಿನಲ್ಲಿ ಮುಂದೆ ಹೋಗುತ್ತಾ ಎಳೆಯ ಹುಲ್ಲುಗಳಿಂದ ಹಚ್ಚಗಿರುವ ಒಂದು ಪ್ರದೇಶದಲ್ಲಿ ಇರುವ ಒಂದು ದೊಡ್ಡ ಎತ್ತನ್ನು ನೋಡಿ " ಓ ಗೋಸ್ವಾಮಿಯೇ ! ನೀನು ಅನಂತನನ್ನು ನೋಡಿರುವೆಯಾ ? '' ಎಂದು ಪ್ರಶ್ನೆ ಮಾಡಿದನು.

೫೦. ಅನಂತರ ಆ ಎತ್ತು ಆ ಮುನಿಯನ್ನು ಕುರಿತು " ನಾನು ಅನಂತನನ್ನು ನೋಡಿದವನಲ್ಲ '' ಎಂದು ಹೇಳಿತು. ಅನಂತರ ಅವನು ಆ ಕಾಡಿನಲ್ಲಿ ಮುಂದಕ್ಕೆ ಹೋಗುತ್ತಾ ಸ್ವಲ್ಪಮುಂದೆ ಸುಂದರವಾದ ಎರಡು ಕೊಳಗಳನ್ನು ನೋಡಿದನು.

೫೧. ಆ ಎರಡು ಸರೋವರಗಳು ಅನ್ಯೋನ್ಯವಾಗಿ ನೀರುಗಳ ಪ್ರವೇಶ ನಿರ್ಗಮಗಳುಳ್ಳವುಗಳಾಗಿಯೂ ಅಲೆಗಳುಳ್ಳವುಗಳಾದ್ದರಿಂದ ಮನೋಹರಗಳಾಗಿಯೂ ನೈದಿಲೆ, ಎಳೆಗೆಂಪುಉಳ್ಳನೈದಿಲೆ, ಬಿಳೀನೈದಿಲೆ, ಕಮಲ ಇವುಗಳ ಸಮೃದ್ಧಿಯಿಂದ ಅಲಂಕೃತವಾಗಿಯೂ ಇದ್ದುವು.

**ಸೇವಿತಂ ಭ್ರಮರೈರ್ಹಂಸೈಶ್ಚಕ್ರೈಃ ಕಾರಂಡ ವೈರ್ಬಕೈಃ |**
**ಕೀ ಅಪೃಚ್ಛದ್ದ್ವಿಜೋಽನಂತೋ ಭವದ್ಭ್ಯಾಂ ನೋಪಲಕ್ಷಿತಃ || ೫೨ ||**

**ಊಚತುಃ ಪುಷ್ಕರಿಣ್ಯೌ ತಂ ನಾನಂತಂ ವಿದ್ಮಹೇ ದ್ವಿಜ |**
**ತತೋ ಬ್ರಹ್ಮನ್ನದರ್ಶಾಗ್ರೇ ಗರ್ದಭಂ ಕುಂಜರಂ ತಥಾ || ೫೩ ||**

**ತಾವಪ್ಯುಕ್ತೌ ಸುಮಂತೇನ ತಸ್ಯಾಪಿ ವಿನಿವೇದಿತಂ |**
**ನಾವಾಭ್ಯಾಂ ವೀಕ್ಷಿತೋಽನಂತಸ್ತಚ್ಛ್ರುತ್ವಾ ನಿಷಸಾದ ಹ || ೫೪ ||**

**ತಸ್ಮಿನ್ ಕ್ಷಣೇ ಮುನಿವರೇ ಕೌಂಡಿನ್ಯೇ ಬ್ರಾಹ್ಮಣೋತ್ತಮೇ |**
**ಕೃಪಯಾನಂತದೇವೋಽಪಿ ಪ್ರತ್ಯಕ್ಷಃ ಸಮಜಾಯತ || ೫೫ ||**

---

೫೨. ಮತ್ತು ಆ ಸರೋವರಗಳು ದುಂಬಿ, ಹಂಸ, ಚಕ್ರವಾಕ, ಚಿತ್ರ ವರ್ಣವುಳ್ಳ ನೀರುಹಕ್ಕಿ, ಇವುಗಳಿಂದ ಸೇವಿತವಾಗಿ ಇದ್ದುವು. ಆ ಬ್ರಾಹ್ಮಣನು ಆ ಸರೋವರಗಳನ್ನು ಕುರಿತು "ನೀವು ಅನಂತನನ್ನು ನೋಡಲಿಲ್ಲವೇ?" ಎಂದು ಪ್ರಶ್ನೆ ಮಾಡಿದನು.

೫೩. ಆಗ ಆ ಕೊಳಗಳು ಆ ಬ್ರಾಹ್ಮಣನನ್ನು ಕುರಿತು "ಓ ಬ್ರಾಹ್ಮಣನೇ! ನಾವು ಅನಂತನನ್ನು ನೋಡಿದವರಲ್ಲ" ಎಂದು ಹೇಳಿದುವು. ಅನಂತರ ಆ ಮುನಿಯು ಮುಂದೆ ಹೋಗುತ್ತಾ, ಒಂದು ಕತ್ತೆ ಮತ್ತು ಒಂದು ಆನೆ ಇವುಗಳನ್ನು ನೋಡಿದನು.

೫೪. ಈ ಬ್ರಾಹ್ಮಣನು ಹಿಂದಿನಂತೆಯೇ ಅವುಗಳನ್ನೂ ಪ್ರಶ್ನೆ ಮಾಡಲಾಗಿ, ಆ ಕತ್ತೆ ಮತ್ತು ಆನೆ ಇವು ಅವನನ್ನು ಕುರಿತು "ನಾವೂ ಅನಂತನನ್ನು ನೋಡಿಲ್ಲ" ವೆಂದು ಅರಿಕೆಮಾಡಿದುವು. ಆ ಮಾತನ್ನು ಕೇಳಿ ಆ ಮುನಿಯು ಬಳಲಿ ದುಃಖದಿಂದ ಅಲ್ಲೇ ಕುಳಿತನು.

೫೫. ಅದೇ ಕ್ಷಣದಲ್ಲಿ ಶ್ರೀ ಅನಂತಪದ್ಮನಾಭದೇವನು ಮುನಿವರ್ಯನಾದ ಆ ಕೌಂಡಿನ್ಯನಲ್ಲಿ ದಯೆತೋರಿದವನಾಗಿ, ಅವನಿಗೆ ಪ್ರತ್ಯಕ್ಷನಾದನು.

ವೃದ್ಧಬ್ರಾಹ್ಮಣರೂಪೇಣ ಇತ ಏಹೀತ್ಯುವಾಚ ತಂ ।
ಪ್ರವೇಶಯಿತ್ವಾ ಸ್ವಗೃಹಂ ಗೃಹೀತ್ವಾ ದಕ್ಷಿಣೇ ಕರೇ ॥ ೫೬ ॥

ತಾಂ ಪುರೀಂ ದರ್ಶಯಾಮಾಸ ದಿವ್ಯನಾರೀನರೈರ್ಯುತಾಂ ।
ತಸ್ಯಾಂ ನಿವಿಷ್ಟಮಾತ್ಮಾನಂ ವರಸಿಂಹಾಸನೇ ನೃಪ ॥ ೫೭ ॥

ಪಾರ್ಶ್ವಸ್ಥ ಶಂಖಚಕ್ರಾಸಿಗದಾಗರುಡಶೋಭಿತಂ ।
ದರ್ಶಯಾಮಾಸ ವಿಪ್ರಾಯ ಪೂರ್ವೋಕ್ತಂ ವಿಶ್ವರೂಪಿಣಂ ॥ ೫೮ ॥

ವಿಭೂತಿಭೇದೈಶ್ಚಾನಂತಮನಂತಂ ಪರಮೇಶ್ವರಂ ।
ತಂ ದೃಷ್ಟ್ವಾ ತು ದ್ವಿಜೋಽನಂತಮುವಾಚ ಪರಯಾ ಮುದಾ ॥ ೫೯ ॥

---

೫೬. ಆ ಅನಂತದೇವನು ವೃದ್ಧಬ್ರಾಹ್ಮಣವೇಷವನ್ನು ಧರಿಸಿ, ಆ ಕೌಂಡಿನ್ಯಬ್ರಾಹ್ಮಣನ ಬಲಗೈಯನ್ನು ಹಿಡಿದುಕೊಂಡು, ಅವನನ್ನು "ಇಲ್ಲಿ ಬಾ'' ಯೆಂದು ಹೇಳುತ್ತಾ ತನ್ನ ಮನೆಗೆ ಕರೆದುಕೊಂಡು ಹೋದನು.

೫೭. ಅಯ್ಯಾ ರಾಜನೇ ! ಅಲ್ಲಿಗೆ ಪ್ರವೇಶಮಾಡಿಸಿದ ಬಳಿಕ ದಿವ್ಯ ಸ್ತ್ರೀಪುರುಷರಿಂದ ಕೂಡಿರುವ ಆ ತನ್ನ ನಗರಿಯನ್ನು ಅವನಿಗೆ ತೋರಿಸುತ್ತಾ, ಕೊನೆಗೆ ಪ್ರವೇಶಮಾಡಿಸಿದ ತಾನು ಆ ಗೃಹದಲ್ಲಿ ಉತ್ತಮ ಸಿಂಹಾಸನಾಧಿ ರೂಢನಾಗಿರುವಂತೆ ಅವನಿಗೆ ಕಾಣಿಸಿಕೊಂಡನು.

೫೮. ಈ ಮೊದಲು ಹೇಳಿದ ವಿಶ್ವರೂಪಿಯಾದ ಶ್ರೀ ಅನಂತನು, ಆ ಗೃಹ ದಲ್ಲಿ ಅವನ ಪಕ್ಕದಲ್ಲಿ ಶಂಖ, ಚಕ್ರ, ಖಡ್ಗ, ಗದೆ ಇವುಗಳಿಂದ ಅಲಂಕೃತನೂ, ಗರುಡವಾಹನದಿಂದ ಶೋಭಿತನೂ ಆಗಿ ಅಂತಹ ರೂಪವನ್ನು ಆ ಕೌಂಡಿನ್ಯನಿಗೆ ತೋರಿಸಿದನು.

೫೯. ಈ ಅನಂತದೇವನು ತನ್ನ ಐಶ್ವರ್ಯವಿಶೇಷದಿಂದ ಅನಂತವಸ್ತು ಸ್ವರೂಪವನ್ನು ಧರಿಸಿರುತ್ತಾನೆ ಎಂದು ಆ ಕೌಂಡಿನ್ಯ ಬ್ರಾಹ್ಮಣನು ತಿಳಿದು, ಅಂತಹ ಪರಮೇಶ್ವರನಾದ ಅನಂತನನ್ನು ನೋಡಿ ಪರಮ ಸಂತೋಷದಿಂದ ಈ ಪ್ರಕಾರ ಹೇಳಿದನು.

ಪಾಪೋಽಹಂ ಪಾಪಕರ್ಮಾಽಹಂ ಪಾಪಾತ್ಮಾ ಪಾಪಸಂಭವಃ |
ಪಾಹಿ ಮಾಂ ಪುಂಡರೀಕಾಕ್ಷ ಸರ್ವಪಾಪಹರೋ ಭವ　　|| ೬೦ ||

ಅದ್ಯ ಮೇ ಸಫಲಂ ಜನ್ಮ ಜೀವಿತಂ ಚ ಸುಜೀವಿತಂ |
ಚೂತವೃಕ್ಷೋ ವೃಷಃ ಕಸ್ತು ಕಾ ಗೌಃ ಪುಷ್ಕರಿಣೀದ್ವಯಂ |
ಗರ್ದಭಂ ಕುಂಜರಂ ಚೈವ ದೇವ ಮೇ ಬ್ರೂಹಿ ತತ್ತ್ವತಃ　　|| ೬೧ ||

|| ಅನಂತ ಉವಾಚ ||

ಚೂತವೃಕ್ಷೋ ಹಿ ವಿಪ್ರೋಽಸೌ ವಿದ್ವಾನ್ಯೋ ವೇದಗರ್ವಿತಃ |
ವಿದ್ಯಾದಾನಂ ನೋಪಕುರ್ವನ್ಶಿಷ್ಯೇಭ್ಯಸ್ತರುತಾಂ ಗತಃ　　|| ೬೨ ||

ಸಾ ಗೌರ್ವಸುಂಧರಾ ದೃಷ್ಟಾ ಪೂರ್ವಂ ಸಾ ಬೀಜಹಾರಿಣೀ |
ವೃಷೋ ಧರ್ಮಕ್ರಿಯೀ ದೃಷ್ಟೋ ಲಾಭಾರ್ಥಂ ಯಸ್ತ್ವಯಾ ವೃತಃ ||

---

೬೦. "ಓ ಪುಂಡರೀಕಾಕ್ಷನೇ! ನಾನು ಪಾಪಿ; ಪಾಪಕರ್ಮವನ್ನು ಮಾಡಿದವನು, ಪಾಪಾತ್ಮನು, ಪಾಪದಿಂದ ಜನಿಸಿದವನು. ಅಂತಹ ನನ್ನನ್ನು ರಕ್ಷಿಸು ಮತ್ತು ನನ್ನ ಎಲ್ಲಾ ಪಾಪವನ್ನೂ ನಾಶಮಾಡು."

೬೧. "ಓ ದೇವನೇ! ಈ ಹೊತ್ತು ನನ್ನ ಜನ್ಮವು ಸಫಲವಾಯಿತು. ನಾನು ಬದುಕಿದ್ದು ಈ ಹೊತ್ತಿಗೆ ಸಾರ್ಥಕವಾಯಿತು. ನಾನು ಈ ಹಿಂದೆ ಕಾಡಿನಲ್ಲಿ ನೋಡಿದ ಮಾವಿನಮರ, ಎತ್ತು, ಹಸು, ಎರಡು ಸರೋವರಗಳು, ಮತ್ತು ಕತ್ತೆ, ಆನೆ, ಇವುಗಳೆಲ್ಲಾ ಯಾರು ಎಂಬುದನ್ನು ನನಗೆ ಮರೆಮಾಚದೆ ಹೇಳು" ಎಂದನು.

೬೨. ಅನಂತನು ಹೇಳುತ್ತಾನೆ—"ಓ ಬ್ರಾಹ್ಮಣನೇ! ನೀನು ನೋಡಿದ ಮಾವಿನಮರವು ಪೂರ್ವಜನ್ಮದಲ್ಲಿ ವಿದ್ವಾಂಸನಾದ ಬ್ರಾಹ್ಮಣನಾಗಿದ್ದನು. ಅವನು ಆಗ ವೇದಾದಿಗಳನ್ನು ಓದಿ ಗರ್ವಿತನಾಗಿ, ಶಿಷ್ಯರಿಗೆ ವಿದ್ಯಾದಾನಾದಿಗಳಿಂದ ಉಪಕಾರ ಮಾಡದೆಹೋದದೋಷದಿಂದ ಈಗ ವೃಕ್ಷಜನ್ಮವನ್ನು ಪಡೆದನು.

೬೩. ಹಾಗೆಯೇ ನೀನು ನೋಡಿದ ಗೋವು, ತನ್ನ ಪೂರ್ವಜನ್ಮದಲ್ಲಿ ಬೀಜಾಪಹರಣದೋಷಕ್ಕೆ ಪಾತ್ರವಾದುದರಿಂದ ಈಗ ಈ ಜನ್ಮವನ್ನು ಪಡೆದಿದೆ.

ಧರ್ಮಾಧರ್ಮವ್ಯವಸ್ಥಾನಂ ತಚ್ಚ ಪುಷ್ಕರಿಣೀದ್ವಯಂ ।
ಖರಃ ಕ್ರೋಧಸ್ತ್ವಯಾ ದೃಷ್ಟಃ ಕುಂಜರೋ ಧರ್ಮದೂಷಕಃ ।
ಬ್ರಾಹ್ಮಣೋಽಸಾವನಂತೋಽಹಂ ಗುಹಾಸಂಸಾರಗಹ್ವರೇ ॥ ೬೪ ॥

ಇತ್ಯುಕ್ತಂ ತೇ ಮಯಾ ಸರ್ವಂ ವಿಪ್ರ ಗಚ್ಛ ಪುನರ್ಗೃಹಂ ॥ ೬೫ ॥

ಚರಾನಂತವ್ರತಂ ತತ್ತ್ವಂ ನವ ವರ್ಷಾಣಿ ಪಂಚ ಚ ।
ತತಸ್ತುಷ್ಟಃ ಪ್ರದಾಸ್ಯಾಮಿ ನಕ್ಷತ್ರಸ್ಥಾನಮುತ್ತಮಂ ॥ ೬೬ ॥

ಭುಕ್ತ್ವಾ ಚ ವಿಪುಲಾನ್ಭೋಗಾನ್ಸರ್ವಾನ್ಕಾಮಾನ್ಯಥೇಪ್ಸಿತಾನ್ ।
ಪುತ್ರಪೌತ್ರೈಃ ಪರಿವೃತಸ್ತತೋ ಮೋಕ್ಷಮವಾಪ್ಸ್ಯಸಿ ॥ ೬೭ ॥

---

ನೀನು ನೋಡಿದ ಎತ್ತು ಪೂರ್ವಜನ್ಮದಲ್ಲಿ ಧನಲಾಭಾರ್ಥವಾಗಿ ಧರ್ಮವಿಕ್ರಯ ಮಾಡುವ ವ್ಯಕ್ತಿ. ಅದರಿಂದ ಅದು ಈ ಜನ್ಮವನ್ನು ಹೊಂದಿದೆ.

೬೪. ಆಮೇಲೆ ನೀನು ನೋಡಿದ ಸರೋವರದ್ವಯಗಳು ಪೂರ್ವದಲ್ಲಿ ಸಹೋದರಿಯರಾಗಿ ಪರಸ್ಪರ ಧರ್ಮಾಧರ್ಮಗಳನ್ನು ವಿನಿಯಮಮಾಡಿ ಕೊಳ್ಳು ತ್ತಿದ್ದರು. ಆ ಕತ್ತೆಯು ಕ್ರೋಧ ದೋಷದಿಂದಲೂ, ಆನೆಯು ಧರ್ಮದೂಷಣ ದೋಷದಿಂದಲೂ, ಆ ಜನ್ಮಗಳನ್ನು ಪಡೆದಿವೆ. ಗುಹಾದ್ವಾರದಲ್ಲಿ ನೀನು ಕಂಡ ಬ್ರಾಹ್ಮಣನು ಶ್ರೀ ಅನಂತನಾದ ನಾನೇ ಆಗಿರುತ್ತೇನೆ.

೬೫. ಓ ಬ್ರಾಹ್ಮಣನೇ! ನೀನು ಪ್ರಶ್ನೆಮಾಡಿದ ಈ ಎಲ್ಲಾ ವಿಷಯ ಗಳಿಗೂ ನಿನಗೆ ನಾನು ಉತ್ತರ ಹೇಳಿರುತ್ತೇನೆ. ನೀನು ಇನ್ನು ನಿನ್ನ ಮನೆಗೆ ಹೋಗು.

೬೬. ನೀನು ಭಕ್ತಿಯುತನಾಗಿ ಹದಿನಾಲ್ಕು ವರ್ಷಕಾಲ ಅನಂತವ್ರತ ವನ್ನು ಆಚರಿಸು. ಅದರಿಂದ ನಾನು ನಿನಗೆ ಸಂತುಷ್ಟನಾಗಿ ಉತ್ತಮವಾದ ನಕ್ಷತ್ರಸ್ಥಾನವನ್ನು ಕೊಡುತ್ತೇನೆ.

೬೭. ಈ ಲೋಕದಲ್ಲೂ ನೀನು ಅನೇಕ ಭೋಗಗಳನ್ನು ಅನುಭವಿಸಿ, ಅಭಿಲಷಿತವಾದ ಎಲ್ಲಾ ಕಾಮಗಳನ್ನೂ ಸಮೃದ್ಧಿಯಾಗಿ ಪಡೆದು, ಪುತ್ರ ಪೌತ್ರಾದಿಗಳಿಂದ ಪರಿವೃತನಾಗಿದ್ದು, ಕೊನೆಗೆ ಮೋಕ್ಷವನ್ನು ಹೊಂದುವೆ'' ಎಂದು ಹೇಳಿದನು.

**ಇತಿ ದತ್ವಾ ವರಂ ದೇವಸ್ತತ್ರೈವಾಂತರ್ಹಿತೋಽಭವತ್ ।**
**ಕೌಂಡಿನ್ಯೋಽಪ್ಯಾಗತೋ ಗೇಹಂ ಚಚಾರಾನಂತಸದ್ವ್ರತಂ ॥ ೧೮ ॥**

**ಶೀಲಯಾ ಸಹ ಧರ್ಮಾತ್ಮಾ ಭುಕ್ತ್ವಾ ಭೋಗಾನ್ಮನೋರಮಾನ್ ।**
**ಅಂತೇ ಜಗಾಮ ಚ ಸ್ವರ್ಗಂ ನಕ್ಷತ್ರಂ ಚ ಪುನರ್ವಸೂಂ ॥ ೧೯ ॥**

**ಕಲ್ಪಸ್ಥಾಯೀ ಚ ಸಂಭೂತೋ ದೃಶ್ಯತೇಽದ್ಯಾಪಿ ಸ ಜ್ವಲನ್ ।**
**ಅನಂತವ್ರತಧರ್ಮೇಣ ಸಮ್ಯಕ್ಚೀರ್ಣೇನ ಕೌರವ ॥ ೨೦ ॥**

**ಏತತ್ತೇ ಕಥಿತಂ ಪಾರ್ಥ ವ್ರತಾನಾಮುತ್ತಮಂ ವ್ರತಂ ।**
**ಯತ್ಕೃತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೨೧ ॥**

**ಯೇ ಚ ಶೃಣ್ವಂತಿ ಸತತಂ ವಾಚ್ಯಮಾನಂ ನರೋತ್ತಮ ।**
**ತೇ ಸರ್ವೇ ಪಾಪನಿರ್ಮುಕ್ತಾ ಯಾಸ್ಯಂತಿ ಪರಮಾಂ ಗತಿಂ ॥ ೨೨ ॥**

---

೧೮. ಈರೀತಿ ಆ ಅನಂತಪದ್ಮನಾಭದೇವನು ಆ ಕೌಂಡಿನ್ಯನಿಗೆ ವರವನ್ನು ಕೊಟ್ಟು, ಅಲ್ಲೇ ಅಂತರ್ಧಾನನಾದನು. ಅನಂತರ ಕೌಂಡಿನ್ಯಮಹರ್ಷಿಯು ಮನೆಗೆ ಬಂದು ಅನಂತವ್ರತವೆಂಬ ಈ ಉತ್ತಮವ್ರತವನ್ನು ಆಚರಿಸಿದನು.

೧೯. ಧರ್ಮಿಷ್ಠನಾದ ಆ ಕೌಂಡಿನ್ಯನು ತನ್ನ ಪತ್ನಿಯಾದ ಶೀಲೆಯ ಜೊತೆಯಲ್ಲಿ ಮನೋಹರಗಳಾದ ಭೋಗಗಳನ್ನೆಲ್ಲಾ ಅನುಭವಿಸಿ, ಕೊನೆಗೆ ಸ್ವರ್ಗಕ್ಕೆ ಹೋಗಿ ಪುನರ್ವಸು ನಕ್ಷತ್ರರೂಪನಾಗಿದ್ದನು.

೨೦. ಅಯ್ಯಾ ಕುರುವಂಶಜನೇ! ಈ ಅನಂತವ್ರತವೆಂಬ ಪುಣ್ಯ ಕರ್ಮವನ್ನು ಅವನು ಚೆನ್ನಾಗಿ ಆಚರಿಸಿದುದರಿಂದ, ಈರೀತಿ ಒಂದು ಕಲ್ಪದವರೆಗೂ ಸ್ಥಾಯಿಯಾದನು. ಮತ್ತು ಆ ಪುನರ್ವಸು ನಕ್ಷತ್ರರೂಪವಾಗಿ ಈಗಲೂ ಪ್ರಕಾಶಮಾನನಾಗಿ ಕಾಣುತ್ತಾನೆ.

೨೧. ಅಯ್ಯಾ ಧರ್ಮರಾಜನೇ! ಎಲ್ಲಾ ವ್ರತಗಳಲ್ಲೂ ಅತ್ಯುತ್ತಮವಾದ ಈ ವ್ರತವನ್ನು ನಿನಗೆ ನಾನು ಹೇಳಿ ಆಯಿತು. ಈ ವ್ರತವನ್ನು ಆಚರಿಸಿದವನು ನಿಸ್ಸಂಶಯವಾಗಿ ಸರ್ವಪಾಪಗಳಿಂದಲೂ ಮುಕ್ತನಾಗುತ್ತಾನೆ.

೨೨. ಅಯ್ಯಾ ರಾಜನೇ! ಯಾರು ಈ ವ್ರತವನ್ನು ವಾಚನಮಾಡಿಸಿ ಯಾವಾಗಲೂ ಶ್ರವಣಮಾಡುತ್ತಾರೋ, ಅವರೆಲ್ಲರೂ ಈ ಪಾಪಗಳಿಂದ ಬಿಡುಗಡೆ ಹೊಂದಿ ಪರಮಗತಿಯನ್ನು ಪಡೆಯುತ್ತಾರೆ.

**ಸಂಸಾರಸಾಗರಗುಹಾಂ ಸುಸುಖಂ ವಿಹರ್ತುಂ ।**
**ವಾಂಛಂತಿ ಯೇ ಕುರುಕುಲೋದ್ಭವ ಶುದ್ಧಸತ್ವಾಃ ।**
**ಸಂಪೂಜ್ಯ ತೇ ತ್ರಿಭುವನೇಶಮನಂತದೇವಂ ।**
**ಬಧ್ನಂತಿ ದಕ್ಷಿಣಕರೇ ವರದೋರಕಂ ಮೇ ॥ ೭೩ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಅನಂತಚತುರ್ದಶೀ ವ್ರತವರ್ಣನಂ ನಾಮ ಚತುರ್ನವತಿತಮೋಽಧ್ಯಾಯಃ.**



---

೭೩. ಓ ಕುರುವಂಶಜನೇ ! ಶುದ್ಧಾಂತಃಕರಣವುಳ್ಳ ಯಾವ ಪುರುಷರು ಸಂಸಾರಸಾಗರವೆಂಬ ಮಹಾಗುಹೆಯಲ್ಲಿ ಸುಖವಾಗಿ ವಿಹಾರಮಾಡುವುದಕ್ಕೆ ಇಚ್ಛಿಸುವರೋ, ಅಂತಹವರು ತ್ರಿಲೋಕಾಧೀಶ್ವರನಾದ ಶ್ರೀ ಅನಂತದೇವನನ್ನು ಚೆನ್ನಾಗಿ ಪೂಜಿಸಿ, ಆ ವ್ರತಾಂಗವಾಗಿ ಉತ್ತಮವಾದ ದೋರಕವನ್ನು ಬಲಗೈಯಲ್ಲಿ ಕಟ್ಟಿಕೊಳ್ಳುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಉತ್ತರಪರ್ವದಲ್ಲಿ ಅನಂತ ಚತುರ್ದಶೀ ವ್ರತವರ್ಣನೆ ಎಂಬತ್ತೊಂಭನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಪಂಚನವತಿತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಲೋಕೇ ಪ್ರಸಿದ್ಧಾಃ ಶ್ರೂಯಂತೇ ಶ್ರಾವಣ್ಯೋ ನಾಮ ದೇವತಾಃ ।
ಏತಾಃ ಕಾಃ ಕಿಂ ಚ ಕುರ್ವಂತಿ ಧರ್ಮಂ ಚಾಸಾಂ ಬ್ರವೀಹಿ ಮೇ ॥೧॥

॥ ಶ್ರೀ ಕೃಷ್ಣ ಉವಾಚ ॥

ವಿದ್ಯಂತೇ ದೇವತಾಃ ಪುಣ್ಯಾಃ ಶ್ರಾವಣ್ಯೋ ನಾಮ ಪಾಂಡವ ।
ಬ್ರಹ್ಮಣಾ ಪ್ರಥಮಂ ಸೃಷ್ಟ್ವಾ ನಿಯೋಗಶ್ಚ ಜನೇ ಕೃತಃ ॥ ೨ ॥

---

## ತೊಂಭತ್ತೈದನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಎಲೈ ಕೃಷ್ಣನೇ ! ಲೋಕವಲ್ಲಿ ಶ್ರಾವಣಿಗಳೆಂದು ಪ್ರಸಿದ್ಧರಾದ ದೇವತೆಗಳಿದಾರೆಂದು ಕೇಳಿದ್ದೇನೆ. ಈ ಶ್ರಾವಣೀ ದೇವತೆಗಳೆಂದರೆ ಯಾರು? ಅವರ ಕೆಲಸವೇನು? ಆ ದೇವತೆಗಳನ್ನುದ್ದೇಶಿಸಿ ಮಾಡಬೇಕಾದ ಧರ್ಮಕಾರ್ಯವನ್ನು ನನಗೆ ಹೇಳು ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಪಾಂಡವನೇ ! ಶ್ರಾವಣಿ ನಾಮದ ಪುಣ್ಯದೇವತೆಗಳು ಇದ್ದಾರೆ. ಆ ದೇವತೆಗಳನ್ನು ಬ್ರಹ್ಮನು ಮೊದಲು ಸೃಷ್ಟಿಮಾಡಿ ಪ್ರತಿಯೊಬ್ಬ ಮನುಷ್ಯನಲ್ಲೂ ನಿಯೋಗಿಸಿರುತ್ತಾನೆ.

ಯೋ ಯದ್ವದತಿ ಲೋಕೇಸ್ಮಿನ್ಶುಭಂ ವಾಪ್ಯಥ ವಾऽಶುಭಂ ।
ಶ್ರಾವಯಂತಿ ಹಿ ತಚ್ಛೀಘ್ರಂ ಬ್ರಾಹ್ಮಣ್ಯಃ ಕರ್ಮಗೋಚರಂ ॥ ೩ ॥

ಜಾತಾಸ್ತ್ರಿಲೋಕೇ ಪೂಜ್ಯಾಸ್ತು ನಿಯಮೇನ ಪ್ರಜಾಪತೇ ।
ದೂರಾಚ್ಛ್ರವಣವಿಜ್ಞಾನಂ ದೂರಾದ್ದರ್ಶನಗೋಚರಂ ॥ ೪ ॥

ತಾಸಾಮಸ್ತೀಹ ಸಾ ಶಕ್ತಿರಚಿಂತ್ಯಾ ತರ್ಕಹೇತುಭಿಃ ।
ನರೈಸ್ತುಷ್ಟೈಶ್ಚ ಯತ್ಪ್ರೋಕ್ತಂ ಕಾರ್ಯಾಕಾರ್ಯಸ್ಯ ಕಾರಣಾತ್ ॥ ೫ ॥

ತಚ್ಛೃಣ್ವಂತಿ ಯತಃ ಪಾರ್ಥ ನೈಕಾಃ ಶ್ರಾವಣಿಕಾ ಮತಾಃ ।
ಯಥಾ ದೇವಾ ಯಥಾ ದೈತ್ಯಾ ಯಥಾ ವಿದ್ಯಾಧರಾನರಾಃ ॥ ೬ ॥

---

೩. ಬ್ರಹ್ಮಸೃಷ್ಟರಾಗಿ ಬ್ರಹ್ಮಸಂಬಂಧಿಗಳಾದ ಆ ಶ್ರಾವಣಿದೇವತೆಗಳು ಈ ಲೋಕದಲ್ಲಿರುವ ಪ್ರತಿಯೊಬ್ಬ ಮನುಷ್ಯನೂ, ಯಾವ ಶುಭಾಶುಭವಚನವನ್ನು ಆಡಿದರೂ ಆ ಮಾತನ್ನು ಶೀಘ್ರವಾಗಿ ಬ್ರಹ್ಮನಿಗೆ ಶ್ರವಣಮಾಡಿಸುವರು.

೪. ಅಯ್ಯಾ ರಾಜನೇ! ಈ ಕಾರಣದಿಂದ ಮೂರು ಲೋಕಗಳಲ್ಲೂ ಈ ಶ್ರಾವಣಿದೇವತೆಗಳು ಅವಶ್ಯವಾಗಿ ಪೂಜ್ಯರಾದರು. ಆ ದೇವತೆಗಳಿಗೆ ಅತಿ ದೂರದಿಂದಲೂ ಕೇಳುವ ಸಾಮರ್ಥ್ಯವುಂಟು. ಹಾಗೆಯೇ ದೂರದಲ್ಲಿ ಇರುವ ವಸ್ತುವೂ ದೃಷ್ಟಿಗೋಚರವಾಗುವುದು.

೫–೭. ಆ ದೇವತೆಗಳಿಗಿರುವ ಈ ಶ್ರವಣಶಕ್ತಿ, ದರ್ಶನಶಕ್ತಿಗಳು ಊಹಿಸಲಸಾಧ್ಯ. ಯುಕ್ತಿಗಳಿಂದ ಸಮರ್ಥಿಸಲಸಾಧ್ಯ. ಅಯ್ಯಾ ಪಾರ್ಥನೇ! ಸ್ವೇಚ್ಛಾನುಸಾರವಾಗಿ ವಿಹಿತವೋ ನಿಷಿದ್ಧವೋ ಆದ ಕರ್ಮಗಳನ್ನು ಮಾಡಿ, ಆ ಮದದಿಂದ ಉಬ್ಬಿ, ನಾವು ಹೀಗೆ ಮಾಡಿದೆವು ಎಂದು ತಮ್ಮನ್ನು ತಾವೇ ಹೊಗಳಿಕೊಂಡರೆ, ಅವರ ಆ ವಚನವನ್ನು ಈ ಶ್ರಾವಣೀದೇವತೆಗಳು ಕೇಳುತ್ತಾರೆ. ಆದಕಾರಣ ಆ ಶ್ರಾವಣೀದೇವತೆಗಳು ಒಬ್ಬಿಬ್ಬರಲ್ಲ ಅನೇಕರಿದ್ದಾರೆ. ದೈತ್ಯರು, ವಿದ್ಯಾಧರರು, ಸಿದ್ಧರು, ಗಂಧರ್ವರು, ನಾಗರು, ಕಿನ್ನರರು, ವೈನತೇಯಾದಿ ಪಕ್ಷಿಗಳು, ರಾಕ್ಷಸರು,

**ಯಥಾ ಹಿ ಸಿದ್ಧಗಂಧರ್ವಾ ನಾಗಾಃ ಕಿಂಪುರುಷಾಃ ಖಗಾಃ ।**
**ರಾಕ್ಷಸಾಶ್ಚ ಪಿಶಾಚಾಶ್ಚ ದೇವಾನಾಮಷ್ಟಯೋನಯಃ ।**
**ತಥೈತಾಃ ಪುಣ್ಯನಾಮಾನೋ ವಂದ್ಯಾಃ ಶ್ರಾವಣಿಕಾಃ ಸ್ಮೃತಾಃ ॥ ೭ ॥**

**ತಾ ಸಮುದ್ದಿಶ್ಯ ಕರ್ತವ್ಯಂ ವ್ರತಂ ನಾರೀನರೈರಿಹ ।**
**ಕಿಂ ತು ತಾಸಾಂ ಮಹೋಗ್ರಂ ತು ವ್ರತಂ ಸಂಯಮನಂ ತದಾ ॥ ೮ ॥**

**ಆಘ್ರಾಯ ಧೂಪಂ ಪಕ್ವಾನ್ನಂ ಜಲಂ ಚಾಗಂಧಮೇವ ಚ ।**
**ದಾತವ್ಯಾ ಪುನರನ್ಯಾಸಾಂ ನಾರೀಣಾಂ ಭೋಜ್ಯಪಾರಣಾ ॥ ೯ ॥**

**ಅದತ್ವಾ ಯದಿ ಮೃತ್ಯುಃ ಸ್ಯಾದಂತರಾಲೇಽಪಿ ಪಾಂಡವ ।**
**ತದಾ ಲಗ್ನಗ್ರಹೈರ್ಗ್ರಸ್ತಾ ಲಗ್ನಾ ಹ್ಯುಪರಿಕಾರಟಂ ॥ ೧೦ ॥**

---

ಪಿಶಾಚರು, ಎಂಬ ಈ ಎಂಟು ದೇವಯೋನಿಗಳು ಹೇಗೆ ದೇವತೆಗಳಲ್ಲಿ ಪೂಜ್ಯರೋ, ಹಾಗೆಯೇ ಶ್ರಾವಣೀದೇವತೆಗಳೂ ವಂದ್ಯರೆಂದು ಗಣಿಸಲ್ಪಟ್ಟಿದ್ದಾರೆ.

೮. ಆ ಶ್ರಾವಣೀದೇವತೆಗಳನ್ನುದ್ದೇಶಿಸಿ, ಈ ಲೋಕದಲ್ಲಿ ಹೆಂಗಸರಾಗಲಿ ಗಂಡಸರಾಗಲಿ ಈ ವ್ರತವನ್ನು ಆಚರಿಸಬಹುದು. ಆದರೆ ಈ ದೇವತೆಗಳ ಉದ್ದಿಶ್ಯವಾದ ಈ ವ್ರತದಲ್ಲಿ ಒಂದು ಮಹಾ ಕಠಿಣವಾದ ನಿಯಮವಿದೆ.

೯. ಈ ವ್ರತವನ್ನು ಅನ್ಯರು ಆಚರಿಸುತ್ತಿರುವಾಗ ಅಲ್ಲಿ ದೇವರಿಗೆ ಬೆಳಗಿದ ಧೂಪವನ್ನು ಆಘ್ರಾಣಿಸಿ, ನೈವೇದ್ಯಮಾಡಿದ ಪಕ್ವಾನ್ನವನ್ನು ಭುಂಜಿಸಿ, "ನಾನು ಈ ವ್ರತವನ್ನು ಆಚರಿಸುತ್ತೇನೆ" ಎಂದು ಸಂಕಲ್ಪಿಸಿದ ಮೇಲೆ, ಆ ಸಂಕಲ್ಪ ಪ್ರಕಾರವಾಗಿ ಈ ವ್ರತವನ್ನು ಆಚರಿಸಿ, ಆ ಶ್ರಾವಣೀದೇವತೆಗಳಿಗೆ ಧೂಪಾಘ್ರಾಣನ ಮಾಡಿಸಿ, ಪಕ್ವಾನ್ನವನ್ನೂ ನಿವೇದನಮಾಡಿ, ಸುಗಂಧ ಜಲಾದಿಗಳನ್ನು ಸಮರ್ಪಿಸಿ, ಬೇರೆ ಸ್ತ್ರೀಯರನ್ನು ಕರೆದು, ಅವರಿಗೆ ವ್ರತಾಂಗವಾಗಿ ಭೋಜನಮಾಡಿಸಿ ತಾನೂ ಪಾರಣೆಮಾಡಬೇಕು.

೧೦. ಅಯ್ಯಾ ಪಾಂಡುಪುತ್ರನೇ! ಈರೀತಿ ಸುಮಂಗಲಿಯರಿಗೆ ಭೋಜನಾದಿಗಳನ್ನು ಮಾಡಿಸುವುದರೊಳಗೆ, ಮಧ್ಯೆ ವ್ರತಿಗಳಿಗೆ ಮೃತ್ಯುವು ಸಂಭವಿಸಿದರೆ ಮರಣಕಾಲದಲ್ಲಿ ಲಗ್ನವೆಂಬ ಗ್ರಹವಿಶೇಷಗಳು ಅವರ ಕತ್ತನ್ನು ಬಿಗಿಯಾಗಿ ಹಿಡಿಯುವುವು. ಆರೀತಿ ಗ್ರಹಗ್ರಸ್ತರಾಗಿ ಅವರು ಮೇಲ್ಮುಖವಾಗಿ ನೋಡಿ, ಕೂಗಿಕೊಳ್ಳುತ್ತಾ, ಬಾಯಲ್ಲಿ ನೊರೆಗಳ ಸಹಿತವಾಗಿ ರೌದ್ರಮುಖವುಳ್ಳವರಾಗಿ, ಬಹುಕಾಲ ಹಾಗೇ ಕಷ್ಟಪಡುತ್ತಾ, ಅತ್ಯಾಯಾಸದಿಂದ ಮರಣಹೊಂದುತ್ತಾರೆ.

ಸರ್ಷೇನಿಲ್ಪೈರ್ಮುಖ್ಯೈರೌದ್ರೈರ್ವಿಪ್ರಿಯಂತೇ ನೀಚದುಃಖಿತಾಃ ।
ಶ್ರೂಯತೇ ಹಿ ಪುರಾ ಪಾರ್ಥ ಪೃಥಿವ್ಯಾಂ ನಹುಷೋ ನೃಪಃ ॥
ತಸ್ಯ ಭಾರ್ಯಾ ಮಹಾದೇವೀ ಜಯಶ್ರೀರ್ನಾಮ ಭಾರತ ॥ ೧೧ ॥

ಪ್ರತ್ಯಕ್ಷರೂಪಸಂಪನ್ನಾ ದರ್ಶನೀಯತರಾ ಶುಭಾ ।
ಪೀವರೋರುಸ್ತನಾ ಶ್ಯಾಮಾ ಮೃದುಕುಂಚಿತಮೂರ್ಧಜಾ ॥ ೧೨ ॥

ಶಬ್ದಗದ್ಗದಸಂಭಾಷಾ ಮತ್ತಮಾತಂಗಗಾಮಿನೀ ।
ಯಥಾರೂಪಾ ತಥಾ ಶೀಲಾ ಸತೀ ಚೇಷ್ಟಾ ಮಹೀತಲೇ ॥ ೧೩ ॥

ಸಾ ಕದಾಚಿದ್ಗತಾ ಸ್ನಾತುಂ ಗಂಗಾಯಾಂ ಚಾಶ್ರಮೇ ಮುನೇಃ ।
ವಶಿಷ್ಠಸ್ಯ ದದರ್ಶಾಥ ಸತೀಂ ಭಾರ್ಯಾಮರುಂಧತೀಂ ॥ ೧೪ ॥

---

೧೧. ಅಯ್ಯಾ ಪಾರ್ಥನೆ! ಪೂರ್ವದಲ್ಲಿ ಭೂಲೋಕದಲ್ಲಿ ನಹುಷನೆಂಬ ರಾಜನಿದ್ದನೆಂದು ಕೇಳಿದ್ದೆಯಷ್ಟೆ. ಅಯ್ಯಾ ಭರತವಂಶಜನೇ! ಆ ನಹುಷನಿಗೆ ಜಯಶ್ರೀ ಎಂಬ ಹೆಸರಿನ ಪತ್ನಿಯು ಮಹಾರಾಣಿಯಾಗಿದ್ದಳು.

೧೨. ಮಹಾರಾಣಿಯು ಅತಿ ಸೌಂದರ್ಯಸಂಪನ್ನಳಾಗಿ ಇದ್ದಳು. ಆಕೆ ಎಲ್ಲರಿಗೂ ಅತಿ ಪ್ರೇಕ್ಷಣೀಯಳಾಗಿಯೂ, ಮಂಗಳಕರಳಾಗಿಯೂ ಇದ್ದಳು. ದಪ್ಪವೂ ಉನ್ನತವೂ ಆಗಿರುವ ಸ್ತನಗಳುಳ್ಳವಳೂ, ಯುವತಿಯೂ, ಮೃದುವಾಗಿ ಸುರುಳಿ ಸುತ್ತಿಕೊಂಡಿರುವ ಕೇಶಗಳುಳ್ಳವಳೂ ಆಗಿದ್ದಳು.

೧೩. ಮತ್ತು ಅವಳು ಗದ್ಗದ ಸ್ವರಸಹಿತವಾಗಿ ಅತಿ ಇಂಪಾದ ಧ್ವನಿಯಿಂದ ಮಾತಾಡುವವಳಾಗಿಯೂ, ಮತ್ತು ಗಜಗಮನೆಯಾಗಿಯೂ, ಈ ರೂಪಕ್ಕೆ ತಕ್ಕುದಾದ ಶೀಲವುಳ್ಳವಳಾಗಿಯೂ, ಪತಿವ್ರತೆಯಾಗಿಯೂ, ಈ ಭೂತಲದಲ್ಲಿ ಎಲ್ಲ ಜನರಿಗೂ ಪ್ರಿಯಳಾಗಿಯೂ ಇದ್ದಳು.

೧೪. ಆ ಜಯಶ್ರೀಯು ಒಂದಾನೊಂದು ಕಾಲದಲ್ಲಿ ಗಂಗೆಗೆ ಸ್ನಾನಕ್ಕೆ ಹೋದಾಗ ವಶಿಷ್ಠಮುನಿಯ ಆಶ್ರಮದಲ್ಲಿ ಆ ಋಷಿಪತ್ನಿಯೂ ಪತಿವ್ರತಾಗ್ರಣಿಯೂ ಆದ ಅರುಂಧತೀದೇವಿಯನ್ನು ನೋಡಿದಳು.

ಭೋಜಯಂತೀಂ ಮುನೀನಾಂ ತು ಪತ್ನೀರ್ನಾನಾನ್ನಭೋಜನ್ಯೈಃ ।
ತಯಾ ಚ ಪ್ರಣಿಪತ್ಯಾಥ ಪೃಷ್ಟಾ ದೇವ್ಯಾ ಮಹಾಸತೀ　　　|| ೧೫ ||

ಪೂಜ್ಯಂ ಭಗವತಿ ಬ್ರೂಹಿ ಕಿಮೇತದ್ವ್ರತಮುಚ್ಯತೇ　　　|| ೧೬ ||

|| ಅರುಂಧತ್ಯುವಾಚ ||

ಜಯಶ್ರಿಯೇ ಶೃಣುಷ್ವ ತ್ವಂ ನಾಮ್ನಾ ಶ್ರಾವಣಿಕಾವ್ರತಂ ।
ಏತದ್ಭರ್ತ್ರಾ ಸಮಾಖ್ಯಾತಂ ವಶಿಷ್ಠೇನ ಮಹರ್ಷಿಣಾ　　　|| ೧೭ ||

ಗೂಢಂ ಬ್ರಹ್ಮರ್ಷಿಸರ್ವಸ್ವಂ ಸುಪತಿವ್ರತಕಂ ಶುಭಂ ।
ಗಚ್ಛ ವಾ ತಿಷ್ಠ ವಾ ರಾಜ್ಞಿ ಆತಿಥ್ಯಂ ಕರೋಮ್ಯಹಂ　　　|| ೧೮ ||

---

೧೫. ಆಗ ಆ ಅರುಂಧತೀದೇವಿಯು ಮುನಿಪತ್ನಿಯರಿಗೆ ನಾನಾವಿಧವಾದ ಅನ್ನಪಾಕಾದಿಗಳನ್ನು ಮಾಡಿ, ಭೋಜನಕ್ಕೆ ಬಡಿಸುತ್ತಿದ್ದಳು. ಆಗ ಆ ಜಯಶ್ರೀದೇವಿಯು, ಮಹಾಪತಿವ್ರತೆಯಾದ ಆ ಅರುಂಧತೀದೇವಿಗೆ ನಮಸ್ಕಾರ ಮಾಡಿ ಪ್ರಶ್ನೆ ಮಾಡತೊಡಗಿ,

೧೬. "ಎಲೌ ಪೂಜ್ಯಳಾದ ಅರುಂಧತಿಯೇ ! ನೀನು ಆಚರಿಸುತ್ತಿರುವ ಈ ವ್ರತದಲ್ಲಿ ಪೂಜಿಸಬೇಕಾದ ದೇವತೆಯು ಯಾವುದು ? ಈ ವ್ರತಕ್ಕೆ ಹೆಸ ರೇನು ? ಇದನ್ನು ನನಗೆ ಹೇಳು" ಎಂದಳು.

೧೭. ಅರುಂಧತಿಯು ಹೇಳುತ್ತಾಳೆ—"ಓ ಜಯಶ್ರೀಯೇ ! ಹೇಳುತ್ತೇನೆ ಕೇಳು. ನಾನು ಆಚರಿಸುವ ಈ ವ್ರತಕ್ಕೆ ಶ್ರಾವಣಿಕಾ ವ್ರತವೆಂದು ಹೆಸರು. ಈ ವ್ರತವನ್ನು ನನಗೆ ನನ್ನ ಪತಿಯಾದ ವಶಿಷ್ಠರು ಉಪದೇಶಿಸಿದರು."

೧೮. "ಇದು ಅತಿ ಗೋಪ್ಯವೂ ಬ್ರಹ್ಮರ್ಷಿಗಳಿಗೆ ಸರ್ವಸ್ವವೂ ಆಗಿದೆ. ಈ ಶುಭವ್ರತವು ಪತಿವ್ರತೆಯಾದ ಸ್ತ್ರೀಯರಿಗೆ ಅವಶ್ಯವಾಗಿ ಆಚರಣೀಯವು. ಎಲೌ ರಾಣಿಯೇ ! ನೀನು ಕೇಳಿದುದಕ್ಕೆ ಉತ್ತರ ಹೇಳಿರುತ್ತೇನೆ. ಇನ್ನು ಮುಂದೆ ನಿನಗೆ ತ್ವರ್ಯವಾದ ಕಾರ್ಯವಿದ್ದರೆ ಹೋಗಬಹುದು. ಅಥವಾ ಇಲ್ಲಿ ಇದ್ದು ನಾನು ಮಾಡುವ ಅತಿಥಿಸತ್ಕಾರವನ್ನು ಸ್ವೀಕರಿಸುವುದಾದರೆ ಮತ್ತೂ ಸಂತೋಷ" ಎಂದಳು.

**ಏವಮುಕ್ತಾ ಜಯಶ್ರೀಸ್ತು ಭೋಜ್ಯೇ ತಸ್ಮಿನ್ಯದೃಚ್ಛಯಾ ।**
**ಬುಭುಜೇ ಸಾಪಿ ತತ್ರೈವ ಅರುಂಧತ್ಯಾ ಕೃತಾದರಾ ॥ ೧೯ ॥**

**ಭುಕ್ತ್ವಾಚಮ್ಯ ಜಗಾಮಾಥ ಸ್ವಪುರಂ ಪರಮೇಶ್ವರಂ ।**
**ಕಾಲೇನ ವಿಸ್ಮೃತಂ ತಸ್ಯಾಸ್ತದ್ವ್ರತಂ ತಸ್ಯ ಭೋಜನಂ ॥ ೨೦ ॥**

**ತತಸ್ತು ಸಮಯೇ ಪೂರ್ಣೇ ಮ್ರಿಯಮಾಣಾ ಮಹಾಸತೀ ।**
**ಜಯಶ್ರೀರ್ಘರ್ಘರಂ ಗಂತುಂ ಕುರ್ವಾಣಾ ಕಂಠಗದ್ಗದಂ ॥ ೨೧ ॥**

**ಫೇನಂ ಲಾಲಾವಿಲಾದ್ವಕ್ತ್ರಾದುದ್ಗಿರಂತೀ ಮುಹುರ್ಮುಹುಃ ।**
**ಸ್ಥಿತಾ ಪಂಚದಶಾಹಾನಿ ಬೀಭತ್ಸಾ ದಾರುಣಾನನಾ ॥ ೨೨ ॥**

---

೧೯. ಈರೀತಿ ಅರುಂಧತೀದೇವಿಯು ಹೇಳಲಾಗಿ ಆ ಜಯಶ್ರೀಯು ತಾನಾಗಿ ಲಬ್ಧವಾಗಿ, ಪರಮಪವಿತ್ರಕರವಾದ ಭೋಜ್ಯವೆನಿಸಿಕೊಂಡ ಈ ವ್ರತಾನ್ನದಲ್ಲಿ ಆಶೆಯುಳ್ಳವಳಾಗಿ, ಆ ಅರುಂಧತೀದೇವಿಯ ಆಹ್ವಾನವನ್ನು ಆದರದಿಂದ ಅಂಗೀಕರಿಸಿ, ಆಶ್ರಮದಲ್ಲಿ ಭೋಜನ ಮಾಡಿದಳು.

೨೦. ಆ ಜಯಶ್ರೀಯು ಭೋಜನಾನಂತರ ಶುದ್ಧಾಚಮನಮಾಡಿ ತನ್ನ ನಗರಿಗೆ ಹೋಗಿ ಮಹಾರಾಜನಾದ ನಹುಷನ ಸಮೀಪವನ್ನು ಸೇರಿ, ಕಾಲಕಳೆಯುತ್ತಾ ಅವಳು ಆ ವ್ರತವನ್ನು ಮರೆತೇಬಿಟ್ಟಳು. ತದಂಗವಾಗಿ ವಶಿಷ್ಠಾಶ್ರಮದಲ್ಲಿ ತಾನು ಭೋಜನ ಮಾಡಿದ್ದನ್ನೂ ಮರೆತಳು.

೨೧. ಅನಂತರ ಆ ಮಹಾಪತಿವ್ರತೆಯಾದ ಜಯಶ್ರೀಯು ಆಯುಸ್ಸು ಪೂರ್ತಿಯಾಗಿ ಮರಣಸನ್ನಿಹಿತವಾದ ಕಾಲದಲ್ಲಿ ಎಂದರೆ ಪ್ರಾಣೋತ್ಕ್ರಾಂತಿ ಸಮಯದಲ್ಲಿ ಘೋರವಾಗಿ ಘರ್ಘರ ಶಬ್ದವನ್ನುಮಾಡುತ್ತಾ ಕತ್ತು ಹಿಡಿದುಕೊಂಡು ಗದ್ಗದಸ್ವರವುಳ್ಳವಳಾದಳು.

೨೨. ಮತ್ತು ಅವಳು ಮರಣಕಾಲದಲ್ಲಿ ಬಾಯಿಜೊಲ್ಲುಸಹಿತವಾಗಿ ನೊರೆಯನ್ನು ಬಹಳವಾಗಿ ಹೊರಗೆ ಬಿಡುತ್ತಾ, ಭೀಭತ್ಸಾಕಾರವುಳ್ಳವಳೂ ಭಯಂಕರ ವದನವುಳ್ಳವಳೂ ಆಗಿ, ಹದಿನೈದು ದಿನವಾದರೂ ಪ್ರಾಣೋತ್ಕ್ರಾಂತಿಯಾಗದೆ ನರಳುತ್ತಿದ್ದಳು.

ತತಃ ಷೋಡಶಕೇ ಪ್ರಾಪ್ತೇ ದಿನೇ ಸ್ವಯಮರುಂಧತೀ ।
ಪ್ರವಿಶ್ಯಾಭ್ಯಂತರಂ ಪೂರ್ಣಂ ತಾಂ ರಾಜ್ಞೀಮವಲೋಕ್ಯ ಚ ॥
ನಹುಷಾಯ ಸಮಾಚಖ್ಯೌ ಯದುಕ್ತಂ ಶ್ರಾವಣೀವ್ರತೇ ॥ ೨೩ ॥

ತಚ್ಛ್ರುತ್ವಾ ನಹುಷೋ ರಾಜಾ ದ್ರುತಂ ಭೋಜ್ಯಂ ಪ್ರಚಕ್ರಮೆ ।
ಯಥೋಕ್ತಂ ತದರುಂಧತ್ಯಾ ಯಚ್ಚ ಯಾವದಭೀಪ್ಸಿತಂ ॥ ೨೪ ॥

ದತ್ವಾ ಚ ಕರಕಾನಷ್ಟೌ ತಾಮುದ್ದಿಶ್ಯ ಜಯಶ್ರಿಯಂ ।
ಕ್ಷಣಾಜ್ಜಗಾಮ ಪಂಚತ್ವಂ ಕರಕಾಣಾಂ ಪ್ರದಾನತಃ ॥ ೨೫ ॥

ಜಗಾಮ ಶಕ್ರಲೋಕಂ ಸಾ ವಿಮಾನೇನಾರ್ಕವರ್ಚಸಾ ।
ದೋಧೂಯಮಾನಾ ಚಮರೈಃ ಸ್ತೂಯಮಾನಾ ಸುರಾಸುರೈಃ ॥ ೨೬ ॥

---

೨೩. ಅನಂತರ ಹದಿನಾರನೆಯ ದಿನ ಪ್ರಾಪ್ತವಾಗುತ್ತಿರಲು, ಅರುಂಧತಿಯು ಈ ವಿಷಯವನ್ನು ತಿಳಿದು, ಶೀಘ್ರವಾಗಿ ಬಂದು ಅರಮನೆಗೆ ಪ್ರವೇಶಿಸಿ, ಆ ಮಹಾರಾಣಿಯ ಸ್ಥಿತಿಯನ್ನು ನೋಡಿ, ಅನಂತರ ಅವಳ ಪತಿಯಾದ ನಹುಷ ಚಕ್ರವರ್ತಿಗೆ ಹಿಂದೆ ತಾನು ಆ ರಾಣಿಗೆ ಹೇಳಿದ್ದ ಶ್ರಾವಣೀವ್ರತದ ವಿಷಯವನ್ನು ವಿವರಿಸಿ ಹೇಳಿದಳು.

೨೪. ಆ ಅರುಂಧತೀದೇವಿಯ ವಚನವನ್ನು ಕೇಳಿ ನಹುಷರಾಜನು ಶೀಘ್ರವಾಗಿ ಭೋಜನಪದಾರ್ಥಗಳನ್ನು ಮಾಡಿಸಿ, ಅರುಂಧತಿಯು ಹೇಳಿದ ವಿಧಿಗೆ ಸ್ವಲ್ಪವೂ ವ್ಯತ್ಯಾಸವಾಗದ ಹಾಗೆ ಭೋಜನಪೂರ್ವಕವಾಗಿ ಈ ವ್ರತವನ್ನು ಮಾಡಿಸಿದನು.

೨೫. ಆಗ ನಹುಷನು ವ್ರತಾಂಗವಾಗಿ ಜಯಶ್ರೀಯ ಉದ್ದಿಶ್ಯವಾಗಿ ಎಂಟು ಕಮಂಡಲುಗಳನ್ನು ದಾನಮಾಡಿದನು. ಆ ಕಮಂಡಲು ದಾನಪ್ರಭಾವ ದಿಂದ, ಹದಿನೈದು ದಿನದಿಂದ ನರಳುತ್ತಿದ್ದ ಆ ಜಯಶ್ರೀಯು ಕ್ಷಣಮಾತ್ರದಲ್ಲೇ ಮೃತಳಾದಳು.

೨೬. ಕೂಡಲೆ ಅವಳು ಸೂರ್ಯನಂತೆ ಪ್ರಕಾಶಮಾನವಾಗಿರುವ ವಿಮಾನ ವನ್ನು ಏರಿ, ಚಾಮರ ಬೀಸುವಿಕೆಯಿಂದ ಸೇವಿಸಲ್ಪಡುತ್ತಲೂ, ಸುರಾಸುರರಿಂದ ಹೊಗಳಿಸಿಕೊಳ್ಳುತ್ತಲೂ, ಇಂದ್ರಲೋಕಕ್ಕೆ ಹೋದಳು ಎಂದನು.

॥ ಶ್ರೀ ಕೃಷ್ಣ ಉವಾಚ ॥

ಮಾರ್ಗಶೀರ್ಷಾದಿಮಾಸೇಷು ದ್ವಾದಶಸ್ವಪಿ ಪಾಂಡವ ।
ದ್ರವ್ಯಪ್ರಾಪ್ತಿಶ್ಚ ಭಕ್ತಿಶ್ಚ ದಾನಕಾಲೇ ಪ್ರಶಸ್ಯತೇ ॥ ೨೭ ॥

ಭುಕ್ತ್ವಾ ಯಜ್ಞೇ ಚತುರ್ದಶ್ಯಾಮಷ್ಟಮ್ಯಾಂ ವಾ ಯುಧಿಷ್ಠಿರ ।
ವ್ರತೀ ಸ್ನಾತ್ವಾ ತು ಪೂರ್ವಾಹ್ಣೇ ನದ್ಯಾದೌ ವಿಮಲೇ ಜಲೇ ॥ ೨೮ ॥

ಆಮಂತ್ರಯೇದ್ದಶೈಕೈಕಾ ನಾರೀಗೌರೀಸ್ವರೂಪಿಣೀಃ ।
ಯತಾಚಾರಾಃ ಸುವೇಷಾಶ್ಚ ಬ್ರಾಹ್ಮಣೀರ್ವಾ ಸ್ವಗೋತ್ರಜಾಃ ॥ ೨೯ ॥

ದ್ವಾದಶ ಬ್ರಾಹ್ಮಣಾಂಸ್ತತ್ರ ವೇದವೇದಾಂಗಪಾರಗಾನ್ ।
ಮಂತ್ರಜ್ಞಾನಿತಿಹಾಸಜ್ಞಾನುಪಶಾಂತಾಞ್ಜಿತೇಂದ್ರಿಯಾನ್ ॥ ೩೦ ॥

---

೨೭. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಪಾಂಡುಪುತ್ರನೇ! ಮಾರ್ಗಶೀರ್ಷಾದಿ ಹನ್ನೆರಡು ತಿಂಗಳುಗಳಲ್ಲೂ ಈ ವ್ರತವನ್ನು ಆಚರಿಸಬೇಕು. ಪ್ರತಿಯೊಂದು ದಾನಮಾಡುವುದಕ್ಕೂ ದ್ರವ್ಯಾನುಕೂಲ ಮತ್ತು ಭಕ್ತಿ ಇವೆರಡೂ ಪ್ರಶಸ್ತ ಸಾಧನಗಳು. ಆದುದರಿಂದ ಆ ಎರಡು ಸಾಧನಗಳನ್ನಿಟ್ಟುಕೊಂಡು ಇದರಲ್ಲಿ ದಾನಮಾಡಬೇಕು.

೨೮. ಅಯ್ಯಾ ಯುಧಿಷ್ಠಿರನೇ! ಯಜ್ಞರೂಪವಾದ ಈ ವ್ರತದಲ್ಲಿ ಸುವಾಸಿನ್ಯಾದಿಗಳಿಗೆ ಭೋಜನಮಾಡಿಸಿ, ಅನಂತರ ತಾನೂ ಭೋಜನಮಾಡಬೇಕು. ಇದನ್ನು ಚತುರ್ದಶಿಯಲ್ಲೋ ಅಥವಾ ಅಷ್ಟಮೀ ತಿಥಿಯಲ್ಲೋ ಆಚರಿಸಬೇಕು. ಈ ವ್ರತಾನುಷ್ಠಾತೃವು ಆ ದಿನ ಪೂರ್ವಾಹ್ಣದಲ್ಲಿ ನದೀ, ಪುಷ್ಕರಣೀ ಮುಂತಾದುವುಗಳ ನಿರ್ಮಲ ಜಲದಲ್ಲಿ ಸ್ನಾನಮಾಡಬೇಕು.

೨೯. ಆಮೇಲೆ ಗೌರೀಸ್ವರೂಪಿಣಿಯರಾದ ಹತ್ತುವರ್ಷ ವಯಸ್ಸಿನ ಹನ್ನೆರಡುಮಂದಿ ಕನ್ಯೆಯರನ್ನು ಆಮಂತ್ರಿಸಬೇಕು. ಆ ನಾರಿಯರೆಲ್ಲರೂ ಸದಾಚಾರಸಂಪನ್ನೆಯರೂ, ಸುಂದರವಾದ ವಸ್ತ್ರಾಭರಣಾದಿಗಳನ್ನು ಧರಿಸಿದವರೂ ಆಗಿರಬೇಕು. ಅಥವಾ ತನ್ನ ಗೋತ್ರದವರಾದ ಹನ್ನೆರಡುಮಂದಿ ಸ್ತ್ರೀಯರನ್ನು ಆಹ್ವಾನಮಾಡಬೇಕು.

೩೦. ಅಲ್ಲದೆ ಈ ವ್ರತದಲ್ಲಿ ಹನ್ನೆರಡುಮಂದಿ ಬ್ರಾಹ್ಮಣರನ್ನೂ ಆಹ್ವಾನಮಾಡಬೇಕು. ಅವರು ವೇದವೇದಾಂಗಪಾರಂಗತರೂ ಮಂತ್ರಾರ್ಥವನ್ನು

ಸರ್ವಂ ದದ್ಯಾದ್ವಿಧಾನೇನ ಪಾದಕ್ಷಾಲನಪೂರ್ವಕಂ ।
ಚಂದನೇನ ಸುಗಂಧೇನ ಪುಷ್ಪಧೂಪಾದಿನಾ ತಥಾ　　॥ ೩೧ ॥

ಗ್ರೀವಾಸೂತ್ರಕಸಿಂದೂರಕುಂಕುಮೇನ ಚ ಭೂಷಯೇತ್ ।
ತಾಸಾಮಗ್ರೇ ಪ್ರದಾತವ್ಯಾ ವರ್ಧನ್ಯೋ ದ್ವಾದಶೈವ ತು　　॥ ೩೨ ॥

ಅಚ್ಛಿದ್ರಾ ಜಲಪೂರ್ಣಾಸ್ತು ಸುವೃತ್ತಾಃ ಸೂತ್ರವೇಷ್ಟಿತಾಃ ।
ಸೋಹಾಲಕಾದಿಭಿಶ್ಛನ್ನಾಃ ಪುಷ್ಪಮಾಲಾವಿಭೂಷಿತಾಃ　　॥ ೩೩ ॥

ಚಂದನೇನ ಸಮಾಲಬ್ಧಾಃ ಸಹಿರಣ್ಯಾಃ ಪೃಥಕ್ಪೃಥಕ್ ।
ತನ್ಮಧ್ಯೇ ವರ್ಧನೀಂ ಚೈಕಾಂ ಸ್ವಕೇ ಶೀರ್ಷೇ ನಿವೇಶಯೇತ್ ॥ ೩೪ ॥

---

ತಿಳಿದವರೂ ಇತಿಹಾಸಗಳಲ್ಲಿ ಕುಶಲರೂ ಉಪಶಾಂತರೂ ಜಿತೇಂದ್ರಿಯರೂ ಆಗಿರಬೇಕು.

೩೧. ಅವರಿಗೆ ಪಾದಪ್ರಕ್ಷಾಳನೆ ಮಾಡಿ; ಚಂದನ, ಸುಗಂಧ, ಪುಷ್ಪ, ಧೂಪ, ಇತ್ಯಾದಿಗಳಿಂದ ಸತ್ಕರಿಸಿ, ಶಾಸ್ತ್ರೋಕ್ತವಾಗಿ ಎಲ್ಲವನ್ನೂ ದಾನಮಾಡಬೇಕು.

೩೨. ಆ ಹನ್ನೆರಡುಜನ ಸ್ತ್ರೀಯರಿಗೆ ಚಂದ್ರ, ಕುಂಕುಮ ಇವುಗಳನ್ನು ಇಟ್ಟು, ಕಂಠಸೂತ್ರದಿಂದ ಅಲಂಕರಿಸಬೇಕು. ಅನಂತರ ಆ ಸ್ತ್ರೀಯರಿಗೆ ಹನ್ನೆರಡು ಕಮಂಡಲುಗಳನ್ನೂ ದಾನಮಾಡಬೇಕು.

೩೩. ಆ ಕಮಂಡಲುಗಳು ಛಿದ್ರರಹಿತಗಳೂ, ಮಂಡಾಮವೂ. ಜಲಪೂರ್ಣಗಳೂ ತಂತುವಿನಿಂದ ಸುತ್ತಲ್ಪಟ್ಟವುಗಳೂ ಸೋಹಾಲಿಕಾದಿ ಭಕ್ಷ್ಯಗಳಿಂದ ಮುಚ್ಚಲ್ಪಟ್ಟವುಗಳೂ ಪುಷ್ಪಮಾಲೆಗಳಿಂದ ಅಲಂಕೃತಗಳೂ ಆಗಿರಬೇಕು.

೩೪. ಮತ್ತು ಚಂದನಲಿಪ್ತಗಳಾಗಿರಬೇಕು. ಪ್ರತಿಯೊಂದು ಕಮಂಡಲುವಿನಲ್ಲೂ ಬೇರೆಬೇರೆಯಾಗಿ ಹಿರಣ್ಯವನ್ನು ಹಾಕಿರಬೇಕು. ಆ ಕಮಂಡಲುಗಳಲ್ಲಿ ಒಂದನ್ನು ಎತ್ತಿ ಯಜಮಾನನು ತನ್ನ ಶಿರಸ್ಸಿನಲ್ಲಿ ಇಟ್ಟುಕೊಳ್ಳಬೇಕು.

ಸ್ಥಿತ್ವಾ ಮಂಡಲಕೇ ಮಧ್ಯೇ ಯಜಮಾನಃ ಸ್ವಯಂ ತದಾ ।
ಯದ್ಬಾಲ್ಯೇ ಯಚ್ಚ ಕೌಮಾರೇ ವಾರ್ಧಕೇ ವಾಪಿ ಯತ್ಕೃತಂ ॥
ತತ್ಸರ್ವಂ ನಾಶಮಾಯಾತು ಪಿತೃದೇವರ್ಷಿಣಾಂ ನೃಣಾಂ ॥ ೩೫ ॥

ಅಯಂ ಮೇ ಸಮಯಃ ಪೂರ್ಣಃ ತಾರಯಸ್ವ ಭವಾರ್ಣವಾತ್
ಅದ್ಯಾಹಂ ಗಂತುಮಿಚ್ಛಾಮಿ ವಿಷ್ಣೋಃ ಪದಮನುತ್ತಮಂ ॥ ೩೬ ॥

ಏವಮಸ್ತ್ವಿತಿ ತಾ ಬ್ರೂಯುಃ ಸ್ತ್ರಿಯಃ ಸರ್ವಾ ಯುಧಿಷ್ಠಿರ ।
ತತೋ ಬ್ರಾಹ್ಮಣಮಾಹೂಯ ಯಜಮಾನ ಇದಂ ವದೇತ್ ॥
ಬ್ರೂಹಿ ಬ್ರಾಹ್ಮಣ ಯನ್ಮೇ ತ್ವಮಘಂ ಯೇನ ಕ್ಷಯಂ ವ್ರಜೇತ್ ॥೩೭॥

ಉತ್ತೀರ್ಯ ಶ್ರಾವಣಂ ಮಾಸಂ ಸಮುತ್ತಾರಯ ಸಾಂಪ್ರತಂ ।
ಉತ್ತಾರಯೇಚ್ಚ ಮಂತ್ರೇಣ ಬ್ರಾಹ್ಮಣೋ ವರ್ಧನೀಂ ಚ ತಾಂ ॥ ೩೮ ॥

---

೩೫–೩೬. ಹೀಗೆ ಇಟ್ಟುಕೊಂಡು ಅಲ್ಲಿ ರಚಿಸಿದ ಮಂಡಲದ ಮಧ್ಯದಲ್ಲಿ ತಾನು ನಿಂತುಕೊಂಡು, ಪ್ರಾರ್ಥಿಸಬೇಕು. ನಾನು ಬಾಲ್ಯ, ಕೌಮಾರ, ವಾರ್ಧಕವೆಂಬ ಅವಸ್ಥಾತ್ರಯದಲ್ಲೂ ಯಾವ ಯಾವ ಪಾಪವನ್ನು ಮಾಡಿದ್ದರೂ ಅದೆಲ್ಲಾ ಈಗ ದೇವತೆಗಳು, ಋಷಿಗಳು ಮತ್ತು ಪಿತೃಗಳು ಇವರ ಪ್ರಸಾದದಿಂದ ನಾಶವಾಗಲಿ. ನನಗೆ ಜೀವನಕಾಲವು ಪೂರ್ತಿಯಾಯಿತು. ಇನ್ನು ಮೇಲೆ ನಮ್ಮನ್ನು ಈ ಸಂಸಾರಸಾಗರದಿಂದ ದಾಟಿಸು. ಈ ಹೊತ್ತು ನಾನು ಅತ್ಯುತ್ತಮವಾದ ಶ್ರೀ ವಿಷ್ಣುವಿನ ಪದಕ್ಕೆ ಹೋಗಲು ಇಚ್ಛಿಸುತ್ತೇನೆ. ಎಂಬುದು ಈ ಪ್ರಾರ್ಥನಾ ಮಂತ್ರದ ತಾತ್ಪರ್ಯ. ಅಯ್ಯಾ ಯುಧಿಷ್ಠಿರನೇ ! ಆ ಯಜಮಾನನು ಈರೀತಿ ಪ್ರಾರ್ಥಿಸಿದಾಗ ಆ ಆಹ್ವಾನಿತರಾಗಿ ಪೂಜಿತೆಯರಾದ ಆ ಸ್ತ್ರೀಯರೆಲ್ಲರೂ ಸೇರಿ ‘ ಏವಮಸ್ತು ’ ಎಂದು ಆಶೀರ್ವಾದಮಾಡಬೇಕು.

೩೭–೩೮. ಅನಂತರ ಆ ಯಜಮಾನನು ಆಹೂತರಾದ ಬ್ರಾಹ್ಮಣರಲ್ಲಿ ಒಬ್ಬನನ್ನು ಕರೆದು “ ಓ ಬ್ರಾಹ್ಮಣನೇ ! ನನ್ನ ಪಾಪವು ನಾಶವಾಗುವ ರೀತಿಯನ್ನು ಹೇಳು. ನನ್ನ ತಲೆಯಲ್ಲಿರುವ ಶ್ರವಣದೇವತಾಧಿಷ್ಠಿತವಾದ ಈ ಕಮಂಡಲುವನ್ನು ಈಗ ಕೆಳಗೆ ಇಳಿಸು ” ಎಂಬರ್ಥವುಳ್ಳ ಮಂತ್ರವನ್ನು ಹೇಳಬೇಕು. ಈ ರೀತಿಯಾದ ಯಜಮಾನನ ಪ್ರಾರ್ಥನೆಯನ್ನನುಸರಿಸಿ ಆ ಬ್ರಾಹ್ಮಣನು ಆ ಕಮಂಡಲುವನ್ನು ಯಜಮಾನನ ಶಿರಸ್ಸಿನಿಂದ ಕೆಳಗೆ ಇಳಿಸಬೇಕು.

ಉಪ್ರೋಷ್ಯ ಶಿರಸೋ ದೇವ್ಯಾಃ ಸಮುತ್ತೀರ್ಯ ರುಹದ್ರುಮಾನ್ ।
ಕಟುಕಂ ನಿಂಬವೃಕ್ಷಂ ವಾ ತತೋ ಮಧುಕಮಾರುಹ ॥
ತತೋ ಗಚ್ಛ ಮಹಾದೇವಂ ಶ್ರವಣೇ ಶ್ರವಣೋತ್ತಮೇ ॥ ೩೯ ॥

॥ ಇತಿ ವರ್ಧನಿಕೋತ್ತಾರಣಮಂತ್ರಃ ॥

ಏವಂ ತಾಃ ಸಮಯಂ ಪ್ರೋಚ್ಯ ದತ್ವಾಶೀರ್ವಚನಾನಿ ಚ ॥ ೪೦ ॥

ತಾಂ ವರ್ಧನಿಕಾಮೇಕಾನ್ತೇ ವಿಪ್ರಾಯ ಪ್ರತಿಪಾದಯೇತ್ ।
ಗೃಹೀತ್ವಾ ಕರಕಾನ್ನಾರ್ಯೋ ವ್ರಜೇಯುಃ ಸ್ವೇಷು ವೇಶ್ಮಸು ॥೪೧॥

ಯಜಮಾನೋಽಪಿ ಯಾತಾಸು ಯಥೇಷ್ಟಂ ಕಾಮಮಾಚರೇತ್ ।
ಏವಮಾಚರತೇ ಪಾರ್ಥ ಶ್ರಾವಣೀವ್ರತಮಾದರಾತ್ ॥ ೪೨ ॥

---

೩೯. ಹಾಗೆ ಇಳಿಸುವಾಗ "ಓ ಶ್ರವಣದೇವತೆಯೇ! ನೀನು ಮೊದಲು ದೇವಿಯ ಶಿರಸ್ಸಿನಲ್ಲಿ ವಾಸವಾಗಿದ್ದು, ಅನಂತರ ಅಲ್ಲಿಂದ ಇಳಿದು ರೋಹಿಣೀ ವೃಕ್ಷ, ಬೇವಿನಮರ, ಅತಿಮಧುರವೃಕ್ಷ ಮೊದಲಾದ ವೃಕ್ಷಗಳನ್ನು ಆರೋಹಣ ಮಾಡು. ಅನಂತರ ಶ್ರಾವಣಮಾಸದಲ್ಲಿ ಶ್ರೀ ಮಹಾದೇವನನ್ನು ಹೋಗಿ ಸೇರು" ಎಂಬ ಅರ್ಥವುಳ್ಳ ಮಂತ್ರ ಹೇಳಬೇಕು.

೪೦. ಈರೀತಿ ಆ ಶ್ರಾವಣೀದೇವತೆಗಳಿಗೆ ಸಮಯವನ್ನು ಹೇಳಿ, ಆ ಯಜಮಾನನಿಗೂ ಆ ಬ್ರಾಹ್ಮಣನು ಆಶೀರ್ವಚನವನ್ನು ಹೇಳಬೇಕು.

೪೧. ಅನಂತರ ಆ ಯಜಮಾನನು ಶಿರಸ್ಸಿನಲ್ಲಿ ಇರಿಸಿಕೊಂಡಿದ್ದ ಆ ಕಮಂಡಲುವನ್ನು, ಕೆಳಕ್ಕೆ ಇಳಿಸಿದ ಆ ಬ್ರಾಹ್ಮಣನಿಗೆ ಏಕಾಂತದಲ್ಲಿ ದಾನಮಾಡಬೇಕು. ಆಹೂತರಾದ ಹನ್ನೆರಡುಮಂದಿ ಸ್ತ್ರೀಯರು ತಮಗೆ ಕೊಟ್ಟಿರುವ ಕಮಂಡಲುಗಳನ್ನು ತೆಗೆದುಕೊಂಡು ತಮ್ಮ ತಮ್ಮ ಮನೆಗೆ ಹೋಗಬೇಕು.

೪೨. ಆ ಹೆಂಗಸರೆಲ್ಲ ಮನೆಗೆ ಹೋದಮೇಲೆ ಆ ಯಜಮಾನನು ಯಥೇಷ್ಟವಾಗಿ ತನ್ನ ಕೆಲಸಗಳನ್ನು ಮಾಡಿಕೊಳ್ಳಬಹುದು. ಅಯ್ಯಾ ಧರ್ಮಜನೇ! ಈರೀತಿಯಾಗಿ ಈ ಶ್ರಾವಣೀವ್ರತವನ್ನು ಅತ್ಯಾದರದಿಂದ ಆಚರಿಸಬೇಕು.

ತಸ್ಯ ಕಾಲೇ ತು ಸಂಪ್ರಾಪ್ತೇ ಸುಖಂ ಮೃತ್ಯುಃ ಪ್ರಜಾಯತೇ |
ನಿರ್ವ್ಯಾಧಿರ್ನೀರುಜೋ ಭೋಗೀ ಸ್ಥಿತ್ವಾಸ್ಥಿತ್ವಾ ಶತಂ ಸುಖಂ || ೪೩ ||

ಪುತ್ರಪೌತ್ರಸಮೃದ್ಧ್ಯಾಸೌ ಭುಕ್ತ್ವಾ ಮರ್ತ್ಯಸುಖಾನಿ ಚ |
ರುದ್ರಲೋಕಮವಾಪ್ನೋತಿ ಸೋಮಲೋಕಂ ಸ ಗಚ್ಛತಿ || ೪೪ ||

ಸ್ತ್ರೀಣಾಂ ತುಲ್ಯಂ ಸ ಹೀನೋಽಪಿ ವ್ರತೀ ವ್ರತಫಲಂ ವ್ರಜೇತ್ |
ಗೌರೀಭೋಜ್ಯೇಷು ದತ್ತೇಷು ಏಕಾದಶಸು ಯತ್ಫಲಂ || ೪೫ ||

ತದೇಕೇನಾಪಿ ಲಭತೇ ಪಾರ್ಥ ಶ್ರಾವಣಿಕಾವ್ರತೇ |
ಭಕ್ತ್ಯಾ ಗಚ್ಛಂತಿ ತೇ ಲೋಕಾನ್ನಿಹೃತ್ಯ ಸುಖಮಾದರಾತ್ || ೪೬ ||

ಇತಿ ಶ್ರೀ ಭವಿಷ್ಯೇಮಹಾಪುರಾಣ ಉತ್ತರಪರ್ವಣಿ ಶ್ರೀಕೃಷ್ಣಯುಧಿಷ್ಠಿರ ಸಂವಾದೇ ಶ್ರವಣಿಕಾವ್ರತಂ ನಾಮ ಪಂಚನವತಿತಮೋಽಧ್ಯಾಯಃ.

---

೪೩. ಹೀಗೆ ಈ ವ್ರತವನ್ನು ಆಚರಿಸಿದವನು ಆಧಿವ್ಯಾಧಿರಹಿತನೂ, ಭೋಗಿಯೂ ಆಗಿ, ಸುಖದಿಂದ ನೂರುವರ್ಷ ಬದುಕಿ, ಉತ್ಕ್ರಮಣಕಾಲವು ಬಂದಾಗ ಸುಖದಿಂದ ಮರಣಹೊಂದುತ್ತಾನೆ.

೪೪. ಅವನು ಪುತ್ರ, ಪೌತ್ರ, ಧನಸಮೃದ್ಧಿ ಇತ್ಯಾದಿಗಳಿಂದ ಕೂಡಿ, ಮನುಷ್ಯಲೋಕದ ಸರ್ವಸುಖಗಳನ್ನೂ ಅನುಭವಿಸಿ, ಕೊನೆಗೆ ರುದ್ರಲೋಕ, ಚಂದ್ರಲೋಕ ಇವುಗಳಿಗೆ ಹೋಗುತ್ತಾನೆ.

೪೫-೪೬. ಅಯ್ಯಾ ಕುಂತಿಪುತ್ರನೇ! ಪತಿತನೂ, ವೇದಾಧ್ಯಯನಾದಿ ರಹಿತನೂ, ಸ್ತ್ರೀಯರಿಗೆ ಸಮಾನನೆನಿಸಿದ ಹೀನನೂ ಆಗಿದ್ದು, ಅವನು ಈ ವ್ರತ ವನ್ನು ಆಚರಿಸಿದರೆ ಈ ವ್ರತದ ಫಲವನ್ನು ಹೊಂದುತ್ತಾನೆ. ಹನ್ನೊಂದು ಮಂದಿ ಗೌರೀಸಂಜ್ಞಾಕರಾದ ಕನ್ನಿಕೆಯರಿಗೆ ಸಕಲ ಭಕ್ಷ್ಯಭೋಜ್ಯಗಳಿಂದ ಭೋಜನಮಾಡಿಸಿದರೆ ಯಾವ ಫಲವು ಬರುವುದೋ ಅಂತಹ ಫಲವು ಒಂದು ಶ್ರಾವಣಿಕಾ ವ್ರತಾಚರಣೆಯಿಂದಲೇ ಬರುವುದು. ಭಕ್ತಿಯಿಂದ ಈ ವ್ರತವನ್ನು ಆಚರಿಸಿದವರು ಸುಖವಾಗಿ ಈ ಲೋಕದಲ್ಲಿ ವಿಹರಿಸಿ ಕೊನೆಗೆ ರುದ್ರಾದಿ ಲೋಕ ಗಳಿಗೆ ಹೋಗುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರಾವಣಿಕಾ ವ್ರತ ವರ್ಣನೆಯೆಂಬ ತೊಂಭತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಷಣ್ಣವತಿತಮೋಽಧ್ಯಾಯಃ

---

**॥ ಶ್ರೀ ಕೃಷ್ಣ ಉವಾಚ ॥**

**ಅಥ ನಕ್ತೋಪವಾಸಸ್ಯ ವಿಧಾನಂ ಶೃಣು ಪಾಂಡವ ।**
**ಯೇನ ವಿಜ್ಞಾನಮಾತ್ರೇಣ ನರೋ ಮೋಕ್ಷಮವಾಪ್ನುಯಾತ್ ॥ ೧ ॥**

**ಯೇಷು ತೇಷು ಚ ಮಾಸೇಷು ಶುಕ್ಲಪಕ್ಷೇ ಚತುರ್ದಶೀಂ ।**
**ಬ್ರಾಹ್ಮಣಂ ಭೋಜಯಿತ್ವಾ ತು ಪ್ರಾರಭೇತ ತತೋ ವ್ರತಂ ॥ ೨ ॥**

**ಮಾಸಿಮಾಸಿ ಭವಂತಿ ದ್ವಾವಷ್ಟಮ್ಯೌ ಚ ಚತುರ್ದಶೀ ।**
**ಶಿವಾರ್ಚನರತೋ ಭೂತ್ವಾ ಶಿವಧ್ಯಾನೈಕಮಾನಸಃ**
**ವಸುಧಾಭಾಜನಂ ಕೃತ್ವಾ ಭುಂಜೀಯಾನ್ನಕ್ತಭೋಜನಂ । ॥ ೩ ॥**

---

### ತೊಂಭತ್ತಾರನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಪಾಂಡುಪುತ್ರನೆ! ಈಗ ನಕ್ತೋಪವಾಸದ ವಿಧಿಯನ್ನು ಹೇಳುತ್ತೇನೆ ಶ್ರವಣಮಾಡು. ಈ ನಕ್ತೋಪವಾಸ ವಿಧಿಯನ್ನು ಚೆನ್ನಾಗಿ ತಿಳಿದುಕೊಂಡರೆ ಪುರುಷನು ಮೋಕ್ಷಹೊಂದುತ್ತಾನೆ.

೨. ಯಾವ ಮಾಸದಲ್ಲಿಯಾದರೂ ಶುಕ್ಲಪಕ್ಷದ ಚತುರ್ದಶಿಯಲ್ಲಿ ಬ್ರಾಹ್ಮಣರಿಗೆ ಭೋಜನಮಾಡಿಸಿ ಅನಂತರ ಈ ವ್ರತವನ್ನು ಪ್ರಾರಂಭಿಸಬೇಕು.

೩. ಪ್ರತಿ ತಿಂಗಳಲ್ಲೂ ಎರಡು ಅಷ್ಟಮೀ ತಿಥಿಗಳು, ಎರಡು ಚತುರ್ದಶೀ ತಿಥಿಗಳು ಬರುತ್ತವೆ. ಆಗ ಕೇವಲ ಶಿವಧ್ಯಾನದಲ್ಲೇ ಮನಸ್ಸನ್ನು ನಿಯೋಗಿಸಿ, ಶಿವಪೂಜಾತತ್ಪರನಾಗಿ ಪೂಜಾನಂತರದಲ್ಲಿ ನೆಲವನ್ನು ಸಾರಿಸಿಕೊಂಡು ಅದರ ಮೇಲೆ ಆಹಾರ ಬಡಿಸಿಕೊಂಡು ನಕ್ತಭೋಜನ ಮಾಡಬೇಕು.

ಉಪವಾಸಾತ್ಪರಂ ಭೈಕ್ಷ್ಯಂ ಭೈಕ್ಷ್ಯಾತ್ಪರಮಯಾಚಿತಂ ||
ಅಯಾಚಿತಾತ್ಪರಂ ನಕ್ತಂ ತಸ್ಮಾನ್ನಕ್ತೇನ ಭೋಜಯೇತ್ || ೪ ||

ದೇವೈಶ್ಚ ಭುಕ್ತಂ ಪೂರ್ವಾಹ್ಣೇ ಮಧ್ಯಾಹ್ನೇ ಮುನಿಭಿಸ್ತಥಾ |
ಅಪರಾಹ್ಣೇ ಚ ಪಿತೃಭಿಃ ಸಂಧ್ಯಾಯಾಂ ಗುಹ್ಯಕಾದಿಭಿಃ || ೫ ||

ಸರ್ವಲೋಕಾನತಿಕ್ರಮ್ಯ ನಕ್ತಭೋಜೀ ಸದಾ ಭವೇತ್ |
ಹವಿಷ್ಯಭೋಜನಂ ಸ್ನಾನಂ ಸತ್ಯಮಾಹಾರಲಾಘವಂ || ೬ ||

---

೪. ಉಪವಾಸಕ್ಕಿಂತ ಭಿಕ್ಷಾನ್ನ ಭೋಜನವು ಶ್ರೇಷ್ಠ. ಭಿಕ್ಷೆಯನ್ನು ಬೇಡುವುದಕ್ಕಿಂತ ಅಯಾಚಿತವಾಗಿ ಲಬ್ಧವಾದ ಅನ್ನವನ್ನು ಭುಂಜಿಸುವುದು ಇನ್ನೂ ಉತ್ತಮ. ಅಯಾಚಿತಾನ್ನ ಭೋಜನದಕ್ಕಿಂತ ನಕ್ತಭೋಜನವು ಅತ್ಯುತ್ತಮ. ಆದುದರಿಂದ ಪುರುಷನು ನಕ್ತಭೋಜನವನ್ನು ಮಾಡಬೇಕು.

೫. ಹಗಲಿನ ಪೂರ್ವಾಹ್ನದಲ್ಲಿ ದೇವತೆಗಳು ಭುಂಜಿಸುವರು. ಆದುದರಿಂದ ದೇವಕಾರ್ಯವನ್ನು ಪೂರ್ವಾಹ್ನದಲ್ಲಿ ಮಾಡಬೇಕು. ಮುನಿಗಳು ಮಧ್ಯಾಹ್ನದಲ್ಲಿ ಭುಂಜಿಸುತ್ತಾರೆ. ಆದ್ದರಿಂದ ಋಷಿಕಾರ್ಯವು ಮಧ್ಯಾಹ್ನದಲ್ಲಿ ಆಚರಿಸತಕ್ಕು ದಾಗಿದೆ. ಅಪರಾಹ್ನದಲ್ಲಿ ಪಿತೃಗಳು ಭುಂಜಿಸುವರು ಆದುದರಿಂದ ಶ್ರಾದ್ಧಾದಿ ಪಿತೃಕಾರ್ಯವನ್ನು ಅಪರಾಹ್ನದಲ್ಲಿ ಆಚರಿಸಬೇಕು. ಸಂಧ್ಯಾಕಾಲದಲ್ಲಿ ಗುಹ್ಯಕರು, ಪಿಶಾಚರು, ಯಕ್ಷರು ಮುಂತಾದವರು ಭುಂಜಿಸುವರು. ಆದುದರಿಂದ ಭೂತ, ಪ್ರೇತ, ಪಿಶಾಚಾದಿಗಳಿಗೆ ಬಲಿ ಮೊದಲಾದುವುಗಳನ್ನು ಸಾಯಂಕಾಲದಲ್ಲಿ ಕೊಡಬೇಕು.

೬–೭. ಆದುದರಿಂದ ದೇವತೆಗಳು ಮುಂತಾದ ಯಾರಿಗೂ ಭೋಜನಕಾಲ ವಲ್ಲದ ನಕ್ತದಲ್ಲಿ, ಯಾವಾಗಲೂ ಭೋಜನವನ್ನು ಆಚರಿಸಬೇಕು. ಪುರುಷನು ಹೋಮಮಾಡಿ ಉಳಿದ (ಸಂಸ್ಕರಿಸಲ್ಪಟ್ಟ) ಹವಿಷ್ಯಾನ್ನಭೋಜನ, ಸ್ನಾನ, ಸತ್ಯವಚನ, ಮಿತಾಹಾರ, ಅಗ್ನಿಕಾರ್ಯ, ಅಧಃಶಯನ ಇವುಗಳನ್ನು ಯಾವಾಗಲೂ ಆಚರಿಸಬೇಕು. ಅದರಲ್ಲೂ ನಕ್ತಭೋಜನ ಮಾಡುವವನಿಗೆ ಇವುಗಳು ಯಾವಾ ಗಲೂ ಅವಶ್ಯ. ಈರೀತಿ ಒಂದುವರ್ಷಕಾಲ ಆಚರಿಸಿ ಈ ವ್ರತವು ಪೂರ್ಣವಾದ

**ಅಗ್ನಿಕಾರ್ಯೋ ಹ್ಯಧಃಶಯ್ಯೋ ನಕ್ತಭೋಜೀ ಸದಾ ಭವೇತ್ ।**
**ಏವಂ ಸಂವತ್ಸರಸ್ಯಾಂತೇ ವ್ರತಪೂರ್ಣಸ್ಯ ಸರ್ಪಿಷಾ ॥**
**ಪೂರ್ಣಕುಂಭೋಽಪರಿ ಸ್ಥಾಪ್ಯ ಪೂಜಯೇಚ್ಚ ಸುಶೋಭನೇ ॥ ೭ ॥**

**ಕಪಿಲಾಪಂಚಗವ್ಯೇನ ಸ್ನಾಪಯೇನ್ಮೃನ್ಮಯಂ ಶಿವಂ ।**
**ಫಲಂ ಪುಷ್ಪಂ ಯವಕ್ಷೀರಂ ದಧಿ ದೂರ್ವಾಂಕುರಾಂಸ್ತಥಾ ॥ ೮ ॥**

**ತತ್ಕುಂಭಾನಾಂ ಜಲೋನ್ಮಿಶ್ರಮರ್ಘಮಷ್ಟಾಂಗಮುಚ್ಯತೆ ।**
**ಶಿರಸಾ ಧಾರಯಿತ್ವಾ ತು ಜಾನೂ ಕೃತ್ವಾ ಮಹೀತಲೇ ॥ ೯ ॥**

**ಮಹಾದೇವಾಯ ದಾತವ್ಯಂ ಗಂಧಪುಷ್ಪಂ ಯಥಾಕ್ರಮಂ ।**
**ಭಕ್ಷ್ಯೈದನ್ನೈರ್ಬಲಿಂ ಕೃತ್ವಾ ಪ್ರಣಮ್ಯ ಪರಮೇಶ್ವರಂ ॥ ೧೦ ॥**

**ಧೇನುಂ ವಾ ದಕ್ಷಿಣಾಂ ದದ್ಯಾದ್ವೃಷಂ ವಾಪಿ ಧುರುಂಧರಂ ।**
**ಶ್ರೋತ್ರಿಯಾಯ ದರಿದ್ರಾಯ ಕಲ್ಪವ್ರತವಿದಾಯ ಚ ॥**
**ಯೋ ದದಾತಿ ಶಿವೇ ಭಕ್ತ್ಯಾ ತಸ್ಯ ಪುಣ್ಯಫಲಂ ಶೃಣು ॥ ೧೧ ॥**

---

ಮೇಲೆ ಘೃತಪೂರ್ಣವಾದ ಕುಂಭದ ಮೇಲೆ ಶ್ರೀ ಶಿವನನ್ನು ಪ್ರತಿಷ್ಠಾಪಿಸಿ ಪೂಜಿಸಬೇಕು.

೮-೯. ಮೃಣ್ಮಯವಾದ ಶ್ರೀ ಪಾರ್ಥಿವಲಿಂಗಕ್ಕೆ ಕಪಿಲಗೋವಿನ ಪಂಚಗವ್ಯಾಭಿಷೇಕ ಮಾಡಬೇಕು. ಫಲ, ಪುಷ್ಪ, ಯವ, ಕ್ಷೀರ, ದಧಿ, ದೂರ್ವಾಂಕುರ ಇವುಗಳನ್ನಿಟ್ಟು ಆ ಕಲಶೋದಕ ಮಿಶ್ರಿತವಾಗಿ ಅಷ್ಟಾಂಗಾರ್ಘ್ಯವನ್ನು ಕೊಡಬೇಕು. ಈ ಅರ್ಘ್ಯ ಪ್ರದಾನಕಾಲದಲ್ಲಿ ತನ್ನ ಮೊಣಕಾಲುಗಳನ್ನು ಭೂಮಿಯ ಮೇಲೆ ಊರಿಕೊಳ್ಳಬೇಕು.

೧೦. ಉಪಚಾರ ಪೂಜಾಕ್ರಮವನ್ನನುಸರಿಸಿ ಶ್ರೀ ಮಹಾದೇವನಿಗೆ ಗಂಧಪುಷ್ಪಾದಿಗಳಿಂದ ಪೂಜಿಸಿ, ಭಕ್ಷ್ಯ, ಅನ್ನ ಇವುಗಳಿಂದ ಬಲಿಪ್ರದಾನ ಮಾಡಿ, ಶ್ರೀ ಪರಮೇಶ್ವರನಿಗೆ ಪ್ರಣಾಮಮಾಡಬೇಕು.

೧೧. ಶ್ರೋತ್ರಿಯನೂ, ದರಿದ್ರನೂ, ಈ ವ್ರತಕಲ್ಪವನ್ನು ತಿಳಿದವನೂ, ಆಗಿರುವ ಬ್ರಾಹ್ಮಣನಿಗೆ ಹಸುವನ್ನು ದಕ್ಷಿಣೆಯನ್ನಾಗಿ ಕೊಡಬೇಕು. ಅಥವಾ ಹೊರೆ ಹೊರಲು ಸಮರ್ಥವಾಗಿ ಪುಷ್ಟವಾಗಿ ಬೆಳೆದ ಉತ್ತಮ ವೃಷಭವನ್ನಾದರೂ ದಕ್ಷಿಣೆಗಾಗಿ ಸಮರ್ಪಿಸಬಹುದು. ಈರೀತಿ ದಾನಕೊಟ್ಟದ್ದರಿಂದ ಲಭಿಸುವ ಫಲವನ್ನು ಹೇಳುತ್ತೇನೆ ಕೇಳು.

ವಿಮಾನಮರ್ಕಪ್ರತಿಮಂ ಹಂಸಯುಕ್ತಮಲಂಕೃತಂ ।
ಆರೂಢೋಽಪ್ಸರಸಾಂ ಗೀತೈರ್ಯಾತಿ ರುದ್ರಾಲಯೇ ಸುಖಂ ॥ ೧೨ ॥

ಸ್ಥಿತ್ವಾ ರುದ್ರಸ್ಯ ಭವನೇ ವರ್ಷಕೋಟಿಶತತ್ರಯಂ ।
ಇಹ ಲೋಕೇ ನೃಪಶ್ರೇಷ್ಠ ಗ್ರಾಮಲಕ್ಷೇಶ್ವರೋ ಭವೇತ್ ॥ ೧೩ ॥

ಯಶ್ಚಾಷ್ಟಮೀಷು ಚ ಶಿವಾಸು ಚತುರ್ದಶೀಷು
ನಕ್ತಂ ಸಮಾಚರತಿ ಶಾಸ್ತ್ರವಿಧಾನದೃಷ್ಟಂ ।
ಸ್ವರ್ಗಾಂಗನಾಕಲರವಾಕುಲಿತಂ ವಿಮಾನ-
ಮಾರುಹ್ಯ ಯಾತಿ ಸ ಸುಖೇನ ಸುರೇಶಲೋಕಂ ॥ ೧೪ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರಸಂವಾದೇ ಷಣ್ಣವತಿತಮೋಽಧ್ಯಾಯಃ.

---

೧೨. ಈ ದಾತೃವು ಸೂರ್ಯನಂತೆ ಪ್ರಕಾಶಮಾನವೂ, ಹಂಸಯುಕ್ತವೂ, ಇತರ ವಸ್ತುಗಳಿಂದ ಶೋಭಿತವೂ ಆಗಿರುವ ವಿಮಾನದಲ್ಲಿ ಕುಳಿತು, ಅಪ್ಸರ ಸ್ತ್ರೀಗಣಸಹಿತನಾಗಿ ಸುಖದಿಂದ ಶಿವಲೋಕವನ್ನು ಸೇರುತ್ತಾನೆ.

೧೩. ಅಯ್ಯಾ ನೃಪೋತ್ತಮನೆ! ಅವನು ಆ ರುದ್ರಲೋಕದಲ್ಲಿ ಮುನ್ನೂರು ಕೋಟಿ ವರ್ಷಕಾಲ ವಾಸವಾಗಿದ್ದು, ಆಮೇಲೆ ಈ ಲೋಕದಲ್ಲಿ ಜನಿಸಿ, ಒಂದು ಲಕ್ಷ ಗ್ರಾಮಗಳಿಗೆ ಅಧಿಪತಿಯಾದ ರಾಜನಾಗುತ್ತಾನೆ.

೧೪. ಯಾವ ಪುರುಷನು ಅಷ್ಟಮೀ ತಿಥಿಗಳಲ್ಲೂ, ಮತ್ತು ಮಂಗಳಕರವಾದ ಚತುರ್ದಶೀ ತಿಥಿಗಳಲ್ಲೂ, ಶಾಸ್ತ್ರೋಕ್ತವಾದ ನಕ್ತಭೋಜನವನ್ನು ಆಚರಿಸುವನೋ, ಅಂತಹವನು ಸ್ವರ್ಗಲೋಕದ ದೇವಾಂಗನೆಯರ ಮಧುರಧ್ವನಿಸಹಿತವಾಗಿರುವ ಉತ್ತಮ ವಿಮಾನವನ್ನು ಏರಿ, ಸುಖದಿಂದ ಇಂದ್ರಲೋಕಕ್ಕೆ ಹೋಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ನಕ್ತವ್ರತವಿಧಾನ ವರ್ಣನೆಯೆಂಬ ತೊಂಭತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ಸಪ್ತನವತಿತಮೋಽಧ್ಯಾಯಃ

॥ ಶ್ರೀ ಕೃಷ್ಣ ಉವಾಚ ॥

**ಶೃಣುಷ್ವಾವಹಿತೋ ರಾಜನ್ನನ್ಯೇ ಮಾಹೇಶ್ವರಂ ವ್ರತಂ ।**
**ತ್ರಿಷು ಲೋಕೇಷು ವಿಖ್ಯಾತಂ ನಾಮ್ನಾ ಶಿವಚತುರ್ದಶೀ ॥ ೧ ॥**

**ಮಾರ್ಗಶೀರ್ಷತ್ರಯೋದಶ್ಯಾಂ ಸಿತಾಯಾಮೇಕಭುಙ್ನರಃ ।**
**ಮಾಸೇಷ್ವನ್ಯೇಷು ವಾ ರಾಜನ್ಪಾರ್ಥ ಏವಂ ಸ ಕಾರಯೇತ್ ॥ ೨ ॥**

---

### ತೊಂಭತ್ತೇಳನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ರಾಜನೇ ! ಏಕಾಗ್ರತೆಯಿಂದ ಶ್ರವಣಮಾಡು. ಮೂರು ಲೊಕಗಳಲ್ಲಿ ಪ್ರಖ್ಯಾತವೂ, ಶಿವಚತುರ್ದಶೀ ಎಂಬ ನಾಮಧೇಯವುಳ್ಳದೂ, ಪರಮೇಶ್ವರಾನುಗ್ರಹಸಂಪಾದಕವೂ ಆದ ಒಂದು ವ್ರತ ವನ್ನು ಹೇಳುತ್ತೇನೆ.

೨. ಅಯ್ಯಾ ರಾಜೇಂದ್ರನೆ ! ಮಾರ್ಗಶೀರ್ಷ ಮಾಸದ ಶುಕ್ಲಪಕ್ಷದ ತ್ರಯೋದಶಿಯಲ್ಲಿ, ಪುರುಷನು ಏಕಭುಕ್ತವನ್ನು ಮಾಡಬೇಕು. ಇತರ ಮಾಸ ಗಳಲ್ಲಿ ಚತುರ್ದಶಿಗೆ ಹಿಂದಿನ ತ್ರಯೋದಶೀದಿನ, ಈರೀತಿ ಏಕಭುಕ್ತವನ್ನು ಮಾಡಬಾರದು.

ಚತುರ್ದಶ್ಯಾಂ ನಿರಾಹಾರೋ ಸಮಭ್ಯರ್ಚ್ಯ ಮಹೇಶ್ವರಂ ।
ಸೌವರ್ಣಂ ವೃಷಭಂ ದತ್ವಾ ಭಕ್ಷ್ಯಾಮಿ ಚ ಪರೇsಹನಿ ॥ ೩ ॥

ಏವಂ ನಿಯಮಕೃತ್ಸುಪ್ತ್ವಾ ಪ್ರಾತರುತ್ಥಾಯ ಮಾನವಃ ।
ಕೃತಸ್ನಾನಜಪಃ ಪಶ್ಚಾದುಮಯಾ ಸಹ ಶಂಕರಂ ।
ಪೂಜಯೇತ್ಕುಸುಮೈಃ ಶುಕ್ಲೈರ್ಗಂಧಧೂಪಾನುಲೇಪನೈಃ ॥ ೪ ॥

ಪಾದೌ ನಮಃ ಶಿವಾಯೇತಿ ಶಿರಃ ಸರ್ವಾತ್ಮನೇ ನಮಃ ॥
ಲಲಾಟಂ ತು ತ್ರಿಣೇತ್ರಾಯ ನೇತ್ರಾಣಿ ಹರಯೇ ನಮಃ ॥ ೫ ॥

ಮುಖಮಿಂದುಮುಖಾಯೇತಿ ತಥೇಶಾನಾಯ ಚೋದರಂ ।
ಪಾರ್ಶ್ವೇ ಚಾನಂತಧರ್ಮಾಯ ಜ್ಞಾನರೂಪಾಯ ವೈ ಕಟಿಂ ॥ ೬ ॥

---

೩. ಆ ತ್ರಯೋದಶಿಯದಿನ ಏಕಭುಕ್ತವನ್ನು ಆಚರಿಸಿ, “ನಾನು ನಾಳೆ ಚತುರ್ದಶಿಯಲ್ಲಿ ನಿರಾಹಾರದಿಂದಿದ್ದು ಶ್ರೀ ಪರಮೇಶ್ವರನನ್ನು ಪೂಜಿಸಿ, ಸುವರ್ಣವೃಷಭವನ್ನು ಬ್ರಾಹ್ಮಣನಿಗೆ ದಾನಮಾಡಿ, ಆ ಮರುದಿನ ಪೂರ್ಣಿಮೆಯಲ್ಲಿ ಭೋಜನಮಾಡುತ್ತೇನೆ” ಎಂಬ ಅರ್ಥವುಳ್ಳ ಮಂತ್ರಪೂರ್ವಕ ಸಂಕಲ್ಪ ಮಾಡಬೇಕು.

೪. ವ್ರತಿಯು ಈ ರೀತಿಯಾಗಿ ನಿಯಮವನ್ನು ಪರಿಗ್ರಹಿಸಿ, ಆದಿನ ಶಯನಮಾಡಿ, ಮರುದಿನ ಬೆಳಿಗ್ಗೆ ಎದ್ದು, ಸ್ನಾನ ಜಪಾದಿ ನಿತ್ಯಕರ್ಮಗಳನ್ನು ಮಾಡಿದ ಮೇಲೆ, ಪಾರ್ವತೀಸಹಿತನಾದ ಶ್ರೀ ಪರಮೇಶ್ವರನನ್ನು ಶುಕ್ಲಪುಷ್ಪ ಗಂಧ ಅಕ್ಷತಾದಿಗಳಿಂದ ಪೂಜಿಸಬೇಕು.

೫. ಬಳಿಕ ಶಿವಾಯ ನಮಃ ಎಂದು ಹೇಳಿ ಶ್ರೀ ಶಿವನ ಪಾದಗಳನ್ನೂ, ಸರ್ವಾತ್ಮನೇ ನಮಃ ಎಂದು ಶಿರಸ್ಸನ್ನೂ, ತ್ರಿನೇತ್ರಾಯ ನಮಃ ಎಂದು ಲಲಾಟವನ್ನೂ, ಹರಯೇ ನಮಃ ಎಂದು ಹೇಳಿ ನೇತ್ರಗಳನ್ನೂ ಪೂಜಿಸಬೇಕು.

೬. ಹಾಗೆಯೇ ಇಂದುಮುಖಾಯ ನಮಃ ಎಂದು ಮುಖವನ್ನೂ, ಈಶಾನಾಯ ನಮಃ ಎಂದು ಉದರವನ್ನೂ, ಅನಂತಧರ್ಮಾಯ ನಮಃ ಎಂದು ಪಾರ್ಶ್ವಗಳನ್ನೂ, ಜ್ಞಾನರೂಪಾಯ ನಮಃ ಎಂದು ಕಟಿಪ್ರದೇಶವನ್ನೂ ಪೂಜಿಸಬೇಕು.

ಊರೂ ಚಾನಂತ್ಯವೈರಾಗ್ಯಂ ಜಾನುನೀ ಚಾರ್ಚಯೇದ್ಬುಧಃ ।
ಪ್ರಧಾನಾಯ ನಮೋ ಜಂಘೇ ಗುಲ್ಫೌ ವ್ಯೋಮಾತ್ಮನೇ ನಮಃ ॥ ೭ ॥

ವ್ಯೋಮವ್ಯೋಮಾತ್ಮರೂಪಾಯ ಪೃಷ್ಠಮಭ್ಯರ್ಚಯೇನ್ನರಃ ।
ನಮಃ ಸೃಷ್ಟ್ಯೈ ನಮಸ್ತುಷ್ಟ್ಯೈ ಪಾರ್ವತೀಂ ಚಾಪಿ ಪೂಜಯೇತ್ ॥ ೮ ॥

ತತಶ್ಚ ವೃಷಭಂ ಹೈಮಮುದಕುಂಭಸಮನ್ವಿತಂ ।
ಶುಕ್ಲಮಾಲ್ಯಾಂಬರಯುತಂ ಪಂಚರತ್ನವಿಭೂಷಿತಂ ॥ ೯ ॥

ಭಕ್ಷ್ಯೈರ್ನಾನಾವಿಧೈರ್ಯುಕ್ತಂ ಬ್ರಾಹ್ಮಣಾಯ ನಿವೇದಯೇತ್ ।
ಪ್ರೀಯತಾಂ ದೇವದೇವೋಽತ್ರ ಸದ್ಯೋಜಾತಃ ಪಿನಾಕಧೃಕ್ ॥ ೧೦ ॥

---

೭. ಅನಂತ್ಯಾಯ ನಮಃ ಎಂದು ಶ್ರೀಪರಮೇಶ್ವರನ ತೊಡೆಗಳನ್ನೂ, ವೈರಾಗ್ಯಾಯ ನಮಃ ಎಂದು ಜಾನುಗಳನ್ನೂ, ಪ್ರಧಾನಾಯ ನಮಃ ಎಂದು ಜಂಘೆಗಳನ್ನೂ, ವ್ಯೋಮಾತ್ಮನೇ ನಮಃ ಎಂದು ಹೇಳಿ ಗುಲ್ಫಗಳನ್ನೂ, ಪೂಜಿಸಬೇಕು.

೮. ಬಳಿಕ ವ್ಯೋಮವ್ಯೋಮಾತ್ಮರೂಪಾಯ ನಮಃ ಎಂಮ ಹೇಳಿ, ಈಶ್ವರನ ಪೃಷ್ಠವನ್ನು ಅರ್ಚಿಸಬೇಕು. ಹಾಗೆಯೇ ಪಾರ್ವತೀದೇವಿಯನ್ನು ಸೃಷ್ಟ್ಯೈ ನಮಃ, ತುಷ್ಟ್ಯೈ ನಮಃ, ಎಂದು ಹೇಳಿ ಅರ್ಚಿಸಬೇಕು.

೯–೧೦. ಅನಂತರ ಸುವರ್ಣ ವೃಷಭವನ್ನು ಬಿಳಿಯ ಬಟ್ಟೆಯಿಂದ ಆಚ್ಛಾದಿಸಿ, ಬಿಳಿಯಪುಷ್ಪಹಾರಯುತವೂ, ಪಂಚರತ್ನಾಲಂಕೃತವೂ ಆಗುವಂತೆ ಮಾಡಿ, ನಾನಾವಿಧವಾದ ಭಕ್ಷ್ಯಗಳ ಸಮೇತ ಉದಕುಂಭ (ಕಲಶ) ದಾನಕ್ಕೆ ಸಿದ್ಧ ಮಾಡಿಕೊಂಡು "ದೇವದೇವಃ ಪಿನಾಕಧೃಕ್ ಸದ್ಯೋಜಾತಃ ಪ್ರೀಯತಾಂ" (ದೇವತೆಗಳಿಗೆಲ್ಲಾ ದೇವನಾಗಿ ಪಿನಾಕವೆಂಬ ಧನುಸ್ಸನ್ನು ಧರಿಸಿರುವನಾದ ಶ್ರೀ ಪರಮೇಶ್ವನು ಸುಪ್ರೀತನಾಗಲಿ) ಎಂಬ ಅರ್ಥವುಳ್ಳ ಮಂತ್ರಹೇಳಿ ಬ್ರಾಹ್ಮಣನಿಗೆ ದಾನಕೊಬೇಕು.

ಪೃಷದಾಜ್ಯಂ ಚ ಸಂಪ್ರಾಶ್ಯ ಸ್ವಪ್ಯಾದ್ಭೂಮಾವುದಙ್ಮುಖಃ ।
ಪಂಚದಶ್ಯಾಂ ತತಃ ಪ್ರಾತಃ ಸರ್ವಮೇತತ್ಸಮಾಚರೇತ್ ॥ ೧೧ ॥

ತರ್ಪಯಿತ್ವಾ ತತೋಽನ್ನೇನ ಬ್ರಾಹ್ಮಣಾಞ್ಛಕ್ತಿತಃ ಶುಭಾನ್ ।
ಸುಹೃತ್ಸದಾತಿಸಹಿತಃ ಪಶ್ಚಾದ್ಭುಂಜೀತ ವಾಗ್ಯತಃ ॥ ೧೨ ॥

ತತಃ ಕೃಷ್ಣಚತುರ್ದಶ್ಯಾಮೇತತ್ಸರ್ವಂ ಸಮಾಚರೇತ್ ।
ಚತುರ್ದಶೀಷು ಸರ್ವಾಸು ಕುರ್ಯಾತ್ಪೂರ್ವವದರ್ಚನಂ ॥ ೧೩ ॥

ಯೇ ಚ ಮಾಸೇ ವಿಶೇಷಾಃ ಸ್ಯುಸ್ತಾನ್ನಿಬೋಧ ಕ್ರಮಾದಿಹ ।
ಮಾರ್ಗಶೀರ್ಷಾದಿಮಾಸೇಷು ಸ್ವಪನ್ನೇತಾನುದೀರಯೇತ್ ॥ ೧೪ ॥

---

೧೧ ಅನಂತರ ಆದಿನ ರಾತ್ರಿಯಲ್ಲಿ ಮೊಸರನ್ನೂ ತುಪ್ಪವನ್ನೂ ಪ್ರಾಶನೆ ಮಾಡಿ, ಬರಿಯ ನೆಲದಮೇಲೆ ಉತ್ತರಾಭಿಮುಖವಾಗಿ ಶಯನಮಾಡಬೇಕು. ಅನಂತರ ಮರುದಿನ ಎಂದರೆ ಪೌರ್ಣಿಮಾಸಿಯಲ್ಲಿ ಪ್ರಾತಃಕಾಲ ಸ್ನಾನ, ಜಪ, ಪೂಜಾದಿಗಳನ್ನು ಮಾಡಬೇಕು.

೧೨. ಅನಂತರ ಸ್ವಶಕ್ತ್ಯಾನುಸಾರವಾಗಿ ಶುಭಕರರಾದ ಬ್ರಾಹ್ಮಣರಿಗೆ ಭೋಜನ ಮಾಡಿಸಿ ತೃಪ್ತಿಪಡಿಸಿ ಬಳಿಕ ಮಿತ್ರರು ಭೃತ್ಯರು ಇವರ ಸಮೇತನಾಗಿ ಮೌನದಿಂದ ಭೋಜನಮಾಡಬೇಕು.

೧೩. ಅನಂತರ ಆ ಮಾರ್ಗಶೀರ್ಷಮಾಸದ ಕೃಷ್ಣಪಕ್ಷದ ಚತುರ್ದಶಿಯಲ್ಲೂ ಸಹ, ಈ ಹಿಂದೆ ಹೇಳಿದಂತೆ ಎಲ್ಲವನ್ನೂ ಆಚರಿಸಬೇಕು. ಹಾಗೆಯೇ ಮುಂದಿನ ತಿಂಗಳುಗಳ ಎಲ್ಲಾ ಚತುರ್ದಶಿಗಳಲ್ಲೂ ಹಿಂದಿನಂತೆಯೇ ಪೂಜೆ ಮಾಡಬೇಕು.

೧೪. ಅಯ್ಯಾ ರಾಜನೇ ! ಈ ವ್ರತವನ್ನು ಆಚರಿಸುವಾಗ ಆಯಾಯಾ ಮಾಸಗಳಲ್ಲಿ ಅನುಸರಿಸುವ ವಿಶೇಷವಿಧಾನವನ್ನು ಮಾರ್ಗಶೀರ್ಷಾದಿ ಮಾಸಕ್ರಮದಿಂದ ಹೇಳುತ್ತೇನೆ ಕೇಳು. ಮಾರ್ಗಶೀರ್ಷಾದಿ ಮಾಸಗಳಲ್ಲಿ ಚತುರ್ದಶೀದಿನ ರಾತ್ರಿಯಲ್ಲಿ ಶಯನಮಾಡುವಾಗ ಈ ಮುಂದೆ ಹೇಳುವ ನಾಮಗಳನ್ನು ಪಠಿಸಬೇಕು.

ಶಂಕರಾಯ ನಮಸ್ತುಭ್ಯಂ ನಮಸ್ತೇ ಕರವೀರಕ ।
ತ್ರ್ಯಂಬಕಾಯ ನಮಸ್ತುಭ್ಯಂ ಮಹೇಶ್ವರಮತಃ ಪರಂ ॥ ೧೫ ॥

ನಮಸ್ತೇಽಸ್ತು ಮಹಾದೇವ ಸ್ಥಾಣವೇ ಚ ತತಃ ಪರಂ ।
ನಮಃ ಪಶುಪತೇ ನಾಥ ನಮಸ್ತೇ ಶಂಭವೇ ನಮಃ ॥ ೧೬ ॥

ನಮಸ್ತೇ ಪರಮಾನಂದ ನಮಃ ಸೋಮಾರ್ಧಧಾರಿಣೇ ।
ನಮೋ ಭೀಮಾಯ ಚೋಗ್ರಾಯ ತ್ವಾಮಹಂ ಶರಣಂ ಗತಃ ॥ ೧೭ ॥

ಗೋಮೂತ್ರಂ ಗೋಮಯಂ ಕ್ಷೀರಂ ದಧಿ ಸರ್ಪಿಃ ಕುಶೋದಕಂ ।
ಪಂಚಗವ್ಯಂ ತಥಾ ಬಿಲ್ವಂ ಯವಾಗೂಕ್ಷೀರವಾರಿಜಂ ॥ ೧೮ ॥

ತಿಲಾಂಶ್ಚ ಕೃಷ್ಣಾನ್ವಿಧಿವತ್ಪ್ರಾಶ್ನೀಯಾತ್ಸಮುದಾಹೃತಾನ್ ।
ಪ್ರತಿಮಾಸಂ ಚತುರ್ದಶ್ಯಾಮೇಕೈಕಂ ಪ್ರಾಶನಂ ಸ್ಮೃತಂ ॥ ೧೯ ॥

---

೧೫-೧೭. ಮಾರ್ಗಶಿರ ಮೊದಲ್ಗೊಂಡು ಪ್ರತಿಯೊಂದು ತಿಂಗಳುಗಳಲ್ಲಿಯೂ ಈ ಮುಂದೆ ಹೇಳುವಂತೆಯೇ ಒಂದೊಂದು ನಾಮಮಂತ್ರವನ್ನು ಶಯನಕಾಲದಲ್ಲಿ ಪಠಿಸತಕ್ಕದ್ದು. ಮಾರ್ಗಶೀರ್ಷ ಮಾಸದಲ್ಲಿ ಶಂಕರಾಯ ನಮಃ ಎಂದೂ, ಪುಷ್ಯ ಮಾಸದಲ್ಲಿ ಕರವೀರಕಾಯ ನಮಃ ಎಂದೂ, ಮಾಘ ಮಾಸದಲ್ಲಿ ತ್ರ್ಯಂಬಕಾಯ ನಮಃ ಎಂದೂ, ಫಾಲ್ಗುಣ ಮಾಸದಲ್ಲಿ ಮಹೇಶ್ವರಾಯ ನಮಃ ಎಂದೂ, ಚೈತ್ರ ಮಾಸದಲ್ಲಿ ಮಹಾದೇವಾಯ ನಮಃ ಎಂದೂ, ವೈಶಾಖ ಮಾಸದಲ್ಲಿ ಸ್ಥಾಣವೇ ನಮಃ ಎಂದೂ, ಜ್ಯೇಷ್ಠ ಮಾಸದಲ್ಲಿ ಪಶುಪತಯೇ ನಮಃ ಎಂದೂ, ಆಷಾಢ ಮಾಸದಲ್ಲಿ ಶಂಭವೇ ನಮಃ ಎಂದೂ, ಶ್ರಾವಣ ಮಾಸದಲ್ಲಿ ಪರಮಾನಂದಾಯ ನಮಃ ಎಂದೂ, ಭಾದ್ರಪದ ಮಾಸದಲ್ಲಿ ಸೋಮಾರ್ಧಧಾರಿಣೇ ನಮಃ ಎಂದೂ, ಆಶ್ವಯುಜ ಮಾಸದಲ್ಲಿ ಭೀಮಾಯ ನಮಃ ಎಂದೂ, ಕಾರ್ತಿಕ ಮಾಸದಲ್ಲಿ ಉಗ್ರಾಯ ನಮಃ ಎಂದೂ ಉಚ್ಚರಿಸಬೇಕು.

೧೮-೧೯. ಹೀಗೆ ನಾಮಸ್ಮರಣೆಮಾಡುವುದಲ್ಲದೆ ಗೋಮೂತ್ರ (ಗಂಜಲ), ಗೋಮಯ (ಸಗಣಿ), ಕ್ಷೀರ (ಹಾಲು), ದಧಿ (ಮೊಸರು), ಸರ್ಪಿ (ತುಪ್ಪ), ದರ್ಭೋದಕ, ಪಂಚಗವ್ಯ, ಬಿಲ್ವ, ಯವಾಗು (ಗಂಜಿ), ಕ್ಷೀರ, ಕಮಲ, ಕಪ್ಪು ಎಳ್ಳು ಈ ಹನ್ನೆರಡು ಪದಾರ್ಥಗಳಲ್ಲಿ ಒಂದೊಂದನ್ನು ಮಾರ್ಗಶೀರ್ಷ ಮಾಸ ಮೊದಲ್ಗೊಂಡು ಒಂದೊಂದು ಮಾಸದಲ್ಲೂ ವಿಧಿವತ್ತಾಗಿ ಚತುರ್ದಶಿಯ ರಾತ್ರಿಯಲ್ಲಿ ಪ್ರಾಶನೆಮಾಡಬೇಕು.

ಮಂದಾರೈರ್ಮಾಲತೀಭಿಶ್ಚ ತಥಾ ಧತ್ತೂರಕೈರಪಿ ।
ಸಿಂದುವಾರೈರಶೋಕೈಶ್ಚ ಮಲ್ಲಿಕಾತುಬ್ಜಪಾಟಲೈಃ ॥ ೨೦ ॥

ಅರ್ಕಪುಷ್ಪೈಃ ಕದಂಬೈಶ್ಚ ಶತಪತ್ರೈಸ್ತಥೋತ್ಪಲೈಃ ।
ಕರವೀರೈಶ್ಚ ರಾಜೇಂದ್ರ ತಥಾ ಪೂಜ್ಯೋ ಮಹೇಶ್ವರಃ ॥ ೨೧ ॥

ಏಕೈಕೇನ ಚತುರ್ದಶ್ಯಾಮರ್ಚಯೇತ್ಪಾರ್ವತೀಪತಿಂ ।
ಪುನಶ್ಚ ಕಾರ್ತಿಕೇ ಮಾಸಿ ಸಂಪ್ರಾಪ್ತೇ ತರ್ಪಯೇದ್ದ್ವಿಜಾನ್ ॥ ೨೨ ॥

ಅನ್ನೈರ್ನಾನಾವಿಧೈರ್ಭಕ್ಷ್ಯೈರ್ವಸ್ತ್ರೈರ್ಮಾಲ್ಯವಿಭೂಷಣೈಃ ।
ಕೃತ್ವಾ ನೀಲಂ ವೃಷೋತ್ಸರ್ಗಂ ಶ್ರುತ್ಯುಕ್ತವಿಧಿನಾ ನರಃ ॥ ೨೩ ॥

---

೨೦-೨೧. ಅಯ್ಯಾ ರಾಜೇಂದ್ರನೇ ! ಹಾಗೆಯೇ ಶ್ರೀ ಪರಮೇಶ್ವರನಿಗೆ ಈ ಮಾರ್ಗಶೀರ್ಷಾದಿ ಮಾಸಗಳಲ್ಲಿ ಕ್ರಮದಿಂದ ಮಂದಾರಪುಷ್ಪ, ಮಲ್ಲಿಗೆ ಹೂವು, ದತ್ತೂರಪುಷ್ಪ, ಸಿಂದವಾರಪುಷ್ಪ (ಲಕ್ಕೀಹೂವು), ಅಶೋಕಪುಷ್ಪ, ದುಂಡುಮಲ್ಲಿಗೆಹೂವು, ಪಾದರೀಹೂವು, ಅರ್ಕಪುಷ್ಪ (ಎಕ್ಕದಹೂವು), ಕದಂಬ ಪುಷ್ಪ, ಕಮಲಪುಷ್ಪ, ನೈದಿಲೆ, ಕರವೀರಪುಷ್ಪ, ಈ ಪುಷ್ಪಗಳು ಪೂಜೆಗೆ ಉಕ್ತವಾಗಿವೆ.

೨೨. ಕ್ರಮವಾಗಿ ಈ ಹಿಂದೆ ಹೇಳಿದ ಹನ್ನೆರಡು ಜಾತಿಯ ಪುಷ್ಪಗಳಲ್ಲಿ ಒಂದೊಂದು ಜಾತಿಯ ಪುಷ್ಪಗಳನ್ನು ಮಾರ್ಗಶಿರ ಮಾಸದಿಂದ ಆರಂಭಿಸಿ ಪ್ರತಿತಿಂಗಳಿನ ಚತುರ್ದಶೀ ದಿನ ಶ್ರೀ ಪರಮೇಶ್ವರನಿಗೆ ಪೂಜಿಸಬೇಕು.

೨೩. ಪ್ರಾರಂಭಿಸಿದಾಗಿನಿಂದ ವರ್ಷಾಂತವಾದ ಕಾರ್ತೀಕ ಮಾಸವು ಪ್ರಾಪ್ತವಾದಾಗ ಈ ವ್ರತಾನುಷ್ಠಾನಮಾಡುವ ಪುರುಷನು ಶಾಸ್ತ್ರೋಕ್ತರೀತಿ ಯಿಂದ ಶ್ರೀ ಶಿವಪ್ರೀತ್ಯರ್ಥವಾಗಿ ಕಪ್ಪು ವೃಷಭವನ್ನು ಉತ್ಸರ್ಗಮಾಡಿ ವಸ್ತ್ರ, ಮಾಲ್ಯ, ಭೂಷಣಾದಿಗಳನ್ನು ಬ್ರಾಹ್ಮಣರಿಗೆ ಕೊಟ್ಟು ವಿವಿಧ ಅನ್ನ ಮತ್ತು ಭಕ್ಷ್ಯಾದಿಗಳಿಂದ ಅವರನ್ನು ತೃಪ್ತಿಪಡಿಸಬೇಕು.

ಉಮಾಮಹೇಶ್ವರಂ ಹೈಮಂ ವೃಷಭಂ ಚ ಗವಾ ಸಹ ।
ಮುಕ್ತಾಫಲಾಷ್ಟಕಯುತಂ ಸಿತನೇತ್ರಪಟಾವೃತಂ ॥ ೨೪ ॥

ಸರ್ವೋಪಸ್ಕರಯುಕ್ತಾಯಾಂ ಶಯ್ಯಾಯಾಂ ವಿನಿವೇದಯೇತ್ ।
ಉದಕುಂಭಯುತಂ ತದ್ವಚ್ಛಾಲಿತಂಡುಲಸಂಯುತಂ ॥ ೨೫ ॥

ಸ್ಥಾಪ್ಯ ವಿಪ್ರಾಯ ಶಾಂತಾಯ ವೇದವ್ರತಪರಾಯ ಚ ।
ಜ್ಯೇಷ್ಠಸಾಮವಿದೇ ದೇಯಂ ನ ಚ ಕುರ್ವಂತಿ ತೇ ಕ್ವಚಿತ್ ॥ ೨೬ ॥

ಅವ್ಯಂಗಾಯ ಚ ಸೌಮ್ಯಾಯ ಸದಾ ಕಲ್ಯಾಣಕಾರಿಣೇ ।
ಸಪತ್ನೀಕಾಯ ಸಂಪೂಜ್ಯ ಮಾಲ್ಯವಸ್ತ್ರವಿಭೂಷಣೈಃ ॥ ೨೭ ॥

---

೨೪–೨೫. ಎಂಟು ಮುತ್ತುಗಳಿಂದ ಕೂಡಿದುದೂ, ಸೂಕ್ಷ್ಮತಂತು ನಿರ್ಮಿತವಾದ ವಸ್ತ್ರಗಳನ್ನು ಸುತ್ತಿದುದೂ, ಗೋಸಹಿತವೂ ಆಗಿರುವ ಭಂಗಾರದ ವೃಷಭ, ಭಂಗಾರದ ಉಮಾಮಹೇಶ್ವರ ಈ ಪ್ರತಿಮೆಮಾಡಿಸಿ, ಉದಕುಂಭ ಶಾಲಿತಂಡುಲ ಇವುಗಳ ಸಮೇತ ಆ ಪ್ರತಿಮೆಗಳನ್ನು ದಿಂಬು ಮೊದಲಾದ ಶಯನದ ಸರ್ವ ಉಪಕರಣಗಳಿಂದ ಸಹಿತವಾದ ಹಾಸಿಗೆಯಲ್ಲಿ ಸ್ಥಾಪಿಸಬೇಕು.

೨೬–೨೭. ಈ ಪ್ರಕಾರವಾಗಿ ಶಯ್ಯೆಯಲ್ಲಿ ಆ ಉಮಾಮಹೇಶ್ವರ ಪ್ರತಿಮೆಗಳನ್ನು ಸ್ಥಾಪಿಸಿದ ಮೇಲೆ ಶಾಂತನೂ, ವೇದೋಕ್ತಕರ್ಮಾನುಷ್ಠಾನನಿರತನೂ, ಸಾಮವೇದವನ್ನು ಅಧ್ಯಯನ ಮಾಡಿದವನೂ, ಅಂಗಹೀನನಲ್ಲದವನೂ, ಸೌಮ್ಯನೂ, ಯಾವಾಗಲೂ ಮಂಗಳ ಕಾರ್ಯಗಳನ್ನು ಆಚರಿಸುವವನೂ, ಸಪತ್ನೀಕನೂ, ಆದ ಬ್ರಾಹ್ಮಣನಿಗೆ ವಸ್ತ್ರ ಮಾಲ್ಯಾಲಂಕಾರಾದಿಗಳಿಂದ ಪೂಜೆಮಾಡಿ, ಆಸನೋಪಸ್ಕರ ಶಯ್ಯಾಸಹಿತವಾಗಿ ಶ್ರೀ ಉಮಾಮಹೇಶ್ವರ ಪ್ರತಿಮೆಗಳನ್ನು ದಾನಮಾಬೇಕು. ಸಾಮವೇದಜ್ಞನಲ್ಲದವನಿಗೆ ಎಂಥಸಂದರ್ಭದಲ್ಲೂ ಈ ದಾನ ಮಾಡಬಾರದು. (ಸಾಮವೇದಕ್ಕೆ ಸರ್ವವೇದೋತ್ತಮತ್ವವು "ವೇದಾನಾಂ ಸಾಮವೇದೋಽಹಂ" ಎಂಬ ಶ್ರೀ ಕೃಷ್ಣನ ಗೀತಾವಚನದಿಂದ ಸಿದ್ಧವಾಗುವುದು.) ಈ ದಾನವಿಷಯದಲ್ಲಿ ಯಜಮಾನನು ಲೋಭಮಾಡಬಾರದು. ಹಾಗೆಮಾಡಿದರೆ ಅವನು ಅಧಃ ಪತನ ಹೊಂದುತ್ತಾನೆ.

ನ ವಿತ್ತಶಾಠ್ಯಂ ಕುರ್ವೀತ ಕುರ್ವರ್ಲೋಭಾತ್ಪತತ್ಯಧಃ ।
ಅನೇನ ವಿಧಿನಾ ಯಸ್ತು ಕುರ್ಯಾಚ್ಛಿವಚತುರ್ದಶೀಂ ॥
ಸೋಽಶ್ವಮೇಧಸಹಸ್ರಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೨೮ ॥

ಬ್ರಹ್ಮಹತ್ಯಾದಿಕಂ ಪಾಪಂ ಯದತ್ರಾಮುತ್ರ ವಾ ಕೃತಂ ।
ಪಿತೃಭಿರ್ಮಾತೃಭಿರ್ವಾಪಿ ತತ್ಸರ್ವಂ ನಾಶಮಾಪ್ನುಯಾತ್ ॥ ೨೯ ॥

ದೀರ್ಘಾಯುರಾರೋಗ್ಯಕುಲಾಭಿವೃದ್ಧಿ
ರತ್ರಾಕ್ಷಯಾನ್ಯತ್ರ ಚತುರ್ಭುಜತ್ವಂ ।
ಗಣಾಧಿಪತ್ಯಂ ದಿವಿ ಕಲ್ಪಕೋಟೀಃ
ಸ್ವರ್ಗೇ ಉಷಿತ್ವಾ ಪದಮೇತಿ ಶಂಭೋಃ ॥ ೩೦ ॥

---

೨೮. ಈ ಕ್ರಮದಿಂದ ಯಾವ ಪುರುಷನು ಈ ಶಿವಚತುರ್ದಶೀ ವ್ರತವನ್ನು ಆಚರಿಸುವನೋ, ಅಂತಹವನು ಸಹಸ್ರ ಅಶ್ವಮೇಧಯಾಗಾಚರಣದಿಂದ ಬರುವ ಫಲವನ್ನು ಹೊಂದುತ್ತಾನೆ.

೨೯. ಮತ್ತು ಅವನು ಈ ಜನ್ಮದಲ್ಲಾಗಲಿ ಪೂರ್ವಜನ್ಮಗಳಲ್ಲಿಯಾಗಲಿ ಬ್ರಹ್ಮಹತ್ಯಾದಿ ಮಹಾಪಾಪವನ್ನು ಆಚರಿಸಿದ್ದಾಗ್ಯೂ, ಆ ಎಲ್ಲ ಪಾಪವೂ ಈ ವ್ರತಾನುಷ್ಠಾನದಿಂದ ನಾಶವಾಗುತ್ತದೆ. ಅವನ ತಾಯಿತಂದೆಗಳು ಅಂತಹ ಪಾಪವನ್ನು ಮಾಡಿದ್ದರೂ ಅದೂ ಸಹ ಇವನು ವ್ರತಾನುಷ್ಠಾನಮಾಡಿದ್ದರಿಂದ ನಾಶವಾಗುತ್ತದೆ.

೩೦. ಮತ್ತು ಅವನು ಈ ಲೋಕದಲ್ಲಿ ದೀರ್ಘಾಯುರಾರೋಗ್ಯ, ಅಕ್ಷಯ ವಂಶಾಭಿವೃದ್ಧಿ. ಇತ್ಯಾದಿ ಫಲಗಳನ್ನು ಪಡೆದು, ಪರಲೋಕದಲ್ಲಿ ದೇವತೆಗಳಂತೆ ಚತುರ್ಭುಜನಾಗಿ ಸ್ವರ್ಗದಲ್ಲಿ ಕೋಟಿಕಲ್ಪಗಳವರೆಗೆ ದೇವ ಗಣಾಧಿಪತ್ಯವನ್ನು ಹೊಂದಿ, ಅಲ್ಲಿ ವಾಸಮಾಡಿ ಕೊನೆಗೆ ಶಿವಲೋಕಕ್ಕೆ ಹೋಗುತ್ತಾನೆ.

ನ ಬೃಹಸ್ಪತಿರಪ್ಯಲಂ ವ್ರತಸ್ಯ
ಫಲಮಿಂದ್ರೋ ನ ಪಿತಾಮಹೋಽಪಿ ವಕ್ತುಂ ।
ನ ಚ ಸಿದ್ಧಗಣೋಽಪ್ಯಲಂ ನ ವಾಹಂ
ಯದಿ ಜಿಹ್ವಾಯುತಕೋಟ್ಯಪೀಹ ವಕ್ತ್ರೇ ॥ ೩೧ ॥

ಭವತ್ಯಮರವಲ್ಲಭಃ ಪಠತಿ ಯಃ ಸ್ಮರೇದ್ವಾ ಸದಾ
ಶೃಣೋತ್ಯಪಿ ವಿಮತ್ಸರಃ ಸಕಲಪಾಪನಿರ್ಮೋಚನೀಂ ।
ಇಮಾಂ ಶಿವಚತುರ್ದಶೀಮಮರಕಾಮಿನೀಕೋಟಯಃ
ಸ್ತುವಂತಿ ದಿವಿ ನಂದಿತಾಃ ಕಿಮು ಸಮಾಚರೇದ್ಯಃ ಸದಾ ॥ ೩೨ ॥

ಯಾ ಪಾರ್ಥ ನಾರೀ ಕುರುತೇಽತಿಭಕ್ತ್ಯಾ
ಭರ್ತಾರಮಾಪೃಚ್ಛ್ಯ ಶುಭಂ ಗುರುಂ ವಾ ।

---

೩೧. ಈ ವ್ರತದ ಫಲಗಳನ್ನು ಹೇಳುವುದಕ್ಕೆ ಬೃಹಸ್ಪತಿಯೂ ಸಹ ಸಮರ್ಥನಲ್ಲ. ಅಥವಾ ಇಂದ್ರ ಬ್ರಹ್ಮ ಸಿದ್ಧಸಮೂಹ ಇವರಾರಿಗೂ ಇದರ ಫಲಗಳನ್ನು ಹೇಳಲು ಸಾಧ್ಯವಿಲ್ಲ. ನನಗೆ ಕೋಟಿಸಂಖ್ಯಾಕವಾದ ನಾಲಿಗೆಗಳು ಇದ್ದಿದ್ದರೂ ಇದರ ಫಲವನ್ನು ಹೇಳಿ ಪೂರೈಸಲು ಸಾಧ್ಯವಾಗುತ್ತಿರಲಿಲ್ಲ.

೩೨. ಸಕಲಪಾಪನಾಶಕವಾದ ಈ ಶಿವಚತುರ್ದಶೀ ವ್ರತಗ್ರಂಥವನ್ನು ಯಾವ ಪುರುಷನು ಪಠಿಸುವನೋ, ಮತ್ತು ಯಾವಾತನು ಇದನ್ನು ಯಾವಾಗಲೂ ಧ್ಯಾನಿಸುತ್ತಾನೋ, ಅಥವಾ ಮಾತ್ಸರ್ಯಾದಿ ದೋಷರಹಿತನಾಗಿ ಶ್ರವಣ ಮಾಡುವನೋ, ಅಂತಹವನು ದೇವತೆಗಳಿಗೆ ಪ್ರಿಯನಾಗುತ್ತಾನೆ. ಮತ್ತು ಈ ವ್ರತವನ್ನು ಸ್ವರ್ಗದಲ್ಲಿ ಕೋಟಿಸಂಖ್ಯಾಕರಾದ ದೇವತಾಸ್ತ್ರೀಯರು ಸಂತೋಷದಿಂದ ಹೊಗಳುತ್ತಾರೆ. ಹೀಗಿರುವಾಗ ಇದನ್ನು ಯಾವಾಗಲೂ ಆಚರಿಸುವವನ ವಿಷಯದಲ್ಲಿ ಹೇಳಬೇಕಾದ್ದಿನ್ನೇನು ?

೩೩. ಅಯ್ಯಾ ಕುಂತೀಪುತ್ರನೇ ! ತನ್ನ ಪತಿಯ ಅನುಜ್ಞೆ ಪಡೆದಾಗಲಿ ಅಥವಾ ತನ್ನ ಶುಭುಗುರುಗಳ ಅನುಜ್ಞೆಯನ್ನು ಪಡೆದುಕೊಂಡಾಗಲಿ ಇದನ್ನು

ಸಾಪಿ ಪ್ರಸಾದಾತ್ಪರಮೇಶ್ವರಸ್ಯ
ಪರಂಪದಂ ಯಾತಿ ಪಿನಾಕಪಾಣೇಃ ॥ ೩೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಶಿವಚತುರ್ದಶೀವ್ರತವರ್ಣನಂ ನಾಮ ಸಪ್ತನವತಿತಮೋಽಧ್ಯಾಯಃ.



---

ಆಚರಿಸಿದ ಸಾಧ್ವಿಯು ಶ್ರೀ ಪರಮೇಶ್ವರನ ಪ್ರಸಾದದಿಂದ ಪಿನಾಕಪಾಣಿಯಾದ ಶ್ರೀ ಶಿವನ ಉತ್ತಮವಾದ ಲೋಕಕ್ಕೆ ಹೋಗುತ್ತಾಳೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಶ್ರೀ ಶಿವ ಚತುರ್ದಶೀ ವ್ರತವರ್ಣನೆಯೆಂಬ ತೊಂಭತ್ತೇಳನೆಯ ಅಧ್ಯಾಯವು ಮುಗಿಸುದು.



|| ಶ್ರೀ ||

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಅಷ್ಟನವತಿತಮೋಽಧ್ಯಾಯಃ

|| ಶ್ರೀ ಕೃಷ್ಣ ಉವಾಚ ||

**ತಥಾ ಸರ್ವಫಲತ್ಯಾಗಮಾಹಾತ್ಮ್ಯಂ ಶೃಣು ಭಾರತ ।**
**ಯದಕ್ಷಯಂ ಪರೇ ಲೋಕೇ ಸರ್ವಕಾಮಫಲಪ್ರದಂ || ೧ ||**

**ಮಾರ್ಗಶೀರ್ಷೇ ಶುಭೇ ಮಾಸಿ ಚತುರ್ದಶ್ಯಾಂ ಧೃತವ್ರತಃ ।**
**ಆರಂಭೇ ಶುಕ್ಲಪಕ್ಷಸ್ಯ ಕೃತ್ವಾ ಬ್ರಾಹ್ಮಣವಾಚನಂ || ೨ ||**

---

### ತೊಂಭತ್ತೆಂಟನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಭರತವಂಶಜನೇ ! ಇನ್ನು ಮುಂದೆ ಸರ್ವಫಲತ್ಯಾಗ ವ್ರತಮಹಾತ್ಮೆಯನ್ನು ಹೇಳುತ್ತೇನೆ ಶ್ರವಣಮಾಡು. ಈ ವ್ರತವು ಪರಲೋಕದಲ್ಲಿ ಅಕ್ಷಯ ಭೋಗವನ್ನು ಕೊಡತಕ್ಕುದೂ, ಈ ಲೋಕದಲ್ಲಿ ಸರ್ವಾರ್ಥಗಳನ್ನು ಸಾಧಿಸಿಕೊಡುವುದೂ ಆಗಿದೆ

೨. ಈ ವ್ರತವನ್ನು ಪ್ರಾರಂಭಿಸುವಾಗ ಮಾರ್ಗಶೀರ್ಷಮಾಸದ ಶುಕ್ಲಪಕ್ಷದ ಚತುರ್ದಶಿಯಲ್ಲಿ ನಿಯಮ ಸ್ವೀಕಾರ ಮಾಡಿ, ಬ್ರಾಹ್ಮಣನಿಂದ ಈ ವ್ರತವಾಚನವನ್ನು ಮಾಡಿಸಿ ಪ್ರಾರಂಭಿಸಬೇಕು. “ಮಾಸಾನಾಂ ಮಾರ್ಗಶೀರ್ಷೋಽಸ್ಮಿ’’ ಎಂದು ಗೀತೆಯಲ್ಲಿ ಮಾರ್ಗಶೀರ್ಷಮಾಸಕ್ಕೆ ಉತ್ಕರ್ಷವನ್ನು ಹೇಳಿದೆ.

ಅನ್ಯೇಷ್ವಪಿ ತು ಮಾಸೇಷು ಅಷ್ಟಮ್ಯಾಂ ನರಸತ್ತಮ ।
ಸದಕ್ಷಿಣಾಪಾಯಸೇನ ಶಕ್ತಿತಃ ಪೂಜಯೇದ್ದ್ವಿಜಾನ್ ॥ ೩ ॥

ಅಷ್ಟಾದಶಾನಾಂ ಧಾನ್ಯಾನಾಮನ್ಯತ್ರ ಫಲಮೂಲಕಂ ।
ವರ್ಜಯೇದಬ್ದಮೇಕಂ ತು ವಿಧಿನೌಷಧಕಾರಕಂ ॥ ೪ ॥

ತತಃ ಸಂವತ್ಸರಸ್ಯಾಂತೇ ಚತುರ್ದಶ್ಯಷ್ಟಮೀಷು ಚ ।
ಅಶಕ್ತಶ್ಚ ವ್ರತಂ ಕರ್ತುಂ ಸಹಸ್ಯೈವ ಪ್ರಮುಚ್ಯತೆ ॥ ೫ ॥

ಸೌವರ್ಣಂ ಕಾರಯೇದ್ರುದ್ರಂ ಧರ್ಮರಾಜಂ ತಥೈವ ಚ ।
ಕೂಷ್ಮಾಂಡಂ ಮಾತುಲುಂಗಂ ಚ ವೃಂತಾಕಂ ಪನಸಂ ತಥಾ ॥ ೬ ॥

---

೩. ಅಯ್ಯಾ ರಾಜನೇ ! ಮಾರ್ಗಶೀರ್ಷ ಮಾಸವಲ್ಲದೆ ಇತರ ಮಾಸಗಳ ಚತುರ್ದಶಿ ಮತ್ತು ಅಷ್ಟಮಿ ತಿಥಿಯಲ್ಲಿ ಸ್ವಶಕ್ತ್ಯಾನುಸಾರವಾಗಿ ಬ್ರಾಹ್ಮಣರಿಗೆ ಪೂಜೆಮಾಡಿ, ದಕ್ಷಿಣೆ ಕೊಟ್ಟು, ಪಾಯಸ ಭೋಜನ ಮಾಡಿಸಬೇಕು.

೪. ಈ ವ್ರತಾನುಷ್ಠಾನಮಾಡುವಾತನು ಈ ವ್ರತ ಪ್ರಾರಂಭಮಾಡಿ ಒಂದು ವರ್ಷವಾಗುವವರೆಗೆ ಓಷಧಕಾರವಾದ ಫಲಮೂಲಗಳನ್ನು ಮಾತ್ರ ತಿನ್ನಬೇಕಲ್ಲದೆ ಹದಿನೆಂಟು ವಿಧದ ಧಾನ್ಯಗಳನ್ನು ಆ ವರ್ಷವೆಲ್ಲಾ ವರ್ಜ್ಯಮಾಡಬೇಕು.

೫. ಹೀಗೆ ಒಂದು ವರ್ಷವಾದ ಮೇಲೆ ಪುನಃ ಈ ವ್ರತವನ್ನು ಚತುರ್ದಶೀ ಮತ್ತು ಅಷ್ಟಮಿಗಳಲ್ಲಿ ಆಚರಿಸುವುದಕ್ಕೆ ಸಾಮರ್ಥ್ಯ ಸಾಲದೆ, ಆಚರಿಸದಿದ್ದರೂ ಆ ಒಂದು ವರ್ಷದ ವ್ರತಾಚರಣೆಯಿಂದಲೇ, ಅವನು ಜಾಗ್ರತೆಯಾಗಿ ಮುಕ್ತನಾಗುತ್ತಾನೆ.

೬–೭. ಈ ವ್ರತದಲ್ಲಿ ರುದ್ರ ಮತ್ತು ಯಮಧರ್ಮರಾಜ ಇವರ ಪ್ರತಿಮೆಗಳನ್ನು ಭಂಗಾರದಲ್ಲಿ ಮಾಡಿಸಬೇಕು. ಮತ್ತು ಕೂಷ್ಮಾಂಡ (ಬೂದಗುಂಬಳಕಾಯಿ), ಮಾದಲಫಲ, ಬದನೇಕಾಯಿ, ಹಲಸಿನಕಾಯಿ, ಮಾವಿನಹಣ್ಣು, ಆಮ್ರಾತಕ (ಅಮಟೆಹಣ್ಣು), ಕಪಿತ್ಥ (ಬೇಲದಹಣ್ಣು), ಕಲಿಂಗ (ಕೊಡಶಿಗೆ ಹಣ್ಣು), ಸೌತೇಕಾಯಿ, ಶ್ರೀಫಲ (ಬಿಲ್ವಪತ್ರದಹಣ್ಣು), ಆಲದಹಣ್ಣು, ಅಶ್ವತ್ಥಫಲ (ಅರಳೀಹಣ್ಣು), ನಿಂಬೇಹಣ್ಣು, ಬಾಳೆಹಣ್ಣು, ಎಗಚೀಫಲ, ದಾಳಿಂಬೆ

**ಆಮ್ರಾಮ್ರಾತಕಪಿತ್ಥಂ ಚ ಕಲಿಂಗಂ ಸೋರ್ವಾರುಕಂ ।**
**ಶ್ರೀಫಲಂ ಸವಟಾಶ್ವತ್ಥಂ ಜಂಬೀರಂ ಕದಳೀಫಲಂ ॥ ೭ ॥**

**ಬದರಂ ದಾಡಿಮಂ ಶಕ್ತ್ಯಾ ಕಾರ್ಯಾಣ್ಯೇತಾನಿ ಷೋಡಶ ।**
**ಮೂಲಕಾಮಲಕಂ ಜಂಬೂಪುಷ್ಕರಂ ಕರಮರ್ದಕಂ ॥ ೮ ॥**

**ಉದುಂಬರಂ ನಾಲಿಕೇರಂ ದ್ರಾಕ್ಷಾ ಚ ಬೃಹತೀದ್ವಯಂ ।**
**ಕಾರವೆಲ್ಲೀ ಕಾಕತುಂಡೀ ಕರೀರಕುಟಜಂ ಶಮೀ ॥ ೯ ॥**

**ರೌಪ್ಯಾಣಿ ಕಾರಯೇಚ್ಛಕ್ತ್ಯಾ ಫಲಾನೀಮಾನಿ ಷೋಡಶ ।**
**ತಾಮ್ರಂ ತಾಲಫಲಂ ಕುರ್ಯಾದಗಸ್ತ್ಯಫಲಮೇವ ಚ ॥ ೧೦ ॥**

**ಪಿಂಡೀರಕಂ ಚ ಖರ್ಜೂರಂ ತಥಾ ಸೂರಣಕಂದಕಂ ।**
**ಪನಸಂ ಲಕುಚಂ ಚೈವ ಕರ್ಕಟೀಂ ತಿಂತ್ರಿಣೀಂ ತಥಾ ॥ ೧೧ ॥**

**ಚಿತ್ರಾವಲ್ಲೀಫಲಂ ತದ್ವತ್ಕೂಟಶಾಲ್ಮಲಿಕಾಫಲಂ ।**
**ಮಧೂಕಂ ಕಾರವೇಲ್ಲಂ ಚ ವಲ್ಲೀಂ ಗುಂದಪಟೋಲಕಂ ॥ ೧೨ ॥**

---

ಹಣ್ಣು, ಈ ಹದಿನಾರು ವಿಧವಾದ ಹಣ್ಣುಗಳನ್ನು ಸ್ವಶಕ್ತ್ಯನುಸಾರವಾಗಿ ಚಿನ್ನದಿಂದ ಮಾಡಿಸಬೇಕು.

೮–೧೦. ಮತ್ತೆ ಈ ಮುಂದೆ ಹೇಳುವ ಹದಿನಾರು ಫಲಗಳನ್ನು ಸ್ವಶಕ್ತ್ಯನುಸಾರವಾಗಿ ಬೆಳ್ಳಿಯಿಂದ ಮಾಡಿಸಬೇಕು. ಅವುಗಳು ಯಾವುವೆಂದರೆ ಮೂಲಂಗಿ, ನೆಲ್ಲಿಯಕಾಯಿ, ನೇರಿಳೇಹಣ್ಣು, ತಾರೇಕಾಯಿ, ಕರಮರ್ದಕ (ಕವುರಿಕೆಹಣ್ಣು), ಅತ್ತೀಹಣ್ಣು, ತೆಂಗಿನಕಾಯಿ, ದ್ರಾಕ್ಷೆಹಣ್ಣು, ಹೆಗ್ಗುಳ್ಳ (ದೊಡ್ಡಬದನೇಕಾಯಿ), ರಾಮಗುಳ್ಳ, ಹಾಗಲಕಾಯಿ, ಕಾಕಿತೂಪರಹಣ್ಣು, ಸಾರೇಬಿದರುಫಲ, ಕೊಡಸಿಗ ಫಲ, ಶಮೀಫಲ (ಬನ್ನೀಹಣ್ಣು), ಕಿತ್ತಳೀಹಣ್ಣು, ಇವುಗಳು ಬೆಳ್ಳಿಯಿಂದ ಮಾಡಿಸತಕ್ಕವು.

೧೧–೧೨. ತಾಳೇಹಣ್ಣು, ಅಗಸೆಕಾಯಿ, ಮಂಗಾರೇಹಣ್ಣು, ಖರ್ಜೂರ, ಸುವರ್ಣಗಡ್ಡೆ, ಹಲಸಿನಹಣ್ಣು, ಗಜನಿಂಬೇಹಣ್ಣು, ಸೌತೇಕಾಯಿ, ಹುಣಿಸೇ ಹಣ್ಣು, ಚಿತ್ರವಲ್ಲೀಹಣ್ಣು, ಕೆಂಪುಬೂರಗದಹಣ್ಣು, ಹಿಪ್ಪೇಕಾಯಿ, ಹಾಗಲ ಕಾಯಿ, ವಲ್ಲೀಫಲ, ಗೋನುಹಣ್ಣು, ಪಡವಲಕಾಯಿ, ಈ ಹದಿನಾರು ಜಾತಿಯ ಫಲಗಳನ್ನು ತಾಮ್ರದಿಂದ ಮಾಡಿಸಬೇಕು.

**ಕಾರಯೇಚ್ಛಕ್ತಿತೋ ಧೀಮಾನ್ಫಲಾನ್ಯೇತಾನಿ ಷೋಡಶ ।**
**ಉದಕುಂಭದ್ವಯಂ ಕುರ್ಯಾದ್ಧಾನ್ಯೋಪರಿ ಸವಾಸಸಂ ॥ ೧೩ ॥**

**ತಾಮ್ರಪಾತ್ರದ್ವಯೋಪೇತಂ ಯಮರುದ್ರಸಮನ್ವಿತಂ ।**
**ಧೇನ್ವಾ ಸಹೈವ ಶಾಂತಾಯ ವಿಪ್ರಾಯಾಥ ಕುಟುಂಬಿನೇ ॥**
**ಸಪತ್ನೀಕಾಯ ಸಂಪೂಜ್ಯ ಪುಣ್ಯೇಹನಿ ನಿವೇದಯೇತ್ ॥ ೧೪ ॥**

**ಯಥಾ ಫಲೇಷು ಸರ್ವೇಷು ವಸಂತ್ಯಮರಕೋಟಯಃ ।**
**ತಥಾ ಸರ್ವಫಲತ್ಯಾಗಾಚ್ಛಿವೇ ಭಕ್ತಿಃ ಸದಾಸ್ತು ಮೇ ॥ ೧೫ ॥**

**ಯಥಾ ಶಿವಶ್ಚ ಧರ್ಮಶ್ಚ ಸದಾನಂತಫಲಪ್ರದೌ ।**
**ತದ್ಯುಕ್ತಫಲದಾನೇನ ತೌ ಸ್ಯಾತಾಂ ಮೇ ವರಪ್ರದೌ ॥ ೧೬ ॥**

---

೧೩. ಈ ವ್ರತಾನುಷ್ಠಾನ ಮಾಡುವ ಪಂಡಿತನು ಈ ಹದಿನಾರು ಫಲಗಳನ್ನು ಸ್ವಶಕ್ತ್ಯನುಸಾರವಾಗಿ ಮಾಡಿಸಿ, ಧಾನ್ಯಗಳ ಮೇಲೆ ವಸ್ತ್ರಾಲಂಕೃತವಾದ ಎರಡು ಕಲಶಗಳನ್ನಿಟ್ಟು, ಆ ಕಲಶಗಳ ಮೇಲೆ ತಾಮ್ರದ ಎರಡು ಪಾತ್ರೆಗಳಲ್ಲಿ ಹಿಂದೆ ಹೇಳಿದ ಯಮ ಮತ್ತು ರುದ್ರ ಇವರ ಪ್ರತಿಮೆಗಳನ್ನು ಪ್ರತ್ಯೇಕವಾಗಿ ಇಡಬೇಕು.

೧೪. ಶಾಂತನೂ ಕುಟುಂಬಿಯೂ ಸಪತ್ನೀಕನೂ ಆಗಿರುವ ಬ್ರಾಹ್ಮಣನನ್ನು ಆ ಪುಣ್ಯದಿನದಲ್ಲಿ ಕರೆದು ಪೂಜೆಮಾಡಿ ಒಂದು ಗೋವು, ಆ ಫಲಗಳು, ಕಲಶಗಳು, ಪ್ರತಿಮೆಗಳು, ಇವುಗಳನ್ನೆಲ್ಲಾ ಆತನಿಗೆ ದಾನಕೊಡಬೇಕು.

೧೫. (ಇದು ಮೊದಲ್ಗೊಂಡು ನಾಲ್ಕು ಶ್ಲೋಕಗಳು ಫಲಾದಿಗಳನ್ನು ದಾನಕೊಡುವಾಗ ಯಜಮಾನನು ಹೇಳುವ ಮಂತ್ರ). ಎಲ್ಲಾ ಫಲಗಳಲ್ಲೂ ಕೋಟಿ ಸಂಖ್ಯಾಕರಾದ ದೇವತೆಗಳು ವಾಸಿಸುವರು. ಈ ಸರ್ವಫಲಗಳನ್ನೂ ದಾನಮಾಡಿದ್ದರಿಂದ ಶ್ರೀ ಶಿವನಲ್ಲಿ ನನಗೆ ಯಾವಾಗಲೂ ಭಕ್ತಿ ಇರಲಿ ಎಂದು ಇದರ ಭಾವ.

೧೬. ಶಿವನೂ ಯಮನೂ ಯಾವಾಗಲೂ ಅನಂತ ಫಲದಾಯಕರು. ಆದ ಕಾರಣದಿಂದ, ಶಿವಯಮರ ಪ್ರತಿಮಾಯುಕ್ತಗಳಾದ ಫಲಗಳನ್ನು ದಾನ ಮಾಡಿದ್ದರಿಂದ ಆ ಇಬ್ಬರು ದೇವತೆಗಳೂ ನನಗೆ ವರಪ್ರದರಾಗಲಿ ಎಂದು ಇದರ ತಾತ್ಪರ್ಯ.

**ಯಥಾ ಫಲಾನಾಂ ಕಾಮಸ್ಯ ಶಿವಭಕ್ತಸ್ಯ ಸರ್ವದಾ ।**
**ತಥಾಽನಂತಫಲಾವಾಪ್ತಿರಸ್ತು ಜನ್ಮನಿಜನ್ಮನಿ ॥ ೧೭ ॥**

**ಯಥಾ ಭೇದಂ ನ ಪಶ್ಯಾಮಿ ಶಿವವಿಷ್ಣ್ವರ್ಕಪದ್ಮಜಾಂ ।**
**ತಥಾ ಮಮಾಸ್ತು ವಿಶ್ವಾತ್ಮಾ ಶಂಕರಃ ಶಂಕರಃ ಸದಾ ॥ ೧೮ ॥**

**ಇತ್ಯುಚ್ಚಾರ್ಯ ಚ ತತ್ಸರ್ವಮಲಂಕೃತ್ಯ ವಿಭೂಷಣೈಃ ।**
**ಶಕ್ತಶ್ಚೇಚ್ಛಯನಂ ದದ್ಯಾತ್ಸರ್ವೋಪಸ್ಕರಸಂಯುತಂ ॥**
**ಅಶಕ್ತಸ್ತು ಫಲಾನ್ಯೇವ ಯಥೋಕ್ತಾನಿ ವಿಧಾನತಃ ॥ ೧೯ ॥**

**ತಥೋದಕುಂಭಸಹಿತೌ ಶಿವಧರ್ಮೌ ಚ ಕಾಂಚನೌ ।**
**ವಿಪ್ರಾಯ ದತ್ವಾ ಭುಂಜೀತ ತೈಲಕ್ಷಾರವಿವರ್ಜಿತಂ ॥**
**ಅನ್ಯಾನಪಿ ಯಥಾಶಕ್ತ್ಯಾ ಭೋಜಯೇದ್ದ್ವಿಜಪುಂಗವಾನ್ ॥ ೨೦ ॥**

---

೧೭. ಶಿವ ಭಕ್ತರಾದ ಪುರುಷರಿಗೆ ಅಭಿಲಷಿತ ಫಲಾವಾಪ್ತಿಯು ಯಾವಾಗಲೂ ಆಗುವಂತೆ ನನಗೂ ಪ್ರತಿಜನ್ಮದಲ್ಲೂ ಅನಂತ ಫಲಪ್ರಾಪ್ತಿಯು ಆಗಲಿ ಎಂದು ಇದರ ಅರ್ಥ.

೧೮. (ಇದು ದಾನಮಂತ್ರ ನಾನು) ಬ್ರಹ್ಮ, ವಿಷ್ಣು, ಮಹೇಶ್ವರ, ಸೂರ್ಯ ಇವರಲ್ಲಿ ಪರಸ್ಪರ ಭೇದಪ್ರದರ್ಶನಮಾಡದಿರುವ ಕಾರಣ, ಪ್ರಪಂಚಾತ್ಮಕನಾದ ಶ್ರೀ ಶಂಕರನು ಯಾವಾಗಲೂ ನನಗೆ ಸುಖವನ್ನು ಕೊಡಲಿ ಎಂದು ಈ ಮಂತ್ರದ ಅರ್ಥ.

೧೯. ಈ ಹಿಂದೆ ಹೇಳಿದ ನಾಲ್ಕು ಮಂತ್ರಗಳನ್ನು ಉಚ್ಚರಿಸಿ, ಆ ದಾನ ವಸ್ತುಗಳನ್ನು ರಮ್ಯರಾಗಿರುವಂತೆ ಮಾಡಿ, ದಾನಮಾಡಬೇಕು. ದಾನಕೊಡುವುದಕ್ಕೆ ಶಕ್ತಿಯುಳ್ಳ ಧನಿಕನಾದರೆ ಪೂರ್ವೋಕ್ತ ಫಲಾದಿಗಳನ್ನು ಸರ್ವೋಪಕರಣ ಯುಕ್ತವಾದ ಶಯ್ಯಾ ಸಹಿತವಾಗಿ ದಾನಕೊಡಬೇಕು. ದ್ರವ್ಯಾನುಕೂಲವಿಲ್ಲದ ಮನುಷ್ಯನಾದರೆ ಹಿಂದೆ ಹೇಳಿದಂತೆ ವಿಧಿಪ್ರಕಾರವಾಗಿ ಫಲಗಳನ್ನು ಮಾತ್ರ ದಾನ ಮಾಡಬೇಕು.

೨೦. ಈ ಫಲಗಳಲ್ಲದೆ ಪೂರ್ವೋಕ್ತವಾದ ಎರಡು ಕಲಶಗಳನ್ನು ಶಿವ ಮತ್ತು ಯಮ ಇವರ ಸುವರ್ಣ ಪ್ರತಿಮಾಸಹಿತವಾಗಿ ಆ ಬ್ರಾಹ್ಮಣನಿಗೆ ದಾನ ಮಾಡಬೇಕು. ದಾನಾನಂತರದಲ್ಲಿ ಆ ಬ್ರಾಹ್ಮಣನಿಗೂ, ತನ್ನ ಶಕ್ತ್ಯನುಸಾರವಾಗಿ ಇತರ ಬ್ರಾಹ್ಮಣೋತ್ತಮರಿಗೂ, ಸಂತರ್ಪಣೆ ಮಾಡಿಸಬೇಕು. ಅನಂತರ ಎಣ್ಣೆ ಉಪ್ಪು ಇವುಗಳನ್ನು ಉಪಯೋಗಿಸದೆ ಮಾಡಿದ ಅಡಿಗೆಯನ್ನು ತಾನೂ ಭುಂಜಿಸಬೇಕು.

ನ ಶಕ್ನೋತಿ ವಿಹಾತುಂ ಚೇತ್ಸರ್ವಾಣ್ಯಾಪಿ ಫಲಾನ್ಯುತ ।
ಏಕಮೇವ ಪರಿತ್ಯಜ್ಯ ತದಿತ್ಥಂ ಪ್ರತಿಪಾದಯೇತ್ ॥ ೨೧ ॥

ಏತತ್ತ್ಯಾಗವ್ರತಾನಾಂ ತು ಗವೇ ವೈಷ್ಣವಯೋಗಿನಾಂ ।
ಶಸ್ತಂ ಸರ್ವಫಲತ್ಯಾಗಂ ವ್ರತಂ ವೇದವಿದೋ ವಿದುಃ ॥ ೨೨ ॥

ನಾರೀಭಿಶ್ಚ ಯಥಾಶಕ್ತ್ಯಾ ಕರ್ತವ್ಯಂ ರಾಜಸತ್ತಮ ।
ನೈತಸ್ಮಾದಪರಂ ಕಿಂಚಿದಿಹಲೋಕೇ ಪರತ್ರ ಚ ॥
ವ್ರತಮಸ್ತಿ ನೃಪಶ್ರೇಷ್ಠ ಯದನ್ಯತ್ತತ್ಫಲಪ್ರದಂ ॥ ೨೩ ॥

ಸೌವರ್ಣರೌಪ್ಯತಾಮ್ರೇಷು ಯಾವಂತಃ ಪರಮಾಣವಃ ।
ಭವಂತಿ ಚೂರ್ಣ್ಯಮಾಣೇಷು ಫಲೇಷು ನೃಪಸತ್ತಮ ॥
ತಾವದ್ಯುಗಸಹಸ್ರಾಣಿ ರುದ್ರಲೋಕೇ ಮಹೀಯತೇ ॥ ೨೪ ॥

---

೨೧. ಹಿಂದೆ ಹೇಳಿದ ಹದಿನಾರು ಫಲಗಳನ್ನು ಸುವರ್ಣ, ಬೆಳ್ಳಿ, ತಾಮ್ರ, ಇವುಗಳಿಂದ ಮಾಡಿಸಿಕೊಡುವ ಶಕ್ತಿ ಇಲ್ಲದ ವ್ರತಿಯು, ಒಂದೇ ಫಲವನ್ನಾದರೂ ದಾನಮಾಡಿ, ಉಳಿದ ವಿಷಯಗಳನ್ನೆಲ್ಲಾ ಹಿಂದಿನಂತೆಯೇ ಆಚರಿಸಬೇಕು.

೨೨. ವಿಷ್ಣುಸಂಬಂಧಿಯಾದ ತ್ಯಾಗವ್ರತಗಳಲ್ಲಿ ಈ ಸರ್ವಫಲತ್ಯಾಗ ವ್ರತವು ಅತಿ ಶ್ರೇಷ್ಠವೆಂದು ಶಾಸ್ತ್ರಜ್ಞರು ಹೇಳುತ್ತಾರೆ. ಅಯ್ಯಾ ನೃಪೋತ್ತಮನೇ! ಈ ವ್ರತವನ್ನು ಹೆಂಗಸರೂ ಯಥಾಶಕ್ತಿ ಆಚರಿಸಬಹುದು.

೨೩. ಅಯ್ಯಾ ನೃಪಶ್ರೇಷ್ಠನೇ! ಈ ಲೋಕದಲ್ಲಿಯಾಗಲಿ ಪರಲೋಕದಲ್ಲಿಯಾಗಲಿ ಈ ಸರ್ವಫಲತ್ಯಾಗವ್ರತದಂತೆ ಫಲ ಕೊಡುವ ಮತ್ತೊಂದು ಉತ್ತಮ ವ್ರತವು ಯಾವುದೂ ಇಲ್ಲ.

೨೪. ಅಯ್ಯಾ ನೃಪೋತ್ತಮನೇ! ಈ ವ್ರತವನ್ನು ಆಚರಿಸಿದವನು ತಾನು ದಾನಮಾಡಿದ ಚಿನ್ನ, ಬೆಳ್ಳಿ, ತಾಮ್ರ ಈ ಫಲಗಳಲ್ಲಿ ಎಷ್ಟು ಪರಮಾಣುಗಳು ಇರುತ್ತವೆಯೋ, ಆ ಪರಮಾಣು ಸಂಖ್ಯೆಯಷ್ಟು ಸಹಸ್ರ ಯುಗಗಳ ಕಾಲ ಆತನು ರುದ್ರಲೋಕದಲ್ಲಿ ಪೂಜಿತನಾಗಿರುತ್ತಾನೆ.

ಏತತ್ಸಮಸ್ತಕಲುಷಾಪಹರಂ ಜನಾನಾ-
ಮಾಜೀವನಾಯ ಮನುಜೇಶ್ವರ ಸರ್ವದಾ ಸ್ಯಾತ್ ।
ಜನ್ಮಾಂತರೇಷ್ವಪಿ ನ ಪುತ್ರಕಲತ್ರದುಃಖ-
ಮಾಪ್ನೋತಿ ಧಾಮ ಸ ಪುರಂದರಜುಷ್ಟಮೇವ　　　　॥ ೨೫ ॥

ಯೋ ವಾ ಶೃಣೋತಿ ಪುರುಷೋಽಲ್ಪಧನೋ ನರೋ ವಾ ।
ಯೋ ಬ್ರಾಹ್ಮಣಸ್ತು ಭವನೇಷು ಚ ಧಾರ್ಮಿಕಾಣಾಂ ।
ಪಾಪೈರ್ವಿಮುಚ್ಯಚ್ಚ ಪರತ್ರ ಪುರಂ ಪುರಾರೇ- ॥
ರಾನಂದಕೃತ್ಪದಮುಪೈತಿ ನರೇಂದ್ರ ಸೋಽಪಿ　　　　॥ ೨೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಉತ್ತರಪರ್ವಣಿ ಶ್ರೀ ಕೃಷ್ಣ ಯುಧಿಷ್ಠಿರ ಸಂವಾದೇ ಫಲತ್ಯಾಗಚತುರ್ದಶೀ ವ್ರತ ವರ್ಣನಂ ನಾಮ ಅಷ್ಟನವತಿತಮೋಽಧ್ಯಾಯಃ



೨೫. ಅಯ್ಯಾ ರಾಜನೇ! ಈ ವ್ರತವು ವ್ರತಿಯ ಸಮಸ್ತ ಪಾಪಗಳನ್ನೂ ನಾಶಮಾಡಿ, ಯಾವಾಗಲೂ ಸುಖದಾಯಕವಾಗುವುದು. ಅವನು ಜನ್ಮ ಜನ್ಮಾಂತರಗಳಲ್ಲೂ ಹೆಂಡತಿಮಕ್ಕಳ ವಿಯೋಗದುಃಖಕ್ಕೆ ಒಳಗಾಗುವುದಿಲ್ಲ. ಅಲ್ಲದೆ ಕೊನೆಗೆ ಇಂದ್ರನು ಆಶ್ರಯಿಸಿರುವ ಸ್ಥಾನವನ್ನೇ ಪಡೆಯುತ್ತಾನೆ.

೨೬. ಅಯ್ಯಾ ನರೇಂದ್ರನೇ! ಅಲ್ಪಧನವುಳ್ಳವನಾಗಿ ಈ ವ್ರತವನ್ನು ಆಚರಿಸಲು ಹೇಗೂ ಸಾಧ್ಯವಿಲ್ಲದೆ ಇರುವ ಬ್ರಾಹ್ಮಣನು ವ್ರತವನ್ನಾಚರಿಸುತ್ತಿರುವ ಧಾರ್ಮಿಕರ ಮನೆಗೆ ಹೋಗಿ, ಆ ಮನೆಗಳಲ್ಲಿ ಈ ವ್ರತವನ್ನು ಶ್ರವಣ ಮಾಡಿದರೂ ಅದರಿಂದ ಶ್ರೀ ಪರಮೇಶ್ವರನ ಪ್ರೀತಿಗೆ ಪಾತ್ರನಾಗಿ ಅವನ ಅನುಗ್ರಹದಿಂದ ಸರ್ವಪಾಪವಿನಿರ್ಮುಕ್ತನಾಗಿ, ಪರಲೋಕದಲ್ಲಿ ಶ್ರೀ ಪರಮೇಶ್ವರನ ಸ್ಥಾನಕ್ಕೆ ಹೋಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ಫಲತ್ಯಾಗ ಚತುರ್ದಶೀ ವ್ರತ ವರ್ಣನೆಯೆಂಬ ತೊಂಭತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

—

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಉತ್ತರಪರ್ವಣಿ

## ನವನವತಿತಮೋಽಧ್ಯಾಯಃ

---

॥ ಶ್ರೀ ಕೃಷ್ಣ ಉವಾಚ ॥

ಪೌರ್ಣಮಾಸೀ ಮಹಾರಾಜ ಸೋಮಸ್ಯ ದಯಿತಾ ತಿಥಿಃ ।
ಪೂರ್ಣಮಾಸೋ ಭವೇದ್ಯಸ್ಯಾಂ ಪೌರ್ಣಮಾಸೀ ತತಃ ಸ್ಮೃತಾ ॥ ೧ ॥

ಪೌರ್ಣಮಾಸ್ಯಾಂ ಚ ಸಂಜಾತಃ ಸಂಗ್ರಾಮೋ ಜಯಲಕ್ಷಣಃ ।
ಸೋಮಸ್ಯಾರಿಬೃಧ್ಯೈಃ ಸಾರ್ಧಂ ಸರ್ವಸತ್ವಭಯಂಕರಂ ॥ ೨ ॥

ತಾರಾಯಾಂ ಚಂದ್ರಮಾಃ ಸಕ್ತಸ್ತಸ್ಯಾ ಭರ್ತಾ ಬೃಹಸ್ಪತಿಃ ।
ತಯೋರಭೂನ್ಮಹಾಯುದ್ಧಂ ಭಾರ್ಯಾಕೃತ್ಯೇಷು ವೈ ಪುರಾ ॥ ೩ ॥

---

## ತೊಂಭತ್ತೊಂಭತ್ತನೆಯ ಅಧ್ಯಾಯ

೧. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಮಹಾರಾಜನೇ! ಪೌರ್ಣಿಮಾ ತಿಥಿಯು ಚಂದ್ರನಿಗೆ ಅತಿ ಪ್ರಿಯವಾದುದು. ಕೃಷ್ಣಪಕ್ಷ ಪ್ರತಿಪತ್ತಿನಿಂದ ಒಂದು ತಿಂಗಳ ಅವಧಿಯು, ಆ ದಿನಕ್ಕೆ ಪೂರ್ತವಾಗುವುದರಿಂದ ಅದಕ್ಕೆ ಪೌರ್ಣಮಾಸೀ ಎಂಬ ನಾಮಧೇಯವುಂಟಾಗಿದೆ.

೨. ಪೂರ್ವದಲ್ಲಿ ತನ್ನ ಶತ್ರುಗಳಾದ ದೇವತೆಗಳೊಡನೆ ನಡೆಸಿದ ಸರ್ವ ಪ್ರಾಣಿ ಭಯಂಕರವಾದ ಯುದ್ಧದಲ್ಲಿ ಈ ಪೌರ್ಣಮಾಸೀ ತಿಥಿಯಲ್ಲಿ ಚಂದ್ರನಿಗೆ ಜಯಲಾಭವಾಯಿತು.

೩. ಪೂರ್ವದಲ್ಲಿ ಚಂದ್ರನು ಕಾಮುವಶನಾಗಿ ತಾರೆ ಎಂಬ ಸ್ತ್ರೀಯಲ್ಲಿ ಆಸಕ್ತನಾದನು. ಆ ತಾರೆಗೆ ಬೃಹಸ್ಪತಿಯು ಗಂಡನಾಗಿದ್ದನು. ಆದುದರಿಂದ

॥ ಯುಧಿಷ್ಠಿರ ಉವಾಚ ॥

ತಾರಾ ಕಸ್ಯ ಸುತಾ ಕಸ್ಮಾತ್ಸ ಕ್ರುದ್ಧಃ ಸಸುರಾರಿಹಾ ।
ಸೋಮೇನ ಸಹ ಸಂಗ್ರಾಮಂ ಚಕ್ರೇ ಚಕ್ರಗದಾಧರ ॥ ೪ ॥

॥ ಶ್ರೀ ಕೃಷ್ಣ ಉವಾಚ ॥

ಪ್ರಜಾಪತೇರಭೂತ್ಕನ್ಯಾ ತಾರಾ ವೃತ್ರಸ್ಯ ಚಾನುಜಾ ।
ತಾಂ ಬೃಹಸ್ಪತಯೇ ಪ್ರಾದಾತ್ಪೃಥಿವ್ಯಾಮೇಕಸುಂದರೀಂ ॥ ೫ ॥

ದೇವಾಚಾರ್ಯಾಯ ಸಾ ಭಾರ್ಯಾ ತ್ವನಿರ್ದೇಶ್ಯಾ ತಥಾವಿಧಾ ।
ರೂಪೇಣಾನ್ಯಾ ರೂಪವತೀ ಸಾ ನಿರ್ಧಾಯ ವ್ಯವಸ್ಥಿತಾ ॥ ೬ ॥

---

ಭಾರ್ಯಾಕರಣನಿಮಿತ್ತವಾಗಿ ಅವರಿಗೆ ಅನ್ಯೋನ್ಯವಾಗಿ ಮಹಾಯುದ್ಧವು ನಡೆಯಿತು ಎಂದನು.

೪. ಯುಧಿಷ್ಠಿರನು ಕೇಳುತ್ತಾನೆ—ಚಕ್ರಗದಾಧಾರಿಯಾದ ಶ್ರೀ ಕೃಷ್ಣನೇ! ತಾರೆಯೆಂಬುವಳು ಯಾರ ಮಗಳು? ಅಸುರಸಂಹಾರಕನಾದ ಶ್ರೀ ವಿಷ್ಣುವು ಏತಕ್ಕೆ ಕೋಪಗೊಂಡು ಚಂದ್ರನ ಜೊತೆಯಲ್ಲಿ ಯುದ್ಧಮಾಡಿದನು.

೫. ಶ್ರೀ ಕೃಷ್ಣನು ಹೇಳುತ್ತಾನೆ—ತ್ವಷ್ಟೃಪ್ರಜಾಪತಿಗೆ ತಾರೆಯೆಂಬ ಮಗಳಿದ್ದಳು. ಅವಳು ವೃತ್ರಾಸುರನಿಗೆ ತಂಗಿ. ಭೂಲೋಕದಲ್ಲಿ ಅನುಪಮ ಸುಂದರಿಯಾದ ಆ ತಾರೆಯನ್ನು ಆ ಪ್ರಜಾಪತಿಯು ಬೃಹಸ್ಪತ್ಯಾಚಾರ್ಯನಿಗೆ ವಿವಾಹಮಾಡಿಕೊಟ್ಟನು.

೬. ಅದರಿಂದ ಆ ತಾರೆಯು ದೇವಗುರುವಾದ ಬೃಹಸ್ಪತಿಗೆ ಭಾರ್ಯೆಯಾದಳು. ಅಂತಹ ಸುಂದರಿಯಾದ ಇನ್ನೊಬ್ಬಳು ಸ್ತ್ರೀಯನ್ನು ಲೋಕದಲ್ಲಿ ನೋಡಬೇಕೆಂದರೆ ಸಾಧ್ಯವಿಲ್ಲ. ಅವಳು ತನ್ನ ರೂಪಿನಿಂದ ಇತರ ಎಲ್ಲ ಸ್ತ್ರೀಯರನ್ನೂ ಮೀರಿಸಿದ್ದಳು.

ಬೃಹಸ್ಪತಿಂ ಪರ್ಯಚರದ್ಯಥಾ ಚಾನ್ಯಾಃ ಸ್ತ್ರಿಯಃ ಕಚಿತ್ ।
ತಾಂ ದದರ್ಶಾಯತಾಪಾಂಗೀಂ ತನ್ವಂಗೀಂ ಚಾರುಹಾಸಿನೀಂ ॥ ೭ ॥

ಶೀತಾಂಶುರ್ದರ್ಶನಾದೇವ ಕಾಮಸ್ಯ ವಶಮೀಯಿವಾನ್ ।
ಆಬಭಾಷೇ ಚ ಮಧುರಂ ತಾರೇ ಏಹ್ಯೇಹಿ ಮಾ ಚಿರಂ ॥ ೮ ॥

ಇಂಗಿತಾಕಾರಕುಶಲಾ ತಾರಾ ಸೋಮಸ್ಯ ಚೇಷ್ಟಿತಂ ।
ಬುಧ್ವಾ ಶುದ್ಧಮಥೋ ತನ್ವೀ ಪ್ರಾಹೇದಂ ಮಧುರಾಕ್ಷರಂ ॥ ೯ ॥

ಮುನೇರಂಗಿರಸಃ ಪುತ್ರಸ್ತ್ವಂ ಚ ಸೌಮ್ಯೋಽಸಿ ಸೋಮರಾಟ್ ।
ಅಂಗಿರಸೋ ಮುನೇರ್ವೀರ ಸ್ನುಷಾಹಮುಚಿತಂ ನ ತೇ ॥ ೧೦ ॥

---

೭. ಲೋಕದಲ್ಲಿ ಇತರ ಸ್ತ್ರೀಯರು ತಮ್ಮ ತಮ್ಮ ಪತಿಗಳನ್ನು ಸೇವಿಸುವಂತೆಯೇ ಆ ತಾರೆಯೂ ತನ್ನ ಪತಿಯಾದ ಬೃಹಸ್ಪತಿಯನ್ನು ಪ್ರೀತಿಯಿಂದ ಸೇವಿಸುತ್ತಿದ್ದಳು. ನೀಳವಾದ ಕಡೆಗಣ್ಣುಳ್ಳವಳೂ, ಕೃಶಾಂಗಿಯೂ, ಮನೋಹರವಾದ ಪಾದಗಳುಳ್ಳವಳೂ, ಆಗಿರುವ ಆ ತಾರೆಯನ್ನು ಚಂದ್ರನು ಒಂದಾನೊಂದು ದಿನ ಕಂಡನು.

೮. ಅವಳನ್ನು ನೋಡಿದ ಮಾತ್ರಕ್ಕೇ ಆ ಚಂದ್ರನು ಕಾಮಪರವಶನಾಗಿ ಕೂಡಲೆ " ಓ ತಾರೆಯೇ ! ಇಲ್ಲಿ ಬಾ ! ಬಾ !! ವಿಳಂಬಮಾಡಬೇಡ " ಎಂದು ಮಧುರವಾಗಿ ಸಂಭಾಷಣೆಯನ್ನು ಮಾಡಿದನು.

೯. ಪುರುಷನ ಆಕಾರ, ಮತ್ತು ಚೇಷ್ಟೆಗಳಿಂದ ಅವನ ಅಭಿಪ್ರಾಯವನ್ನು ತಿಳಿದುಕೊಳ್ಳುವುದರಲ್ಲಿ ಪ್ರವೀಣೆಯಾದ ತಾರೆಯು, ಆಗ ಆ ಚಂದ್ರನ ಹಾವಭಾವನಿರೂಪಿತವಾದ ಚೇಷ್ಟೆಯಿಂದ ಅವನ ಅಭಿಪ್ರಾಯವನ್ನು ತಿಳಿದುಕೊಂಡಳು. ಆಮೇಲೆ ಆ ಕೃಶಾಂಗಿಯಾದ ತಾರೆಯು ಈ ಮುಂದೆ ಹೇಳುವಂತೆ ಮಧುರವಾದ ಧ್ವನಿಯಿಂದ.

೧೦. " ಅಯ್ಯಾ ವೀರನೇ ! ನೀನು ಅಂಗಿರಸ ಮಹರ್ಷಿಯ ಮಗನು. ಅಲ್ಲದೆ ಸೌಮ್ಯನೂ, ಸೋಮರಾಜನೂ ಆಗಿರುವೆ. ನಾನು ಆ ಅಂಗಿರಸ ಮಹರ್ಷಿಯ ಸೊಸೆ. ಆದುದರಿಂದ ಈ ಕೃತ್ಯವು ನಿನಗೆ ಅನುರೂಪವಾದುದಲ್ಲ. ಇಂತಹ ನಡತೆಯುಳ್ಳ ನಿನಗೆ ಸೌಮ್ಯ ಎಂಬ ನಾಮಧೇಯವು ಲಭಿಸಿದುದು ಬಹಳ ಆಶ್ಚರ್ಯಕರ."

ಸಹ ಸೌಮ್ಯೇನ ಯೋ ಯೋಗಸ್ತ್ವವ ಸಿದ್ಧೋಽದ್ಭುತೋ ಮಹಾನ್ ।
ಅಂಗಿರಾಸ್ತ್ವಾಂ ಕಿಲ ಪುರಾ ಸಸುರಾಸುರರಾಕ್ಷಸೈಃ ।
ರಾಜತ್ವೇ ಸ್ಥಾಪಯಾಮಾಸ ನೈತತ್ಸ್ಮರಸಿ ಕಿಂ ವಿಧೋ ॥ ೧೧ ॥

ಕಥಮದ್ಯ ನಿಶಾನಾಥ ಹ್ಯನಂಗೇನಾಸಿ ಪೀಡಿತಃ ।
ತಸ್ಮಾದ್ಬ್ರವೀಮಿ ಶುದ್ಧಿಂ ತೇ ರೋಚಯೇ ಘಟಿತಂ ಕುರು ॥
ಪರವತ್ಯಸ್ಮಿ ಭದ್ರಂ ತೇ ನ ಗಮ್ಯಾಸ್ಮಿ ಬುಧೋತ್ತಮ ॥ ೧೨ ॥

ಏವಮುಕ್ತಸ್ತಥಾ ಚಾಸೌ ನ ಚೈತತ್ಕೃತವಾಂಸ್ತತಃ ।
ಗೃಹೀತ್ವಾ ಕರ್ಷಯಾಮಾಸ ಸೋಮೋಽನಂಗವಶೀಕೃತಃ ॥ ೧೩ ॥

ಬೃಹಸ್ಪತಿಸ್ತು ತಾಂ ಜ್ಞಾತ್ವಾ ಸ ತಂ ಸೋಮಮಗರ್ಹಯತ್ ।
ಪ್ರೇಷಯಿಷ್ಯತಿ ಮೇ ಭಾರ್ಯಾಂ ಸ್ವಯಮೇವ ಮಮಾಂತಿಕಂ ॥ ೧೪ ॥

---

೧೧. "ಓ ಚಂದ್ರನೇ! ಪೂರ್ವದಲ್ಲಿ ಆಂಗಿರಸ ಮಹರ್ಷಿಯು ಸುರರು, ಅಸುರರು, ರಾಕ್ಷಸರು ಇವರುಗಳ ಸಮಕ್ಷಮ ನಿನ್ನನ್ನು ರಾಜಪದವಿಯಲ್ಲಿ ಸ್ಥಾಪನೆಮಾಡಿದನು. ಆ ರಾಜತ್ವದ ಸ್ಮರಣೆಯು ನಿನಗಿಲ್ಲವೇ?"

೧೨. "ಅಯ್ಯಾ ನಿಶಾಧಿಪತಿಯಾದ ಚಂದ್ರನೇ! ಅಂತಹ ರಾಜನಾದ ನೀನು, ಈಗ ಈರೀತಿ ಮನ್ಮಥನಿಂದ ಹೇಗೆ ಪೀಡಿತನಾದೆ? ಆದುದರಿಂದ ನಾನು ನಿನಗೆ ಒಂದು ಮಾತು ಹೇಳಬೇಕು. ಪರಿಶುದ್ಧವಾದ ಆಚಾರದಲ್ಲಿ ನಿನಗೆ ಪ್ರೀತಿಯುಂಟಾಗುವುದಕ್ಕಾಗಿ ಈರೀತಿ ಮಾತನಾಡುತ್ತೇನೆ. ಪರಿಶುದ್ಧತೆಯು ನಿನ್ನಲ್ಲಿ ಸ್ಥಿರವಾಗುವಂತೆ ಮಾಡಿಕೊ. ಓ ಪಂಡಿತೋತ್ತಮನೇ! ನಾನು ಪರನಿಗೆ ವಿವಾಹಿತೆಯಾಗಿ ಪರಾಧೀನೆಯಾದವಳು. ಆದುದರಿಂದ ನಾನು ನಿನಗೆ ಸಂಗಮ ಯೋಗ್ಯಳಲ್ಲ. ಹೊರಟುಹೋಗು. ನಿನಗೆ ಮಂಗಳವುಂಟಾಗಲಿ!" ಎಂದಳು.

೧೩. ಆ ತಾರೆಯು ಚಂದ್ರನಿಗೆ ಈರೀತಿ ಮಧುರವಾಗಿ ಹೇಳಿದರೂ, ಆ ಚಂದ್ರನು ಅವಳ ವಚನದಂತೆ ನಡೆದುಕೊಳ್ಳದೆ, ಪುನಃ ಕಾಮಪರವಶನಾಗಿ ತಾರೆಯನ್ನು ಹಿಡಿದು ಎಳೆದೊಯ್ದನು.

೧೪. ಆ ತಾರೆಯು ಚಂದ್ರನಿಗೆ ಹೇಳಿದ ಹಿತವಚನವನ್ನು ಬೃಹಸ್ಪತ್ಯಾಚಾರ್ಯನು ತಿಳಿದು ಆ ಚಂದ್ರನನ್ನು ನಿಂದಿಸಿದನು. ಆ ಚಂದ್ರನು ನನ್ನ

ಏವಂ ಚಿರೇಣ ವಿಜ್ಞಾಯ ಬೃಹಸ್ಪತಿರುದಾರಧೀಃ ।
ನಾಸಸಾದ ಸ್ವಕಾಂ ಭಾರ್ಯಾಂ ರೋಷಾತ್ಪ್ರಸ್ಫುರಿತಾಧರಃ ॥ ೧೫ ॥

ಆಚಚಕ್ಷೌ ಸರ್ವಮಿಂದ್ರಾಯ ಸೋಮಸ್ಯೇದಂ ವಿಚೇಷ್ಟಿತಂ ।
ಇಂದ್ರಃ ಸಮಾಹ್ವಯಾಮಾಸ ದೇವಾನೃಷಿಗಣಾಂಸ್ತಥಾ ॥ ೧೬ ॥

ನ ಸೋಮೋ ಗಣಯಾಮಾಸ ತತೋಽಬುಧ್ಯತ ದೇವರಾಟ್ ।
ಆಕಾರ್ಯ ತ್ರಿದಶಾನ್ಸರ್ವಾನಾಚಖ್ಯೌ ಚಂದ್ರಚೇಷ್ಟಿತಂ ॥ ೧೭ ॥

ತಚ್ಛ್ರುತ್ವಾ ದೇವಗಂಧರ್ವಾಃ ಕ್ರೋಧಾಂಧಾಃ ಕ್ಷುಬ್ಧಮಾನಸಾಃ ।
ಪ್ರಗೃಹೀತಪ್ರಹರಣಾ ರಥಾನಾರುರುಹುಃ ಸ್ವಕಾನ್ ॥ ೧೮ ॥

---

ಹೆಂಡತಿಯಾದ ತಾರೆಯನ್ನು ಇನ್ನು ತಾನಾಗಿಯೇ ನನ್ನ ಸಮೀಪಕ್ಕೆ ಕಳುಹಿಸಿ ಕೊಡುತ್ತಾನೆ ಎಂದು ಭಾವಿಸಿದನು.

೧೫. ಉದಾರಬುದ್ಧಿಯುಳ್ಳ ಆ ಬೃಹಸ್ಪತಿಯು ಈರೀತಿ ಬಹುಕಾಲದ ವರೆಗೂ ಭಾವಿಸಿ ನಿರೀಕ್ಷಿಸುತ್ತಿದ್ದರೂ ಚಂದ್ರನು ಆತನ ಭಾರ್ಯೆಯಾದ ತಾರೆಯನ್ನು ಪುನಃ ಕಳುಹಿಸಲೇ ಇಲ್ಲ. ಬಳಿಕ ಆಚಾರ್ಯನು ಕೋಪದಿಂದ ಕಂಪಿಸುತ್ತಿರುವ ತುಟಿಗಳುಳ್ಳವನಾದನು.

೧೬. ಕೂಡಲೆ ಬೃಹಸ್ಪತಿಯು ಚಂದ್ರನ ಈ ದುಶ್ಚೇಷ್ಟೆಯನ್ನೆಲ್ಲಾ ದೇವರಾಜನಾದ ಇಂದ್ರನಿಗೆ ತಿಳಿಸಿದನು. ಆಗ ಇಂದ್ರನು ಎಲ್ಲಾ ದೇವತೆಗಳನ್ನೂ ಋಷಿಸಮುದಾಯವನ್ನೂ ತನ್ನ ಬಳಿಗೆ ಬರಬೇಕೆಂದು ಹೇಳಿ ಕಳುಹಿಸಿದನು.

೧೭. ಆದರೆ ಆ ಇಂದ್ರನ ಆಹ್ವಾನವನ್ನು ಚಂದ್ರನು ಲಕ್ಷ್ಯಮಾಡಲೇ ಇಲ್ಲ. ಅದರಿಂದ ದೇವರಾಜನಾದ ಇಂದ್ರನು ಚಂದ್ರನ ದುರಭಿಸಂಧಿಯನ್ನು ತಿಳಿದುಕೊಂಡನು. ಆಮೇಲೆ ಆ ಇಂದ್ರನು ಇತರ ಎಲ್ಲಾ ದೇವತೆಗಳನ್ನೂ ಕರೆಯಿಸಿ, ಚಂದ್ರನ ದುಷ್ಕಾರ್ಯವನ್ನು ಅವರಿಗೆ ಹೇಳಿದನು.

೧೮. ಇಂದ್ರನ ಆ ಮಾತುಗಳನ್ನು ಕೇಳಿ, ದೇವತೆಗಳೂ ಗಂಧರ್ವರೂ ಸಹ ಕ್ಷೋಭೆಹೊಂದಿದ ಮನಸ್ಸುಳ್ಳವರೂ ಕ್ರೋಧಾಂಧರೂ ಆಗಿ, ಆಯುಧಗಳನ್ನು ಹಿಡಿದುಕೊಂಡು ತಮ್ಮ ತಮ್ಮ ರಥಗಳನ್ನು ಹತ್ತಿ ಹೊರಡಲು ಸಿದ್ಧರಾದರು.

ಸೋಽಪೋಽಪಿ ದೇವಾನ್ಸೋದ್ಯೋಗಾಞ್ಜ್ಞಾತ್ವಾಸುಕೃತನಿಶ್ಚಯಾನ್ ।
ದೈತ್ಯದಾನವರಕ್ಷಾಂಸಿ ಸಮಾನೀಯ ವ್ಯವಸ್ಥಿತಃ　　॥ ೧೯ ॥

ಆರುಹ್ಯ ಚ ರಥಶ್ರೇಷ್ಠಂ ಯುದ್ಧಾಯೈವ ಮನೋ ದಧೇ ।
ಪ್ರವೃತ್ತಂ ಸುಮಹದ್ಯುದ್ಧಂ ಶರತೋಮರಕಂಪನೈಃ　　॥ ೨೦ ॥

ಕೋಣಪೈಃ ಕ್ಷ್ವೇಡುರ್ಕೈಃ ಶೂಲೈರ್ದೇವದಾನವದಾರಣಂ ।
ಸ ತೇಷಾಂ ಸುಮಹದ್ಯುದ್ಧಂ ದತ್ವಾ ತಾರಾಗಣಾಧಿಪಃ ॥
ಬಭಂಜ ದೇವಾನ್ಸೇದ್ರಾಂಶ್ಚ ಹಿಮವೃಷ್ಟ್ಯಾ ಕ್ಷಪಾಕರಃ　　॥ ೨೧ ॥

ಸ ಜಿತ್ವಾ ದೇವಗಂಧರ್ವಾನ್ಸೋಮೋ ರಾಜನ್ಯಸತ್ತಮ ।
ಶ್ರಿಯಾ ಪರಮಯಾ ಯುಕ್ತೋ ಯಥಾನಾನ್ಯೋ ಹವಿರ್ಭುಜಾಂ॥೨೨॥

---

೧೯. ಆಗ ದೇವತೆಗಳು ದೃಢನಿಶ್ಚಯಮಾಡಿ, ಯುದ್ಧಸನ್ನಾಹದ ಉದ್ಯೋಗದಲ್ಲಿದ್ದಾರೆಂದು ತಿಳಿದುಕೊಂಡವನಾಗಿ, ಚಂದ್ರನು ತಾನೂ ಕೂಡ ಆ ದೇವತೆಗಳನ್ನು ಇದಿರಿಸಿ ಯುದ್ಧಮಾಡುವುದಕ್ಕೆ, ದೈತ್ಯರು, ದಾನವರು, ರಾಕ್ಷಸರು ಇವರುಗಳನ್ನು ಕರೆದುಕೊಂಡು ಬಂದನು.

೨೦. ಅನಂತರ ಚಂದ್ರನು ಉತ್ತಮ ರಥಾರೂಢನಾಗಿ ಯುದ್ಧಮಾಡುವುದೇ ಸರಿ ಎಂದು ಮನಸ್ಸಿನಲ್ಲಿ ಸಂಕಲ್ಪಿಸಿದನು. ಆಮೇಲೆ ಬಾಣ, ತೋಮರ, ಇವುಗಳ ಚಲನವಲನ ಸಹಿತವಾಗಿ, ದೊಡ್ಡ ಯುದ್ಧವು ಪ್ರಾರಂಭವಾಯಿತು.

೨೧. ಎರಡು ಪಕ್ಷದಲ್ಲಿ ರಾಕ್ಷಸರು ದೇವತೆಗಳು ಇವರು ಉಪಯೋಗಿಸಿದ ಶೂಲಾದಿ ಆಯುಧಗಳು, ದೇವತೆಗಳ ಮತ್ತು ದಾನವರ ಶರೀರವಿದಾರಕವಾಗಿತ್ತು. ನಕ್ಷತ್ರಾಧಿಪತಿಯಾದ ಆ ಚಂದ್ರನು ಆದಷ್ಟು ದೊಡ್ಡ ಯುದ್ಧವನ್ನು ನಡೆಯಿಸಿ ಇಂದ್ರ ಸಹಿತರಾದ ಆ ದೇವತೆಗಳನ್ನೆಲ್ಲಾ ಮಂಜು ಸುರಿಸಿ ಓಡಿಸಿದನು.

೨೨. ಓ ನೃಪೋತ್ತಮನೇ ! ಹೀಗೆ ಚಂದ್ರನು ದೇವತೆಗಳು ಮತ್ತು ಗಂಧರ್ವರು ಇವರುಗಳನ್ನು ಸೋಲಿಸಿ, ಮಹೋನ್ನತ ಸಂಪದ್ಯುಕ್ತನಾದನು. ಅವನಂತಹ ಶ್ರೀಮಂತನು ದೇವತೆಗಳಲ್ಲಿ ಯಾರೂ ಇರಲಿಲ್ಲ.

ದೇವಾಶ್ಚ ನಿರ್ಜಿತಾಸ್ತೇನ ಸೋಮೇನಾಮಿತತೇಜಸಾ ।
ಆಜಗ್ಮುಃ ಶರಣಂ ದೇವಂ ಶರಣ್ಯಂ ಸ್ವರ್ಗವಾಸಿನಾಂ ॥ ೨೩ ॥

ಇಂದ್ರಃ ಸರ್ವಂ ಸಮಾಚಖ್ಯೌ ಸೋಮಸ್ಯೇದೃಗ್ವಿಚೇಷ್ಟಿತಂ ।
ಶ್ರುತ್ವಾ ಕ್ರುದ್ಧೋ ಹೃಷೀಕೇಶ ಆರುಹ್ಯ ಗರುಡಂ ರುಷಾ ॥
ಗೃಹೀತ್ವಾ ಚಾಯುಧಂ ಶ್ರೇಷ್ಠಂ ಯುದ್ಧಾಯೈವ ಮನೋ ದಧೇ ॥೨೪॥

ಪ್ರಕರ್ತುಂ ಸುಮಹದ್ಯುದ್ಧಂ ಚಕ್ರಶಾರ್ಙ್ಗಗದಾಧರಃ ।
ಜಗಾಮ ವಿಬುಧೈಸ್ಸಾರ್ಧಂ ಸೋಮಸ್ಯೋಪರಿ ರೋಷಿತಃ ॥ ೨೫ ॥

ವಿಷ್ಣುಂ ವಿದಿತ್ವಾ ಸಂಪ್ರಾಪ್ತಂ ಸೋಮೋ ದೈತ್ಯಗಣೈಸ್ಸಹ ।
ಯುದ್ಧಾಯ ಸಮರಾಮರ್ಷೀ ಸ್ಥಿತಃ ಪ್ರಧ್ಮಾಯ ವಾರಿಜಂ ॥ ೨೬ ॥

---

೨೩. ದೇವತೆಗಳಾದರೋ ಆ ಅಪರಿಮಿತ ತೇಜೋಮಯನಾದ ಚಂದ್ರನಿಂದ ಸೋತವರಾಗಿ ಸ್ವರ್ಗನಿವಾಸಿಗಳಿಗೆ ರಕ್ಷಕನಾದ ಶ್ರೀ ಮಹಾವಿಷ್ಣುವನ್ನು ಶರಣು ಹೊಂದಿದರು.

೨೪. ಆಗ ಇಂದ್ರನು, ಬೃಹಸ್ಪತಿಯ ಪತ್ನಿಯಾದ ತಾರೆಯನ್ನು ಅಪಹರಣಮಾಡಿದ ಚಂದ್ರನ ಎಲ್ಲಾ ದುರ್ನಡತೆಯನ್ನೂ ಶ್ರೀ ಮಹಾವಿಷ್ಣುವಿಗೆ ಹೇಳಿದನು. ಅದನ್ನು ಕೇಳಿ ಶ್ರೀ ಮಹಾವಿಷ್ಣುವು ಕುಪಿತನಾಗಿ ತನ್ನ ಉತ್ತಮ ಆಯುಧವಾದ ಚಕ್ರವನ್ನು ಹಿಡಿದು, ಗರುಡಾರೂಢನಾಗಿ ಚಂದ್ರನ ಮೇಲೆ ಯುದ್ಧಮಾಡುವುದಕ್ಕೆ ಮನಸ್ಸು ಮಾಡಿದನು.

೨೫. ಸುದರ್ಶನ ಚಕ್ರ, ಶಾರ್ಙ್ಗವೆಂಬ ಧನುಸ್ಸು, ಇವುಗಳನ್ನು ಧರಿಸಿದ ಶ್ರೀ ಮಹಾವಿಷ್ಣುವು ಚಂದ್ರನ ಮೇಲೆ ಕೋಪಗೊಂಡವನಾಗಿ ದೊಡ್ಡ ಯುದ್ಧ ಮಾಡುವುದಕ್ಕೋಸ್ಕರ ದೇವತೆಗಳೊಡನೆ ಹೊರಟನು.

೨೬. ಹೀಗೆ ಶ್ರೀ ಮಹಾವಿಷ್ಣುವು ದೇವಸಮೇತನಾಗಿ ತನ್ನ ಮೇಲೆ ಯುದ್ಧಮಾಡುವುದಕ್ಕಾಗಿ ಬಂದಿರುತ್ತಾನೆಂದು ಚಂದ್ರನು ತಿಳಿದು, ಯುದ್ಧದಲ್ಲಿ ಅತಿ ಶೂರನಾದ ತಾನೂ, ದೈತ್ಯಸಮೂಹಯುತನಾಗಿ ಶಂಖಧ್ವನಿಗೈದು, ಯುದ್ಧಕ್ಕಾಗಿ ಬಂದು ನಿಂತನು.

ಸ ಜಿತ್ವಾ ದೇವಸಂಘಾತಂ ಸೇಂದ್ರಂ ವಾಯುಪುರಸ್ಸರಂ ।
ವಿಷ್ಣುನಾ ಸಹ ಸಂಯುಕ್ತಃ ಶಸ್ತ್ರಾಸ್ತ್ರೈರಸುಭೋಜನೈಃ ॥ ೨೭ ॥

ಯದಾ ನಾಸಾವುಪರಮೇದ್ಯುದ್ಧಾಯ ಸಹ ವಿಷ್ಣುನಾ ।
ತದಾಽಽದದೇ ರುಷಾ ವಿಷ್ಣುಶ್ಚಕ್ರಂ ಕ್ರೋಧಸಮನ್ವಿತಃ ॥ ೨೮ ॥

ಅಥಾಹ ಬ್ರಹ್ಮಾ ದೇವೇಶಮಜಿತಂ ವಿಷ್ಣುಮವ್ಯಯಂ ।
ಯೋಽಸೌ ಮೇಘಪ್ರಪುಷ್ಟಾಂಗಂ ಯತ್ವಾಂ ವಚ್ಮಿ ನಿಬೋಧ ತತ್॥೨೯॥

ನಾಸ್ತ್ಯವಧ್ಯಂ ತ್ರಿಭುವನೇ ಚಕ್ರಸ್ಯಾಸ್ಯ ತವಾನಘ ।
ಸೋಮೋ ದ್ವಿಜಾಧಿಪತ್ಯೇ ಚ ಮಯಾ ಸಮಭಿಷೇಚಿತಃ ॥ ೩೦ ॥

---

೨೭. ಆ ಚಂದ್ರನು ಇಂದ್ರ ವಾಯು ಮೊದಲಾದ ದೇವಸಮೂಹವನ್ನು ಯುದ್ಧದಲ್ಲಿ ಗೆದ್ದು, ಅನಂತಪ್ರಾಣಾಪಹಾರಕಗಳಾದ ಶಸ್ತ್ರಾಸ್ತ್ರಗಳನ್ನು ಹಿಡಿದು ಕೊಂಡು, ಶ್ರೀ ಮಹಾವಿಷ್ಣುವಿನ ಮೇಲೆ ಯುದ್ಧಮಾಡುವುದಕ್ಕೆ ಬಂದು ನಿಂತನು.

೨೮. ಆಗ ವಿಷ್ಣುವು ಚಂದ್ರನು ತನಗೆ ಪ್ರತಿಭಟಿಸಿ ಯುದ್ಧಸನ್ನದ್ಧನಾದು ದನ್ನು ಕಂಡು, ಕ್ರೋಧಯುತನಾಗಿ ಚಕ್ರಾಯುಧವನ್ನು ಹಿಡಿದನು.

೨೯. ಆಗ ಬ್ರಹ್ಮದೇವನು ಬಂದು ದೇವೇಶನೂ ಎಲ್ಲೂ ಪರಾಜಯವಿಲ್ಲ ದವನೂ, ನಾಶರಹಿತನೂ, ನೀಲಮೇಘಸದೃಶವಾದ ದೇಹವುಳ್ಳವನೂ ಆಗಿರುವ, ಶ್ರೀ ಮಹಾವಿಷ್ಣುವನ್ನು ಕುರಿತು “ ಅನಘನಾದ ವಿಷ್ಣುವೇ ! ಈಗ ನಾನು ಹೇಳು ವುದನ್ನು ಗಮನಿಸು.''

೩೦. “ ಈ ನಿನ್ನ ಚಕ್ರಕ್ಕೆ ಮೂರುಲೋಕಗಳಲ್ಲೂ ಅವಧ್ಯವಾದುದು ಯಾವುದೂ ಇಲ್ಲ. ಈ ಚಂದ್ರನನ್ನು ನಾನು ಈ ಮೊದಲೇ ಬ್ರಾಹ್ಮಣರಿಗೆ ಅಧಿಪತಿಯನ್ನಾಗಿ ಪಟ್ಟಾಭಿಷೇಕ ಮಾಡಿರುತ್ತೇನೆ. ಅದರಿಂದ ಈ ಚಂದ್ರನು ದ್ವಿಜರಾಜನೆನ್ನಿಸಿಕೊಂಡಿದಾನೆ.''

ತಸ್ಮಾದ್ಯದ್ಯುಜ್ಯತೇ ದೇವಕಾರ್ಯೇಽಸ್ಮಿಂಸ್ತದ್ವಿಧೀಯತಾಂ ।
ಅಥಾಹ ಭಗವಾನ್ವಿಷ್ಣುಃ ಸುರಬ್ರಹ್ಮರ್ಷಿಸನ್ನಿಧೌ ॥ ೩೦ ॥

ಸಿನೀವಾಲೀ ಕುಹೂರ್ನಾಮ ತಸ್ಯಾಂ ನಷ್ಟಃ ಕ್ಷಪಾಕರಃ ।
ವಿನಷ್ಟೋಽಪಿ ಪುನರ್ಜನ್ಮ ಪ್ರಾಪ್ಸ್ಯತೀತಿ ನ ಸಂಶಯಃ ॥ ೩೧ ॥

ರಾಕಾಂ ಚಾನುಮತಿಂ ಪ್ರಾಪ್ಯ ವೃದ್ಧಿರಸ್ಯ ಭವಿಷ್ಯತಿ ।
ಆಪ್ಯಾಯಿತಶ್ಚ ಶ್ರುತ್ಯುಕ್ತೈಃ ಪಿತೃಪಿಂಡೈಃ ಸಮಂತ್ರಕೈಃ ॥ ೩೩ ॥

---

೩೦. "ಪ್ರಕೃತ ಈ ದೇವಕಾರ್ಯದಲ್ಲಿ ಯಾವರೀತಿ ಮಾಡುವುದು ಯುಕ್ತವೋ ಹಾಗೆಮಾಡು'' ಎಂದನು (ಚಂದ್ರನು ರಕ್ಷಿತನಾದರೆ ಅವನ ಮೂಲಕವಾಗಿ ಬ್ರಾಹ್ಮಣರೂ ರಕ್ಷಿತರಾಗಿ ಆ ಬ್ರಾಹ್ಮಣರಿಂದ ಹವಿರ್ಭಾಗವು ದೇವತೆಗಳಿಗೆ ಲಭಿಸುವುದು. ಆದುದರಿಂದ ಚಂದ್ರಪರಿರಕ್ಷಣವೇ ಅವಶ್ಯಕಾರ್ಯ ಎಂದು ಬ್ರಹ್ಮದೇವನ ಆಶಯ) ಆಗ ಭಗವಂತನಾದ ಶ್ರೀ ಮಹಾವಿಷ್ಣುವು ದೇವತೆಗಳ ಮತ್ತು ಬ್ರಹ್ಮರ್ಷಿಗಳ ಇದಿರಿನಲ್ಲಿ ಹೀಗೆ ಹೇಳಿದನು.

೩೧. "ಸಿನೀವಾಲೀ, ಕುಹೂ ಎಂದು ಎರಡು ತರಹದ ಅಮಾವಾಸ್ಯಾ ತಿಥಿಯು ಇದೆ. ಆ ಅಮಾವಾಸ್ಯೆಯಲ್ಲಿ ಈ ಚಂದ್ರನು ನಾಶಹೊಂದುವನು. (ಚಂದ್ರಕಲೆ ಕಾಣಿಸುವ ಅಮಾವಾಸ್ಯೆಗೆ ಸಿನೀವಾಲೀ ಎಂದು ಹೆಸರು. ಚಂದ್ರಕಲೆ ಕಾಣಿಸದೇ ಇರುವ ಅಮಾವಾಸ್ಯೆಗೆ ಕುಹೂಃ ಎಂದು ಹೆಸರು.) ಈ ರೀತಿ ಆ ಚಂದ್ರನು ನಷ್ಟನಾದರೂ ಪುನಃ ಪುನಃ ಜನ್ಮವನ್ನು ಎತ್ತುವನು. ಈ ವಿಷಯದಲ್ಲಿ ಸಂದೇಹವಿಲ್ಲ.

೩೩. ರಾಕಾ, ಅನುಮತಿ ಎಂಬ ಎರಡು ತರಹೆಯ ಹುಣ್ಣಿಮೆಯ ದಿನದಲ್ಲಿ, ಈ ಚಂದ್ರನು ಶ್ರುತ್ಯುಕ್ತಗಳಾದ ಮಂತ್ರಪೂರ್ವಕವಾಗಿ ಬ್ರಾಹ್ಮಣರು ಕೊಟ್ಟ ಪಿಂಡಪಿತೃಯಜ್ಞಗಳ ಪಿತೃಪಿಂಡಗಳಿಂದ ತೃಪ್ತನಾಗಿ ವೃದ್ಧಿಹೊಂದುವನು. ಆಗ ಈ ಚಂದ್ರನು ಬ್ರಾಹ್ಮಣರಿಂದ ಹವ್ಯಕವ್ಯಕರ್ಮಗಳನ್ನು ಮಾಡಿಸಿ ದೇವತೆಗಳಿಗೆ ಹವಿರ್ಭಾಗವನ್ನು ಕೊಡಿಸುವನು. (ಸಂಪೂರ್ಣ ಕಲಾಯುಕ್ತ ಚಂದ್ರನುಳ್ಳ ಹುಣ್ಣಿಮೆಗೆ 'ರಾಕಾ' ಎಂದು ಹೆಸರು. ಚಂದ್ರೋದಯಕಾಲಕ್ಕೆ ಚತುರ್ದಶಿಯಾಗಲಿ ಅಥವಾ ಪಾಡ್ಯಮಿಯಾಗಲಿ ಸೇರಿ ಒಂದು ಕಲಾನ್ಯೂನನಾದ ಚಂದ್ರನುಳ್ಳ ಹುಣ್ಣಿಮೆಗೆ ಅನುಮತಿ ಎಂದು ಹೆಸರು.

ಬ್ರಾಹ್ಮಣೈರ್ಹವ್ಯಕವ್ಯಾನಿ ದೇವೇಭ್ಯಃ ಪ್ರಾಪಯಿಷ್ಯತಿ ।
ವೃದ್ಧಿಃ ಕೃಷ್ಣೇನ ಚೈವಾಸ್ಯ ನ ಚ ಜಾತಸ್ಯ ಭೂಯಸೀ ॥
ಏವಮೇವ ವಿಧಿರ್ದೃಷ್ಟಸ್ತಸ್ಯಾಪ್ಯಾಯನಮೇವ ಮೇ ॥ ೩೪ ॥

ಅಮೋಘಸ್ಯ ನ ಮೋಘತ್ವಂ ಭವಿಷ್ಯತಿ ಕದಾಚನ ।
ಶಪ್ತಶ್ಚ ಸೋಮೋ ದಕ್ಷೇಣ ಸ ಚಾವಶ್ಯಂ ಭವಿಷ್ಯತಿ ॥ ೩೫ ॥

ಸುದರ್ಶನಸ್ಯ ಚ ಪ್ರೀತಿರೇವಮೇವ ಭವಿಷ್ಯತಿ ।
ಏವಮಸ್ತ್ವಿತಿ ದೇವೇಶ ಯದ್ಭವಾನ್ಪ್ರಬ್ರವೀತಿ ವೈ ॥ ೩೬ ॥

ಬ್ರಹ್ಮಾ ಪ್ರೋವಾಚ ಸೋಮಂ ತು ವಿನೀತವದುಪಸ್ಥಿತಂ ।
ಅರ್ಪಯಸ್ವ ಗುರೋರ್ಭಾರ್ಯಾಂ ನ ಕಾರ್ಯಂ ಪುನರೀದೃಶಂ ॥ ೩೭ ॥

---

೩೪. ಈ ರೀತಿ ಶುಕ್ಲಪಕ್ಷದಲ್ಲಿ ಹುಟ್ಟಿ, ದಿನಕ್ರಮದಲ್ಲಿ ವೃದ್ಧಿ ಹೊಂದಿದ ಈ ಚಂದ್ರನಿಗೆ ಪುನಃ ಕೃಷ್ಣಪಕ್ಷದಲ್ಲಿ ದಿನದಿನಕ್ಕೆ ಕ್ಷಯವು ಪ್ರಾಪ್ತವಾಗುವುದು. ಆ ಚಂದ್ರನಿಗೆ ಈ ರೀತಿ ವೃದ್ಧಿ ಕ್ಷಯ ಈ ಎರಡನ್ನೂ ನಾನು ವಿಧಿಸಿರುತ್ತೇನೆ.

೩೫. ನನ್ನ ಚಕ್ರಾಯುಧವು ಅಮೋಘವಾದುದರಿಂದ ಅದಕ್ಕೆ ನಿಷ್ಫಲತೆಯು ಯಾವ ಕಾಲದಲ್ಲೂ ಆಗಬಾರದು. ಅಲ್ಲದೆ ಈ ಚಂದ್ರನಿಗೆ ಪೂರ್ವದಲ್ಲೇ ಅವನ ಶ್ವಶುರನಾದ ದಕ್ಷಪ್ರಜಾಪತಿಯಿಂದ "ಕ್ಷಯವುಳ್ಳವನಾಗು" ಎಂಬ ಶಾಪವು ಬಂದಿದೆ. ಆ ಶಾಪವೂ ಅವಶ್ಯವಾಗಿ ಫಲಿಸಲೇ ಬೇಕಾಗಿದೆ.

೩೬. ಅಂತು ಹೇಗೋ ಚಂದ್ರನಿಗೆ ಕ್ಷಯಸಂಭವಿಸುವುದರಿಂದ ನನ್ನ ಚಕ್ರಾಯುಧಕ್ಕೂ ತೃಪ್ತಿಯಾಗುವುದು ಎಂದನು. ಶ್ರೀ ಮಹಾವಿಷ್ಣುವಿನ ಈ ವಚನವನ್ನು ಕೇಳಿ ಬ್ರಹ್ಮನು "ಓ ದೇವಾಧೀಶನೇ! ನೀನು ಹೇಳಿದ ಹಾಗೆಯೇ ಆಗಲಿ" ಎಂದು ಶ್ರೀ ಮಹಾವಿಷ್ಣುವಿಗೆ ಹೇಳಿದನು.

೩೭. ಆಮೇಲೆ ಆ ಬ್ರಹ್ಮನು ವಿನೀತನಾಗಿ ಸಮೀಪಕ್ಕೆ ಬಂದಿರುವ ಚಂದ್ರನನ್ನು ಕುರಿತು, "ಅಯ್ಯಾ ಚಂದ್ರ! ಗುರುಪತ್ನಿಯಾದ ತಾರೆಯನ್ನು ಅವನಿಗೇ ಒಪ್ಪಿಸಿಬಿಡು. ಇನ್ನುಮೇಲೆ ಈ ಪ್ರಕಾರ ಕೆಟ್ಟಕೆಲಸವನ್ನು ಮಾಡಬೇಡ ಎಂದು ಹೇಳಿದನು.

ಸ ತಥೋಕ್ತಃ ಸಮಾನೀಯ ದದೌ ತಾರಾಂ ಬೃಹಸ್ಪತೇಃ ।
ಪುನರೂಚೇ ಶಶೀ ಸ್ಪಷ್ಟಂ ಶೃಣ್ವತಾಂ ತ್ರಿದಿವೌಕಸಾಂ ॥ ೩೮ ॥

ಅಸ್ಯಾಂ ಗರ್ಭೋಽಮದೀಯೋಽಯಂ ಯದಪತ್ಯಂ ಮಮೈವ ತತ್ ।
ಬೃಹಸ್ಪತಿರಥೋವಾಚ ಮಯಾ ಗರ್ಭಃ ಸಮಾಹಿತಃ ॥ ೩೯ ॥

ಕ್ಷೇತ್ರೇ ಮದೀಯೇ ಚೋತ್ಪನ್ನಸ್ತಸ್ಮಾತ್ಸ ಮಮ ಪುತ್ರಕಃ ।
ಉಕ್ತಂ ಚ ವೇದಶಾಸ್ತ್ರಜ್ಞೈಃ ಋಷಿಭಿರ್ಧರ್ಮದರ್ಶಿಭಿಃ ॥ ೪೦ ॥

ಉಪ್ತಂ ವಾತಾಹೃತಂ ಬೀಜಂ ಯಸ್ಯ ಕ್ಷೇತ್ರೇ ಪ್ರರೋಹತಿ ।
ಕ್ಷೇತ್ರಿಣಸ್ತಸ್ಯ ತದ್ಬೀಜಂ ನ ಬೀಜೀ ಫಲಭಾಗ್ಭವೇತ್ ॥ ೪೧ ॥

---

೩೮. ಬ್ರಹ್ಮನು ಆ ಪ್ರಕಾರ ಹೇಳಲಾಗಿ, ಆಗ ಚಂದ್ರನು ತಾರೆಯನ್ನು ಕರೆದುಕೊಂಡು ಬಂದು ಬೃಹಸ್ಪತಿಗೆ ಕೊಟ್ಟನು. ಅಲ್ಲದೆ ಆ ಚಂದ್ರನು ಎಲ್ಲಾ ದೇವತೆಗಳಿಗೂ ಕೇಳಿಸುವ ಹಾಗೆ ಸ್ಪಷ್ಟವಾಗಿ ಈ ಮಾತನ್ನು ಹೇಳಿದನು.

೩೯. "ಈ ತಾರೆಯಲ್ಲಿ ಈಗ ಉತ್ಪನ್ನವಾಗಿರುವ ಗರ್ಭವು ನನ್ನದೇ. ಈ ಗರ್ಭದಲ್ಲಿ ಜನಿಸುವ ಸಂತತಿಯು ನನಗೆ ಸೇರಿದುದು" ಎಂದನು. ಆಗ ಬೃಹಸ್ಪತಿಯು ಈ ಮಾತನ್ನು ಕೇಳಿ "ನಾನೇ ಈ ಗರ್ಭಾಧಾನ ಮಾಡಿದವನು" ಎಂದು ಹೇಳಿದನು.

೪೦. ಅಲ್ಲದೆ ಆ ಬೃಹಸ್ಪತಿಯು ಮುಂದೆ ಹೇಳತೊಡಗಿ, "ಈ ತಾರೆಯು ನನ್ನ ಕ್ಷೇತ್ರ. (ನನ್ನ ಪತ್ನಿ. ಆದುದರಿಂದ ಇವಳಲ್ಲಿ ಜನಿಸುವ) ಸಂತತಿಯು ನನ್ನದೇ ಆಗಿರುತ್ತದೆ. ಈ ವಿಷಯದಲ್ಲಿ ವೇದ ಶಾಸ್ತ್ರಗಳು ಇವುಗಳನ್ನೆಲ್ಲಾ ತಿಳಿದು ಧರ್ಮಮಾರ್ಗಪ್ರದರ್ಶಕರಾಗಿರುವ ಮನ್ವಾದಿ ಮಹರ್ಷಿಗಳ ವಚನವನ್ನು ಗಮನಿಸಿ."

೪೧. "ಕ್ಷೇತ್ರದಲ್ಲಿ ಬೀಜ ಬಿತ್ತಿದ ಮೇಲೆ, ಆ ಬೀಜವು ಗಾಳಿ, ನೀರು ಮೊದಲಾದುವುಗಳಿಂದ ಬಿತ್ತಿದವನ ಕ್ಷೇತ್ರದಿಂದ ಹಾರಿ, ಅಥವಾ ಜಲಪ್ರವಾಹಕ್ಕೆ ಸಿಕ್ಕಿ, ಇನ್ನೊಬ್ಬನ ಕ್ಷೇತ್ರಕ್ಕೆ ಹೋಗಿ ಅಲ್ಲಿ ಅಂಕುರಿಸಿ ಫಲಭರಿತವಾದರೆ ಆ ಫಲವು ಯಾವನ ಕ್ಷೇತ್ರದಲ್ಲಿ ಜನಿಸಿದೆಯೋ ಅವನಿಗೇ ಸೇರಬೇಕು. ಆ ಬೀಜವೂ ಆ ಕ್ಷೇತ್ರಿಕನದೇ ಆಗುವುದು. ಬೀಜ ಬಿತ್ತಿದವನು ಅದರ ಫಲಭಾಗಿಯಾಗುವುದಿಲ್ಲ ಎಂದು ಹೇಳಿರುವರು" ಎಂದನು.

ಸಮ್ಯಗುಕ್ತಂ ನ ಭವತಾ ಶಶಾಂಕಃ ಪ್ರಾಹ ತತ್ತ್ವವಿತ್ ।
ಮಾತಾ ಭಸ್ತ್ರಾ ಪಿತುಃ ಪುತ್ರೋ ಯೇನ ಜಾತಃ ಸ ಏವ ಸಃ ॥
ಇತಿ ಪೌರಾಣಿಕಾಃ ಪ್ರಾಹುರ್ಮುನಯೋ ನಯಚಕ್ಷುಷಃ ॥ ೪೨ ॥

ವಿವದಂತೌ ನಿವಾರ್ಯಾಥ ಬ್ರಹ್ಮಾ ಪ್ರೋವಾಚ ತಾಂ ವಧೂಂ ।
ಶನೈರೇಕಾಂತಮಾನೀಯ ಗರ್ಭೋಽಯಂ ಕಸ್ಯ ಶಂಸ ಮೇ ॥ ೪೩ ॥

ಏವಮುಕ್ತಾ ತು ಸಾ ತಾರಾ ಹ್ರಿಯಾ ನೋವಾಚ ಕಿಂಚನ ।
ಉತ್ಸಸರ್ಜ ಕ್ಷಣಾದ್ಗರ್ಭಂ ಭಾಭಾಸಿತಸುರಾಲಯಂ ॥ ೪೪ ॥

ತಮುವಾಚ ತತೋ ಬ್ರಹ್ಮಾ ಪುತ್ರ ಕಸ್ಯ ಸುತೋ ಭವಾನ್ ।
ಸೋಮಸ್ಯಾಹಂ ಸುತೋ ಬ್ರಹ್ಮನ್ನಿತಿ ತಥ್ಯಂ ಮಯೋದಿತಂ ॥ ೪೫ ॥

---

೪೨. ಆಗ ಆ ಬೃಹಸ್ಪತಿಯ ಮಾತನ್ನು ಕೇಳಿ, ತತ್ವಜ್ಞನಾದ ಚಂದ್ರನು "ಎಲೈ ಬೃಹಸ್ಪತಿಯೇ ! ನೀನು ಸ್ಪಷ್ಟವಾಗಿ ಹೇಳಿಲ್ಲ. ನೀನು ಹೇಳಿದ ವಿಷಯವು ಸಮಂಜಸವಲ್ಲ. ಏತಕ್ಕೆಂದರೆ ಯುಕ್ತಿಕುಶಲರಾಗಿ ಪ್ರಾಚೀನ ಪುರಾಣಪ್ರವರ್ತಕರಾದ ಮುನಿಗಳು'' ತಾಯಿಯು ಚರ್ಮದ ಚೀಲದಂತಿರುವಳು. ಮಗನು ತಂದೆಯ ವೀರ್ಯಸಂಭೂತನು. ಆದುದರಿಂದ ಯಾವನಿಂದ ಆ ಸಂತತಿಯು ಜನಿಸುವುದೋ ಅವನದೇ ಅದು. (ಚೀಲದಲ್ಲಿ ಹಣವನ್ನಿಟ್ಟರೆ ಆ ಹಣವು ಇಟ್ಟವನದ್ದೇ ಹೊರತು ಆ ಚೀಲದ್ದು ಎಂದಿಗೂ ಆಗಲಾರದು. ಅಥವಾ ಚೀಲವು ಯಾರದ್ದೋ ಅವನದೂ ಆಗಲಾರದು) ಎಂದು ಹೇಳಿದನು.

೪೩. ಅನಂತರ ಈರೀತಿ ವಿವಾದಮಾಡುತ್ತಿರುವ ಚಂದ್ರ ಮತ್ತು ಬೃಹಸ್ಪತಿ ಇವರನ್ನು ಬ್ರಹ್ಮನು ತಡೆದು, ಆ ತಾರೆಯನ್ನು ಏಕಾಂತಸ್ಥಳಕ್ಕೆ ಕರೆದುಕೊಂಡು ಹೋಗಿ, ಮೆಲ್ಲನೆ "ಓ ಅಮ್ಮ! ಈ ನಿನ್ನಲ್ಲಿರುವ ಗರ್ಭವು ಯಾರದ್ದು ಎಂಬುದನ್ನು ನನಗೆ ಹೇಳು'' ಎಂದು ಪ್ರಶ್ನೆಮಾಡಿದನು.

೪೪. ಬ್ರಹ್ಮನಿಂದ ಈರೀತಿ ಪ್ರಶ್ನಿಸಲ್ಪಟ್ಟರೂ, ಆ ತಾರೆಯು ಲಜ್ಜೆಯಿಂದ ಯಾವ ಉತ್ತರವನ್ನೂ ಹೇಳಲಿಲ್ಲ. ಆ ಕೂಡಲೆ ಸ್ವರ್ಗವನ್ನೆಲ್ಲಾ ತನ್ನ ಕಾಂತಿಯಿಂದ ಬೆಳಗುವಂತಹ ಪುತ್ರನನ್ನು ಕ್ಷಣದೊಳಗೆ ಗರ್ಭದಿಂದ ಪ್ರಸವಿಸಿದಳು.

೪೫. ಅನಂತರ ಜನಿಸಿದ ಆ ಮಗುವನ್ನು ಕುರಿತು ಆ ಬ್ರಹ್ಮನು "ಎಲೈ ಮಗುವೇ ! ನೀನು ಯಾರ ಪುತ್ರನೆಂಬುದನ್ನು ಹೇಳು'' ಎಂದು ಪ್ರಶ್ನೆಮಾಡಿ

ಬುಧೋಽಯಂ ವಿಬುಧಾಃ ಪ್ರಾಹುಃ ಸರ್ವಜ್ಞಾನವಿದಾಂ ವರಃ ।
ಗೃಹೀತ್ವಾ ಪುತ್ರಕಂ ಸೋಮೋ ಜಗಾಮ ಸ್ವಂ ನಿವೇಶನಂ ॥ ೪೬ ॥

ಗುರುರ್ಗೃಹೀತ್ವಾ ಸ್ವಾಂ ಭಾರ್ಯಾಂ ಜಗಾಮ ಭವನಂ ಶನೈಃ ।
ಸೋಮೋಽಪಿ ತನಯಂ ಲಬ್ಧ್ವಾ ಹರ್ಷವ್ಯಾಕುಲಮಾನಸಃ ॥ ೪೭ ॥

ಪೌರ್ಣಮಾಸೀ ಸಮಾಖ್ಯಾತಾ ಪ್ರಾಪ್ತಪೂರ್ಣಮನೋರಥಾ ।
ಪ್ರಾಪ್ತಃ ಪುತ್ರೋ ಮಯಾ ಹ್ಯಸ್ಯಾಂ ಲಬ್ಧಶ್ಚ ವಿಜಯಸ್ತಥಾ ॥ ೪೮ ॥

ತಸ್ಮಾದೇನಾಮುಪಾಸಿಷ್ಯೇ ವಿಧಿನಾ ವ್ರತತತ್ಪರಃ ।
ಏವಮನ್ಯೋಽಪಿ ಪೂರ್ಣಾರ್ಥಃ ಪೂರ್ಣಾಂಗಃ ಪೂರ್ಣಲಕ್ಷಣಃ ॥೪೯॥

---

ದನು. ಆಗ ಆ ಮಗುವು “ ಓ ಬ್ರಹ್ಮನೇ ! ನಾನು ಚಂದ್ರನ ಮಗನು. ಈ ವಿಷಯವು ಸತ್ಯ’’ ಎಂಬದಾಗಿ ಉತ್ತರ ಹೇಳಿತು.

೪೬. ಆಗ ಅಲ್ಲಿರುವ ಎಲ್ಲಾ ದೇವತೆಗಳೂ ಆ ಮಗುವಿಗೆ ಬುಧ ಎಂಬ ನಾಮಧೇಯವನ್ನಿಟ್ಟು ಇವನು ಸರ್ವಜ್ಞಾನಿಗಳಲ್ಲೂ ಅತ್ಯುತ್ತಮನು ಎಂದು ಹೇಳಿದರು. ಅನಂತರ ಚಂದ್ರನು ಪುತ್ರನನ್ನು ಸಂಗಡ ಕರೆದುಕೊಂಡು ತನ್ನ ಮನೆಗೆ ಹೋದನು.

೪೭. ಬೃಹಸ್ಪತಿಯು ತನ್ನ ಭಾರ್ಯೆಯಾದ ತಾರೆಯನ್ನು ಕರೆದುಕೊಂಡು ಮೆಲ್ಲನೆ ತನ್ನ ಮನೆಗೆ ಬಂದನು. ಚಂದ್ರನು ಆ ಪುತ್ರನನ್ನು ಪಡೆದು ಸಂತೋಷ ಭರಿತವಾದ ಮನಸ್ಸುಳ್ಳವನಾದನು.

೪೮. ಆಗ ಚಂದ್ರನು “ ಈದಿನ ತನ್ನ ಮನೋರಥವು ಪೂರ್ತವಾದುದರಿಂದ ಈ ದಿನಕ್ಕೆ ಪೌರ್ಣಿಮಾಸೀ ಎಂಬ ನಾಮಧೇಯವಿರಲಿ. ಈ ಪೌರ್ಣಮಾಸಿಯಲ್ಲಿ ನನಗೆ ಪುತ್ರಲಾಭವಾಯಿತು. ಹಾಗೆಯೇ ಈ ನಡೆದ ಯುದ್ಧದಲ್ಲೂ ಜಯಲಾಭವಾಯಿತು ’’ ಎಂದನು.

೪೯. ಆದುದರಿಂದ ಈ ಪೌರ್ಣಮಾಸಿಯಲ್ಲಿ ನಾನು ಉಪವಾಸಮಾಡಿ, ಕ್ರಮಪ್ರಕಾರವಾಗಿ ವ್ರತಾನುಷ್ಠಾನಪರನಾಗುವೆನು. ಈರೀತಿ ಇತರರೂ ಈ ತಿಥಿಯಲ್ಲಿ ಉಪವಾಸಾದಿಗಳನ್ನು ಆಚರಿಸಿದರೆ, ಅವರೂ ಪರಿಪೂರ್ಣಮನೋರಥರೂ, ಪೂರ್ಣಾಂಗರೂ, ಸುಲಕ್ಷಣರೂ ಆಗುತ್ತಾರೆ.

ಯೋ ಮಾಮಸ್ಯಾಂ ತಿಥೌ ಭಕ್ತ್ಯಾ ವಿಧಿವತ್ಪೂಜಯಿಷ್ಯತಿ |
ತಸ್ಯ ಪ್ರಸಾದಾಭಿಮುಖಃ ಸರ್ವಕಾಮಪ್ರದೋಽಹ್ಯಹಂ || ೫೦ ||

ಏವಮೇಷಾ ತಿಥಿಃ ಪಾರ್ಥ ಸೋಮಸ್ಯ ದಯಿತಾ ಶುಭಾ |
ಪೌರ್ಣಮಾಸೀ ಸಮಾಖ್ಯಾತಾ ಪೂರ್ಣೋ ಮಾಸೋ ಭವೇದ್ಯಥಾ ||

ತದಸ್ಯಾಂ ಸ್ರೋತಸಿ ಸ್ನಾತ್ವಾ ಸಂತರ್ಪ್ಯ ಪಿತೃದೇವತಾಃ |
ಆಲಿಖ್ಯ ಮಂಡಲೇ ಸೋಮಂ ನಕ್ಷತ್ರೈಃ ಸಹಿತಂ ವಿಭುಂ || ೫೨ ||

ಪೂಜಯೇತ್ಕುಸುಮೈರ್ಹೃದ್ಯೈರ್ನೈವೇದ್ಯೈರ್ಘೃತಪಾಚಿತೈಃ |
ಶುಕ್ಲಾಕ್ಷತೈಃ ಶುಕ್ಲವಸ್ತ್ರೈಃ ಪೂಜಯಿತ್ವಾ ಕ್ಷಮಾಪಯೇತ್ || ೫೩ ||

---

೫೦. ಯಾವ ಪುರುಷನು ನನ್ನ ಸಂಬಂಧಿಯಾದ ಈ ಪೌರ್ಣಮಾಸಿಯಲ್ಲಿ (ಈ ಪೌರ್ಣಿಮಾ ತಿಥಿಯಲ್ಲಿ) ಭಕ್ತಿಯಿಂದ ವಿಧಿವತ್ತಾಗಿ ನನ್ನನ್ನು ಪೂಜಿಸುವನೋ, ಅಂತಹವನಿಗೆ ನಾನು ಪ್ರಸನ್ನನಾಗಿ ಅವನ ಸರ್ವ ಮನೋರಥಗಳನ್ನೂ ಸಾಧಿಸಿಕೊಡುವೆನು ಎಂದನು.

೫೧. ಅಯ್ಯಾ ಪಾರ್ಥನೇ! ಈ ಪೌರ್ಣಮಾಸಿ ಎಂಬ ಶುಭತಿಥಿಯು ಚಂದ್ರನಿಗೆ ಈ ರೀತಿಯಾಗಿ ಪ್ರೀತಿಪಾತ್ರವಾಗಿದೆ. ಈ ದಿನದಲ್ಲಿ ಮಾಸವು ಪರಿಪೂರ್ಣವಾಗುವುದರಿಂದ ಪೌರ್ಣಮಾಸೀ ಎಂದು ಪಂಡಿತರು ಹೇಳುತ್ತಾರೆ.

೫೨. ಆದುದರಿಂದ ಈ ಪೌರ್ಣಮಾಸೀ ತಿಥಿಯಲ್ಲಿ ನದಿಯಲ್ಲಿ ಸ್ನಾನ ಮಾಡಿ, ಪಿತೃದೇವತೆಗಳಿಗೆ ತರ್ಪಣವನ್ನು ಕೊಟ್ಟು, ಮಂಡಲದಲ್ಲಿ ನಕ್ಷತ್ರ ಸಹಿತವಾಗಿ ಸ್ವಾಮಿಯಾದ ಚಂದ್ರನನ್ನು ಬರೆಯಬೇಕು.

೫೩. ಅನಂತರ ಅದರಲ್ಲಿ ಶುಕ್ಲಾಕ್ಷತೆ, ಶುಕ್ಲವಸ್ತ್ರ, ಮನೋಹರವಾದ ಪುಷ್ಪ, ಇವುಗಳಿಂದ ಚಂದ್ರನಿಗೆ ಪೂಜೆಮಾಡಿ ಘೃತಪಕ್ವಗಳೂ, ಮನೋಹರವೂ ಆದ ನೇವೈದ್ಯಗಳನ್ನು ಸಮರ್ಪಿಸಿ, ಪ್ರಾರ್ಥನಾಮಂತ್ರವನ್ನು ಪಠಿಸಿ, ಪ್ರಾರ್ಥಿಸಬೇಕು. ಮತ್ತು ಆದಿನ ರಾತ್ರಿಯಲ್ಲಿ ಗೆಡ್ಡೆ, ಗೆಣಸು ಮುಂತಾದ ಶಾಕಾಹಾರಗಳನ್ನು ಮೌನವಾಗಿ ಭುಂಜಿಸಬೇಕು.

ಶಾಕಾಹರಣಮುನ್ಯನ್ನೈರ್ನಕ್ತಂ ಭುಂಜೀತ ವಾಗ್ಯತಃ ।
ವಸಂತಬಾಂಧವ ವಿಧೋ ಶೀತಾಂಶೋ ಸ್ವಸ್ತಿ ನಃ ಕುರು ।
ಗಗನಾರ್ಣವಮಾಣಿಕ್ಯ ಚಂದ್ರ ದಾಕ್ಷಾಯಣೀಪತೇ ॥ ೫೪ ॥

ಮಾಸೇಮಾಸೇ ಪೌರ್ಣಮಾಸ್ಯಾಂ ವಿಧಿರೇಷ ಪ್ರಕೀರ್ತಿತಃ ।
ಕೃಷ್ಣಪಕ್ಷೇಽಪಿ ಯಃ ಕಶ್ಚಿಚ್ಛ್ರದ್ಧಾವಾನ್ವ್ರತೀ ಭವೇತ್ ॥ ೫೫ ॥

ತಸ್ಯಾಪ್ಯೇಷವಿಧಿಃ ಪ್ರೋಕ್ತಃ ಸರ್ವಸೌಖ್ಯಪ್ರದಾಯಕಃ ।
ಅಮಾವಾಸ್ಯಾ ತಿಥಿರಿಯಂ ಪಿತೄಣಾಂ ದಯಿತಾ ಸದಾ ॥
ಅಸ್ಯಾಂ ದತ್ತಂ ತಪಸ್ತಪ್ತಂ ಪಿತೄಣಾಮಕ್ಷಯಂ ಭವೇತ್ ॥ ೫೬ ॥

ಅಮಾವಾಸ್ಯಾ ಮಹಾರಾಜ ಪ್ರಯತ್ನೈರ್ಯೈರುಪೋಷಿತಾ ।
ತೈರಕ್ಷಯ್ಯಂ ಭವೇದ್ದತ್ತಂ ಪಿತೃಭ್ಯಸ್ತೀರ್ಥಮುತ್ತಮಂ ॥ ೫೭ ॥

---

೫೪. ದಾಕ್ಷಾಯಣಿಯ ಪತಿಯೂ, ಗಗನವೆಂಬ ಸಮುದ್ರಕ್ಕೆ ಮಾಣಿಕ್ಯ ಮಣಿಯಂತಿರುವವನೂ, ಶೀತಕಿರಣನಾಗಿರುವ ವಸಂತನಿಗೆ ಬಂಧುವೂ, ಎನಿಸಿದ ಓ ಚಂದ್ರನೇ ! ನೀನು ನಮಗೆ ಮಂಗಲವನ್ನು ಕೊಡು, ಎಂದು ಇದರ ತಾತ್ಪರ್ಯ.

೫೫. ಪ್ರತಿತಿಂಗಳಲ್ಲೂ ಪೌರ್ಣಿಮಾಸಿಯಲ್ಲಿ ಈ ವ್ರತವನ್ನು ಆಚರಿಸುವುದಕ್ಕೆ ಇದೇ ಕ್ರಮ ಎಂದು ಉಕ್ತವಾಗಿದೆ. ಶ್ರದ್ಧೆಯುಳ್ಳ ಪುರುಷನು ಕೃಷ್ಣ ಪಕ್ಷದ ಅಮಾವಾಸ್ಯೆಯಲ್ಲೂ ಈ ವ್ರತಾನುಷ್ಠಾನಮಾಡಬಹುದು.

೫೬. ಆಗ ಆಚರಿಸುವುದಕ್ಕೂ ಈ ಹಿಂದೆ ಹೇಳಿದ ವಿಧಿಯೇ ಸರ್ವ ಸೌಖ್ಯ ಪ್ರದವಾಗಿದೆ. ಈ ಅಮಾವಾಸ್ಯಾ ತಿಥಿಯು ಪಿತೃಗಳಿಗೆ ಯಾವಾಗಲೂ ಅತಿ ಪ್ರಿಯವಾಗಿದೆ. ಆದುದರಿಂದ ಆ ತಿಥಿಯಲ್ಲಿ ಮಾಡಿದ ದಾನ, ಆಚರಿಸಿದ ತಪಸ್ಸು, ಇವುಗಳು ಪಿತೃಗಳಿಗೆ ಅಕ್ಷಯ ಫಲಪ್ರದವಾಗುವುದು.

೫೭. ಅಯ್ಯಾ ಮಹಾರಾಜನೇ! ಈ ಅಮಾವಾಸ್ಯೆಯಲ್ಲಿ ಯಾರು ಪ್ರಯತ್ನಪೂರ್ವಕವಾಗಿ ಉಪವಾಸವನ್ನು ಆಚರಿಸಿ, ಪಿತೃಗಳಿಗೆ ವಿಧ್ಯುಕ್ತವಾಗಿ ಜಲತರ್ಪಣಮಾಡುವರೋ, ಅಂತಹವರು ಅರ್ಪಿಸಿದ ಆ ಜಲವು ಆ ಪಿತೃಗಳಿಗೆ ಅಕ್ಷಯವಾಗುವುದು.

ಯಃ ಕಶ್ಚಿತ್ಕುರುತೇ ತಸ್ಮಿನ್ಪಿತೃಪಿಂಡೋದಕಕ್ರಿಯಾಂ ।
ಸ ತಾರಯತಿ ಪುಣ್ಯಾತ್ಮಾ ಪುರುಷಾನೇಕವಿಂಶತಿಂ ॥ ೫೮ ॥

ಭವೇಯುರಕ್ಷಯಾಸ್ತಸ್ಯ ಲೋಕಾಃ ಪಿತೃನಿಷೇವಿತಾಃ ।
ಯದಾ ತು ಇಹ ಕಾಲಾಂತೇ ತಸ್ಯಾತ್ರಾಗಮನಂ ಭವೇತ್ ॥ ೫೯ ॥

ಬ್ರಾಹ್ಮಣಃ ಪಿತೃಭಕ್ತಶ್ಚ ಸರ್ವವಿದ್ಯಾವಿಶಾರದಃ ।
ಏವಂ ಜನ್ಮನಿ ರಾಜೇಂದ್ರ ಭವೇದ್ಧನಸಮನ್ವಿತಃ ॥ ೬೦ ॥

ಏವಂ ಸಂವತ್ಸರಸ್ಯಾಂತೇ ಹೈಮಂ ಕೃತ್ವಾ ಸುಶೋಭನಂ ।
ಸೋಮಂ ನಕ್ಷತ್ರಸಹಿತಂ ವಿಪ್ರಾಯ ಪ್ರತಿಪಾದಯೇತ್ ॥ ೬೧ ॥

ಉಪದೇಶಂ ಪ್ರಯಚ್ಛೇದ್ಯಸ್ತಸ್ಮೈ ವ್ರತಕೃತೇ ನರಃ ।
ಸಂಪೂಜ್ಯ ವಸ್ತ್ರಾಭರಣೈರ್ಮಂತ್ರೇಣೇತ್ಥಂ ನಿವೇದಯೇತ್ ॥
ಮಾಸೇಮಾಸೇ ವಿಧಿರಿಯಂ ವ್ರತಸ್ಯಾಸ್ಯ ನರಾಧಿಪ ॥ ೬೨ ॥

---

೫೮. ಯಾವ ಪುರುಷನು ಈ ಅಮಾವಾಸ್ಯೆಯಲ್ಲಿ ತನ್ನ ಪಿತೃಗಳನ್ನುದ್ದೇಶಿಸಿ ಪಿಂಡಪ್ರದಾನ, ಜಲತರ್ಪಣ ಇವುಗನ್ನು ಮಾಡುವನೋ ಅವನು ತನ್ನ ಇಪ್ಪತ್ತೊಂದು ತಲೆಮಾರಿನ ಪಿತೃಗಳನ್ನೂ ಉದ್ಧರಿಸುತ್ತಾನೆ.

೫೯–೬೦. ಅಯ್ಯಾರಾಜೇಂದ್ರನೇ ! ಅವನಿಗೆ ಪಿತೃಗಳು ವಾಸಿಸುತ್ತಿರುವ ಅಕ್ಷಯ ಪಿತೃಲೋಕಗಳ ಪ್ರಾಪ್ತಿಯು ಆಗುವುದು. ಹಾಗೆಯೇ ಕಾಲಾಂತರದಲ್ಲಿ ಈ ಭೂಲೋಕದಲ್ಲಿ ಬ್ರಾಹ್ಮಣನಾಗಿ ಜನಿಸಿ, ಪಿತೃಭಕ್ತಿಯುಳ್ಳವನೂ, ಸರ್ವ ವಿದ್ಯಾವಿಶಾರದನೂ, ಧನಸಮೃದ್ಧಿಯುಳ್ಳವನೂ ಆಗುತ್ತಾನೆ.

೬೧. ಈರೀತಿ ಈ ವ್ರತವನ್ನು ಆಚರಿಸತೊಡಗಿ ಒಂದು ವರ್ಷಕಾಲವು ಸಂಪೂರ್ಣವಾಗುವಾಗ, ಸುವರ್ಣದಿಂದ ನಕ್ಷತ್ರಸಹಿತವಾಗಿ ಚಂದ್ರನ ಮೂರ್ತಿಯನ್ನು ಸುಂದರವಾಗಿ ಮಾಡಿಸಿ, ಬ್ರಾಹ್ಮಣನಿಗೆ ಭಕ್ತಿಯಿಂದ ದಾನಮಾಡಬೇಕು.

೬೨. ಅಯ್ಯಾ ರಾಜನೇ! ಈ ವ್ರತಾನುಷ್ಠಾನಮಾಡುವ ಯಜಮಾನನು, ಈ ವ್ರತೋಪದೇಶಮಾಡಿದ ಬ್ರಾಹ್ಮಣನಿಗೆ ವಸ್ತ್ರಾಭರಣಾದಿಗಳಿಂದ ಪೂಜೆಮಾಡಿ, ಮಂತ್ರಪೂರ್ವಕ ಆ ಚಂದ್ರಪ್ರತಿಮೆಯನ್ನು ದಾನಮಾಡಬೇಕು. ಈ ವ್ರತವಲ್ಲಿ 'ಚರಿಸುವ ವಿಧಾನವನ್ನು ಹಿಂದೆಯೇ ಹೇಳಿ ಆಗಿದೆ.

ಯೋ ನ ಶಕ್ನೋತಿ ವಾ ಕರ್ತುಂ ಮಾಸಿ ವಾಥ ನಿರಂತರಂ ।
ಸ ಏಕಾಮುಪ್ಯುಪೋಷ್ಯೈವ ಕುರ್ಯಾದುದ್ಯಾಪನಂ ಸುಧೀಃ ॥ ೬೩ ॥

ಯಶ್ಚೈತತ್ಕುರುತೇ ಪಾರ್ಥ ಪೌರ್ಣಮಾಸೀವ್ರತಂ ನರಃ ।
ಸರ್ವಪಾಪವಿನಿರ್ಮುಕ್ತಶ್ಚಂದ್ರವದ್ದಿವಿ ರಾಜತೆ ॥ ೬೪ ॥

ಪುತ್ರಪೌತ್ರಧನೋಪೇತೋ ಯಜ್ವಾ ದಾತಾ ಪ್ರಿಯಂವದಃ ।
ಸಂತತಿಂ ವಿಪುಲಾಂ ಪ್ರಾಪ್ಯ ಪ್ರಯಾಗೇ ಮರಣಂ ಭಜೇತ್ ॥ ೬೫ ॥

ತತಶ್ಚೈವಾಕ್ಷಯಾನ್‌ಲೋಕಾನ್ಪ್ರಾಪ್ನೋತಿ ಸುರಸೇವಿತಾನ್ ।
ಸೇವ್ಯಮಾನಃ ಸ ಗಂಧರ್ವೈಃ ಸ್ತೂಯಮಾನಃ ಸುರಾಸುರೈಃ ।
ಆಸ್ತೇ ಸಂಪೂರ್ಣಸರ್ವಾಂಗೋ ಯಾವತ್ಕಲ್ಪಾಯುತತ್ರಯಂ ॥ ೬೬ ॥

---

೬೩. ಈ ವ್ರತವನ್ನು ನಿರಂತರವಾಗಿ ಒಂದು ವರ್ಷವೋ ಅಥವಾ ಒಂದು ತಿಂಗಳೋ ಆಚರಿಸುವುದಕ್ಕೆ ಶಕ್ತಿ ಇಲ್ಲದಂತಹವನು ಒಂದು ಪೌರ್ಣಿಮಾಸೀ ತಿಥಿಯಲ್ಲಿ ಉಪವಾಸಮಾಡಿ ಈ ವ್ರತವನ್ನು ಆಚರಿಸಿ, ಆಗಲೇ ಈ ವ್ರತೋದ್ಯಾಪನ ವನ್ನು ಮಾಡಬಹುದು.

೬೪. ಅಯ್ಯಾ ಕುಂತೀಪುತ್ರನೇ! ಈ ಪೌರ್ಣಮಾಸೀ ವ್ರತವನ್ನು ಆಚರಿಸಿದವನು, ಸರ್ವಪಾಪವಿನಿರ್ಮುಕ್ತನಾಗಿ ಚಂದ್ರನಂತೆ ಅಂತರಿಕ್ಷಲೋಕ ದಲ್ಲಿ ಪ್ರಕಾಶಿಸುತ್ತಾನೆ.

೬೫. ಅಲ್ಲದೆ ಅವನು ಈ ಲೋಕದಲ್ಲಿರುವಾಗ ಪುತ್ರ, ಪೌತ್ರ, ಧನ, ಇವುಗಳಿಂದ ಕೂಡಿದವನಾಗಿ, ಶಾಸ್ತ್ರೋಕ್ತವಾಗಿ ಯಾಗಾನುಷ್ಠಾನಮಾಡು ವವನೂ, ದಾನಿಯೂ, ಪ್ರಿಯವಾದಿಯೂ, ವಿಸ್ತೃತಸಂತತಿಯನ್ನು ಪಡೆದವನೂ ಆಗಿ, ಕೊನೆಗೆ ಪ್ರಯಾಗವೆಂಬ ಪುಣ್ಯಕ್ಷೇತ್ರದಲ್ಲಿ ಮರಣಹೊಂದುವನು.

೬೬. ಅನಂತರ ಅವನು ಗಂಧರ್ವರಿಂದ ಸೇವಿತನಾಗಿ, ಸುರಾಸುರರಿಂದ ಸ್ತೋತ್ರಮಾಡಿಸಿಕೊಳ್ಳುತ್ತಾ, ದೇವತೆಗಳು ವಾಸಿಸುವ ಅಕ್ಷಯಶುಭಲೋಕಕ್ಕೆ ಹೋಗುತ್ತಾನೆ. ಅಲ್ಲಿ ಅವನು ಸಂಪೂರ್ಣ ಸೌಂದರ್ಯಯುಕ್ತನಾಗಿ ಮೂರು ಅಯುತ ಕಲ್ಪಗಳವರೆಗೆ ಅಲ್ಲಿ ವಾಸವಾಗಿರುವನು.

ಅಭ್ಯರ್ಚಯಂತಿ ಸಿತಪಂಚದಶೀಷು ಸೋಮಂ
ಕೃಷ್ಣಾಸು ಯೋ ಪಿತೃಗಣಂ ಜಲಪಿಂಡದಾನೈಃ ।
ತೇಷಾಂ ಗೃಹಾಣಿ ಧನಧಾನ್ಯಸುತಾದಿಸಂಪ- ॥
ತ್ಪೂರ್ಣಾನಿ ಪಾರ್ಥಿವ ಭವಂತಿ ವಿಧೋರ್ವಿಧಾನಾತ್ ॥ ೬೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ವಿಜಯ ಪೌರ್ಣಮಾಸೀ ವ್ರತ
ವರ್ಣನಂ ನಾಮ ನವನವತಿತಮೋಽಧ್ಯಾಯಃ.



---

೬೭. ಅಯ್ಯಾ ರಾಜನೇ! ಯಾರು ಶುಕ್ಲಪಕ್ಷದ ಪೌರ್ಣಮಾಸಿಯಲ್ಲಿ ಚಂದ್ರನನ್ನು ಪೂಜಿಸುವರೋ ಮತ್ತು, ಕೃಷ್ಣಪಕ್ಷದ ಅಮಾವಾಸ್ಯೆಗಳಲ್ಲಿ ಪಿಂಡ ಪ್ರದಾನ, ಜಲತರ್ಪಣಾದಿಗಳಿಂದ ಪಿತೃದೇವತೆಗಳ ಸಮುದಾಯವನ್ನು ಆರಾಧಿಸುವರೋ, ಅವರ ಮನೆಗಳು ಧನ, ಧಾನ್ಯ, ಸುತ, ಇವೇ ಮೊದಲಾದ ಸಂಪತ್ತುಗಳಿಂದ ಪರಿಪೂರ್ಣಗಳಾಗುವುವು. ಹೀಗೆಂದು ಚಂದ್ರನೇ ನಿರೂಪಿಸಿದಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ವಿಜಯಪೌರ್ಣಮಾಸೀ ವ್ರತ ವರ್ಣನೆಯೆಂಬ ತೊಂಭತ್ತೊಂಭನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಉತ್ತರಪರ್ವಣಿ
## ಶತತಮೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಸಂವತ್ಸರೇ ಚ ಯಾಃ ಕಾಶ್ಚಿತ್ತಿಥಯಃ ಪುಣ್ಯಲಕ್ಷಣಾಃ ।
ತಾ ಮೇ ವದ ಯದುಶ್ರೇಷ್ಠ ಸ್ನಾನೇ ದಾನೇ ಮಹಾಫಲಾಃ ॥ ೧ ॥

॥ ಶ್ರೀ ಕೃಷ್ಣ ಉವಾಚ ॥

ವೈಶಾಖೀ ಕಾರ್ತಿಕೀ ಮಾಘೀ ತಿಥಯೋಽತೀವ ಪೂಜಿತಾಃ ।
ಸ್ನಾನದಾನವಿಹೀನೈಸ್ತಾ ನ ನೇಯಾಃ ಪಾಂಡುನಂದನ ॥ ೨ ॥

---

### ನೂರನೆಯ ಅಧ್ಯಾಯ

೧. ಯುಧಿಷ್ಠಿರನು ಹೇಳುತ್ತಾನೆ—ಅಯ್ಯಾ ಯಾದವೋತ್ತಮನೇ ! ಸ್ನಾನ, ದಾನಗಳಿಂದ ಮಹಾಫಲಗಳನ್ನು ಕೊಡತಕ್ಕವುಗಳಾಗಿಯೂ, ಪುಣ್ಯಪ್ರದಗಳಾಗಿಯೂ ಇರುವ ತಿಥಿಗಳು, ವರ್ಷದಲ್ಲಿ ಇನ್ನೂ ಯಾವುದಾದರೂ ಇದ್ದರೆ ಆ ತಿಥಿಗಳನ್ನು ನನಗೆ ಹೇಳು ಎಂದನು.

೨. ಶ್ರೀ ಕೃಷ್ಣನು ಹೇಳುತ್ತಾನೆ—ಅಯ್ಯಾ ಪಾಂಡುಪುತ್ರನೇ! ವೈಶಾಖ, ಕಾರ್ತೀಕ ಮತ್ತು ಮಾಘ ಈ ಮಾಸಗಳ ತಿಥಿಗಳು ಬಹಳ ಪ್ರಶಸ್ತಗಳು. ಆದುದರಿಂದ ಸ್ನಾನ, ದಾನಗಳನ್ನು ಆಚರಿಸದೆ ಆ ಮಾಸದ ದಿನಗಳನ್ನು ವ್ಯರ್ಥವಾಗಿ ಕಳೆಯಬಾರದು.

ತೀರ್ಥಸ್ನಾನಂ ತದಾ ಶಸ್ತಂ ದಾನಂ ವಿತ್ತಾನುರೂಪತಃ ।
ವೈಶಾಖ್ಯಾಂ ಪಾಂಡವಶ್ರೇಷ್ಠ ಶ್ರೇಷ್ಠಾ ದ್ಯೋತನಿಕಾ ಮತಾ    ॥ ೩ ॥

ಕಾರ್ತಿಕ್ಯಾಂ ಪುಷ್ಕರಾರಣ್ಯಂ ಮಾಘ್ಯಾಂ ವಾರಾಣಸೀ ಸ್ಮೃತಾ ।
ಸ್ನಾನೇನೋದಕದಾನೇನ ತಾರಯತ್ಯಪಿ ದುಷ್ಕೃತೀನ್    ॥ ೪ ॥

ಕುಂಭಾನ್ಸ್ವಚ್ಛಾಂಭಸಃ ಪೂರ್ಣಾನ್ಸಹಿರಣ್ಯಾನ್ಸಸಂಯುತಾನ್ ।
ವೈಶಾಖ್ಯಾಂ ಬ್ರಾಹ್ಮಣೋ ದತ್ವಾ ನ ಶೋಚತಿ ಕೃತೇ ವ್ರತೇ    ॥ ೫ ॥

ಮಧುರಾನ್ನರಸೈಃ ಪೂರ್ಣಾನ್ಭಾಜನಾನ್ಕನಕೋಜ್ಜ್ವಲಾನ್ ।
ಗೋಭೂಹಿರಣ್ಯವಾಸಾಂಸಿ ವಿಧಿವತ್ಪ್ರತಿಪಾದಯೇತ್    ॥ ೬ ॥

---

೩. ಅಯ್ಯಾ ಪಾಂಡವೋತ್ತಮನೇ ! ಆಗ ಪುಣ್ಯತೀರ್ಥಸ್ನಾನವು ಬಹು ಪ್ರಶಸ್ತವಾದುದು. ತನ್ನ ದ್ರವ್ಯಾನುಕೂಲಕ್ಕೆ ತಕ್ಕಂತೆ ದಾನಮಾಡುವುದೂ ಬಹಳ ಪ್ರಶಸ್ತ. ಅದರಲ್ಲೂ ವೈಶಾಖಮಾಸದಲ್ಲಿ ದ್ಯೋತನಿಕಾ ತೀರ್ಥಸ್ನಾನವು ಪ್ರಶಸ್ತವಾದುದು.

೪. ಹಾಗೆಯೇ ಕಾರ್ತೀಕದಲ್ಲಿ ಪುಷ್ಕರಾರಣ್ಯಸ್ನಾನವು ಪ್ರಶಸ್ತ. ಮಾಘ ಮಾಸದಲ್ಲಿ ಕಾಶೀಕ್ಷೇತ್ರ ತೀರ್ಥಸ್ನಾನಾದಿಗಳು ಪ್ರಶಸ್ತ. ಈ ಕ್ಷೇತ್ರಗಳಲ್ಲಿ ಆಯಾಯಾ ಮಾಸಗಳಲ್ಲಿ ಹೋಗಿ ಸ್ನಾನ, ದಾನಗಳನ್ನು ಆಚರಿಸಿದರೆ ಅದರಿಂದ ಅವನ ದುಷ್ಕರ್ಮಗಳೆಲ್ಲಾ ನಾಶವಾಗುವುವು.

೫. ಬ್ರಾಹ್ಮಣನು ವೈಶಾಖ ಮಾಸದಲ್ಲಿ ಅನ್ನದಾನದ ಜತೆಗೆ ನಿರ್ಮಲ ಜಲಪೂರ್ಣವಾದ ಕುಂಭಗಳನ್ನೂ, ಹಿರಣ್ಯವನ್ನೂ ದಾನಮಾಡಿ, ಈ ವ್ರತವನ್ನಾಚರಿಸಿದರೆ ಯಾವಾಗಲೂ ಆತನು ದುಃಖಿಯಾಗುವುದಿಲ್ಲ.

೬. ಹಾಗೆಯೇ ವೈಶಾಖ ಮಾಸದಲ್ಲಿ ಮಧುರಾನ್ನಪರಿಪೂರ್ಣವೂ, ಸುಂದರವೂ ಆದ ಭಂಗಾರದ ಭೋಜನ ಪಾತ್ರೆಗಳನ್ನೂ, ಗೋ, ಭೂಮಿ, ಹಿರಣ್ಯ, ವಸ್ತ್ರ, ಇವುಗಳನ್ನೂ ವಿಧಿವತ್ತಾಗಿ ದಾನಮಾಡಬೇಕು.

ಮಾಘ್ಯಾಂ ಮಘಾಸು ಚ ತಥಾ ಸಂತರ್ಪ್ಯ ಪಿತೃದೇವತಾಃ ।
ತಿಲಪಾತ್ರಾಣಿ ದೇಯಾನಿ ತಿಲಾಂಶ್ಚ ಪಲಲೌದನಂ ॥ ೭ ॥

ಕಾರ್ಪಾಸದಾನಮತ್ರೈವ ತಿಲದಾನಂ ಚ ಶಸ್ಯತೆ ।
ಕಂಬಲಾಜಿನರತ್ನಾನಿ ಮೋಚಕೌ ಪಾಪಮೋಚಕೌ ॥ ೮ ॥

ಉಪಾನದ್ದಾನಮತ್ರೈವ ಕಥಿತಂ ಸರ್ವಕಾಮದಂ ।
ಯತ್ರ ವಾ ತತ್ರ ವಾ ಸ್ನಾನಂ ದಾನಂ ವಿತ್ತಾನುರೂಪತಃ ॥ ೯ ॥

ಕಲಿಕಾಲೋದ್ಭವಂ ಸರ್ವಂ ಶಸ್ಯತೇ ಪಾಂಡುನಂದನ ।
ಕಾರ್ತಿಕ್ಯಾಂ ತು ವೃಷೋತ್ಸರ್ಗೋ ವಿವಾಹಃ ಪುಣ್ಯಲಕ್ಷಣಃ ॥
ಕಾರ್ಯಂ ಕುರುಕುಲಶ್ರೇಷ್ಠ ಹರೇರ್ನೀರಾಜನಂ ತಥಾ ॥ ೧೦ ॥

---

೭. ಹಾಗೆಯೇ ಮಾಘ ಮಾಸದ ದಿನಗಳು ಅದರಲ್ಲೂ ಮಖಾ ನಕ್ಷತ್ರಯುಕ್ತವಾದ ದಿನ ಇವುಗಳಲ್ಲಿ ಪಿತೃದೇವತೆಗಳಿಗೆ ತರ್ಪಣಕೊಟ್ಟು, ತಿಲಪಾತ್ರೆ, ತಿಲ, ಅನ್ನ ಇವುಗಳನ್ನು ದಾನಮಾಡಬೇಕು.

೮. ಈ ಮಾಘಮಾಸದಲ್ಲಿ ಕಾರ್ಪಾಸ (ಹತ್ತಿ) ದಾನ, ತಿಲದಾನ ಇವುಗಳು ಅತಿ ಪ್ರಶಸ್ತಗಳೆಂದು ಉಕ್ತವಾಗಿದೆ. ಕಂಬಳಿ, ಕೃಷ್ಣಾಜಿನ, ರತ್ನ, ನುಗ್ಗೇಕಾಯಿ ಇವುಗಳ ದಾನವು ಪಾಪನಿವಾರಕಗಳೆನಿಸುವುವು.

೯. ಈ ಮಾಘಮಾಸದಲ್ಲಿ ಪಾದುಕೆಯನ್ನು ದಾನಮಾಡಿದರೆ ಅದು ಸರ್ವಕಾಮಪ್ರದವಾಗುವುದೆಂದು ಉಕ್ತವಾಗಿದೆ. ತೀರ್ಥನಿಯಮವನ್ನನುಸರಿಸದೆ ಎಲ್ಲಿ ಬೇಕಾದರೂ ಮಾಘಸ್ನಾನಮಾಡಬಹುದು. ಆದರೆ ದಾನಗಳನ್ನು ಮಾತ್ರ ತನ್ನ ಸಂಪತ್ತಿಗನುಸಾರವಾಗಿ ಮಾಡಬೇಕು.

೧೦. ಅಯ್ಯಾ ಪಾಂಡುಪುತ್ರನೇ ! ಆದುದರಿಂದ ಈ ಕಲಿಕಾಲದಲ್ಲಿ ತನ್ನ ದ್ರವ್ಯಾನುಕೂಲವನ್ನು ಅನುಸರಿಸಿ ಎಲ್ಲಾ ಪದಾರ್ಥಗಳನ್ನೂ ದಾನಮಾಡುವುದು ಶ್ರೇಷ್ಠವೆಂದು ಹೊಗಳಿದೆ. ಅಯ್ಯಾ ಕುರುಕುಲೋತ್ತಮನೇ ! ಕಾರ್ತೀಕ ಮಾಸದಲ್ಲಿ "ವೃಷೋತ್ಸರ್ಗ" ಪುಣ್ಯಪ್ರದವಾದ ಕನ್ಯಾದಾನ, ಇವುಗಳನ್ನು ಮಾಡಬೇಕು. ಮತ್ತು ಶ್ರೀಹರಿಗೆ ಪೂಜೆಮಾಡಿ ನೀರಾಜನವನ್ನು ಮಾಡತಕ್ಕದ್ದು.

ಗಜಾಶ್ವರಥದಾನಂ ಚ ಘೃತಧೇನ್ವಾದಯಸ್ತಥಾ ।
ಪ್ರದೇಯಾಃ ಪುಣ್ಯಕೃದ್ಭಿಶ್ಚ ತಾಸ್ತಾಃ ಸಂಕಲ್ಪ್ಯ ದೇವತಾಃ ॥ ೧೧ ॥

ಫಲಾನಿ ಯಾನಿ ವಿದ್ಯಂತೇ ಸುಗಂಧಿಮಧುರಾಣಿ ಚ ।
ಜಾತೀಫಲಂ ಚ ಕಂಕೋಲಂ ಲವಂಗಂ ಲವಲೀಫಲಂ ॥ ೧೨ ॥

ಖರ್ಜೂರೀಂ ನಾಲಿಕೇರಾಂಶ್ಚ ಕದಲ್ಯಾಶ್ಚ ಫಲಾನಿ ಚ ।
ದಾಡಿಮಾನ್ಮಾತುಲುಂಗಾಂಶ್ಚ ಕರ್ಕೋಟಾಂಸ್ತ್ರಪುಸಾಂಸ್ತಥಾ ॥ ೧೩ ॥

ವೃಂತಾಕಾನ್ಕಾರವೇಲ್ಲಾಂಶ್ಚ ಬಿಂಬಾನ್ಕೂಷ್ಮಾಂಡಕರ್ಬುರಾನ್ ।
ಅಪ್ರದಾನೇನ ಯೇಷಾಂ ತು ತಿಥಯೋ ಯಾಂತಿ ಭಾರತ ॥
ತೇ ವ್ಯಾಧಿತಾ ದರಿದ್ರಾಶ್ಚ ಜಾಯಂತೇ ಭುವಿ ಮಾನವಾಃ ॥ ೧೪ ॥

ನ ಕೇವಲಂ ಬ್ರಾಹ್ಮಣಾನಾಂ ದಾನಂ ಸರ್ವಸ್ಯ ಶಸ್ಯತೆ ।
ಭಗಿನೀ ಭಾಗಿನೇಯಾನಾಂ ಮಾತುಲಾನಾಂ ಪಿತೃಷ್ವಸುಃ ॥
ದರಿದ್ರಾಣಾಂ ಚ ಬಂಧೂನಾಂ ದಾನಂ ಕೋಟಿಗುಣೋತ್ತರಂ ॥ ೧೫ ॥

---

೧೧. ಧರ್ಮಿಷ್ಠರು ಈ ಕಾರ್ತೀಕ ಮಾಸದಲ್ಲಿ ತಮ್ಮ ಇಷ್ಟದೇವತೆಗಳನ್ನು ದ್ದೇಶಿಸಿ; ಗಜ, ಅಶ್ವ, ರಥ, ಘೃತಧೇನು ಇವುಗಳನ್ನೆಲ್ಲಾ ದಾನಮಾಡಬೇಕು.

೧೨. ಮತ್ತು ಸುಗಂಧವುಳ್ಳದ್ದೂ ಮಧುರವೂ ಆದ ಫಲಗಳನ್ನೂ, ಜಾಯಿಕಾಯಿ, ಕಂಕೋಲಫಲ, ಲವಂಗ, ಲವಲೀಫಲ ಇವುಗಳನ್ನೂ ದಾನಮಾಡಬೇಕು.

೧೩–೧೪. ಇದಲ್ಲದೆ ಖರ್ಜೂರ, ನಾಳಿಕೇರ, ಬಾಳೇಹಣ್ಣು, ದಾಳಿಂಬ, ಮಾದಲಫಲ, ಕರ್ಕೋಟಫಲ, ತ್ರಪುಸಫಲ ಮತ್ತು ಬದನೇಕಾಯಿ, ಹಾಗಲಕಾಯಿ, ತೊಂಡೇಕಾಯಿ, ಬೂದಗುಂಬಳಕಾಯಿ, ಸುವರ್ಣ ಇವುಗಳನ್ನು ದಾನಮಾಡಬೇಕು. ಅಯ್ಯಾ ಭರತವಂಶಜನೇ! ದಾನಕೊಡದೆ ಯಾವ ಮನುಷ್ಯರಿಗೆ ಈ ಮಾಸದ ತಿಥಿಗಳು ವೃಥಾ ಕಳೆದುಹೋಗುತ್ತವೆಯೋ ಅಂತಹ ಪುರುಷರು ಈ ಭೂಲೋಕದಲ್ಲಿ ವ್ಯಾಧಿಯುಕ್ತರೂ ಮತ್ತು ದರಿದ್ರರೂ ಆಗುತ್ತಾರೆ.

೧೫. ಪ್ರತಿಯೊಬ್ಬನೂ ಈ ಮಾಸಗಳಲ್ಲಿ ರಕ್ತಸಂಬಂಧಿಗಳಲ್ಲದ ಬ್ರಾಹ್ಮಣರಿಗೆ ದಾನಮಾಡುವುದೇ ಪ್ರಶಸ್ತವೆಂದಲ್ಲ. ಬಂಧುಗಳಾಗಿ ದರಿದ್ರರಾಗಿರುವ ತಂಗಿ, ತಂಗಿಯಮಗ (ಸೋದರಳಿಯ), ಸೋದರಮಾವ, ತಂದೆಯ ಅಕ್ಕತಂಗಿಯರು, ಇಂತಹ ಬಂಧುಗಳಿಗೆ ದಾನಮಾಡುವುದೂ ಕೋಟಿ ಗುಣವುಳ್ಳದ್ದು.

ಮಿತ್ರಂ ಕುಲೀನಶ್ಚಾಪನ್ನೋ ಬಂಧುರ್ದಾರಿದ್ರ್ಯದುಃಖಿತಃ ।
ಆಶಯಾಭ್ಯಾಗತೋ ದೂರಾತ್ಸೋತಿಥಿಃ ಸ್ವರ್ಗಸಂಕ್ರಮಃ ॥ ೧೬ ॥

ವನಂ ಪ್ರಸ್ಥಾಪಿತೇ ರಾಮೇ ಸಸೀತೇ ಸಹಲಕ್ಷ್ಮಣೇ ।
ಮಾತಾಮಹಕುಲಾದೇತ್ಯ ವಿಶುದ್ಧೇನಾಂತರಾತ್ಮನಾ ॥ ೧೭ ॥

ಸಾ ಸರ್ವೈಃ ಶ್ರಾವಿತಾನೇಕೈಃ ಕೌಸಲ್ಯಾಭರತೇನ ವೈ ।
ಯದಾ ನ ಪ್ರತ್ಯಯಂ ಯಾತಿ ಕಥಂಚಿತ್ಕೋಸಲಾತ್ಮಜಾ ॥
ತದಾ ವಿಶುದ್ಧಭಾವೇನ ತಿಥಯಃ ಶ್ರಾವಿತಾಃ ಪುನಃ ॥ ೧೮ ॥

ವೈಶಾಖೀ ಕಾರ್ತಿಕೀ ಮಾಘೀ ತಿಥಯೋಮರಪೂಜಿತಾಃ ।
ಅಪ್ರದಾನವತೋ ಯಾಂತಿ ಯಸ್ಯಾರ್ಯೋನುಮತೇ ಗತಃ ॥ ೧೯ ॥

---

೧೬. ಮಿತ್ರ, ಸತ್ಕುಲಪ್ರಸೂತ, ಆಪತ್ತಿಗೆ ಸಿಕ್ಕಿದವನು ಬಂಧು, ದಾರಿದ್ರ್ಯ ದುಃಖಪೀಡಿತ, ಆಶೆಯಿಟ್ಟುಕೊಂಡು ದೂರದಿಂದ ಬಂದ ಅತಿಥಿ, ಇವರುಗಳಿಗೆ ದಾನಮಾಡಿದರೆ ಅವರು ದಾತೃವಿನ ಸ್ವರ್ಗಪ್ರಾಪ್ತಿಗೆ ಕಾರಣರಾಗುವರು-

೧೭. ಶ್ರೀರಾಮನು ಸೀತಾಲಕ್ಷ್ಮಣ ಸಹಿತನಾಗಿ ಕಾಡಿಗೆ ಹೋದ ಮೇಲೆ, ಭರತನು ತನ್ನ ಅಜ್ಜನಾದ ಕೇಕಯರಾಜನ ಮನೆಯಿಂದ ಬಂದು, ಪರಿಶುದ್ಧ ಮನಸ್ಕನಾಗಿ, ನಾನಾತರಹದ ಅನೇಕ ವಚನಗಳಿಂದ ರಾಜಮಾತೆಯಾದ ಕೌಸಲ್ಯೆಗೆ "ರಾಮನು ಕಾಡಿಗೆ ಹೋದದ್ದು ನನಗೆ ಸಮ್ಮತವಲ್ಲ" ಎಂದು ಹೇಳಿದನು.

೧೮. ಎಷ್ಟು ಹೇಳಿದರೂ ಆ ಕೋಸಲರಾಜನ ಮಗಳಾದ ಕೌಸಲ್ಯೆಗೆ ಈ ವಿಷಯದಲ್ಲಿ ನಂಬಿಕೆಯು ಹುಟ್ಟದಿರುವುದನ್ನು ಕಂಡು, ಆ ಭರತನು ವಿಶುದ್ಧ ಭಾವನೆಯಿಂದ ಪುನಃ ಈ ತಿಥಿಗಳನ್ನು ಉದಾಹರಿಸಿದಾನೆ.

೧೯. "ಪೂಜ್ಯನಾದ ಶ್ರೀರಾಮನು ಕಾಡಿಗೆ ಹೋಗಿರುವುದು ಯಾವನಿಗೆ ಸಮ್ಮತಿ ಇದೆಯೋ, ಅಂತಹವನಿಗೆ ದೇವಪೂಜಿತಗಳಾದ ವೈಶಾಖ, ಕಾರ್ತೀಕ, ಈ ಮಾಘ ಮಾಸದ ತಿಥಿಗಳು ದಾನವಿಲ್ಲದೆ ವೃಥಾ ಕಳೆಯಲಿ" ಎಂದನು.

ಏತಚ್ಛ್ರುತ್ವಾ ತು ಕೌಶಲ್ಯಾ ಸಹಸಾ ಪ್ರತ್ಯಯಂ ಗತಾ ।
ಅಂಕಮಾನೀಯ ಭರತಂ ಸಾಂತ್ವಯಾಮಾಸ ದುಃಖಿತಂ ॥ ೨೦ ॥

ಏತತ್ತಿಥೀನಾಂ ಮಾಹಾತ್ಮ್ಯಮಾಖ್ಯಾತಂ ಬಹುವಿಸ್ತರಂ ।
ಭೂಯಸ್ತು ಕಿಂ ಪ್ರವಕ್ಷ್ಯಾಮಿ ತವ ರಾಜನ್ಮಹಾಮತೇ ॥ ೨೧ ॥

ವೈಶಾಖಕಾರ್ತಿಕಮಘಾಸಹಿತಾಥ ಮಾಘೇ
ಯಾ ಪೂರ್ಣಿಮಾ ಭವತಿ ಪೂರ್ಣಶಶಾಂಕಚಿಹ್ನಾ ।
ತಸ್ಯಾಂ ಜಲಾನ್ನಕನಕಾಂಬರಮಾತಪತ್ರಂ
ದತ್ವಾ ಪ್ರಯಾತಿ ಪುರುಷಃ ಪುರುಹೂತಲೋಕಂ ॥ ೨೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣ ಉತ್ತರಪರ್ವಣಿ ಶ್ರೀ ಕೃಷ್ಣ
ಯುಧಿಷ್ಠಿರ ಸಂವಾದೇ ವೈಶಾಖೀಕಾರ್ತಿಕೀಮಾಘೀ ವ್ರತ
ವರ್ಣನಂ ನಾಮ ಶತತಮೋಽಧ್ಯಾಯಃ.

---

೨೦. ಭರತನ ಈ ಮಾತನ್ನು ಕೇಳಿದ ಮೇಲೆ, ತತ್‌ಕ್ಷಣದಲ್ಲೇ ಕೌಸಲ್ಯೆಯು ಭರನತ ಮಾತನ್ನು ನಂಬಿ, ಅವನನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ದುಃಖಿತನಾದ ಅವನಿಗೆ ಸಮಾಧಾನ ಹೇಳಿದಳು.

೨೧. ಮಹಾಬುದ್ಧಿಶಾಲಿಯಾದ ರಾಜನೇ! ತಿಥಿಗಳ ಮಾಹಾತ್ಮ್ಯವನ್ನು ನಾನು ವಿಸ್ತಾರವಾಗಿ ಹೇಳಿದೆನು. ಇನ್ನೇನು ಕೇಳಲು ಅಪೇಕ್ಷಿಸುತ್ತೀ ಹೇಳು.

೨೨. ಮಾನವನು ವೈಶಾಖ, ಕಾರ್ತಿಕ, ಮಾಘ ಈ ಮಾಸಗಳಲ್ಲಿ ದಾನಮಾಡುವುದೇ ಶ್ರೇಷ್ಠ. ಅದರಲ್ಲೂ ಮಖಾನಕ್ಷತ್ರಯುತವಾದ ಮಾಘ ಶುಕ್ಲ ಪೂರ್ಣಿಮೆಯಲ್ಲಿ ಉದಕುಂಭ, ಅನ್ನ, ಸುವರ್ಣ, ವಸ್ತ್ರ, ಛತ್ರಿ ಇವುಗಳನ್ನು ದಾನಮಾಡಿದರೆ ಖಂಡಿತವಾಗಿ ಅವನಿಗೆ ಇಂದ್ರಲೋಕ ಲಭಿಸುವುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಉತ್ತರಪರ್ವದಲ್ಲಿ ವೈಶಾಖೀ, ಕಾರ್ತಿಕೀ, ಮಾಘೀ ವ್ರತವರ್ಣನೆಯೆಂಬ ನೂರನೆಯ ಅಧ್ಯಾಯ ಮುಗಿದುದು.

## ಉತ್ತರಪರ್ವದ ದ್ವಿತೀಯ ಸಂಪುಟ ಸಮಾಪ್ತ.

